# ಶ್ರೀ ವಿವೇಕಾನಂದ ಸ್ವಾಮಿಗಳವರ

# ವೇದಾಂತ ಉಪನ್ಯಾಸ ಮಾಲೆ



ಅನುವಾದಕರು :

ಶ್ರೀ ಶ್ರೀ ಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳು



ಅಧ್ಯಾತ್ಮ ಪ್ರಕಾಶ ಕಾರ್ಯಾಲಯ

ಹೊಳೆನರಸೀಪುರ-573211

✆ 08175-273820

2008

## ವೇದಾಂತೋಪದೇಶದಲ್ಲಿ ಶ್ರದ್ಧೆ ಬೇಕು :

ವಿದ್ಯುಚ್ಛಕ್ತಿಯ ಸಾರ್ವತ್ರಿಕ ವ್ಯಾಪ್ತಿಯನ್ನು, ವ್ಯವಹಾರದಲ್ಲಿ ಕಾಣಬರದಿದ್ದರ, ದೊಡ್ಡವರ ಮಾತಿನ ಬಲದಿಂದಲೇ ನಂಬುತ್ತೇವೆ, ಅವುಗಳಿಂದಾಗುವ ಪ್ರಯೋಜನವನ್ನು ಪಡೆಯುತ್ತಿದ್ದೇವೆ. ಆನಂದರೂಪನಾದ ಪರಮಾತ್ಮನು ಎಲ್ಲೆಲ್ಲಿಯೂ ಇರುತ್ತಾನೆಂದು ಹೇಳುವ ವೇದಾಂತ ವಾಕ್ಯಗಳನ್ನು ನಂಬಿದ ಮಾತ್ರದಿಂದಲೇ ನಮ್ಮ ವ್ಯವಹಾರವು ಎಷ್ಟೋ ಬದಲಾಯಿಸುವದು. ಎಲ್ಲೆಲ್ಲಿ ಸಂತೋಷಕ್ಕೆ ನಿಮಿತ್ತಮಾತ್ರವಿದೆಯೋ, ಎಲ್ಲೆಲ್ಲಿ ಉಲ್ಲಾಸ ನಿಮಿತ್ತವಿದೆಯೋ ಅದೆಲ್ಲವೂ ಪರಮಾತ್ಮನದೇ ಎಂಬ ನಂಬಿಕೆಯಿಂದ ಇಡಿಯ ಪ್ರಪಂಚವೇ ವಿಭೂತಿ ಎಂದಾಗುತ್ತದೆ. ಪರಮಾತ್ಮನು ಆಕಾಶದಂತೆ ಸರ್ವಗತನು, ನಿತ್ಯನು; ನಮಗೆ ತೋರುವದರಲ್ಲೆಲ್ಲ ಅವನ ಮಹಿಮೆಯಿದೆ ಎಂಬ ಪೂಜ್ಯ ಭಾವನೆಯಿಂದ ನಮ್ಮ ಅಂತಃಕರಣಕ್ಕೆ ಹೊಸ ಸಂಸ್ಕಾರವುಂಟಾಗುವದು. ನಮ್ಮೆಲ್ಲರ ಜೀವನಕ್ಕೆ ಜೀವನವು, ನಮ್ಮ ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿಗಳಲ್ಲೆಲ್ಲಿಯೂ ಆತನ ಅಚಿಂತ್ಯ ಶಕ್ತಿಯ ವಿಲಾಸವೇ ಇರುತ್ತದೆ ಎಂಬ ಭಾವವು ರಾಗದ್ವೇಷಗಳ ಹುಟ್ಟನ್ನೇ ಅಡಗಿಸಿಬಿಟ್ಟಿತು. ಅನಿತ್ಯ ವಸ್ತುಗಳನ್ನು ನಿತ್ಯವೆಂಬಂತೆ ಕಾಣಿಸುವ, ಪ್ರಪಂಚದ ಅನಂತ ಪ್ರಾಣಿಗಳಿಗೆ ಚೈತನ್ಯವನ್ನು ನೀಡುವ, ಹೆಚ್ಚೇನು, ಜಗತ್ತಿನಲ್ಲಿ ನಮಗೆ ಕಾಣಿಸುವ ಆಧಿದೈವಿಕ, ಆಧಿಭೌತಿಕ ಆಧ್ಯಾತ್ಮಿಕವಾದ ಜಗತ್ತಿನ ಹಾಗೂ ನಮ್ಮೆಲ್ಲರ ವ್ಯಾಪಾರ, ನಮ್ಮ ಯೋಚನೆ ಮಾತು, ಕಾರ್ಯ, ಪಡೆಯುವದೆಲ್ಲ ಪರಮಾತ್ಮನ ಮಹಿಮೆಯೇ, ಚೈತನ್ಯವೇ, ಅವನ ಆನಂದಲೀಲೆಯೇ ಎಂಬ ಶ್ರದ್ಧಾ ಪ್ರಧಾನ ಭಾವನೆಯು ನಮ್ಮ ವ್ಯವಹಾರವನ್ನು ಬಹುಮಟ್ಟಿಗೆ ಉತ್ತಮಗೊಳಿಸುವದು.

ಬ್ರಹ್ಮದ ಅಪರೋಕ್ಷಜ್ಞಾನ: ಶಾಸ್ತ್ರದ ದೃಷ್ಟಿಯನ್ನೇ ಅವಲಂಬಿಸಿ ತತ್ತ್ವ ವಿಚಾರವನ್ನು ಮಾಡಿದರೆ ಪರಮಾತ್ಮ ತತ್ತ್ವಕ್ಕಿಂತ ಅವ್ಯವಹಿತವಾಗಿರುವದು ಮತ್ತೆ ಯಾವದೂ ಇಲ್ಲ ಎಂಬುದು ಸ್ಫುಟವಾಗುತ್ತದೆ. ಬ್ರಹ್ಮವು ಅಥವಾ ಪರಮಾತ್ಮ ತತ್ತ್ವವು ಹೊರಗಿನ ವಿಷಯಗಳಂತೆ ಇಂದ್ರಿಯಾದಿಗಳ ವ್ಯವಧಾನವನ್ನು ಬಯಸಿ ಸಿದ್ಧವಾಗುವದಲ್ಲ. ಇದು ಸಾಕ್ಷಾತ್ತಾಗಿ ನೇರಾಗಿಯೇ ನಮಗೆ ಗೊತ್ತಾಗತಕ್ಕದ್ದು. ಎಲ್ಲಕ್ಕೂ ವ್ಯಾಪಿಯಾಗಿ, ಎಲ್ಲವನ್ನೂ ತನ್ನೊಳಗೆ ಅಡಕಮಾಡಿಕೊಂಡಿರುವ ಚಿದಾಕಾಶವಾಗಿರುವದರಿಂದ ಬ್ರಹ್ಮವೆನಿಸಿಕೊಂಡಿದೆ. ಬ್ರಹ್ಮವೆಂದರೆ ದೇಶಕಾಲವಸ್ತುಗಳಲ್ಲಿ ಯಾವದೊಂದರ ಪರಿಚ್ಛೇದವೂ ಇಲ್ಲದ ಅನಂತವಾದ ತತ್ತ್ವವು. ಇದು ನಮ್ಮ ಆತ್ಮನೇ !

ಶ್ರೀ ಶ್ರೀ ಗಳು

ಅಧ್ಯಾತ್ಮ ಗ್ರಂಥಾವಳಿ

ಶ್ರೀವಿವೇಕಾನಂದಸ್ವಾಮಿಗಳವರ

# ವೇದಾಂತ ಉಪನ್ಯಾಸ ಮಾಲೆ

ಅನುವಾದಕ :

ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸ್ವಾಮಿಗಳು

(ಪೂರ್ವಾಶ್ರಮ : ವೈ. ಸುಬ್ಬರಾವ್)

ಕ್ರಮ ಸಂಖ್ಯೆ : 237

ಪ್ರಕಾಶಕರು :

ಅಧ್ಯಾತ್ಮ ಪ್ರಕಾಶ ಕಾರ್ಯಾಲಯ

ಹೊಳೆನರಸೀಪುರ

www.adhyatmaprakasha.org

2008

ಶ್ರೀ ವಿವೇಕಾನಂದ ಸ್ವಾಮಿಗಳವರ ವೇದಂತ ಉಪನ್ಯಾಸ ಮಾಲೆ
ಅನುವಾದಕರು : ವೈ. ಸುಬ್ಬರಾವ್ ಅಧ್ಯಾತ್ಮ ಪ್ರಕಾಶ ಕಾರ್ಯಾಲಯ

ಮೊದಲ ಮುದ್ರಣ : ವಿಶ್ವಧರ್ಮ ಸಮ್ಮೇಳನದಲ್ಲಿ ಉಪನ್ಯಾಸಗಳು 1933
ವೇದಾಂತೋಪನ್ಯಾಸಗಳು 1935

ಎರಡನೆಯ ಮುದ್ರಣ : ಎರಡೂ ಒಟ್ಟುಗೂಡಿ
**"ವೇದಾಂತ ಉಪನ್ಯಾಸ ಮಾಲೆ" 2008**

ಪ್ರತಿಗಳು : 1000

ಪುಟಗಳು : 32 + 235

ಬೆಲೆ : **60 ರೂ.**



ಅಕ್ಷರ ಜೋಡಣೆ : ಅರ್ಕ ಕ್ರಿಯೇಷನ್ಸ್
ದೂ. : 98807 25199

ಮುದ್ರಕರು : ಸ್ಟ್ಯಾಂಡರ್ಡ್ ಪ್ರಿಂಟರ್ಸ್
ಶಂಕರಮಠದ ರಸ್ತೆ, ಬೆಂಗಳೂರು – 560 004
ದೂರವಾಣಿ : 22421527

# ಮುನ್ನುಡಿ

ಹತ್ತೊಂಭತ್ತನೇ ಶತಮಾನದ ಅಂತ್ಯಭಾಗದಲ್ಲಿ ನಮ್ಮ ದೇಶ ಪರಾಧೀನವಾಗಿದ್ದಾಗ, ಸುತ್ತಲೂ ಕತ್ತಲೆಕವಿದಿದ್ದ ಕಾಲವೆಂದರೆ ತಪ್ಪಲ್ಲ, ವಿದೇಶೀಯರಿಗೆ ಧಿಕ್ಕಾರದ ಸ್ಥಾನವೂ ಸ್ವದೇಶೀಯರಿಗೆ ಗೊಂದಲಪುರವೂ ಆಗಿದ್ದಾಗ, ಭಾರತೀಯ ತರುಣರು ತಮ್ಮ ಸ್ವ-ತ್ವವನ್ನೂ ಪರಂಪರೆಯ ಸತ್ವಶಕ್ತಿಗಳನ್ನೂ ಮರೆತು, ಕೀಳರಿಮೆಯಿಂದ ಕುರುಡು ಪರಾನುಕರಣೆಯ ಮೋಹಕ್ಕೆ ಬಲಿಬಿದ್ದಾಗ ಸ್ವಾಮೀ ವಿವೇಕಾನಂದರು ಸಂನ್ಯಾಸ ಮತ್ತು ಬ್ರಹ್ಮಚರ್ಯದ ಮಹಾದರ್ಶನವನ್ನು ಮೈಗೂಡಿಸಿಕೊಂಡು ತಮ್ಮ ಇಪ್ಪತ್ತನಾಲ್ಕನೇ ವಯಸ್ಸಿನಲ್ಲೇ ನಿರ್ವಿಕಲ್ಪ ಸಮಾಧಿಯ ದಿವ್ಯಾನುಭೂತಿಯನ್ನು ಪಡೆದುಕೊಂಡು ಭಗವಾನ್ ಶ್ರೀರಾಮಕೃಷ್ಣರ ಆಶೀರ್ವಾದ ಅನುಗ್ರಹಗಳನ್ನು ಶಿರಸಾವಹಿಸಿ, ಕೈಯಲ್ಲಿ ಕಾಸನ್ನಿಟ್ಟುಕೊಳ್ಳದೇ, ನಾಳಿನ ಊಟದ ಚಿಂತೆಯನ್ನೂ ಮಾಡದೇ ಪರಿವ್ರಾಜಕರಾಗಿ ಸಂಚರಿಸುತ್ತ ದೇಶದ ದುರ್ಬಲ ನಾಡಿಮಿಡಿತವನ್ನು ಗಮನಿಸಿ ಭರತಖಂಡದ ಅಭ್ಯುದಯದ ದಾರಿ–ಯಾವುದೆಂಬುದನ್ನು ಅಹರ್ನಿಶಿ ಯೋಚಿಸಿ, ಬಳಿಕ ನೂತನ ನಾಗರೀಕತೆಯ ನೆಲೆಬೀಡಾದ ಅಮೆರಿಕದ ಸರ್ವಧರ್ಮಸಮ್ಮೇಳನದಲ್ಲಿ ಮಾತ್ರವಲ್ಲ ಸಹಸ್ರಾರು ವೇದಿಕೆಗಳಲ್ಲಿ ನಿಂತು ಸನಾತನ ಧರ್ಮದ ಧ್ವಜವನ್ನು ಬಾನೆತ್ತರಕ್ಕೆ ಹಾರಿಸಿ, ಭಾರತೀಯರ ಆತ್ಮಗ್ಲಾನಿಯನ್ನು ದೂರಮಾಡಿದರು. ಶಾಶ್ವತವಾದ, ವಿಶ್ವವ್ಯಾಪಿಯಾದ ಸನಾತನ ತತ್ವಗಳ ಮೇಲೆ ನಿಂತ ಈ ಧರ್ಮವು ಸತ್ತಿಲ್ಲ, ಅದು ಸತ್ವಪೂರ್ಣವಾಗಿದೆ, ಅದು ಸಾಯುವುದಿಲ್ಲ–ಜಗತ್ತಿನ ಜನರಿಗೆ, ಆಯಾಮತಗಳನ್ನು ನಿಂದಿಸಿ ನೋವನ್ನುಂಟು ಮಾಡದೆ ಅವರವರ ಮತದಲ್ಲೇ ಶ್ರದ್ಧೆ ನಿಷ್ಠೆಯನ್ನು ಹೆಚ್ಚಿಸುವಂಥ ಸ್ಫೂರ್ತಿಯನ್ನು ನೀಡುತ್ತದೆ, ಅದನ್ನು ಸಾಯಿಸಲು ಯಾರಿಗೂ ಸಾಧ್ಯವಿಲ್ಲ– ಅದು ಸನಾತನವಾದರೂ ಚಿರನೂತನವಾಗಿದೆ ಎಂಬುದನ್ನು ಅತ್ಯಂತ ನಿರ್ಭೀತಿಯಿಂದ ದಿಕ್ತಟಗಳು ಮೊಳಗುವಂತೆ ಉದ್ಘೋಷಿಸಿದರು. ಅವರ ಜೀವನ ಸಂದೇಶ ಕಾರ್ಯ ಯೋಜನೆಗಳು ಸ್ವಾತಂತ್ರ್ಯಪೂರ್ವದಲ್ಲಿ ಅಸಂಖ್ಯ ಹೋರಾಟಗಾರರಿಗೆ ಸ್ಫೂರ್ತಿಯ ಚಿಲುಮೆಯಾಗಿದ್ದುದು ಐತಿಹಾಸಿಕ ಸತ್ಯ. ಸ್ವಾತಂತ್ರ್ಯ ದೊರಕಿದ ಬಳಿಕ ಆ ಮಹಾತ್ಮರ ನಿರ್ದೇಶನಗಳನ್ನು ಶಿಕ್ಷಣದ ಮೂಲಕ ಮುಂದಿನ ಪೀಳಿಗೆ ತಿಳಿಯದಂತೆ ಸರಕಾರ ಕೈಗೊಂಡ ಕಾರ್ಯಕ್ರಮಗಳು ದೇಶವನ್ನು ದುರಂತಕ್ಕೆಳಸುವ ದುರ್ದೈವದ ಸಂಗತಿ ಎಂಬುದು ಹೆಚ್ಚಿನವರಿಗೆ, ಮುಖಂಡರಿಗೂ ತಿಳಿದಿಲ್ಲ.

ಅವಿರತ ಸ್ವಾಧ್ಯಾಯ ಪ್ರವಚನ ಪಟುಗಳೂ, ಸನಾತನ ಧರ್ಮದ ಸಾರತತ್ತ್ವವನ್ನು ಗ್ರಂಥ ರಚನೆಯ ಮೂಲಕ ಜನಮಾನಸಕ್ಕೆ ತಲಪಿಸಲು ನಿರಂತರ ಪ್ರಯತ್ನ ಶೀಲತೆಯಲ್ಲಿ ಅಪ್ರತಿಮರೂ, ತಪಸ್ವಿಗಳೂ ಆದ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು ತಮ್ಮ ಪೂರ್ವಾಶ್ರಮದ ದಿನಗಳಲ್ಲೇ ಸ್ವಾಮಿ ವಿವೇಕಾನಂದರ ದಿವ್ಯ ಉಪನ್ಯಾಸಗಳನ್ನು ಓದಿ, ಆನಂದಿಸಿ ಸ್ಫೂರ್ತಿಯನ್ನು ಪಡೆದು ಕನ್ನಡಕ್ಕೆ ಅನುವಾದಿಸಿ,

ಜನರಿಗೆ ನೀಡಲು ಸಂಕಲ್ಪಿಸಿದ್ದರು ಎಂದಾಗ ಭಾರತದ ಅಭ್ಯುದಯ ಮತ್ತು ಜಗತ್ತಿನ ಹಿತಕ್ಕೆ ವಿವೇಕಾನಂದರು ನೀಡಿದ ಸಂದೇಶದ ಮಹತ್ವ ಮತ್ತು ಅದರ ಪ್ರಸಾರದ ಆವಶ್ಯಕತೆಯನ್ನು ಮನಗಂಡಿದ್ದರು ಎಂದರೆ ಶ್ರೀರಾಮಕೃಷ್ಣ ವಿವೇಕಾನಂದರ ಮಹಿಮೆಯನ್ನು ಅರಿತ ಮಹಿಮರು ಅವರಾಗಿದ್ದರು ಎಂದರ್ಥ. ಸಾಮಾನ್ಯವಾಗಿ ಸಂಪ್ರದಾಯದ ಪರಿಧಿಯಲ್ಲೇ ಸಂಚರಿಸುವ ಆ ಕಾಲದ ವಿದ್ವಾಂಸರು, ವಿವೇಕಾನಂದರ ಭಾವಧಾರೆ ಹೇಗೆ ಮನುಷ್ಯಕುಲದ ಮಂಗಲಕ್ಕೆ ಉಪಕಾರವಾಗುವುದೆಂಬ ಭರವಸೆಯನ್ನು ಎಷ್ಟರಮಟ್ಟಿಗೆ ತಾಳಿದ್ದರೊ ತಿಳಿಯದು. ಆದರೆ ಶ್ರೀ ಶ್ರೀ ಗಳು, ಆ ಸಂದೇಶದ ಮಹಿಮೆಯನ್ನು ಅತ್ಯಂತ ಸ್ವಚ್ಛವಾಗಿ ಅರಿತುಕೊಂಡಿದ್ದರು ಎಂಬುದು 'ಅನುವಾದಕನ ಮುನ್ನುಡಿ' ಯ ಕೊನೆಯ ಭಾಗದಲ್ಲಿ ಹೇಳಿದ್ದಾರೆ. "ಸ್ವಾಮಿ ವಿವೇಕಾನಂದರ ಸಂದೇಶವನ್ನು ಎಲ್ಲೆಡೆ ಪ್ರಸಾರಮಾಡುವುದು ಅತ್ಯಂತ ಪುಣ್ಯಕಾರ್ಯವೆಂದು ನಾನು ನಿಶ್ಚಯವಾಗಿ ತಿಳಿದುಕೊಂಡಿದ್ದೇನೆ" ಎಂದಿದ್ದಾರೆ.

ಅನುವಾದ ನಿರ್ದುಷ್ಟವಾಗಿದ್ದು ಉಪಯುಕ್ತ ಅಡಿ ಟಿಪ್ಪಣಿಗಳಿಂದ ಕೂಡಿದೆ. ಭಾಷೆಯು ಹೆಚ್ಚುಕಡಿಮೆ ನೂರುವರ್ಷಗಳಷ್ಟು ಹಿಂದಿನದೆಂದು ಎನಿಸಿದರೂ ಪ್ರಸನ್ನ ಗಂಭೀರವಾಗಿಯೇ ಇದೆ. ಈ ಗ್ರಂಥ ಹೆಚ್ಚು ಪ್ರಸಾರವಾಗಲಿ ಎಂಬುದು ನನ್ನ ಆಶಯ,

**ಸ್ವಾಮಿ ಜಗದಾತ್ಮಾನಂದ**
**ಅಧ್ಯಕ್ಷರು**

**ಶ್ರೀರಾಮಕೃಷ್ಣ ಶಾರದಾಶ್ರಮ**
**ಪೊನ್ನಂಪೇಟೆ, 571 216 (ಕೊಡಗು)**

# ಪ್ರಕಾಶಕರ ಅರಿಕೆ

ಶ್ರೀ ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು, ಪೂರ್ವಾಶ್ರಮದಲ್ಲಿ ವೈ. ಸುಬ್ಬರಾವ್ ಎಂಬ ನಾಮಾಂಕಿತರಾಗಿದ್ದರು. ಚಿಕ್ಕಂದಿನಲ್ಲೇ ಮನೆಯ ಉತ್ತಮ ಸಂಸ್ಕಾರದ ವಾತಾವರಣ ಮತ್ತು ಅದನ್ನು ಹಿರಿದಾಗಿ ಮೂಡಿಸುತ್ತಿದ್ದ ಊರಿನ ಪರಿಸರದಿಂದ 'ಅರಿವಿಲ್ಲದೆಯೇ ಅಧ್ಯಾತ್ಮ ವಿಚಾರಗಳ ಬೀಜಾವಾಪವು ಅವರ ಚಿತ್ತದಲ್ಲಿ ಆಗುವದಕ್ಕೆ ಬೇಕಾದ ಸಲಕರಣೆಯೆಲ್ಲ ಇದ್ದಿತು. ವಿದ್ಯಾರ್ಥಿ ದೆಶೆಯಲ್ಲಿ ಚಿಕ್ಕಮಗಳೂರು ಹೈಸ್ಕೂಲ್ ಹೆಡ್‌ಮಾಸ್ಟರ್ ಶ್ರೀ ಸುಬ್ರಹ್ಮಣ್ಯ ಅಯ್ಯರ್‌ರವರ ಮನೆಯಲ್ಲಿ ದೇಹ ಪೋಷಣೆಗೆ ದೊರಕಿದ ಅನ್ನದ ಜೊತೆಗೆ ಆ ಹಿರಿಯರ ನಡೆನುಡಿಗಳಿಂದ' ಈ ವಿದ್ಯಾರ್ಥಿಯ ಮಾನಸಿಕ ವಿಕಸನಕ್ಕೆ ಬೇಕಾದ ತಿಳಿವಳಿಕೆಯೂ ಹಿಗ್ಗಿತು, ನಡೆವಳಿಕೆಯೂ ತಿದ್ದಿತು. "ಮುಖ್ಯವಾಗಿ ಅನಿರೀಕ್ಷಿತ ರೀತಿಯಿಂದ ಅಯ್ಯರವರ ಮನೆಯಲ್ಲಿಯೇ ವೇದಾಂತದ ಮೊಟ್ಟಮೊದಲನೆಯ ಪ್ರವೇಶವಾಯಿತು". ಜೊತೆಗೆ, ತಮ್ಮ ಮಲ್ಲಣ್ಣ ಭಾವನವರ ಮನೆಯಲ್ಲಿ ಯಾವಾಗಲೂ ಸೂತಸಂಹಿತೆ, ತೈತ್ತಿರೀಯೋಪನಿಷತ್, ದೇವೀಪುರಾಣಗಳ ಶ್ರವಣವೂ, ಒಂದು ಗ್ರಂಥದ ಪಾರಾಯಣ ಸಮಾಪ್ತಿಯಾಗುತ್ತಲೂ ಮಂಗಳ, ಬ್ರಾಹ್ಮಣ ಸಮಾರಾಧನೆಯಾಗುತ್ತಿತ್ತು. ಕೆಲವು ಮಂತ್ರಗಳ ವ್ಯಾಖ್ಯೆಯೂ ಶಾಸ್ತ್ರಿಗಳಿಂದ ಆಗುತ್ತಿತ್ತು. 'ಯತೋ ವಾಚೋ ನಿವರ್ತಂತೇ' ಎಂಬ ಮಂತ್ರದ ವಿವರಣೆಯೂ ಇವುಗಳಲ್ಲೊಂದು. ಆಗ ತಮಗೇನೂ ಅರ್ಥವಾಗದಿದ್ದರೂ ಯಾವದೋ ರಹಸ್ಯವಿರುವ ಗ್ರಂಥಗಳ ಅಭಿಪ್ರಾಯವನ್ನು ಭಾವನವರು ಚರ್ಚಿಸಿ ಕೇಳಿ ತಿಳಿಯುತ್ತಿದ್ದರು ಎಂಬುದು ಮನಸ್ಸಿಗೆ ಬಂದಿತ್ತು. ಅವರ ದೇವರ ಮನೆಯಲ್ಲಿ ದೇವನಾಗರಿಯ ತೈತ್ತಿರೀಯೋಪನಿಷತ್ತು ವಾಸಿಷ್ಠ ರಾಮಾಯಣಗಳಿದ್ದುವು. "ಅಂತೂ ಇಂತೂ ಮಲ್ಲಣ್ಣ ಭಾವನವರ ಮನೆಯಲ್ಲಿ ಎಲ್ಲಿಯೋ ಕನಸಿನೊಳಗೆ ವೇದಾಂತದ ಗಾಳಿ, ಬೀಸಿದಂತಾಯಿತು". ತತ್ತ್ವ ಬೋಧಿನಿ ಎಂಬ ವ್ಯಾಖ್ಯಾನದಲ್ಲಿ ಕೆಲವು ಕಡೆ ವೇದಾಂತ ಶಬ್ದಗಳು ಹೇಗೋ ಗೋಚರಿಸುತ್ತಿದ್ದವು.

ಅವರಿಗೆ ಮೊದಲಿನಿಂದಲೂ ಓದುವ ಹಂಬಲ ಬಹಳ. ಸೆಂಟ್ರಲ್ ಕಾಲೇಜಿನಲ್ಲಿ ಸಂಸ್ಕೃತವನ್ನು ಕಲಿಯಲು ಸೇರಿದ್ದು ಸ್ಕಾಲರ್‌ಶಿಪ್ ಸಿಗುವದು ಎಂಬ ಆಸೆಯಿಂದ. ಒಮ್ಮೆ ಪುಸ್ತಕದಂಗಡಿಯಲ್ಲಿ ತಮಗೆ ಬೇಕಾದ ಸಂಸ್ಕೃತ ಪುಸ್ತಕವನ್ನು ಕೇಳಿದಾಗ ಅದು ಇಲ್ಲದೆ, 'ಭಗವದ್ಗೀತಾ ಭಾಷ್ಯ' ಇದೆ ಎಂದು ಕೊಟ್ಟನಂತೆ. ಹೀಗೆ ಶಂಕರಾಚಾರ್ಯರ ಭಾಷ್ಯ ಕೈಗೆ ಬಂತು. ಇದೇ ಮೊದಲು ಅಭ್ಯಾಸ ಮಾಡಿದ ಭಾಷ್ಯ ಪುಸ್ತಕವಾದ್ದರಿಂದ, ಗೀತೆಯ ಮೇಲೆ ಅಭಿಮಾನ ಮೂಡಿತು. ಅದರಂತೆಯೇ ಇನ್ನೊಂದು ಬಾರಿ ಯಾವದಾದರೂ ಎಂದು ಪುಸ್ತಕ ಕೇಳಿದಾಗ ಅಂಗಡಿಯವನು ಕೊಟ್ಟಿದ್ದು ವಿವೇಕ ಚೂಡಾಮಣಿ. ಸೀನಿಯರ್ ಎಫ್. ಎ.

ಕ್ಲಾಸಿಗೆಂದು ಎರಡನೆಯ ಬಾರಿ ಬೆಂಗಳೂರಿಗೆ ಸೆಂಟ್ರಲ್ ಕಾಲೇಜಿಗೆ ಬಂದಾಗ ಶ್ರೀ ಕೃಷ್ಣಸ್ವಾಮಿ ಅಯ್ಯರ್‌ರವರ ಸಂಪರ್ಕ ಪುನಃ ಆಯಿತು. ಅವರ ಮನೆಯಲ್ಲಿದ್ದಾಗ ಭಗವದ್ಗೀತಾ ಭಾಷ್ಯವನ್ನು ಓದ ಹೊರಟಾಗ 'ನಾಸತೋ ವಿದ್ಯತೇ ಭಾವಃ' ಎಂಬ ಶ್ಲೋಕಕ್ಕೆ ಬರೆದ ವ್ಯಾಖ್ಯಾನದಲ್ಲಿ – ನ ಹಿ ಶೀತೋಷ್ಣಾದಿ ಸಕಾರಣಂ ಪ್ರಮಾಣೈರ್ನಿರೂಪಮಾಣಂ ವಸ್ತು ಸದ್ ಭವತಿ । ವಿಕಾರೋ ಹಿ ಸಃ। ವಿಕಾರಶ್ಚ ವ್ಯಭಿಚರತಿ ॥ (ಈಗ ಚಿಕ್ಕಮಗಳೂರಿನಲ್ಲಿ ಅಸಿಸ್ಟೆಂಟ್ ಮಾಸ್ಟರ್ ರಾಮಯ್ಯನವರ ಮನೆಯಲ್ಲಿ ಓದಿದ್ದ ವಾಕ್ಯಗಳ ನೆನಪು ಬಂತು.)– "ಶೀತ ಉಷ್ಣಗಳೆಲ್ಲ ಹಾಗೂ ಅವುಗಳ ಕಾರಣಗಳನ್ನೂ ಇಂದ್ರಿಯಗಳಿಂದ ತಿಳಿಯಬಹುದು, ಆದರೆ ಅವು ನಿಜವಾಗಿಯೂ ಸತ್ಯವಲ್ಲ, ಅವು ಪರಿಣಾಮಗಳು (ಅಥವಾ ವಿಕಾರಗಳು) ಮತ್ತು ಪ್ರತಿ ಬದಲಾವಣೆಯೂ ತಾತ್ಕಾಲಿಕ."

ಅಂದಿನಿಂದ ಪ್ರತಿದಿನವೂ ಮೂರುವಾಕ್ಯಗಳನ್ನಾದರೂ ವ್ಯಾಖ್ಯಾನದೊಡನೆ ಓದುವದು ಆಚರಣೆಗೆ ಬಂತು. ಒಂದು ದಿನ ಶ್ರೀ ಕೃಷ್ಣಸ್ವಾಮಿ ಅಯ್ಯರ್‌ರವರು, ಹೀಗೆ ಓದುವದನ್ನು ಕಂಡು ಇವರಲ್ಲಿ ಅದರ ಅರ್ಥವಿವರಣೆ ಕೇಳಿದರು. ಇವರಿಗೆ ವೇದಾಂತದಲ್ಲಿ ಅಭಿರುಚಿಯಿದೆ ಎಂದು ಕಂಡ ಅಯ್ಯರವರು ತಾವೇ ದಿನವೂ ಸ್ವಲ್ಪ ಹೊತ್ತು, ವೇದಾಂತ ಪಾಠ ಹೇಳಿಕೊಡುತ್ತಿದ್ದರು. ಹೀಗೆ ಸುಬ್ಬರಾಯರು ನಿಧಾನವಾಗಿ ಆದರೆ ಶ್ರದ್ಧೆಯಿಂದ ವೇದಾಂತಾಭ್ಯಾಸಕ್ಕೆ ತೊಡಗಿದರು. ಮಾನವನ ದೃಷ್ಟಿ, ಗುರಿ ಯಾವ ಕಡೆಗಿದ್ದರೂ ದೈವ ಕೃಪೆವರ್ಷಿಸಿದಾಗ ಅವನನ್ನು ತನ್ನಿಷ್ಟದ ನಿರ್ದಿಷ್ಟ ದಿಕ್ಕಿಗೆ ತಿರುಗಿಸಿ ಹೇಗೆ ತನ್ನ ಕೆಲಸವನ್ನು ಸಾಧಿಸಿಕೊಳ್ಳುತ್ತದೆ ಎಂಬುದು ಈ ಸಂಗ್ರಹದ ಪೂರ್ವ ಪೀಠಿಕೆಯಲ್ಲಿ ವ್ಯಕ್ತವಾಗುತ್ತದೆ.

ಭಗವದ್ಗೀತೆಯಲ್ಲಿದ್ದ ಪ್ರೀತಿಯೊಡನೆ, ತಾರುಣ್ಯದಲ್ಲಿ, ವಿವೇಕಾನಂದರ ಅಸಾಧಾರಣ ವ್ಯಕ್ತಿತ್ವದಿಂದ ಆಕರ್ಷಿತರಾಗಿ, ಅವರ ಕೃತಿ ಶ್ರೇಣಿ (1893–1896ರಲ್ಲಿ ಅಮೆರಿಕ ಇಂಗ್ಲೆಂಡ್‌ಗಳಲ್ಲಿ ಮಾಡಿದ ಉಪನ್ಯಾಸಗಳು) ಪುಸ್ತಕವು ದಾವಣಗೆರೆಯಲ್ಲಿ ಮಾಗಾನಹಳ್ಳಿ ದೊಡ್ಡ ಬಸಪ್ಪನವರ ಔದಾರ್ಯದಿಂದ ದೊರಕಿತು– ಈ ಕೃತಿ ಶ್ರೇಣಿಯಿಂದ 'ಕರ್ಮಯೋಗ' ಭಾಗವನ್ನು ಕನ್ನಡಿಸಲು ದೊಡ್ಡಬಸಪ್ಪನವರೇ ಪ್ರೇರಕರು. ಇದರನಂತರ ಭಕ್ತಿಯೋಗ, ರಾಜಯೋಗ, ಜ್ಞಾನಯೋಗಗಳು ಅನುವಾದವಾದುವು. ಇವುಗಳಲ್ಲದೆ ಶ್ರೀ ಸ್ವಾಮಿ ವಿವೇಕಾನಂದರು ವಿಶ್ವಧರ್ಮಸಮ್ಮೇಳನದಲ್ಲಿ ಮಾಡಿದ ಉಪನ್ಯಾಸಗಳನ್ನು 1933ರಲ್ಲಿ, ವೇದಾಂತೋಪನ್ಯಾಸಗಳನ್ನು 1935 ರಲ್ಲಿ (ಅನುವಾದ ಮಾಡಿ) ಅಧ್ಯಾತ್ಮ ಪ್ರಕಾಶ ಕಾರ್ಯಾಲಯದಿಂದ ಹೊರತಂದರು.

'ವೇದಾಂತೋಪನ್ಯಾಸ' ಗಳಲ್ಲಿ ಶ್ರೀ ವಿವೇಕಾನಂದ ಸ್ವಾಮಿಗಳವರ ಪೀಠಿಕೆಯೂ ಸೇರಿದಂತೆ ಆರು ಉಪನ್ಯಾಸಗಳನ್ನು ಮೊದಲ ಮುದ್ರಣದಲ್ಲಿ ಪ್ರಕಟಿಸಿದ್ದರು.

ಉಳಿದೆರಡರಲ್ಲಿ, 'ಆತ್ಮೈಕತ್ವ' ಎಂಬುದನ್ನು 1939 ರಲ್ಲಿ ಅಧ್ಯಾತ್ಮ ಪ್ರಕಾಶ ಪತ್ರಿಕೆಯಲ್ಲಿ (ಪುಟ 177) ಅಚ್ಚುಮಾಡಿ, ಅದರ ಹಿಂದೆಯೇ ಅನುವಾದ ಮಾಡಿದ ಎರಡನೆಯುದನ್ನೂ (ಜ್ಞಾನಯೋಗದ ಉತ್ಕೃಷ್ಟತೆ) ಸೇರಿಸಿ 'ವೇದಾಂತೋಪನ್ಯಾಸಗಳು- ಪರಿಶಿಷ್ಟ ಭಾಗ' ಎಂದು ಪ್ರಕಟಿಸಿದ್ದರು. ಈ ಸಣ್ಣ ಪುಸ್ತಕ ಕಾರ್ಯಾಲಯದಲ್ಲಿ ಲಭ್ಯವಿಲ್ಲದ ಕಾರಣ, 'ಏಳನೆಯ ಉಪನ್ಯಾಸ (ಆತ್ಮೈಕತ್ವ) ವನ್ನು ಅಧ್ಯಾತ್ಮ ಪ್ರಕಾಶ ಪತ್ರಿಕೆಯಿಂದ ಹಾಗೂ ಎಂಟನೆಯದನ್ನು ಈಗ ಅನುವಾದ ಮಾಡಿಸಿ ಪುಸ್ತಕದಲ್ಲಿ ಸೇರಿಸಿದೆ.

ವಿಶ್ವಧರ್ಮ ಸಮ್ಮೇಳನದ ಉಪನ್ಯಾಸಗಳು ಮತ್ತು ವೇದಾಂತೋಪನ್ಯಾಸಗಳು– (ಪ್ರಥಮಾರ್ಧ), ವೇದಾಂತೋಪನ್ಯಾಸಗಳು- ದ್ವಿತೀಯಾರ್ಧ- ಇವು ಸಣ್ಣ ಪುಸ್ತಕಗಳೇ ಆಗಿರುವದರಿಂದ ಈ ಮೂರನ್ನೂ ಆಸಕ್ತ ಓದುಗರ ಅನುಕೂಲಕ್ಕಾಗಿ, ಈಗ ಒಟ್ಟುಗೂಡಿಸಿ ಪ್ರಕಟಿಸಲಾಗುತ್ತಿದೆ. ಶ್ರೀ ಸ್ವಾಮಿ ವಿವೇಕಾನಂದರ ಅನುವಾದಿತ ಪುಸ್ತಕಗಳಲ್ಲಿ ಇವು ಕೊನೆಯವಾದ್ದರಿಂದ, ಪ್ರಪಂಚ ಪ್ರಸಿದ್ಧರೂ, ಮಹಾತ್ಮರೂ, ದೇವ ಪುರುಷರೂ ಆದ ಶ್ರೀ ಸ್ವಾಮಿ ವಿವೇಕಾನಂದರ ವಿಷಯದಲ್ಲಿ ಶ್ರೀ ಶ್ರೀ ಸಚ್ಚಿದಾನಂದ ಸರಸ್ವತೀ ಸ್ವಾಮಿಯವರ ಲೇಖನವಿದೆ; ಹಾಗೂ ವಿವೇಕಾನಂದರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಇದರಲ್ಲಿ ಸೇರಿಸಿದೆ; ಓದುಗರಿಗೆ, ಮುಖ್ಯವಾಗಿ ಈಚಿನ ದಶಕಗಳ ಹೊಸ ಆಸಕ್ತರಿಗೆ ಸ್ವಾಮಿಗಳ ಅಭೂತಪೂರ್ವ ವ್ಯಕ್ತಿತ್ವವನ್ನು, ಸಮುದ್ರವನ್ನು ಕರಟದ ಚಿಪ್ಪಿನಲ್ಲಿ ಹಿಡಿದಂತಹ ಕಿರು ಪರಿಚಯವಿದು.

ಮುಖ್ಯವಾಗಿ ಶ್ರೀ ಸ್ವಾಮಿ ವಿವೇಕಾನಂದರ ಪ್ರಜ್ವಲ ಕಾಂತಿಯು ಕಿರಣವೊಂದೆರಡನ್ನೂ, ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತಿ ಸ್ವಾಮಿಗಳ ಅತ್ಯುತ್ತಮ ಕೊಡುಗೆಯ ಪ್ರಶಂಸೆಯಿಂದ ಕೂಡಿದ ಮುನ್ನುಡಿಯಿಂದ ಈ ಪುಸ್ತಕದ ಆಂತರಿಕ ಮೌಲ್ಯಕ್ಕೊಂದು ಸುಂದರ ಚೌಕಟ್ಟನ್ನು ಸೇರಿಸಿರುವ ಪೊನ್ನಂಪೇಟೆಯ ಶ್ರೀರಾಮಕೃಷ್ಣ ಶಾರದಾಶ್ರಮದ ಅಧ್ಯಕ್ಷರೂ, ಹಿರಿಯ ಜ್ಞಾನಿಗಳೂ ಆದ ಶ್ರೀ ಸ್ವಾಮಿ ಜಗದಾತ್ಮಾನಂದರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇವೆ. ತುಂಬಾ ಸಂತೋಷದ ಸೌಭಾಗ್ಯವೆಂದರೆ ಶ್ರೀ ಸ್ವಾಮೀಜಿಯವರೇ ಈ ಪುಸ್ತಕವನ್ನು ಬಿಡುಗಡೆ ಮಾಡಿದ್ದಾರೆ; ಕಾರ್ಯಾಲಯದ ಈ ಕಾರ್ಯಕ್ಕೆ ಧನ್ಯತೆಯನ್ನು ತಂದಿದ್ದಾರೆ.

ಇಲ್ಲಿಯ ಕೊನೆಯ ಉಪನ್ಯಾಸ ಮತ್ತು ಇಂಗ್ಲಿಷ್ ಮೂಲದ ಪೀಠಿಕೆಯ ಅನುವಾದವನ್ನು ಪರಿಷ್ಕರಿಸಿ ಹೆಚ್ಚು ಅಂದವಾಗಿ ಮಾಡಿಕೊಟ್ಟ ರಾಷ್ಟ್ರೋತ್ಥಾನ ಪರಿಷತ್ತಿನ ಶ್ರೀ ಎಸ್. ಆರ್. ರಾಮಸ್ವಾಮಿಯವರಿಗೂ, ಅದರಂತೆಯೇ ವಿವೇಕಾನಂದ ಸ್ವಾಮಿಗಳವರ ಸಂಕ್ಷಿಪ್ತ ಚರಿತ್ರೆ (ಮಹಾನ್ ಚೇತನರು) ಯನ್ನು ತಿದ್ದಿ ಹೆಚ್ಚಿನ ಸ್ವಾರಸ್ಯವನ್ನು ತಂದಿರುವ, ಮತ್ತು ಸಂಪೂರ್ಣ ಸಂಸ್ಕರಣವನ್ನು

ಕೈಗೊಂಡು ಅಚ್ಚು ಕಟ್ಟಾಗಿ ನಡೆಸಿಕೊಟ್ಟಿರುವ, ಶ್ರೀಯುತರುಗಳು, ನಿವೃತ್ತ ಪ್ರೊ. ಎಸ್. ರಾಮಚಂದ್ರ ಶಾಸ್ತ್ರಿಯವರು ಮತ್ತು ಪ್ರೊ. ಜಿ. ಅಶ್ವತ್ಥ ನಾರಾಯಣ ಇವರುಗಳ ಉಪಕಾರಕ್ಕೆ ಕಾರ್ಯಾಲಯ ಕೃತಜ್ಞತೆಯನ್ನು ಅರ್ಪಿಸುತ್ತದೆ.

ಈ ಪುಸ್ತಕ ಪ್ರಕಟಣೆಯಲ್ಲಿ ನೆರವಾದವರು- ಹೊಳೆನರಸೀಪುರ ಕಾರ್ಯಾಲಯದ ಗ್ರಂಥಾಲಯದಲ್ಲಿ ಹುದುಗಿ ಹೋಗಿದ್ದ ಮೂಲ ಪ್ರತಿಗಳನ್ನು ಹುಡುಕಿ ತೆಗೆದುಕೊಟ್ಟ ಅಲ್ಲಿಯ ಗುರುಕುಲ ವಿದ್ಯಾರ್ಥಿಗಳು; ಎಷ್ಟೇ ಶ್ರಮವಾದರೂ, ಬಹಳ ಶ್ರದ್ಧೆಯಿಂದ ಅಕ್ಷರ ಜೋಡಣೆ ಮಾಡಿಕೊಟ್ಟ ಅರ್ಕ ಕ್ರಿಯೇಷನ್ಸ್‌ನ ಶ್ರೀ ಸುರೇಶ್ ದಂಪತಿಗಳು ಮತ್ತು ಕಾರ್ಯಾಲಯ ಹೊರತಂದಿರುವ ವಿವೇಕಾನಂದರ ಎಲ್ಲ ಪುಸ್ತಕಗಳಂತೆ ಇದನ್ನೂ ಅಂದವಾಗಿ ಮುದ್ರಿಸಿಕೊಟ್ಟ ಸ್ಟಾಂಡರ್ಡ್ ಪ್ರಿಂಟರ್ಸ್‌ನ ಶ್ರೀ ನಾಗರಾಜರು ಇವರೆಲ್ಲರಿಗೂ ಅಭಿಮಾನ ಪೂರ್ವಕವಾದ ವಂದನೆಗಳು.

ಕೋಡಿಹಳ್ಳಿ ಶ್ರೀ ಲಕ್ಷ್ಮೀನಾರಾಯಣ ರಾಯರ ಟ್ರಸ್ಟ್ ಪರವಾಗಿ ಶ್ರೀ ಕೆ. ಎಲ್. ನಾಗರಾಜರಾಯರು ಕಾರ್ಯಾಲಯದ ಮೇಲಿನ ವಿಶ್ವಾಸದಿಂದ ಮತ್ತು ವೇದಾಂತದಲ್ಲಿ ಅವರಿಗಿರುವ ಶ್ರದ್ಧೆಯಿಂದ ಈ ಪುಸ್ತಕದ ಪ್ರಕಟಣೆಗೆ ಹೆಚ್ಚಿನ ಸಹಾಯವನ್ನು ಒದಗಿಸಿದ್ದಾರೆ. ಇದು ಅವರಿಂದ ಸತತವಾಗಿ 2002 ರಿಂದ ಬರುತ್ತಿರುವ ಉಪಕಾರ. ಈ ಔದಾರ್ಯಕ್ಕೆ ಕಾರ್ಯಾಲಯವು ಚಿರಋಣಿಯಾಗಿದೆ.

26ನೇ ನವಂಬರ್ 2008

ಪ್ರಕಾಶಕರು

ಅರಸೀಕೆರೆ ತಾಲ್ಲೂಕು **ಕೋಡಿಹಳ್ಳಿ ಶ್ರೀ ಲಕ್ಷ್ಮೀನಾರಾಯಣರಾಯರು** (1902–1990) ಬಹುಮುಖ ವ್ಯಕ್ತಿತ್ವವಿದ್ದವರು, ಲೋಕ ಪರಿಜ್ಞಾನ ಮತ್ತು ಇಂಗ್ಲಿಷ್ ಕನ್ನಡಗಳಲ್ಲಿ ಪರಿಣತರಾಗಿದ್ದವರು. ಸರ್ಕಾರಿ ಸೇವೆಯಲ್ಲಿದ್ದರೂ, ಸಾಹಿತ್ಯ ಸಂಗೀತಗಳಲ್ಲಿ ಆಸಕ್ತರು, ಅದರಲ್ಲೂ ಪರಿಶ್ರಮವಿದ್ದವರು. ಸಮಾಜಸೇವೆಯಾಗಿ ಬೆಂಗಳೂರು ಚಾಮರಾಜಪೇಟೆಯ ಯಾಜ್ಞವಲ್ಕ್ಯಾಶ್ರಮದ ಸಂಸ್ಥಾಪಕ ಕಾರ್ಯದರ್ಶಿ, ಸ್ವಾತಂತ್ರ್ಯ ಪೂರ್ವದಲ್ಲೇ ವಾಣಿಜ್ಯ ವಿದ್ಯಾಶಾಲೆಯನ್ನು ಸ್ಥಾಪಿಸಿದವರು. ಧಾರ್ಮಿಕ ಕಾರ್ಯಗಳಲ್ಲಿ ಶ್ರದ್ಧಾವಂತ ನಿಷ್ಠರು, ಅಗಡಿ ಆನಂದವನದ ಶ್ರೀ ಶೇಷಾಚಲ ಸದ್ಗುರುವಿನ ಭಕ್ತರು ಮತ್ತು ಶಾಖಾ ಬಾಂಧವರಿಗಾಗಿ 'ಸಂಧ್ಯಾವಂದನೆ', 'ರುದ್ರಾಧ್ಯಾಯ' ಗಳನ್ನು ಪ್ರಕಟಿಸಿದ್ದರು. ಸಂಪದ್ಭರಿತ ಸುಸಂಸ್ಕೃತ ಬದುಕಿನ ಜೊತೆಗೆ ಆಧ್ಯಾತ್ಮಿಕತೆ, ನಿಷ್ಕಳಂಕ ಸಾತ್ವಿಕ ಜೀವಿಗಳಾಗಿ ಮನ್ನಣೆ, ಪ್ರಶಂಸೆಗಳಿಗೆ ಪಾತ್ರರಾದವರು.

ಅವರ ಸ್ಮರಣಾರ್ಥ ಟ್ರಸ್ಟನ್ನು ಸ್ಥಾಪಿಸಿ, ವೇದಾಂತ ಉಪನ್ಯಾಸಮಾಲೆಗಳನ್ನೂ, ಗ್ರಂಥ ಪ್ರಕಟಣೆಗಳನ್ನೂ ಅಷ್ಟೇ ಆಸ್ಥೆಯಿಂದ ಮುಂದುವರೆಸಿಕೊಂಡು ಬರುತ್ತಿರುವ **ಶ್ರೀ ಕೆ. ಎಲ್. ನಾಗರಾಜರಾಯರು**, ತಂದೆಯವರ ಹೆಸರನ್ನು ಬೆಳಗಿಸುತ್ತಿರುವರು.

# ಶ್ರೀವಿವೇಕಾನಂದಸ್ವಾಮಿಗಳವರು

## (ಶ್ರೀಯುತ "ವೈ. ಸುಬ್ಬರಾಯರು", ಅನಂತರ ಶ್ರೀ ಶ್ರೀ ಗಳು)

ವಿವೇಕಚೂಡಾಮಣಿಯಲ್ಲಿ ಒಂದು ಸ್ಫೂರ್ತಿಪ್ರದವಾದ ವಾಕ್ಯವಿದೆ: "ಮನುಷ್ಯನಾಗಿ ಹುಟ್ಟುವದು, ಮುಮುಕ್ಷುವಾಗುವದು, ಮಹಾಪುರುಷರನ್ನು ಆಶ್ರಯಿಸುವದು– ಈ ಮೂರೂ ಒಬ್ಬನಿಗೆ ದೊರಕುವದು ಬಲುಕಷ್ಟ: ಇವು ದೈವಾನುಗ್ರಹದಿಂದಲೇ ಸಿಕ್ಕತಕ್ಕವುಗಳಾಗಿವೆ." ಈ ವಾಕ್ಯದ ಅರ್ಥವು ಶ್ರೀ ವಿವೇಕಾನಂದಸ್ವಾಮಿಗಳವರ ಜಯಂತಿಯ ದಿನ (ಫೆಬ್ರವರಿ, 2) ಮನನಮಾಡಿ ಕೊಳ್ಳುವದಕ್ಕೆ ಯೋಗ್ಯವಾಗಿರುತ್ತದೆ. ಏಕೆಂದರೆ ಸ್ವಾಮಿಗಳಿಗೆ ನರಜನ್ಮವು ದೊರಕಿದ್ದಲ್ಲದೆ ನರೇಂದ್ರನಾಥನೆಂಬ ತಮ್ಮ ಪೂರ್ವಾಶ್ರಮದ ಹೆಸರು ಅನ್ವರ್ಥವಾಗುವಂಥ ವಿದ್ಯೆಯೂ ವಿವೇಕವೂ ದೊರಕಿದ್ದವು: ಯೌವನವು ತಲೆದೋರುವ ಹೊತ್ತಿಗೆ ಸರಿಯಾಗಿ ಪ್ರಬಲವಾದ ಮುಮುಕ್ಷುತ್ವವು ಒಡೆದು ಮೂಡಿತ್ತು: ಆ ಮುಮುಕ್ಷುತೆಯ ನೀರಡಿಕೆಯನ್ನು ಸಂಪೂರ್ಣವಾಗಿ ನೀಗಬಲ್ಲ ಮಹಾಪುರುಷರ ಬೋಧಾಮೃತವೂ ಹತ್ತಿರದಲ್ಲಿಯೇ ದೊರಕಿತ್ತು.

ನರೇಂದ್ರನಾಥನಿಗೆ ದೊರೆತ ವಿದ್ಯಾಭ್ಯಾಸದಿಂದ ದೇಶಭಕ್ತಿ, ತತ್ತ್ವವಿಚಾರದಲ್ಲಿ ಆಸಕ್ತಿ– ಇವೆರಡೂ ದೊರೆತಿದ್ದರೂ ತರ್ಕಪ್ರಧಾನವಾದ ಆ ವಿದ್ಯೆಯಲ್ಲಿಯೇ ಅವನು ಮುಳುಗಿದ್ದರೆ ಅವನು ಎಂದಿಗೂ ವಿವೇಕಾನಂದನಾಗುತ್ತಿರಲಿಲ್ಲ. ಉತ್ಕಟವಾದ ವೈರಾಗ್ಯವೂ ತೀವ್ರವಾದ ಮುಮುಕ್ಷುತ್ವವೂ ದೈವಾನುಗ್ರಹದಿಂದ ಅವನಲ್ಲಿ ನೆಲೆಗೊಂಡಿದ್ದರಿಂದ ಅವನು ಮದುವೆಯಾದದ್ದನ್ನು ನೋಡಬೇಕೆಂಬ ತಂದೆತಾಯಿಗಳ ಇಚ್ಛೆಯು ನೆರವೇರುವದು ತಪ್ಪಿಹೋಯಿತು. ಅವನು ವಕೀಲನಾಗುವದೂ ಬಿಟ್ಟುಹೋಯಿತು. ತನ್ನೊಡನೆ ಸಕಲವಿದ್ಯಾನಿಲಯದಲ್ಲಿ ಓದಿದ್ದ ಮಿಕ್ಕ ವಿದ್ಯಾರ್ಥಿಗಳಂತೆ ಅವನು ಪಾಶ್ಚಾತ್ಯರ ಅನುಕರಣವೆಂಬ ಅಂಧಕೂಪದಲ್ಲಿ ಬೀಳಲಿಲ್ಲ, ಬರಿಯ ಸಂಶಯಗಳ ಸುಂಟರಗಾಳಿ ಯಲ್ಲಿಯೇ ಸಿಕ್ಕಿ ನರಳುತ್ತಲೂ ಕೂರಲಿಲ್ಲ. ಅವನು ನಿಜವಾದ ಬ್ರಹ್ಮಜಿಜ್ಞಾಸುವಾಗಿ ಮೊದಲು ಬ್ರಹ್ಮಸಮಾಜವನ್ನು ಸೇರಿದನು: ಆಮೇಲೆ ಶಬ್ದಬ್ರಹ್ಮವನ್ನು ಮೀರಿ ಪರಬ್ರಹ್ಮವನ್ನೇ ತೋರಿಸಿಕೊಡಬಲ್ಲ ಸದ್ಗುರುವನ್ನೂ ಕಂಡುಕೊಂಡನು.

ಮಹಾಪುರುಷರಲ್ಲಿ ಅಗ್ರಗಣ್ಯರೆಂದೆನಿಸಿಕೊಂಡಿದ್ದ ಶ್ರೀರಾಮಕೃಷ್ಣ ಪರಮಹಂಸರವರಿಂದ ನರೇಂದ್ರನಿಗೆ ಆದ ಮಹೋಪಕಾರವನ್ನು ಕೆಲವರು ಅಲ್ಪವಾಗಿ ಎಣಿಸಬಹುದು. ಆದರೆ ನಿಜವಾಗಿ ಅದು ಅಪಾರವಾಗಿರುತ್ತದೆ. ಮೊದಲು ಅವರು ಅವನನ್ನು ತಮ್ಮಲ್ಲಿಗೆ ಮತ್ತೆಮತ್ತೆ ಬರುವಂತೆ ಆಕರ್ಷಣೆ ಮಾಡಿಕೊಂಡರು: ಆಮೇಲೆ ಅವನ ತಲೆಯಲ್ಲಿ ಮೊಳೆಯುತ್ತಿದ್ದ ಸಂಶಯ ಪರಂಪರೆಯು ಹುಟ್ಟಡಗಿಸಿದರು: ಬಳಿಕ ಸಾಕಾರಸಗುಣಪರಮೇಶ್ವರನಲ್ಲಿ ಶ್ರದ್ಧೆಯನ್ನೂ ಭಕ್ತಿಯನ್ನು ತಂದುಕೊಟ್ಟರು: ಕಾಲಕ್ರಮದಲ್ಲಿ ಅವನನ್ನು ನಿರ್ಗುಣನಿರಾಕಾರ ಸಚ್ಚಿದಾನಂದಸಾಗರದಲ್ಲಿ ಮುಳುಗಿಸಿ ನಿರ್ವಿಕಲ್ಪ ಸಮಾಧಿಯ ಸೌಖ್ಯವನ್ನು ಸೂರೆಗೊಟ್ಟರು: ಇಷ್ಟಾದರೂ ತೃಪ್ತರಾಗದೆ ಲೋಕದಲ್ಲಿ ಸಾವಿರಾರು ಜನಗಳಿಗೆ ಪರಮಾಚಾರ್ಯನಾಗುವದೇ ನಿನ್ನ ಜೀವನದ ಪರಮೋದ್ದೇಶವೆಂಬ ಸತ್ಸೂಚನೆಯನ್ನೂ ಅವನ ಮುಂದಿಟ್ಟು ಕೊನೆಗೆ ತಮ್ಮ ಆಧ್ಯಾತ್ಮಿಕ ಸಂಪತ್ತೆಲ್ಲವನ್ನೂ ಅವನಿಗೆ ಬಿಟ್ಟುಕೊಟ್ಟುಬಿಟ್ಟರು!

ಸತ್ಕ್ಷೇತ್ರದಲ್ಲಿ ಬಿತ್ತಿದ ಬೀಜವು ಹುಲುಸಾದ ಬೆಳೆಯನ್ನು ಕೊಡುವಂತೆ ಪರಮಹಂಸರ ಶಕ್ತಿಪಾತದಿಂದ ಗ್ರಂಥಿಭೇದವನ್ನು ಪಡೆದ ನರೇಂದ್ರನು ಅಕ್ಷರಶಃ ವಿವೇಕಾನಂದನಾದನು. ಆಲದ ಬೀಜವು ನೋಡುವದಕ್ಕೆ ಅಷ್ಟು ಸಣ್ಣದಾಗಿದ್ದರೂ ನೂರಾರು ಜನರಿಗೆ ಆಸರೆಕೊಡುವ ಮಹಾವಟವೃಕ್ಷವಾಗಿ ಬೆಳೆಯುವ ಶಕ್ತಿಯು ಅದರಲ್ಲಿ ಅವ್ಯಕ್ತವಾಗಿರುವದಲ್ಲವೆ? ಶ್ರೀವಿವೇಕಾನಂದಸ್ವಾಮಿಗಳು ಕ್ರಮಕ್ರಮವಾಗಿ ಅಂಥ ಮಹಾವಟವೃಕ್ಷವಾಗಿ ಬೆಳೆದರು. ಪರಮಹಂಸ ಪರಿವ್ರಾಜಕರಾಗಿ ಕಾಲುನಡಗೆಯಿಂದ ಇಡಿಯ ಭರತಖಂಡದ ಯಾತ್ರೆಯನ್ನು ಮಾಡಿ ಸಾಧುಸಜ್ಜನರ ಸಂದರ್ಶನದಿಂದಲೂ ತಮ್ಮ ಪ್ರತಿಭೆಯಿಂದಲೂ ಈ ಖಂಡದಲ್ಲಿ ಗುಪ್ತವಾಗಿದ್ದ ಅಧ್ಯಾತ್ಮ ಶಕ್ತಿಯನ್ನು ಸಾಕ್ಷಾತ್ಕಾರಮಾಡಿಕೊಂಡರು. ಆ ಶಕ್ತಿಯು ಈ ದೇಶದಲ್ಲಿ ವಿಕಾಸವಾಗಬೇಕಾದರೆ ಕಡಲಿನಾಚೆಗೂ ಅಡಿಯಿಡುವದು ಅತ್ಯವಶ್ಯವೆಂಬುದನ್ನು ಕಂಡುಕೊಂಡರು. ಸಿಂಹಗರ್ಜನೆಯಂಥ ತಮ್ಮ ವೀರವಾಣಿಯಿಂದ ಅಮೆರಿಕದ ವಿಶ್ವಧರ್ಮಸಮ್ಮೇಳನದಲ್ಲಿ ಆಧುನಿಕನಾಗರಿಕತೆಗೆ ಅರ್ಥವಾಗುವಂಥ ವಾಕ್ಸರಣಿಯಲ್ಲಿ ಚಿರಂತನವಾಗಿರುವ ವೇದಾಂತದರ್ಶನವನ್ನು ಸಾರಿದರು. ಎಲ್ಲೆಲ್ಲಿಯೂ ಆ ವೀರನಾದವು ಮೊಳಗಿತು, ಮತ್ತೆ ಭರತಖಂಡದ ಗುಹೆಗಳಲ್ಲೂ ಮಾರುದನಿಕೊಟ್ಟಿತು. ಈ ದೇಶದ ಜನಗಳೆಲ್ಲ ಪಾಶ್ಚಾತ್ಯಮಂತ್ರ ಶಕ್ತಿಯಿಂದ ಬಿಗಿದುಕೊಂಡಿದ್ದ ಕಟ್ಟನ್ನು ಕೊಡವಿಕೊಂಡು ಕಂದೆರೆದೆದ್ದು ತಮ್ಮ ಅನಾದಿಸಂಸ್ಕೃತಿಯ ಸ್ವರೂಪವನ್ನು ಕಂಡುಕೊಂಡರು.

ಶ್ರೀ ರಾಮಕೃಷ್ಣ ಪರಮಹಂಸರಲ್ಲಿ ಸಂನ್ಯಾಸ ಸ್ವೀಕಾರವನ್ನು ಮಾಡಿದ್ದ ಹತ್ತು ಹನ್ನೆರಡು ಜನ ಸಂನ್ಯಾಸಿಗಳ ಗುಂಪು ಶ್ರೀ ವಿವೇಕಾನಂದಸ್ವಾಮಿಗಳ ನಾಯಕತ್ವದ ಫಲವಾಗಿ ಈಗ ನೂರಾರು ಜನ ಸಂನ್ಯಾಸಿಗಳ ತಂಡವಾಗಿದೆ; ಭರತ ಖಂಡದಲ್ಲಿಯೂ ವಿದೇಶಗಳಲ್ಲಿಯೂ ಕೇಂದ್ರಗಳನ್ನು ಸ್ಥಾಪಿಸಿ ಶ್ರೀ ರಾಮಕೃಷ್ಣ ಮಹಾಸಂಘವೆನಿಸಿಕೊಂಡಿದೆ; ಈ ವರ್ಷ (1937) ಆ ಪರಮಹಂಸರ ಶತಮಾನೋತ್ಸವವನ್ನು ಲಕ್ಷಗಟ್ಟಲೆಯ ಜನರು ಆಚರಿಸುವಂತೆ ಉತ್ತೇಜನವನ್ನು ಕೊಟ್ಟಿರುತ್ತಾರೆ.

ಈ ಕೋಲಾಹಲದಲ್ಲಿ ಭರತಖಂಡದವರಾದ ನಾವು ಸ್ವಾಮಿಗಳ ದಿವ್ಯ ಸಂದೇಶವನ್ನು ಮರೆಯಬಾರದು. ಭರತಖಂಡದ ಸಿರಿಸಂಪತ್ತೆಲ್ಲವೂ ಆಧ್ಯಾತ್ಮಿಕ ಸಂಸ್ಕೃತಿಯೆಂದೂ ಅದರ ಮೂಲಕವಾಗಿಯೇ ನಮ್ಮ ಸಕಲ ಇಹಪರ ಪುರುಷಾರ್ಥಗಳೂ ಈಡೇರಬೇಕಾಗಿದೆಯೆಂದೂ ಅವರು ಏರುದನಿಯಿಂದ ಮತ್ತೆಮತ್ತೆ ಸಾರಿರುತ್ತಾರೆ. ಇಂದಿನ ನಾಗರಿಕತೆಯಲ್ಲಿ ನಮ್ಮಗಳಿಗೆ ಒಂದು ವಿಶಿಷ್ಟಸ್ಥಾನವು ಬರಬೇಕಾದರೆ, ಮತ್ತೊಬ್ಬರನ್ನನುಕರಣಮಾಡುವ ಕೆಟ್ಟಚಾಳಿಯನ್ನು ಬಿಡಬೇಕೆಂದೂ ನಮ್ಮ ಏಳಿಗೆಗೆ ಮತ್ತೊಬ್ಬರಲ್ಲಿ ಭಿಕ್ಷಬೇಡುವ ಕೆಟ್ಟಪದ್ಧತಿಯನ್ನು ಅತ್ತಿಟ್ಟು ನಮ್ಮ ನೈಜಸಂಪತ್ತಾದ ಅಧ್ಯಾತ್ಮ ವಿದ್ಯೆಯನ್ನು ಬೆಳೆಯಿಸಿಕೊಂಡು ಲೋಕಕ್ಕೆಲ್ಲ ದಾನಮಾಡಬೇಕೆಂದೂ ಇದರಿಂದಲೇ ಲೋಕಕಲ್ಯಾಣವೂ ನಮ್ಮ ಉದ್ಧಾರವೂ ನೆರವೇರುವವೆಂದೂ ಶಪಥಮಾಡಿ ಹೇಳಿರುತ್ತಾರೆ. ಆ ಉತ್ತಮ ಸಂದೇಶಕ್ಕೆ ಕಿವಿಗೊಡುವಂತೆ ನಮಗೆ ಪರಮಾತ್ಮನು ಅನುಗ್ರಹಮಾಡಲಿ!

**('ಅಧ್ಯಾತ್ಮ ಪ್ರಕಾಶ' ಪತ್ರಿಕೆಯ ಸಂಪುಟ 8, ಫೆಬ್ರವರಿ 1937 ರಲ್ಲಿ ಪ್ರಕಟಿತ.)**

# ಶ್ರೀ ಸ್ವಾಮಿ ವಿವೇಕಾನಂದರ ಸಾಧನ ಶಿಖರಗಳು

"ಸ್ವಾಮಿ ವಿವೇಕಾನಂದರು ಅನೇಕ ಮಹತ್ ಸಾಧನೆಗಳನ್ನು ಸಾಧಿಸಿ ಹೋಗಿದ್ದಾರೆ. ಅದರಲ್ಲಿ ಪ್ರಥಮ ಸ್ಥಾನವನ್ನು ಗಳಿಸಲು ಅರ್ಹವಾದುದು ಎಂದರೆ, ಶ್ರೀರಾಮಕೃಷ್ಣರಿಂದ ಅನುಷ್ಠಿತವೂ ಪ್ರಣೀತವೂ ಆಗಿರುವ ಸರ್ವಧರ್ಮ ಸಮನ್ವಯ ದೃಷ್ಟಿಯನ್ನು ಪ್ರಸಾರಮಾಡಿ, ಪೂರ್ವ ಪಶ್ಚಿಮ ದೇಶಗಳ ನಡುವೆ ಭವ್ಯವಾದ ಭಾವಸೇತುವನ್ನು ಬೀಸಿ ವಿಶ್ವಮೈತ್ರಿಗೆ ಮತ್ತು ವಿಶ್ವಪ್ರಜ್ಞೆಗೆ ಅಂಕುರಾರ್ಪಣ ಮಾಡಿ ಲೋಕಹೃದಯವನ್ನು ಸಂಕುಚಿತಬುದ್ಧಿಯಿಂದ ಪಾರುಮಾಡಿದುದು."

"ಎರಡನೆಯದಾಗಿ ಭಾರತೀಯ ಪ್ರಾಚೀನ ಸಂಪ್ರದಾಯ ಸಾರವತ್ತಾದ ಮತ್ತು ಶಾಶ್ವತವಾದ ಅಂಶಗಳೊಂದನ್ನೂ ಬಿಡದೆ ಹೊಸ ಲೋಕದ, ಹೊಸದೃಷ್ಟಿಗೆ ಹೊಂದಿಕೊಳ್ಳುವ ನವಸಂನ್ಯಾಸ ಸಂಪ್ರದಾಯ ಒಂದನ್ನು ಸ್ಥಾಪಿಸಿ ಅದರ ಶಾಖೋಪಶಾಖೆಗಳು ಪ್ರಪಂಚದ ಮೇಲೆಲ್ಲ ಹಬ್ಬುವಂತೆ ಮಾಡಿದುದು."

"ಮೂರನೆಯದಾಗಿ ನರನಲ್ಲಿ ನಾರಾಯಣನನ್ನು ದರ್ಶಿಸುವ ಸಾಧನೆಯ ಮಾರ್ಗ ಒಂದನ್ನು ಬೋಧಿಸಿ, ಜಗತ್ತಿನ ಹಿತವನ್ನೂ ಆತ್ಮದ ಮೋಕ್ಷವನ್ನೂ ಏಕಲಕ್ಷವನ್ನಾಗಿಸುವ ದರಿದ್ರನಾರಾಯಣ ಸೇವಾರೂಪದ ಧರ್ಮಸಾಧನೆಯನ್ನು ಲೋಕಕ್ಕೆ ಕಲಿಸಿದುದು."

"ಸ್ವಾಮಿ ವಿವೇಕಾನಂದರ ತಪಃಪೂರ್ಣವಾದ ಶಕ್ತಿವಾಣಿಯಲ್ಲಿ ಆತ್ಮೋದ್ಧಾರಕವಾದ ವಿಭೂತಿ ಸ್ವಯಂ ಕ್ರಿಯಾಶೀಲವಾಗಿದೆ. ಅಲ್ಲಿ ಪತನ ಸಮಯದಲ್ಲಿ ನಮ್ಮನ್ನು ಕೈಹಿಡಿದೆತ್ತುವ ಔದಾರ್ಯವಿದೆ. ಹೃದಯ ದೌರ್ಬಲ್ಯದ ಸಮಯದಲ್ಲಿ ನಮ್ಮ ಕ್ಲೈಬ್ಯವನ್ನು ಕಿತ್ತೊಗೆದು ಕೆಚ್ಚನ್ನು ನೆಡುವ ಸಿಡಿಲಾಳ್ಮೆಯಿದೆ. ಬುದ್ಧಿಗೆ ಪುಷ್ಟಿಯಿದೆ, ಹೃದಯಕ್ಕೆ ತೃಪ್ತಿಯಿದೆ. ನಮ್ಮ ವ್ಯಕ್ತಿತ್ವ ಸಮಸ್ತವನ್ನೂ ಸರ್ವಾವಯವ ಸಂಪೂರ್ಣವಾಗಿ ವಿಕಾಸಗೊಳಿಸಿ ಪೂರ್ಣತೆಯ ಕಡೆಗೆ ನಮ್ಮನ್ನು ಕೊಂಡೊಯ್ಯುವ ಪೂರ್ಣದೃಷ್ಟಿಯೂ ಇಲ್ಲಿ ಸಿದ್ಧಿಸುತ್ತದೆ. ಇದು ಅಮೃತದ ಮಡು; ಮಿಂದರೆ ಪುನೀತರಾಗುತ್ತೇವೆ. ಇದೊಂದು ಜ್ಯೋತಿಯ ಖನಿ; ಹೊಕ್ಕರೆ ಪ್ರಬುದ್ಧರಾಗುತ್ತೇವೆ."

**ಕುವೆಂಪು**

# ಮಹಾನ್ ಚೇತನರು

**ಪೀಠಿಕೆ :** ಜಗತ್ಕಾರಣನೂ, ಜಗತ್‌ತಾರಕನೂ ಆದ ಭಗವಂತನು ಜಗದೋದ್ಧಾರನು, ದುರಿತನಿವಾರಕನು, ಶಿಷ್ಟ ಪರಿಪಾಲಕನು. ಆ ಉದ್ದೇಶದಿಂದಲೇ; ಭರತಖಂಡದಲ್ಲಿ ದಶಾವತಾರ ಮಾಡಿದನು. ಅವನ ಎಂಟನೆಯ ಅವತಾರವಾದ ಶ್ರೀಕೃಷ್ಣಪರಮಾತ್ಮನು ತನ್ನ ಅಮೋಘವಾದ ಗೀತಾ ಸಂದೇಶದಲ್ಲಿ ಎರಡು ದಿವ್ಯ ಆಶ್ವಾಸನೆಗಳನ್ನು ಅನುಗ್ರಹಿಸಿದ್ದಾನೆ:

**ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥ (4–7)**

ಅಭ್ಯುದಯಕ್ಕೂ ನಿಃಶ್ರೇಯಸಕ್ಕೂ ಸಾಧನವಾಗಿರುವ ವರ್ಣಧರ್ಮ, ಆಶ್ರಮ ಧರ್ಮ, ಮುಂತಾದ ರೂಪದಲ್ಲಿರುವ ಧರ್ಮದ ನಾಶವಾದಾಗಲೆಲ್ಲ, ಅಧರ್ಮ ಮೇಲೇರಿಬರುವಾಗಲೆಲ್ಲ ನನ್ನ ಮಾಯೆಯಿಂದ ನನ್ನನ್ನು ಸೃಷ್ಟಿಸಿಕೊಳ್ಳುವೆನು.

**ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಮ್ ।**
**ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥ (4–8)**

ಸಾಧುಗಳನ್ನು, ಅಂದರೆ ಸನ್ಮಾರ್ಗದಲ್ಲಿರುವವರನ್ನು ಕಾಪಾಡುವದಕ್ಕಾಗಿಯೂ, ಪಾಪಕರ್ಮಗಳನ್ನು ಮಾಡುವವರನ್ನು ವಿನಾಶಗೊಳಿಸುವದಕ್ಕಾಗಿಯೂ, ಧರ್ಮವನ್ನು ಚೆನ್ನಾಗಿ ನೆಲೆನಿಲ್ಲಿಸುವದಕ್ಕಾಗಿಯೂ ಯುಗಯುಗದಲ್ಲಿಯೂ ಹುಟ್ಟುತ್ತಿರುವೆನು _

ಈ ಭಾವಕ್ಕೆ ಪೂರಕವಾದಂತೆ, ಮತ್ತೊಂದು ವಿವರಣಾತ್ಮಕವಾದ, ಅಷ್ಟೇ ಧೈರ್ಯಪ್ರೇರಿತವಾಕನ್ನೂ ಭಗವಂತನು ಆಡಿದ್ದಾನೆ.

**ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಂಶ ಸಂಭವಮ್ ॥ (10–41)**

ಲೋಕದಲ್ಲಿ ಯಾವಯಾವ ಸತ್ತ್ವವಸ್ತುವು, ಎಂದರೆ ವಿಭೂತಿಯಿಂದ ಕೂಡಿರುವದೋ, ಲಕ್ಷ್ಮಿಯಿಂದ ಕೂಡಿರುವದೋ (ಸಂಪದ್ಭರಿತವಾಗಿದೆಯೋ) ಅಥವಾ ಉತ್ಸಾಹ, ಶಕ್ತಿಯಿಂದೊಡಗೂಡಿರುವದೋ, ಅವುಗಳೆಲ್ಲಾ ನನ್ನ ತೇಜಸ್ಸಿನ ಅಂಶಗಳು.

ದಶಾವತಾರಗಳು ಅವನ ನೇರ ಪ್ರವೇಶವಾದರೆ ಈ ಅವತಾರಗಳ ಅನಂತರದಲ್ಲಿ, ಆಗಾಗ ನಮ್ಮ ಶ್ರೇಯಸ್ಸಿಗೆ, ರಕ್ಷಣೆಗೆ, ಮಾರ್ಗದರ್ಶನಕ್ಕೆ, ನಮ್ಮ ಜೀವನದ ಒಳಿತಿಗೆ, ಶ್ರೇಷ್ಠತೆಗೆ ಎಂದೇ ನಮ್ಮ ನಡುವೆ ಬಂದಿಳಿದ ನೂರಾರು ಮಹಾ ಮಹಿಮರು ಭಗವಂತನ ತೇಜೋಂಶ ಸಂಭೂತರು. ಈ ಆವಿಷ್ಕರಣಗಳಿಗೆ ಭರತ ಭೂಮಿಯಂತಹ

ಪುಣ್ಯಭೂಮಿ, ಇಲ್ಲಿಯ ಹಿತಪರಿಸರವಿರಬೇಕು. ಏಕೆಂದರೆ, ಜಗತ್ತಿನಲ್ಲಿ ಎಲ್ಲೆಡೆ ನಾನಾಬಗೆಯ ಸಸ್ಯಾವಳಿಗಳು ಇರಬಹುದು– ಮರುಭೂಮಿಯಲ್ಲಿ ಕುರುಚಲು ಗಿಡಗಳು, ಜೌಗು ನೆಲದಲ್ಲೂ ಸಸ್ಯಗಳು, ಅಲ್ಲದೆ ಫಲಪುಷ್ಪಗಳೂ ಇವೆ. ಆದರೆ ಸಾರವತ್ತಾದ ಭೂಮಿಯಲ್ಲಿ ನಾನಾ ಬಗೆಯ ಅಪೂರ್ವ ಲತಾವೃಕ್ಷಗಳು ಸುಮಧುರ ಹಣ್ಣುಗಳು ಘಮಘಮಿಸುವ ಹೂವುಗಳು ತುಂಬಿ ಬೆಳೆದಿರುತ್ತವೆ. ಜಗತ್ತಿನಲ್ಲಿ ಭರತಭೂಮಿ ಅಂತಹ ಸತ್ವಯುತವಾದ ಸಂಪದ್ಭರಿತ ನಂದನವನ. ಇದು ಋಷಿ ಮುನಿಗಳ ಬೀಡು, ಧರ್ಮನಿರತರು, ಧರ್ಮಭೀರುಗಳು, ಅಜ್ಞರಾದರೂ ಶುದ್ಧ ನಡೆಯಲ್ಲಿ ಆಸಕ್ತಿ ಇಟ್ಟು ಯತ್ನಿಸುವ ಸಾತ್ವಿಕರ ನಾಡು.

ಇಂತಹ ದಿವ್ಯನಂದನದಲ್ಲಿ ಶ್ರೀರಾಮಕೃಷ್ಣ ಪರಮಹಂಸರೆಂಬ ಕಲ್ಪವೃಕ್ಷದಲ್ಲಿ ಬಿಟ್ಟ ಅತಿ ಶ್ರೇಷ್ಠಫಲ ಶ್ರೀ ಸ್ವಾಮಿ ವಿವೇಕಾನಂದರು. ಆಧ್ಯಾತ್ಮಿಕ ಸಾಧನೆಯಲ್ಲಿ ಸನಾತನ ಧರ್ಮದ ಪ್ರತಿನಿಧಿಯಾಗಿ ಕಂಡರೆ, ಲೌಕಿಕರಂಗದಲ್ಲಿ ಕ್ಷಾತ್ರ ತೇಜದ ಪುರುಷ ಸಿಂಹರಾಗಿದ್ದಾರೆ, ಧಾರ್ಮಿಕ ರಂಗದಲ್ಲಿ ನವ ಸುಧಾರಣೆಯ ಹರಿಕಾರರಾಗಿದ್ದಾರೆ, ವ್ಯಕ್ತಿತ್ವದಲ್ಲಿ ಧೀರೋದಾತ್ತ ತೇಜಸ್ಸಿನ ಅಂಶವಾಗಿದ್ದಾರೆ. ಈ ದಿವ್ಯಚೇತನರು ಭರತಖಂಡದಲ್ಲಿ ಸಾಕಾರರೂಪದಲ್ಲಿ ಕಂಡು, ದೇಶದ ಉದ್ದಗಲಗಳಲ್ಲೂ, ಅಮೆರಿಕೆ ಇಂಗ್ಲೆಂಡಿನಂತಹ ಪಾಶ್ಚಿಮಾತ್ಯ ದೇಶಗಳಲ್ಲೂ ತಮ್ಮ ಪ್ರಭೆಯನ್ನು ಹರಿಸಿದ್ದಾರೆ. "ಸ್ವಾಮಿ ವಿವೇಕಾನಂದರು ಹಿಂದೂಧರ್ಮವನ್ನು, ಭಾರತ ದೇಶವನ್ನು ವಿನಾಶದಿಂದ ಉಳಿಸಿ, ರಕ್ಷಿಸಿದವರು. ಅವರಿಲ್ಲದೆ ನಮ್ಮ ಧರ್ಮವನ್ನು ಕಳೆದುಕೊಳ್ಳುತ್ತಿದ್ದೆವು. ನಮ್ಮ ಸ್ವಾತಂತ್ರ್ಯವನ್ನು ಗಳಿಸಲಾಗುತ್ತಿರಲಿಲ್ಲ. ಆದುದರಿಂದ ನಮ್ಮ ಸರ್ವಸ್ವವೂ ಸ್ವಾಮಿ ವಿವೇಕಾನಂದರಿಗೆ ಸೇರಿದೆ. ಅವರ ನಂಬಿಕೆ, ಅವರ ಸ್ಥೈರ್ಯ ಮತ್ತು ಅವರ ಜ್ಞಾನ ಸದಾಕಾಲ ನಮ್ಮನ್ನು ಸ್ಫೂರ್ತಿಗೊಳಿಸಲಿ, ಅದರ ಮೂಲಕ ಅವರಿಂದ ನಾವು ಗಳಿಸಿರುವ ನಿಧಿಯನ್ನು ನಾವು ಜೋಪಾನವಾಗಿಡಲು ಸಹಕಾರಿಯಾಗಲಿ" ಎಂಬುದು ಶ್ರೀ ಸಿ. ರಾಜಗೋಪಾಲಚಾರಿಯವರ ರೋಮಾಂಚನಗೊಳಿಸುವ ಮಾತುಗಳು.

**ವಂಶ, ಹಿರಿಮೆ :** ಶ್ರೀ ವಿವೇಕಾನಂದರ ಜನ್ಮನಾಮ ನರೇಂದ್ರನಾಥ ದತ್ತ. ಕಲ್ಕತ್ತದ ದತ್ತವಂಶದ ಅವರೆಲ್ಲಾ ಕಾಯಸ್ತರು. ಅವರ ವಂಶಾವಳಿ, ಪ್ರಸಿದ್ಧ ವಕೀಲ ರಾಮಮೋಹನ ದತ್ತರಿಂದ, ಮಗ ದುರ್ಗಾಚರಣ ದತ್ತ– ತಾರುಣ್ಯದಲ್ಲೇ ಆಧ್ಯಾತ್ಮಿಕ ಸೆಳವಿನಿಂದ ಸಂನ್ಯಾಸಿಯಾದವರು,– ಮೊಮ್ಮಗ ವಿಶ್ವನಾಥ ದತ್ತರವರೆಗೆ; ಇವರ ಮಗನೇ ಮುಂದೆ ವಿವೇಕಾನಂದರೆಂಬ ಹೆಸರಿನಿಂದ ಜಗತ್ಪ್ರಸಿದ್ಧನಾದ ನರೇಂದ್ರನಾಥ ದತ್ತ. ಅವನ ತಾಯಿ ಭುವನೇಶ್ವರಿ. ವಿಶ್ವನಾಥ ದತ್ತರು ಬಹಳ ವಿಶಾಲಮನಸ್ಸಿನವರು, ಧಾರಾಳಿಗಳು,– ಎಷ್ಟರ ಮಟ್ಟಿಗೆ ಎಂದರೆ ಇತರರಿಗಾಗಿ ಮಾಡಿದ ದಾನದಿಂದ, ಬಡತನಕ್ಕೆ ಬಂದಿಳಿದವರು. ಆದರೆ, ಅವರು ಸಂಗೀತ, ಲಲಿತ ಕಲೆಗಳಲ್ಲಿ, ಬೈಬಲ್, ಪರ್ಶಿಯನ್ ಕವಿ ಹಫೀಸ್ ಅವರ ಗೀತೆಗಳಲ್ಲಿ

ಆಸಕ್ತರಾದ ಬುದ್ಧಿಜೀವಿಗಳು. ಗಂಡುಮಕ್ಕಳಿಲ್ಲದ ಕಾರಣ ಕಾಶಿಯ ವಿಶ್ವೇಶ್ವರನ ಶ್ರದ್ಧಾಪೂರ್ವಕ ಬೇಡಿಕೆ, ಹರಕೆಯಿಂದ, ತಾಯಿ ಭುವನೇಶ್ವರಿಯು ಈ ಮಗನನ್ನು ಜನವರಿ 12, 1863ರಲ್ಲಿ ಪಡೆದಳು.

ಸಣ್ಣ ವಯಸ್ಸಿನಿಂದಲೂ ಬಹುಮಾನ್ಯನಾಗಿ ಬೆಳೆಯುವ ಮೊಳಕೆ ಮಗನಲ್ಲಿ ಕಾಣುತ್ತಿತ್ತು. ಅವನಿಗೆ ಪಶು, ಪಕ್ಷಿ, ಪ್ರಾಣಿಗಳಲ್ಲಿ ದೀನರಲ್ಲಿ ಅನುಕಂಪ- ಅವನಿಗೆ ಮನೆಯ ಬೆಲೆಬಾಳುವ ವಸ್ತುವಾದರೂ ಸಹಿತ ಕೈಗೆ ಸಿಕ್ಕಿದ್ದನ್ನು ಭಿಕ್ಷೆಯಾಗಿ ಹಾಕುವ ಪ್ರವೃತ್ತಿ ಇತ್ತು- ಅವನ ವಾರಿಗೆಯ ಹುಡುಗರೆಲ್ಲರೂ ಆದರಿಂದ ಕಾಣುತ್ತಿದ್ದ ಅವರ ನಾಯಕ. ಅಸಾಧಾರಣ ಬುದ್ಧಿಮತ್ತೆ, ಅದರಂತೆ ಅದ್ಭುತವಾದ ಜ್ಞಾಪಕ ಶಕ್ತಿಯೂ ಅವನ ಬಂಡವಾಳವಾಗಿತ್ತು. ಕಾಲೇಜ್ ಸೇರುವ ಮೊದಲೇ ತನ್ನ ಶಾಲಾ ಓದಿಗೆ ಅವಶ್ಯಕತೆಯಿಲ್ಲದಿದ್ದರೂ, ಭಾರತೀಯ ಚರಿತ್ರೆಯ ಮೇಲಿನ ಹಲವಾರು ಮುಖ್ಯ ಪುಸ್ತಕಗಳು, ಕೈಗೆ ಸಿಗಬಹುದಾದ ತರ್ಕ ಗ್ರಂಥಗಳನ್ನು ಓದಿ ಮುಗಿಸಿದವನು. ಬಿ. ಎ. ಪರೀಕ್ಷೆಗೆ ಬರುವ ಹೊತ್ತಿಗೆ ಯೂರೋಪಿನ ಪ್ರಾಚೀನ ಹಾಗೂ ಆಧುನಿಕ ಚರಿತ್ರೆ, ಪಾಶ್ಚಿಮಾತ್ಯ ತತ್ತ್ವಶಾಸ್ತ್ರಗಳನ್ನೆಲ್ಲಾ ಓದಿ ಅರಗಿಸಿಕೊಂಡು ಬುದ್ಧಿವಂತನಾದ ಪಂಡಿತನೇ ಆಗಿದ್ದನು. ಇದೆಲ್ಲ ಸಾಧ್ಯವಾದದ್ದು ಯಾವುದೇ ಪುಟದ ನಾಲ್ಕಾರು ವಾಕ್ಯದಿಂದಲೇ ಅದರ ಪೂರ್ಣ ಪಾಠವನ್ನು ಅರಿಯುವ ಶಕ್ತಿ, ಅದರಿಂದಾಗಿ ಬಂದ ಶೀಘ್ರ ವ್ಯಾಸಂಗ ಕ್ರಮ- ಇದರಿಂದ ಹೃದ್ಗತ ಮಾಡಿಕೊಂಡ ಹೆಚ್ಚಿನ ಪ್ರೌಢಿಮೆಯ ವಿದ್ಯಾವಂತನಾಗಿದ್ದನು. ಓದು- ಅರಿವಿನಲ್ಲಷ್ಟೇ ಅಲ್ಲ, ವ್ಯಾಯಾಮ, ಕುಸ್ತಿ, ಬಾಕ್ಸಿಂಗ್, ಕತ್ತಿವರಸೆ, ಈಜು, ಆಟೋಟ ಮುಂತಾದ ದೈಹಿಕ ಸಾಮರ್ಥ್ಯಗಳಲ್ಲಿ, ಧೈರ್ಯ, ನಿರ್ಭೀತ ಮತ್ತು ಮತ್ತೊಬ್ಬರ ಸಹಾಯಕ್ಕೆಂದು ಮುನ್ನುಗ್ಗುವ ಸ್ವಭಾವದಲ್ಲಿ ಬಹಳ ಮುಂದಿದ್ದವನು. ಹೀಗೆ ಬಹುಮುಖ ಪ್ರತಿಭೆಗಳ ಸಂಮಿಳನದ ಅಪರೂಪದ ವ್ಯಕ್ತಿಯೇ ಆಗಿದ್ದನು.

**ಧ್ಯಾನದ ಒಲವು** : ಹುಡುಗನಾಗಿದ್ದಾಗಲೇ ನರೇಂದ್ರ ದತ್ತನಿಗೆ ಧೈರ್ಯ, ಸ್ಥೈರ್ಯ, ಸಮಯಸ್ಫೂರ್ತಿಗಳೂ ತುಂಬಿದ್ದವು. ವಯಸ್ಸನ್ನು ಮೀರಿದ ಅಪರೂಪದ ಆಧ್ಯಾತ್ಮಿಕ ಹೆಚ್ಚಳ ಅವರ ಭವಿಷ್ಯ ಜೀವನದ ಮುನ್ಸೂಚನೆಯಾಗಿತ್ತು. ಧ್ಯಾನವು ಅವರದೇ ಒಂದು ಭಾಗವೆನ್ನುವಂತಿತ್ತು; ಅವರ ಉತ್ಕಟ-ನಿಶ್ಚಲ ಮನಃ ಕೇಂದ್ರೀಕರಣ ಅದ್ಭುತವಾದದ್ದು. ಗುರುದೇವರೇ ಅನಂತರದ ದಿನಗಳಲ್ಲಿ ಹೇಳಿದಂತೆ 'ಅವರು ಹುಟ್ಟಿನಿಂದಲೇ ಧ್ಯಾನದ ಪರಿಪೂರ್ಣತೆಯನ್ನು ಪಡೆದವರು'. ನಿದ್ದೆಗಾಗಿ ಕಣ್ಣು ಮುಚ್ಚಿದರೆ ಬೆಳಕಿನ ಪ್ರಖರತೆಯಲ್ಲಿ ತಾನು ಕರಗುತ್ತಿದ್ದೇನೆ ಎಂದು ಭಾಸವಾಗುತ್ತಿತ್ತು. ಯಾರೂ ಹೇಳಿಕೊಡದೆ ಭಗವಂತನ ಸಾಕ್ಷಾತ್ಕಾರಕ್ಕೆ ಧ್ಯಾನವೇ ಅತ್ಯುತ್ತಮ ಸಾಧನವೆಂದು ಅವರಿಗೆ ಮನವರಿಕೆಯಾಗಿತ್ತು. ಇನ್ನೂ ಹದಿನಾಲ್ಕು ವರ್ಷದವರಿರುವಾಗಲೇ ವಿಂಧ್ಯಾಚಲ ಪರ್ವತ ಶ್ರೇಣಿಗಳನ್ನು ದಾಟುವಾಗ ಅಲ್ಲಿಯ ರಮಣೀಯ ಸೌಂದರ್ಯಕ್ಕೆ ಮನಸೋತವರು; ದಾರಿಯಲ್ಲಿ

ಎರಡು ಪರ್ವತ ಶಿಖರಗಳು ಅಪ್ಪುಗೆಯಲ್ಲಿರುವವೋ ಎಂಬಲ್ಲಿ ಆ ಸಂಧಿಪ್ರದೇಶದಿಂದ ಕೆಳಗಿನವರೆಗೂ ಹರಡಿದ ದೊಡ್ಡ ಸೀಳು, ಅದರ ಮೇಲೆ ಒಂದು ಪರ್ವತಾಗ್ರದಿಂದ ಜೋತುಬಿದ್ದಿದ್ದ ಜೇನುಗೂಡು ಅವರಿಗೆ ಭಗವಂತ, ಅವನ ಅಪರಿಮಿತ ಶಕ್ತಿ, ಮೂರು ಜಗಗಳ ಒಡೆತನದ ಭಾವನೆಗಳ ಲೋಕದಲ್ಲಿ ಮುಳುಗಿದಾಗ ಅವನ ಅರಿವು, ಪ್ರಜ್ಞೆ ಕರಗಿಹೋಗಿತ್ತು. ಇದು ಸಮಾಧಿಯ ಮೊದಲ ಅನುಭವ.

**ಮನಸಿನ ತಾಕಲಾಟ** : ತಾರುಣ್ಯದಲ್ಲೇ ಅನೇಕ ಪಾಶ್ಚಿಮಾತ್ಯ ಚಿಂತಕರ ನಿಲುವನ್ನು, ಆಧುನಿಕ ವಿಜ್ಞಾನದ ನಿರ್ಣಯಗಳನ್ನೂ ಓದಿ ಅರಗಿಸಿಕೊಂಡಿದ್ದನು. ಅಲ್ಲಿನ ಸಕಾರಣ ತಾರ್ಕಿಕ ಯೋಚನೆಗಳ ಪ್ರಭಾವದಿಂದ ನರೇನ್ ಒಂದು ಬಗೆಯ ನಾಸ್ತಿಕನೇ ಆಗಿದ್ದನು. ಯಾವದೇ ಆಧ್ಯಾತ್ಮಿಕ ತತ್ತ್ವವನ್ನಾಗಲೀ, ಹಿಂದೂಧರ್ಮದ ಸಾಮಾಜಿಕ ಪದ್ಧತಿ, ಅಂತರ್ಗತ ದುರ್ಬಲತೆಗಳು, ದೇವರ ಕಲ್ಪನೆ, ಪ್ರತಿಮಾ ಪೂಜೆಗಳನ್ನು ಒಪ್ಪದವನಾಗಿದ್ದನು. ಬ್ರಹ್ಮೋ ಸಮಾಜದ ಪ್ರಭಾವ, ಅಲ್ಲಿಯ ಕ್ರೈಸ್ತ ಪದ್ಧತಿಯ ಒಲವುಗಳು ಮನಸ್ಸಿನಲ್ಲಿ–ಬಿರುಸಾದ ಆಂತರಿಕ ಹೋರಾಟವನ್ನೆಬ್ಬಿಸಿದ್ದುವು. ಹೀಗಾಗಿ ಅವನು ಅಜ್ಞೇಯತಾವಾದವನ್ನೊಪ್ಪಿದ ಬ್ರಹ್ಮೋ ಸಮಾಜದ ಸಭೆಗಳಲ್ಲಿ ಭಾಗವಹಿಸುತ್ತಿದ್ದನು; ಅವನ ಇಂಪಾದ ಶಾರೀರ, ಗಾಯನಗಳು ಇತರರನ್ನು ಆಕರ್ಷಿಸುತ್ತಿದ್ದವು. ಆದರೆ ಚಿಕ್ಕಂದಿನಲ್ಲಿ ತಮ್ಮ ತಾಯಿಯವರಿಂದ ಕೇಳಿದ ರಾಮಾಯಣ, ಮಹಾಭಾರತಗಳ ಆಳವಾದ ಪ್ರಭಾವವೂ ಮನಸ್ಸಿನಲ್ಲಿ ಅಳಿಯದೆ ಇತ್ತು; ಬಡವರ ಬಗ್ಗೆ ಸಹಾನುಭೂತಿ, ಪರಿವ್ರಾಜಕ ಸಂನ್ಯಾಸಿಗಳಲ್ಲಿ ಆಸಕ್ತಿ, ಯಾವದೇ ವಿಷಯವಾದರೂ ನಿಖರವಾದ ಮಾಹಿತಿ ಇಲ್ಲದೆ ಒಪ್ಪದಿರುವ ಮನೋಭಾವಗಳು ಅವನಲ್ಲಿ ಬೆಳೆದಿತ್ತು. ಅಂತರ್ಗತವಾದ ಆಧ್ಯಾತ್ಮಿಕಶಕ್ತಿ, ಧ್ಯಾನ ಮಾರ್ಗಗಳೂ ವಿಕಸನವಾಗುತ್ತಲೇ ಇದ್ದುವು; ತನ್ನ ಹಲವಾರು ಪ್ರಶ್ನೆಗಳಿಗೆ ಉತ್ತರ ಸಿಗದೆ, ಅಧ್ಯಾತ್ಮಿಕ ಚಡಪಡಿಕೆ ಹಾಗೆಯೇ ಉಳಿದಿತ್ತು. ಕೇವಲ ಬುದ್ಧಿಬಲದಿಂದ ಮಾತ್ರ ಭಗವಂತನನ್ನು ಕಾಣಲಾಗದು ಎಂದು ಮನವರಿಕೆಯಾಯಿತು. ಅನೇಕ ಧಾರ್ಮಿಕ ಗುರುಗಳನ್ನು ಅವರು ದೇವರನ್ನು ನೇರಾಗಿ ನೋಡಿರುವರೇ ಎಂದು ಕೇಳಿ ನಿರಾಶರಾದನು. ಮಹರ್ಷಿ ದೇವೇಂದ್ರನಾಥ ಠಾಗೂರರು ಮಾತ್ರ 'ಯೋಗಿಯ ಲಕ್ಷಣಗಳೆಲ್ಲ ನಿನ್ನಲ್ಲಿವೆ, ಧ್ಯಾನ ನಿರತನಾದರೆ ಫಲಿತಾಂಶ ಸಿಗುತ್ತದೆ' ಎಂದರು.

**ರಾಮಕೃಷ್ಣರಲ್ಲಿ** : ಅಲ್ಲಿಂದ ಪ್ರಾರಂಭವಾದ ಭಗವಂತನ ನೇರ ಅನ್ವೇಷಣೆ ಶ್ರೀ ರಾಮಕೃಷ್ಣರಲ್ಲಿ ತಂದಿತು– ಅವರು 'ದೇವರಿಗಾಗಿ ಅಳುವರಾರು? ನಿಜವಾದ ಶ್ರದ್ಧೆ, ಕಳಕಳಿಯ ಹೃದಯದಿಂದ ಕರೆದರೆ ಅವನು ದರ್ಶನ ನೀಡುವನು' ಎಂದ ಮಾತು ಸಮಾಧಾನ ನೀಡಿತು– ಹುಚ್ಚರಂತೆ ತೋರುವ ಅವರು ಹಿರಿಯ ವ್ಯಕ್ತಿಯೆಂದು ಅವರ ಪಾದಗಳಿಗೆ ನಮಸ್ಕಾರ ಮಾಡಿದನು. ಒಂದು ತಿಂಗಳನಂತರ

ಹೋದಾಗ ಆನಂದದಿಂದ ಕರೆದು ಹಾಸಿಗೆಯ ತುದಿಯಲ್ಲಿ ಕೂರಿಸಿ ನಿಧಾನವಾಗಿ ಅವನೆಡೆಗೆ ಸರಿದು ಬಂದರು. ಇದೂ ಹುಚ್ಚಿನ ದೃಶ್ಯವೇ ಎಂದು ನರೇಂದ್ರನಿಗೆ ಅನಿಸಿತು. ಅವನನ್ನೇ ದೃಷ್ಟಿಸಿ ನೋಡುತ್ತಾ, ಏನನ್ನೋ ಮಾತನಾಡುತ್ತಾ ಪಕ್ಕಕ್ಕೆ ಬಂದು ಬಲಗಾಲನ್ನು ಅವನ ದೇಹದ ಮೇಲಿಟ್ಟರು. ಆಗ ಅವನಿಗೆ ಸುತ್ತಲಿನ ದೃಶ್ಯಪ್ರಪಂಚವೆಲ್ಲವೂ ತಿರುಗುತ್ತಿದ್ದು 'ನಾನು' ಎನ್ನುವ ಭಾವ ಅಳಿಯಿತು. ಸಾವು ಮುಂದೆಯೇ ಬಂತೆಂದು ತೋರಿತು. 'ಏನು ಮಾಡಿದಿರಿ, ನನಗೆ ತಾಯಿತಂದೆಗಳಿದ್ದಾರೆ' ಎಂದು ಜೋರಾಗಿ ಕೂಗಿಕೊಂಡನಂತೆ. ನಗುತ್ತಾ ರಾಮಕೃಷ್ಣರು ತಮ್ಮ ಕೈಯನ್ನು ಅವನ ಎದೆಯ ಮೇಲಿಟ್ಟು 'ಈಗ ಇಷ್ಟು ಸಾಕು, ಒಂದೇ ಸಲ ಬೇಡ, ನಿಧಾನವಾಗಿ ಬರುತ್ತದೆ' ಎಂದರು ಅವನ ಅನುಭವ ಮಾಯುವಾಯಿತು. ಎರಡು ವಾರಗಳ ಮೇಲೆ, ಎಷ್ಟೇ ಪ್ರತಿರೋಧದ ಪ್ರಜ್ಞೆಯಿದ್ದವನನ್ನೂ ಬಗ್ಗಿಸುವ ಈ ಅರ್ಥವಾಗದ ಮನುಷ್ಯನ ಪ್ರಭಾವಕ್ಕೆ ಏನಾದರೂ ಬಾಗುವದಿಲ್ಲವೆಂಬ, ದೃಢಮನಸ್ಸಿನಲ್ಲಿಯೇ ಬಂದನು. ಇವನೊಡನೆ ಪಕ್ಕದ ತೋಟದಲ್ಲಿ ನಡೆದಾಡುವಾಗ ಅವರು ಭಾವಸಮಾಧಿಯಲ್ಲಿ ಮುಳುಗಿದರು, ಹಾಗೆಯೇ ತನ್ನನ್ನೇ ನೋಡುತ್ತಾ ಕುಳಿತವನನ್ನು ತಟಕ್ಕನೆ ಅವರು ಮುಟ್ಟಿದ ಕೂಡಲೇ ಅವನು ಪೂರ್ಣವಾಗಿ ಹೊರ ಪ್ರಜ್ಞೆಯನ್ನು ಕಳೆದುಕೊಂಡನು. ಆಗ ರಾಮಕೃಷ್ಣರು ಅವನು ಯಾರು, ಎಲ್ಲಿಂದ ಬಂದ ಮುಂತಾದ ಅನೇಕ ವಿವರಗಳನ್ನು ಕೇಳಿ ತಿಳಿದರು. ಅನಂತರದ ಮತ್ತೊಂದು ಸಮಾಧಿಯ ಅನುಭವದಿಂದ ನರೇಂದ್ರನಿಗೆ ಅದ್ವೈತದ ದರ್ಶನವಾಯಿತು. ಇಡೀ ವಿಶ್ವದಲ್ಲಿ ಭಗವಂತನೊಬ್ಬನನ್ನು ಬಿಟ್ಟು ಬೇರೇನೂ ಇಲ್ಲವೆಂಬ ದೃಢತೆ ಅನುಭವವಾಯಿತು.

**ಗುರು-ಶಿಷ್ಯ ನಂಟು** : ಈ ಅನುಭವಗಳನಂತರ ಮಾಸ್ಟರ ವಿಷಯದಲ್ಲಿ ನರೇಂದ್ರನ ಮನೋಭಾವ ಬದಲಾಗಿ, ಅವರನ್ನು ಗುರುವಾಗಿ ಸ್ವೀಕರಿಸಿದನು. ಆದರೆ ಧಾರ್ಮಿಕ ವಿಷಯಗಳಲ್ಲಿ ತನ್ನ ಅಭಿಪ್ರಾಯ, ಯಾವದನ್ನೂ ವಿಶದವಾಗಿ ಪರೀಕ್ಷಿಸುವ ದೃಷ್ಟಿ ಬದಲಾಗಲಿಲ್ಲ. ಅಜ್ಞೇಯತಾವಾದಿಯಾಗಿದ್ದರೂ (Agnostic) , ಸತ್ಯವನ್ನು ತಿಳಿಯಲು ಬ್ರಹ್ಮಚರ್ಯ, ಧ್ಯಾನಗಳು ಅತ್ಯಾವಶ್ಯಕ, ಭಗವಂತನಿಗೆ ಮಾನವರೂಪದ ಆರೋಪಣೆಯೂ ಬೇಕಾಗುವದು ಎಂದು ಅವನಿಗೆ ಮನವರಿಕೆಯಾಯಿತು. ಈಗ ಅವನು ಗುರುದೇವರ ಬಳಿ ಹೆಚ್ಚು ಹೆಚ್ಚಾಗಿ ಬರತೊಡಗಿದನು, ಅಲ್ಲೇ ಒಂದೆರಡು ದಿನ ಉಳಿಯುವನು; ಅವರಿಂದ ಆಧ್ಯಾತ್ಮಿಕ ಸ್ಫೂರ್ತಿ, ಅವರ ನಿರ್ದೇಶನದಲ್ಲಿ ಧ್ಯಾನ ಮಾಡಲಾರಂಭಿಸಿದನು, ತನ್ನ ನೈಜ ಸ್ವರೂಪದರ್ಶನ ಕೊಡೆಂದು ಭಗವಂತನಲ್ಲಿ ಸತತವಾಗಿ ಪ್ರಾರ್ಥಿಸಲಾರಂಭಿಸಿದನು. ಗಾಳಿ ಇಲ್ಲದಲ್ಲಿ ಸ್ಥಿರವಾಗಿರುವ ದೀಪದ ಕುಡಿಯಂತೆ ಮನಸ್ಸು ಅಚಲವಾಯಿತು.

ಹಾಗೆಯೇ ರಾಮಕೃಷ್ಣರಿಗೂ ಈ ಅನುಭವವು. ತನ್ನ ಜೀವನದ ಉದ್ದಿಷ್ಟಕಾರ್ಯ

ನಡೆಸುವವನು ಇವನೇ ಎಂಬ ಆತ್ಮವಿಶ್ವಾಸ ಖಚಿತವಾಯಿತು. ಅವನ ಮೇಲಿನ ಪ್ರೀತಿ ಹೆಚ್ಚಾಯಿತು, ಅವನು ಬರದಿದ್ದಾಗ ನಿರಾಶರಾಗುವರು; ಒಮ್ಮೆ ಬಹಳ ದಿನಗಳಿಂದ ಬರಲಿಲ್ಲವೆಂದು ಅವನನ್ನು ಹುಡುಕಿಕೊಂಡು ಬ್ರಹ್ಮೋ ಪ್ರಾರ್ಥನಾ ಸಭೆಗೆ ಹೋದಾಗ, ಅಲ್ಲೊಂದು ಗುಲ್ಲೇ ಆಯಿತು. ನರೇಂದ್ರನು ಇವರನ್ನು ಛೇಡಿಸಲು ಮಗುವಿನಂತಹ ಮುಗ್ಧಮನಸ್ಸಿನ ರಾಮಕೃಷ್ಣರಿಗೆ ಮನಸ್ಸು ಹಿಂಡಿತು. ತಮ್ಮ ನಿರ್ಧಾರ, ಇವನೇ ತಕ್ಕ ಶಿಷ್ಯನೇ ಎನ್ನುವ ವಿಚಾರಸಂಶಯದಿಂದ ಎಂದಿನಂತೆ ಕಾಳಿಕಾ ತಾಯಿಯಲ್ಲಿ ಮೊರೆಹೋದರು. 'ಅವನನ್ನು ನಾರಾಯಣ ಎಂದು ತಿಳಿದೇ ಪ್ರೀತಿಸುತ್ತಿರುವೆ–ಅವನು ನಾರಾಯಣನಲ್ಲ ಎಂದರೆ ನೀನು ಅವನೆಡೆ ತಿರುಗಿ ನೋಡುವದಿಲ್ಲ' ಎಂದು ಕೇಳಿ, ರಾಮಕೃಷ್ಣರಿಗೆ ಸಮಾಧಾನವಾಯಿತು.

**ಭಗವತಿಯ ದರ್ಶನ** : ಇಲ್ಲಿಂದ ಮುಂದೆ ಗುರು–ಶಿಷ್ಯರ ಮಧ್ಯೆ ನಿಸ್ವಾರ್ಥ ಪ್ರೇಮದ ನಿಕಟ ಸಲಿಗೆಯ ನಂಟು ಬೆಳೆಯಿತು. ನರೇಂದ್ರನ ಅತಿ ಧಾರಾಳ ದಾನಶೀಲ ತಂದೆಯ ನಿಧನದ ನಂತರ, ಮನೆಗೆ ಆರ್ಥಿಕ ದುಃಸ್ಥಿತಿ ಬಂದಾಗ, ಮನೆಯ ಹಿರಿಯನಾದ ನರೇಂದ್ರನಿಗೆ ಹೊಣೆಗಾರಿಕೆಯ ನಿರ್ವಹಣೆಯಲ್ಲಿ ಅನೇಕ ಸಂಕಷ್ಟಗಳು ಎದುರಾದುವು, ಊಟಕ್ಕೂ ಕಠಿಣವಾಯಿತು. ಪ್ರಯತ್ನಿಸಿದರೂ ಕೆಲಸ ಸಿಗದಾಯಿತು. ಸುಸ್ಥಿತಿಯಲ್ಲಿದ್ದಾಗ ಹತ್ತಿರವಿದ್ದವರು ಈಗ ದೂರವಾದರು. ಸಹಾನುಭೂತಿಯಿಂದ ಬಂದವರು, ತಮ್ಮಂತಿರಲು ಪ್ರಯತ್ನಿಸು ಎಂದಾಗ ಅವರ ಅನ್ಯಮಾರ್ಗವನ್ನು ಎಷ್ಟೇ ಬಡತನವಾದರೂ ಹಿಡಿಯಲೊಲ್ಲದಾದನು. ಎಷ್ಟೋ ದಿನ ಉಪವಾಸವಿರಬೇಕಾಗುತ್ತಿತ್ತು. ಇಂತಹ ರಾತ್ರಿಯೊಂದರಲ್ಲಿ ಮನೆಗೆ ನಡೆದು ಬರುವಾಗ ಮಳೆಯುಲ್ಲಿ ನೆಂದು, ಶಕ್ತಿಗುಂದಿ, ಒಂದು ಹೆಜ್ಜೆಯನ್ನೂ ಮುಂದಿಡಲಾರದೆ ದಾರಿಯಲ್ಲಿ ಯಾರದೋ ಮನೆಯ ಜಗಲಿಯ ಮೇಲೆ ಮರದ ತುಂಡಿನಂತೆ ಬಿದ್ದುಕೊಂಡನು. ಸಾವಿರಾರು ಯೋಚನೆಗಳು, ಚಿತ್ರಗಳು ಸುಳಿದು ಮಾಯವಾದುವು. ಚಿಂತೆಯ ಕಾರ್ಮೋಡಗಳು ಮುಸುಕಿದವು. ಆಗ ಇದ್ದಕ್ಕಿದ್ದಂತೆ ತನ್ನ ಹೃದಯಾಂತರಾಳದಲ್ಲಿ ತನ್ನನ್ನು ಯಾವಾಗಲೂ ಕಾಡುತ್ತಿದ್ದ 'ದಯಾಮಯ ದೇವನ ಸೃಷ್ಟಿಯಲ್ಲಿ ದುಷ್ಟಶಕ್ತಿಗಳೇಕೆ, ನಿಷ್ಠುರ ನ್ಯಾಯ ಮತ್ತು ಭಗವಂತನ ಮೇರೆಯಿಲ್ಲದ ಕರುಣೆಗಳ ನಡುವಿನ ಸಾಮರಸ್ಯವೇನು' ಎಂಬಂತಹ ಪ್ರಶ್ನೆಗಳಿಗೆ ಮಿಂಚು ಹೊಳೆದಂತೆ ಉತ್ತರ ದೊರಕಿ ಮಹದಾನಂದವಾಯಿತು. ಈ ಅನುಭವದ ನಂತರ ಸಂನ್ಯಾಸಿಯಾಗಲು ದೃಢ ನಿರ್ಧಾರ ಮಾಡಿದನು. ಆಗ ಗುರುದೇವರು 'ನೀನು ಭಗವತಿಯ ಕಾರ್ಯಕ್ಕಾಗಿ ಬಂದವನು, ಪ್ರಾಪಂಚಿಕ ಜೀವನ ನಿನಗಿಲ್ಲ, ಆದರೆ ನಾನಿರುವವರೆಗೂ ನಿನ್ನ ಸಂಸಾರದೊಡನಿರು' ಎಂದರು.

ತನ್ನ ದುರಿತ ನಿವಾರಣೆಗೆ, ಪ್ರಾಪಂಚಿಕ ಸ್ಥಿತಿಯ ಸುಧಾರಣೆಗೆ ದೇವಿಯನ್ನು ಬೇಡಲು ಗುರುವನ್ನು ಕೇಳಿಕೊಂಡನು. ಅವರು ಹೇಳಿದಂತೆ ದುರ್ಗೆಯ ಮುಂದೆ ನಿಂತಾಗ, ಆ ತಾಯಿ ಜೀವಂತವಾದ ಶುದ್ಧ ಪ್ರಜ್ಞೆಯಾಗಿ ಕಂಡಳು.

ಆನಂದ ತುಂದಿಲನಾಗಿ 'ತಾಯೇ, ವಿವೇಚನೆ, ನಿಸ್ಸಂಗತ್ವ, ದೈವಜ್ಞಾನ ಮತ್ತು ಭಕ್ತಿಯನ್ನು ನೀಡು' ಎಂದು ಬೇಡಿದರೇ ವಿನಾ ತನ್ನ ಪ್ರಾಪಂಚಿಕ ಕೊರತೆಗಳನ್ನು ನೀಗಲು ಕೇಳಿಕೊಳ್ಳಬೇಕೆಂಬ ಕಲ್ಪನೆಯೇ ಅವನಲ್ಲಿ ಬರಲಿಲ್ಲ. ಅವನು ದೇವಿಯನ್ನು ನೋಡಲು ಹೋಗಿದ್ದ ಮೂರು ಬಾರಿಯೂ ಹೀಗೆಯೇ ಆಯಿತು. ಅವನ ಹೃದಯದಲ್ಲಿ ಶಾಂತಿ ತುಂಬಿ ಹರಿಯಿತು. ಇಡೀ ವಿಶ್ವವೇ ಕಣ್ಮರೆಯಾಯಿತು, ತಾಯಿಯೊಬ್ಬಳೇ ಸರ್ವವ್ಯಾಪಿಯಾಗಿ ಹೃದಯವನ್ನು ತುಂಬಿ ಉಳಿದವಳು.

ಆದರೂ ಕುಟುಂಬದ ಯೋಗಕ್ಷೇಮದ ಬಗ್ಗೆ ಕೇಳುತ್ತಲೇ ಇದ್ದಾಗ, ಗುರುದೇವರು ಆಹಾರ, ವಸ್ತ್ರಗಳಿಗೆ ಅವರಿಗೆ ಎಂದೂ ಕೊರತೆಯಿರುವದಿಲ್ಲ ಎಂದು ನುಡಿದರು. ಹೀಗೆ ಗುರುವಿನ ಅಸಾಧಾರಣ ಆಧ್ಯಾತ್ಮಿಕ ಶಕ್ತಿ, ನಿಸ್ವಾರ್ಥ ಪ್ರೇಮಗಳು ಅವನು ಗುರುತತ್ತ್ವವನ್ನು ಒಪ್ಪಿಕೊಳ್ಳುವಂತೆ ಮಾಡಿತು; ಹೊರಗಿನ ಪ್ರಪಂಚದ ಅನಿಶ್ಚಯತೆಯು ಗುರುವಿನ ಸಂಕಲ್ಪದಿಂದ ತೊಡೆದುಹೋಗಿ ಆಧ್ಯಾತ್ಮಿಕ ಚಿಂತನೆಗೆ ಮಾಡಿಕೊಟ್ಟ ದಾರಿ, ಈಗ ಪ್ರಾಪಂಚಿಕ ಕೊರತೆಗಳು ಗುರುವಿನ ದಯೆಯಿಂದ ದೂರವಾದಾಗ ದಿವ್ಯಪ್ರತಿಮೆಗಳಲ್ಲಿ ತಾಯಿಯನ್ನು, ಭಗವಂತನ ಆರಾಧನೆಗೆ ತಂದದ್ದು– ಈ ಮೂರೂ ವೇದಾಂತದ ಪಾರಮಾರ್ಥಿಕ ಪರಂಪರೆಯನ್ನು ಪೂರ್ಣವಾಗಿ ಒಪ್ಪಿಕೊಳ್ಳುವಂತೆ ಮಾಡಿದುವು. ಪ್ರಾಪಂಚಿಕ ದುಃಖವು ಅವನ ಪ್ರಜ್ಞಾಶಾಲಿ ಅಹಂತೆ ಅನ್ನು ಮೃದುಮಾಡಿ, ಸುತ್ತಲಿನ ಪ್ರಪಂಚದ ಕಷ್ಟ ಕಾರ್ಪಣ್ಯಗಳ ಕಡೆ ಮನಸ್ಸನ್ನು ತಿರುಗಿಸಿ, ನರೇಂದ್ರನನ್ನು ಮಾನವ ಕುಲ ಪ್ರೇಮಿಯಾಗಿ ಮಾಡಿತು. ಸುಮಾರು ಐದು ವರ್ಷಗಳ ಕಾಲ ಒದಗಿದ ಗುರುವಿನ ಸಾಹಚರ್ಯ ಅವನ ಜೀವನದ ಸುಖಕಾಲ; ಅದರ ನೆನಪು, ಯಾವತ್ತೂ ಅವನ ಜೀವನಪೂರ್ತ ಅತ್ಯಂತ ಸಂತೋಷದಿಂದ ಅವನ ಮನಸ್ಸನ್ನು ಆವರಿಸಿತ್ತು. ಗುರುವಿನ ಕೊನೆಯ ಅನಾರೋಗ್ಯ ಕಾಲದಲ್ಲಿ ತುಂಬಾ ಆಪ್ತರಾದ ಶಿಷ್ಯರೆಲ್ಲಾ, ನರೇಂದ್ರನ ನಾಯಕತ್ವದಲ್ಲಿ, ಗುರುವಿನ ಅವಿರತ ಶುಶ್ರೂಷೆ ಮಾಡಿದರು. ಗುರುವಿನ ಮೇಲಿನ ಅತ್ಯಂತ ಪ್ರೀತಿ ಮತ್ತು ನರೇಂದ್ರನ ನಾಯಕಸ್ಥಾನದ ಮಾರ್ಗದರ್ಶನದಿಂದ ಆಕರ್ಷಿತರಾದ ಈ ಹದಿನೈದು ತರುಣ ಆಪ್ತ ಶಿಷ್ಯರೇ ಮುಂದೆ ರಾಮಕೃಷ್ಣ ಸಂನ್ಯಾಸಿ ಪಂಥದ ಮೂಲವಸ್ತುವಾದರು. ಎಲ್ಲರೂ ಚೆನ್ನಾಗಿ ಪರಸ್ಪರ ಬೆರೆತು, ಕೆಲಸಕಾರ್ಯದಲ್ಲಷ್ಟೇ ಅಲ್ಲ, ಆಧ್ಯಾತ್ಮಿಕ ಶಿಸ್ತಿನಲ್ಲೂ ಮುಂದುವರೆದರು. ಆದರೆ ನರೇಂದ್ರನ ಪ್ರಗತಿ ಅತ್ಯಂತ ಅಸಾಧಾರಣವಾದುದು. ರಾತ್ರಿಯೆಲ್ಲಾ ಧ್ಯಾನದಲ್ಲಿದ್ದು, ಸೊಳ್ಳೆಗಳ ದಂಡೇ ಅವನನ್ನು ಮುತ್ತಿದರೂ ಎಚ್ಚರಾಗುತ್ತಿರಲಿಲ್ಲ– ಗುರುದೇವನ ಕೊನೆ, ಎರಡು ದಿನಗಳಿರುವಾಗ ಸಮಾಧಿ ಸ್ಥಿತಿಯನ್ನೇ ಇಷ್ಟಪಟ್ಟ ನರೇನ್‌ಗೆ ಗುರುದೇವರು ಅದೊಂದು ಸಣ್ಣ ಆದರ್ಶ, ಇದಕ್ಕಿಂತಲೂ ಹೆಚ್ಚಿನ ಸ್ಥಿತಿಯೊಂದಿದೆ, ಅವನ ನಿಜ ಉದ್ದೇಶ ಮಾನವ ಸೇವೆ, ಅದಕ್ಕಾಗಿಯೇ ಅವನು ಬಂದಿರುವದು ಎಂದು ಹೇಳಿ, ನಿರ್ವಿಕಲ್ಪ ಸಮಾಧಿಯ ಅನುಭವವನ್ನೂ ನೀಡಿ– ಈ ಅರಿವು

ಇನ್ನು ಭದ್ರವಾಗಿ ಮುಚ್ಚುತ್ತದೆ ಅದರ ಕೀಲಿಕೈ ನನ್ನಲ್ಲಿ ಎಂದರು. ಅವರು ಹೇಳುತ್ತಿದ್ದಂತೆ ಅವರು ದೇವರ ಅವತಾರ ನಿಜವೇ ಎಂಬುದು ಅವನ ಮನಸ್ಸಿಗೆ ಬಂದಕೂಡಲೇ, ಮಾತನಾಡಲು ಬಹಳಕಷ್ಟವಿದ್ದ ಗುರುದೇವರು 'ನರೇನ್ ಇನ್ನೂ ನಂಬಿಕೆಯಿಲ್ಲವೇ? ಯಾರು ರಾಮನೋ, ಕೃಷ್ಣನೋ ಅವನೇ ಈಗ ರಾಮಕೃಷ್ಣ ಈ ದೇಹದಲ್ಲಿ' ಎಂದು ಸ್ಪಷ್ಟ ದನಿಯಲ್ಲಿ ಹೇಳಿದರು– ಇನ್ನೊಮ್ಮೆ 'ನರೇನ್ ನನ್ನದೆಲ್ಲವನ್ನೂ ನಿನಗೆ ಕೊಟ್ಟಿದ್ದೇನೆ, ಈಗ ನಾನು ಕಾಸಿಲ್ಲದ ಭಿಕಾರಿ, ನಾನಿತ್ತಿರುವ ಶಕ್ತಿಯಿಂದ ಅನೇಕ ಮಹತ್ಕಾರ್ಯಗಳು ನಿನ್ನಿಂದ ಆಗುತ್ತವೆ, ಅದರನಂತರವೇ ನಿನ್ನ ಸ್ವಸ್ಥಾನಕ್ಕೆ ನೀನು ತೆರಳುವದು' ಎಂದರು– ಆಗಾಗ ಪಕ್ಕದಲ್ಲೇ ಕೂರಿಸಿಕೊಂಡು ಬೇಕಾದಷ್ಟು ಮಾತನ್ನು ಏಕಾಂತದಲ್ಲಿ ಹೇಳಿದರು, ಆಧ್ಯಾತ್ಮ ವಿಷಯಗಳು, ಅವರ ಅಂತ್ಯಸಮಯದಲ್ಲಿ ಸಜ್ಜುಗೊಳಿಸಿದ (ಕಾವಿಯೊಡನೆ) ಸಹೋದರತ್ವ ಬಳಗವನ್ನು ಒಟ್ಟಾಗಿಡುವ, ಅವರಿಗೆ ಮಾರ್ಗದರ್ಶನದ ವಿಷಯಗಳಿರಬಹುದು–

1886 ರ ಆಗಸ್ಟ್ 16 ರಂದು ಗುರುದೇವರು ನಿಜಾನಂದದಲ್ಲಿ ಲೀನವಾದರು. ಆ ವಾರಾಂತ್ಯದೊಳಗೆ ಒಂಧು ರಾತ್ರಿ ಸಹೋದರ ಸಂನ್ಯಾಸಿಯೊಡನೆ ತೋಟದಲ್ಲಿ ತಿರುಗುವಾಗ ಪ್ರಭಾರೂಪವೊಂದನ್ನು ಕಂಡರು. ಭ್ರಮೆ ಎಂದುಕೊಳ್ಳುವಾಗ ಜೊತೆಗಾರ 'ನರೇನ್, ನೋಡು' ಎಂದು ಕೂಗಿದ– ಸಂದೇಹವೇ ಇಲ್ಲ, ಶ್ರೀ ರಾಮಕೃಷ್ಣರೇ ದರ್ಶನ ಕೊಟ್ಟವರು.

**ಸಂನ್ಯಾಸಿ ಸಂಘ ಸ್ಥಾಪನೆ :** ಶಿಷ್ಯರೆಲ್ಲ ಸಂಪ್ರದಾಯ ವಿಧಿಯಂತೆ ವಿರಜಾಹೋಮದೊಡನೆ ಸಂನ್ಯಾಸಿ ಸಂಘವನ್ನು ಸ್ಥಾಪಿಸಿದರು. ಬಂಧುಬಳಗದ ಆಕರ್ಷಣೆಯನ್ನೆಲ್ಲಾ ಮೀರಿ, ಈ ತರುಣ ಭಕ್ತರೆಲ್ಲಾ ಮೊದಲಿಗೆ ಸ್ಥಾಪಿತವಾದ ಬಾರಾನಾಗೋರಿನ ಸಂನ್ಯಾಸಿ ಮಠದಲ್ಲಿ– ಜೀರ್ಣವಾದ ಹಳೆಯ ಕಟ್ಟಡದಲ್ಲಿ– ನೆಲಸಿದ್ದಕ್ಕೆ ನರೇಂದ್ರನೇ ಬಹುಮಟ್ಟಿಗೆ ಕಾರಣನು. ನರೇಂದ್ರನು ಪರಿವ್ರಾಜಕನಾಗಿ ವಿವಿದಿಶಾನಂದ, ಅನಂತರ ಸಚ್ಚಿದಾನಂದ ಎಂಬ ಹೆಸರಿನೊಡನೆ 1888 ರಿಂದ ಸಂಚಾರ ಹೊರಟರು. ಶಶಿಯೊಬ್ಬರೆ– ಸ್ವಾಮಿ ರಾಮಕೃಷ್ಣಾನಂದ– ಮಠದಲ್ಲಿ ಗುರುದೇವರ ಅವಶೇಷಗಳೊಡನೆ ಉಳಿದರು. ಸಚ್ಚಿದಾನಂದರು ದೇಶಾದ್ಯಂತ ಪರ್ಯಟನೆ ಮಾಡಿ ದೇಶದ ಸಂಪೂರ್ಣ ಪರಿಚಯವನ್ನು ಮಾಡಿಕೊಂಡರು. 1888–1890ರ ವರೆಗೆ ಆಗೊಮ್ಮೆ ಈಗೊಮ್ಮೆ ಮಠಕ್ಕೆ ಬಂದಿದ್ದು, ಮತ್ತೆ 1890 ರಲ್ಲಿ ಹೊರಟವರು 1897 ರಲ್ಲಿ ಪಾಶ್ಚಿಮಾತ್ಯ ಪ್ರವಾಸ ಮುಗಿಸಿದ ಮೇಲೆಯೇ ಬಂದವರು. ಸಹೋದರ ಸಂನ್ಯಾಸಿಗಳು ಜೊತೆಗಿಲ್ಲದಂತೆಯೇ– ಅಂದರೆ ವೈಯಕ್ತಿಕ ಸ್ನೇಹ ಬಂಧನವನ್ನೂ ತಪ್ಪಿಸಿ, ಏಕಾಂಗಿಯಾಗಿ ಹಿಮಾಲಯದಿಂದ ಕನ್ಯಾಕುಮಾರಿ, ರಾಮೇಶ್ವರವನ್ನೆಲ್ಲಾ ಸುತ್ತಿ 1893 ರಲ್ಲಿ ಮದ್ರಾಸಿಗೆ ಬಂದರು. ಸೋದರ ಸಂನ್ಯಾಸಿಗಳಿಗೂ ಇವರು ಇರುವ ಸ್ಥಳ ಗೊತ್ತಾಗಬಾರದೆಂದು, ಆಗಿಂದಾಗ ತಮ್ಮ ಹೆಸರನ್ನು ಬದಲಾಯಿಸಿಕೊಂಡು ತಿರುಗಿದರು. ಈ ಯಾತ್ರೆಯಲ್ಲಿ

ರಾಜನಿಂದ ರಂಕ-ರೈತನವರೆಗೆ ಸಮಾಜದ ಎಲ್ಲ ವರ್ಗದ ಜನರಲ್ಲೂ ಮಿಳಿತರಾದರು. ಈ ಪ್ರವಾಸದಲ್ಲಿ ಅಲಹಾಬಾದ್ ಸಮೀಪ ಘಾಸಿಪುರದಲ್ಲಿ ಪವ್ಹಾರಿಬಾಬರಿಂದ ಆಕರ್ಷಿತರಾಗಿ ಅವರಿಂದ ಸಂನ್ಯಾಸ ದೀಕ್ಷೆ ಪಡೆಯುವ ಮನಸ್ಸಾಯಿತು. ಕೂಡಲೇ ಗುರುದೇವರು ಪಕ್ಕದಲ್ಲೇ ನಿಂತು ದೃಷ್ಟಿಸಿ ನೋಡುತ್ತಿರುವಂತೆ ಭಾಸವಾಯಿತು. ಈ ಅನುಭವ ಮುಂದಿನ ಪ್ರತಿದಿನಗಳೂ ಆಯಿತು. ಸಂನ್ಯಾಸ ಹಂಬಲವನ್ನು ಬಿಟ್ಟರು. ಆಳ್ವಾರ್ ರಾಜನು ಮೂರ್ತಿಪೂಜೆಯನ್ನು ಜರೆದಾಗ, ಅವನ ದಿವಾನನಿಗೆ ರಾಜನ ಚಿತ್ರದ ಮೇಲೆ ಉಗುಳುವಂತೆ ಹೇಳಿದರು. ಅಪ್ರತಿಭನಾದ ಅವನು ಅದು ರಾಜನ ಅವಹೇಳನ ಎಂದನು. ಸ್ವಾಮಿಗಳು ಚಿತ್ರ ಹೇಗೆ ರಾಜನ ಪ್ರತಿಮೆಯೋ ಹಾಗೆಯೇ ಭಕ್ತನು ಮೂರ್ತಿಯಲ್ಲೇ ದೇವರನ್ನು ಕಾಣುವನು. ಅದನ್ನು ಮಾಡಿದ ಮಣ್ಣು ಕಲ್ಲನ್ನಲ್ಲ, ಎಂದು ಹೇಳಿದ್ದು ರಾಜನ ದೃಷ್ಟಿ ಕೋನವನ್ನೇ ಬದಲಾಯಿಸಿತು. ಖೇತ್ರಿಯಲ್ಲಿ ನಾಟ್ಯಗಾತಿಯ ಗಾಯನವನ್ನು, ಸಂನ್ಯಾಸಿಯಾಗಿ ಕೇಳಲೊಲ್ಲೆನೆಂದಾಗ ಆಕೆ ಇಂಪಾಗಿ ಹಾಡಿದ ಸೂರದಾಸರ ಪದದಿಂದ 'ಓ ದೇವ ನನ್ನ ದುರ್ಗುಣವನೇಕೆ ನೋಡುವೆ, ನೀ ಸಮಾನದೃಷ್ಟಿಯವನಲ್ಲವೇ, ಗುಡಿಯಲಿಹ ಕಬ್ಬಿಣದ ಮೂರುತಿ, ಕಟುತನ ಕಬ್ಬಿಣದ ಕರವಾಳ- ಪರುಷಮಣಿ ತಾಕಿದೊಡನೆ ಆಗುವದೆರಡೂ ಹೊನ್ನು, ...' ಅವಳ ತುಂಬಾ ನೊಂದ ಧ್ವನಿಯಿಂದ, ಮನಸ್ಸಿನಲ್ಲಿ ಕ್ರಾಂತಿಯೇ ಆಯಿತು; ತಾನು ಉಪದೇಶಿಸುವ ಮಹತ್ತರ ಸತ್ಯವೇ ಮರೆತಂತಿದ್ದಾಗ ಕಣ್ತೆರೆಸಿತೇ ಗಾನ. ಉತ್ತರಪ್ರದೇಶದ ತರೀಘಾಟ್‌ಗೆ ಭಕ್ತರು ಕೊಟ್ಟ ಟಿಕೆಟ್ ಹಿಡಿದು ರಾತ್ರಿ ರೈಲಿನ ಮೂರನೆಯ ದರ್ಜೆಯಲ್ಲಿ ಬಂದಿಳಿದು, ಸ್ಟೇಷನ್ನಿನ ಅಂಗಳದಲ್ಲಿ ಶೆಡ್ ಹೊರಗಡೆಯ ಕಂಭ ಒರಗಿಕೂತರು. ಒಳಗೆ, ಅವರೆದುರಿಗೇ, ಜೊತೆಯಲ್ಲೇ ಬಂದ ಬನಿಯ ಮೆತ್ತೆ ಹಾಸಿನ ಮೇಲೆ ಕೂತು ಪೂರಿ ತಿನ್ನತೊಡಗಿದ. ಪ್ರಯಾಣದಲ್ಲಿ ನೀರೂ ಇಲ್ಲದ ಉಪವಾಸ ಸ್ವಾಮೀಜಿಗೆ, ಕೊಳ್ಳಲು ದುಡ್ಡೂ ಇಲ್ಲ- ಬನಿಯ ತಾನಾಗೇ ಪುರಿ, ನೀರು ಕೇಳುವದಿರಲಿ, ಸಂನ್ಯಾಸಿಗಳ ಬಗ್ಗೆ ತಿರಸ್ಕಾರವಿದ್ದವನು, 'ಕೆಲಸ ಮಾಡಿ ಸಂಪಾದನೆ ಮಾಡು, ನನ್ನ ಹಾಗೇ ಕುಡಿದು ತಿನ್ನು' ಎಂದು ದೊಡ್ಡ ಭಾಷಣ ಬಿಗಿದ. ಅದೇ ವೇಳೆಗೆ ಬಂದ ಸ್ಥಳೀಯನೊಬ್ಬ ಗಂಟಿನಿಂದ ತೆಗೆದ ಎಲೆ ಹರಡಿ, ಪೂರಿ, ಲೋಟದಲ್ಲಿ ನೀರನ್ನು ಅವರ ಮುಂದಿಟ್ಟ. ಯಾರಿಗೆಂದೋ ತಂದದ್ದು ತಪ್ಪು ತಿಳಿವಿನಿಂದ ತನಗೆ ಕೊಟ್ಟಿದ್ದಾನೆಂದು ಅವರು ಒಪ್ಪಲಿಲ್ಲ- 'ಇದು, ರಾಮ್‌ಜೀ ಯ ಆದೇಶ, ಬರಿಯ ಕನಸೆಂದು ತಿರುಗಿ ಮಲಗಿದರೆ ಬಿಡದೆ ತಳ್ಳಿ ಎಬ್ಬಿಸಿ ನಿಮಗೆಂದು ಹೇಳಿದಾನೆ' ಎಂದ ಅವನು- ಹೀಗೆ ಎಷ್ಟೋ ಘಟನೆಗಳು ಸ್ವಾರಸ್ಯಕರ ಸಂಗತಿಗಳು ಪ್ರವಾಸದಲ್ಲಿ ತುಂಬಿದ್ದವು. ಇವುಗಳು, ಸಮಾಧಿಯಲ್ಲೇ ಇರಬಯಸಿದ ವಿವೇಕಾನಂದರನ್ನು, ಗುರುದೇವರ ಇಚ್ಛೆಯಂತೆ ಬರಡು ಜೀವನದ ದಾರಿಕಾರರಿಗೆ ನೆರಳಾಗಿ ನಿಲ್ಲುವ ಬೃಹತ್ ಆಲದಮರವಾಗಿ ಬೆಳೆಸಿದ ಕಥೆ.

**ಅನುಭವ ಕಲಿಸಿದ ಅರಿವು :** ಪರಿವ್ರಾಜಕರಾಗಿ ದೇಶವೆಲ್ಲಾ ಸುತ್ತಿದ ಸ್ವಾಮಿಗಳಿಗೆ ಇಲ್ಲಿಯ ಅಧಿಕ ಸಂಖ್ಯೆಯ ಜನಗಳ ಬಡತನ, ನೋವು ಆದರೂ ಸರಳತನಗಳ ಪರಿಚಯವಾಯಿತು. ಮುಖ್ಯವಾಗಿ, ಕರುಳು ಹಿಂಡುತ್ತಿದ್ದುದು ಹೊಟ್ಟೆಗಿಲ್ಲದ ಅಸಹಾಯಕತೆ. ಬಹಳವಾಗಿ ನೊಂದ ಸ್ವಾಮೀಜಿ ಒಂದು ದಿನ, ತನ್ನ ಭಿಕ್ಷೆಗಾಗಿ ಬರುವರ ಆ ತುತ್ತೂ ಮತ್ತೊಬ್ಬನಿಗೆ ಆಹಾರವಾಗುತ್ತಿತ್ತೇನೋ ಎಂಬ ಭಾವನೆ ಬಂದಾಗ, ಇಡೀ ದಿನ ಕಾಡಿನಲ್ಲಿ ಅಲೆದರು, ತಿನ್ನಲು ಒಂದು ಕಾಳೂ ಇರಲಿಲ್ಲ– ಹಸಿವು, ಆಯಾಸ, ಸೋತಕಾಲುಗಳಿಗೆ ವಿಶ್ರಾಂತಿಯೆಂದು ರಾತ್ರಿ ಮರದ ಕೆಳಗೆ ಕುಳಿತರು. ಎದುರಿಗೆ ಹಸಿದ ಹುಲಿಯೊಂದು ಬಂದಾಗ, ಆಗಲಿ ನನ್ನ ದೇಹದಿಂದ ಒಂದು ಪ್ರಾಣಿಗಾದರೂ ಆಹಾರ ದೊರಕಲಿ ಎಂದುಕೊಂಡರು. ಸುಮ್ಮನೇ ಹಾಗೇ ನೋಡುತ್ತಿದ್ದ ಪ್ರಾಣಿ ಹಾಗೆಯ ಹೋಯಿತು.

ಅವರ ಸಂಚಾರದಲ್ಲಿ ಹರಿಜನರ ಗುಡಿಸಲಲ್ಲೂ ಮಲಗಿದರು, ರಾಜನೊಡನೆಯೂ ದಿನ ಕಳೆದರು, ಪಂಡಿತರು, ವಿದ್ವಜ್ಜನರೊಡನೆ, ಸಾಮಾನ್ಯರಲ್ಲೂ ಬೆರೆತರು– ದೇಶದ ದುರಂತದ ಅರಿವು ಅವರಿಗಾಯಿತು, ಭಾರತದ ಜನಗಳ ಮೊರೆ,– ಎಲ್ಲೆಲ್ಲೂ ಸಹಾಯಹಸ್ತಕ್ಕಾಗಿ ಕಾಯುವ, ಸಂಕಟದಲ್ಲಿರುವ ದೇಶವನ್ನೇ ಕಂಡಾಗ, ಮಾನವ ಸೇವೆಯಲ್ಲಿ ದೇವತ್ವದ ಚೈತನ್ಯದ ಕಾಲುವೆ ತಾನಾಗಿ ಬೆಳೆಯುವ ರೀತಿ ಕಾಣತೊಡಗಿತು. ಬಡತನ, ಅಜ್ಞಾನ, ಸಾಮಾಜಿಕ ಅಸಮಾನತೆ– ಅನ್ಯಾಯಗಳಲ್ಲಿ ನರಳುವ ರೈತ, ಅವನಿಗೆ ಬೇಕಾದ ವೈಜ್ಞಾನಿಕ ಉಳುಮೆಯ ರೀತಿ, ಶುದ್ಧವಾದ ಕುಡಿಯುವ ನೀರು, ಅಜ್ಞಾನ ನಿವಾರಣೆಗೆ ವಿದ್ಯಾದಾನ ಇವೆಲ್ಲ ಅವರಿಗೆ ನಿಚ್ಚಳವಾದುವು. ಹಳತಾದ ಮಡಿವಂತಿಕೆ, ಅಪಕ್ವವಾದ ಪಾಶ್ಚಿಮಾತ್ಯರ ಆಧುನಿಕ ನಿಲುವುಗಳೆರಡರಿಂದಲೂ ಭಾರತ ದೇಶೀಯರು ದೂರವಿರಬೇಕೆಂದು ಬಯಸಿದರು. ಕೊನೆ ಇಲ್ಲದಷ್ಟು ವೈವಿಧ್ಯತೆಗಳಿದ್ದರೂ, ದೇಶದ ಅಂತರಂಗದಲ್ಲಿ ಸಾರಭೂತವಾಗಿರುವ ಸಾಂಸ್ಕೃತಿಕ ಏಕತೆ ಅವರಿಗೆ ಬಹುವಾಗಿ ಹಿಡಿಸಿತು. ತಮ್ಮ ಅನುಭವಗಳಿಂದ ಅವರು ಕಲಿತಂತೆ, ಜನತೆಗೂ ಸಾರತಮವಾದದ್ದನ್ನು ಕಲಿಸಿದರು– ಉಪನಿಷತ್ತುಗಳ ಸಂದೇಶ, ತಮ್ಮ ಧರ್ಮದ ಶಾಶ್ವತ ಸತ್ಯಗಳು, ದೇವಸ್ಥಾನ ಮತ್ತು ಧಾರ್ಮಿಕ ಚಿಹ್ನೆಗಳಲ್ಲಿ ಗೌರವ, ಇಂತಹ ಸ್ಥಾನ ಪುಣ್ಯಭೂಮಿಯಲ್ಲಿ ಜನ್ಮ ತಳೆದವರೆಂಬ ಅಭಿಮಾನವನ್ನು ಬೆಳೆಸಿಕೊಳ್ಳುವದು. ಮುಸಲ್ಮಾನ ಅಧಿಕಾರಿಯ ಆತಿಥ್ಯ ಸ್ವೀಕರಿಸಿದ್ದಕ್ಕಾಗಿ ಆಕ್ಷೇಪಿಸಿದಾಗ, ತಾನು ಪರಮಹಂಸ ಶ್ರೇಣಿಗೆ ಸೇರಿದ ಸಂನ್ಯಾಸಿಯಾಗಿ ಈ ಎಲ್ಲ ಕಟ್ಟಲೆಗಳನ್ನೂ ಮೀರಿದವನೆಂದು ಉತ್ತರಿಸಿದರು. ಹಿಂದೂ ಜನರು ಆತ್ಮವಿಶ್ವಾಸ ಬೆಳೆಸಿಕೊಳ್ಳಬೇಕು, ಶಿಕ್ಷಣ ಪದ್ಧತಿಗಳ ಮೂಲಕ ಜನತೆಯ ಸ್ಥಿತಿಗತಿ, ಸಾಂಸ್ಕೃತಿಕ ಜೀವನ ಹಸನಾಗುವದಕ್ಕೆ ಪ್ರಯತ್ನಿಸಿದರು. ಒಟ್ಟಿನಲ್ಲಿ ಅವರ ಕಾರ್ಯಗಳೆಲ್ಲಾ ಮಹೋನ್ನತವಾಗಿ ಪರಿಣಮಿಸಲು, ಜನಜಾಗೃತಿ, ಅವರ ಸುಧಾರಣೆ ಮತ್ತು

ದೇಶದ ಸೌಖ್ಯಗಳೆನಿಸಿದ ಅವರ ಮುಖ್ಯ ಧ್ಯೇಯವೇ ಕಾರಣ. ಜನತೆಗಾಗಿ ಮಿಡಿಯುವ ಹೃದಯ, ಅವರ ಉದ್ಧಾರಕ್ಕಾಗಿ ಏನಾದರೂ ಮಾಡುವ ಸೂಕ್ತ ಯೋಜನೆಗಳು, ಅದನ್ನು ಕಾರ್ಯರೂಪಕ್ಕೆ ತಂದಿಟ್ಟ ರೀತಿ, ಎಲ್ಲಕ್ಕೂ ಹೆಚ್ಚಾಗಿ, ಉನ್ನತ ರಾಷ್ಟ್ರಪ್ರೇಮ ಅವರಲ್ಲಿ ತುಂಬಿ ಹರಿಯಿತು. ಆ ಕಾಲದಲ್ಲಿ ಒಮ್ಮೊಮ್ಮೆ ಏಕಾಂಗಿಯಾಗಿದ್ದಾಗ ತನ್ನ ಜನಬಾಂಧವರ ದಾರಿದ್ರ್ಯ ದುಃಖವನ್ನು ನೋಡಿ ಕಣ್ಣೀರು ಸುರಿಸಿ, ಭಗವತಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಅದೇ ರೀತಿ ಅಮೆರಿಕದಲ್ಲಿ– ಖ್ಯಾತಿಯ ಜೊತೆಗೆ ಆದರವೂ ಅತಿಶಯವಾಗಿ ಬಂದಾಗ ಬ್ಹಹು ದುಃಖದಿಂದ ನೆಲದ ಮೇಲೆ ಬಿದ್ದು ಹ್ಹೊರಳಾಡಿ ಭಗವತಿಯನ್ನು ಬೇಡಿದರಂತೆ– "ಓ ದೇವಿ, ನನ್ನ ತಾಯ್ನಾಡು ಅತ್ಯುಗ್ರ ಬಡತನದಲ್ಲಿ ಮುಳುಗಿರುವಾಗ, ಒಂದು ಹಿಡಿ ಅನ್ನಕ್ಕಾಗಿ ಲಕ್ಷಾಂತರ ಜನರು ಸಾಯುತ್ತಿರುವಾಗ, ಅವರನ್ನು ಉದ್ಧರಿಸುವವರು ಯಾರು, ಅನ್ನವನ್ನು ನೀಡುವವರು ಯಾರು? ನನಗೆ ಖ್ಯಾತಿ, ಹೆಸರಿನಿಂದೇನು? ತಾಯಿ, ನನ್ನ ಜನಕ್ಕೆ ಸಹಾಯ ಮಾಡುವ ದಾರಿ ತೋರು".

ಅಮೆರಿಕೆಯಲ್ಲಿ ವಿಶ್ವಧರ್ಮ ಸಮ್ಮೇಳನಕ್ಕೆ ಹೊರಟಾಗ ಒದಗಿದ್ದು ದೈವ ಸಹಾಯವೇ. ಕರ್ನಾಟಕದ ಹಿರೇಮಗಳೂರಿನ ಉತ್ಸಾಹೀ ತರುಣ ಅಳಸಿಂಗ ಪೆರುಮಾಳ್ ಮದ್ರಾಸಿನಲ್ಲಿ ಮುಂದಾಳಾಗಿ ನಿಂತು ತನ್ನ ಜೊತೆಗಾರ ತರುಣರಿದ 4000 ರೂ. ಕೂಡಿಸಿದುದು ಹಿರೇಮಗಳೂರಿನ, ಕರ್ನಾಟಕದ ಜನತೆಗೆ ಹೆಮ್ಮೆಯ ವಿಷಯ. ಮೈಸೂರು, ರಾಮನಾಡ್ ಮಹಾರಾಜರುಗಳಿಂದ ಅಲ್ಪಕಾಣಿಕೆ (ಬಹುಶಃ ಬ್ರಿಟಿಷರ ಹೆದರಿಕೆ ದಾನದ ಕೈ ಹಿಡಿದಿತ್ತು), ಖೇತ್ರಿ ಮಹಾರಾಜರಿಂದ ಅತಿ ಹೆಚ್ಚಿನ ಸಹಾಯ ಒದಗಿತು. ಅವರಿಂದಾಗಿಯೇ ಸ್ವಾಮೀಜಿ ಸಚ್ಚಿದಾನಂದ ಬದಲಿಗೆ ವಿವೇಕಾನಂದ ಹೆಸರನ್ನು ಸ್ವೀಕರಿಸಿದುದು.

**ಅಮೆರಿಕ ವಿಶ್ವಧರ್ಮ ಸಮ್ಮೇಳನಕ್ಕೆ :** 1893 ಜುಲೈ ಅಂತ್ಯಕ್ಕೆ ಸ್ವಾಮೀಜಿ ಅಮೆರಿಕಕ್ಕೆ ಹೊರಟರು. ದಾರಿಯಲ್ಲಿ ಕೊಲಂಬೋ– ಅಲ್ಲಿ ಬೌದ್ಧಹೀನಯಾನ ಮಠಗಳು, ಹಾಂಕಾಂಗಿನಲ್ಲಿ ಚೀನೀಯರ ಜೀವನ ನೋಟ, ಚೈನಾದ ಕ್ಯಾಂಟನ್‌ನಲ್ಲಿ ಬುದ್ಧ ಮಠ, ಜಪಾನ್ ಚೈನಾಗಳೆರಡರ ದೇವಾಲಯಗಳಲ್ಲೂ ಪ್ರಾಚೀನ ಬಂಗಾಳಿ ಲಿಪಿಯಲ್ಲಿ ಬರೆದ ಹಸ್ತಪ್ರತಿಗಳು, 'ಪ್ರತಿಯೊಂದು ಶ್ರೇಷ್ಠ ಮತ್ತು ಔನ್ನತ್ಯವನ್ನೂ ಕಾಣುವ ಕನಸಿನ ಲೋಕ ಭಾರತ' ಎಂದು ಭಾವಿಸುವ ಜಪಾನ್ ಜನಗಳನ್ನು ನೋಡಿ, ಪೆಸಿಫಿಕ್ ದಾಟಿ, ವ್ಯಾಂಕೂವರ್ ಅಲ್ಲಿಂದ ಚಿಕಾಗೋ ತಲುಪಿದರು. ಅಲ್ಲಿ ನಡೆದ ಘಟನೆಗಳು ಅವರಿಗೆ ಸದಾ ಒದಗಿ ಬರುತ್ತಿದ್ದ ದೈವಬಲದ ಸಾಕ್ಷಿ. ಅವರ ಭಾಷಣಗಳಿಗೆ ಹೆಸರಾಂತವರೂ ಬರುತ್ತಿದ್ದರು, ಅನೇಕರು ಉತ್ತಮ ಸ್ನೇಹಿತರಾದರು.

**ಅಮೆರಿಕನ್ ಪತ್ರಿಕೆಗಳ ಪ್ರಶಂಸಾ ಸಾರ :** ಅವರ ಗಂಭೀರ, ಮೋಹಕ ವ್ಯಕ್ತಿತ್ವ

ಮತ್ತು ಅಸಾಧಾರಣ ಪ್ರತಿಭೆಯ ಭಾವನೆಗಳ ಪ್ರಚಂಡ ಹರಿವು, ನಿರರ್ಗಳವಾದ ಮಧುರ ಮಾತುಗಳ ಮೋಡಿ ಅಮೆರಿಕದಲ್ಲಿ ಸೇರಿದ್ದ ಎಲ್ಲ ಧರ್ಮಪ್ರತಿನಿಧಿಗಳ ಮತ್ತು ಸಾವಿರಾರು ಶ್ರೋತೃಗಳ ಮೇಲೆ ಸಮ್ಮೋಹನದಂತೆ ಗಾಢವಾದ ಪ್ರಭಾವವನ್ನು ಬೀರಿದವು. ಅದರ ಸಂಕ್ಷೇಪ ವಿವರವನ್ನು ಪತ್ರಿಕಾವರದಿಗಳಲ್ಲಿ ನೋಡಬಹುದು–

"ಹಿಂದೂ ಸಂನ್ಯಾಸಿ ಸ್ವಾಮಿ ವಿವೇಕಾನಂದರು ಅಮೆರಿಕ ದೇಶಕ್ಕೆ ಬಂದ ಅತ್ಯಂತ ಚತುರ ವಾಗ್ಮಿಗಳಲ್ಲೊಬ್ಬರು; ಸಾಟಿಯಿಲ್ಲದ ವಾಕ್ಚಾತುರ್ಯ, ಆಧ್ಯಾತ್ಮಿಕ ವಿಷಯಗಳ ಆಳವಾದ ಸೂಕ್ಷ್ಮ ಅರಿವು, ಚರ್ಚೆಯಲ್ಲಿ ಜಾಣ್ಮೆ, ಮಹತ್ತಾದ ಕಟ್ಟಕ್ಕರೆಗಳು ಪ್ರಪಂಚದ ಹಿರಿಯ ಚಿಂತಕರ ಗಮನವನ್ನು ಸೆರೆಹಿಡಿದಿಟ್ಟಿದ್ದುವು. ಸಂಭಾಷಣೆಯಲ್ಲಿ ಸಂತೋಷಕರ ಸಂಭಾವಿತರು, ಪದಗಳ ಆಯ್ಕೆ ಇಂಗ್ಲಿಷ್ ಭಾಷೆಯ ರತ್ನಗಳು, ನಡೆ, ಪಾಶ್ಚಿಮಾತ್ಯರ ಶಿಷ್ಟಾಚಾರ ಸಂಪ್ರದಾಯಗಳ ಸುಸಂಸ್ಕೃತ ಸಾಲಿಗೆ ಸೇರಿದ್ದು, ಸಹಚರನಾಗಿ ಅತ್ಯಂತ ಮನೋಹರ ವ್ಯಕ್ತಿ, ದಿವಾನಖಾನೆಗಳಲ್ಲಿ ಬಹುಶಃ ಅವರನ್ನು ಮೀರಿಸುವ ಸಂಭಾಷಣ ಚತುರನಿಲ್ಲ, ಭಾವನೆಗಳು ಬೆರಗುಗೊಳಿಸುವ ಅಲಂಕಾರಿಕ ಭಾಷೆಯಲ್ಲಿ ಮಿನುಗುವ ಹನಿಗಳು; ಪ್ರಸಕ್ತಕಾಲದ ವಿಚಾರಪರ ಪಂಡಿತರು.

ಅಭಿಪ್ರಾಯಗಳ ಭವ್ಯತೆ, ನೋಟದ ಆಕರ್ಷಣೆ, ನಿರರ್ಗಳವಾಗಿ ಹರಿಯುವ ವಿಚಾರಧಾರೆ, ವಿಷಯಗಳ ಉನ್ನತೆ, ಬೆಳವಣಿಗೆ, ಮುಕ್ತಾಯಗಳು, ಅವರ ಮನವೊಪ್ಪುವ ಪ್ರಾಮಾಣಿಕತೆಯಿಂದ ತುಂಬಿ, ಸ್ಫೂರ್ತಿದಾಯಕ ವಾಗ್ವಿಲಾಸಗಳು– ಈ ವೈವಿಧ್ಯತೆಯ ಅಭಿವ್ಯಕ್ತತೆಯಿಂದ ಕೂಡಿದ ಭಾಷಣಗಳನ್ನು ಇಷ್ಟು ಸೊಗಸಾಗಿ ಯಾರೂ ಮಾಡಲಿಲ್ಲ– ಸಹಜವಾಗಿಯೇ ಪಂಡಿತ ಜನರ ಪ್ರಶಂಸೆ, ಸಾವಿರಾರು ಜನರ ಉತ್ಸಾಹ ಮೆಚ್ಚುಗೆಗಳು ಅಪೂರ್ವವಾಗಿದ್ದುವು. ಇವೆಲ್ಲವನ್ನೂ ಅವರು ಮಗುವಿನ ಮುಗ್ಧಾಂತಃಕರಣದ ತೃಪ್ತಿಯಿಂದ ಸ್ವೀಕರಿಸಿದ್ದರು, ಲೇಶಮಾತ್ರವೂ ಅಹಂಕಾರದ ಭಾವನೆಯಿರಲಿಲ್ಲ. ಅವರು ಚಿಂತನೆಯ ಕಲಾಕಾರ, ನಂಬಿಕೆಯಲ್ಲಿ ಆದರ್ಶವಾದಿ, ವೇದಿಕೆಯ ಮೇಲೆ ನಾಟಕಕಾರ".

ಅವರ ಉಪನ್ಯಾಸಗಳ ಭಾಗಗಳೇ ಅವರ ಕರ್ಮಯೋಗ, ಭಕ್ತಿಯೋಗ, ರಾಜಯೋಗ, ಜ್ಞಾನಯೋಗ ಪುಸ್ತಕಗಳಾದುವು, ಅದರ ಪರಿಷ್ಕರಣವನ್ನು ಅವರೇ ಎರಡನೆ ಬಾರಿಗೆ 1900 ರಲ್ಲಿ, ಅಮೆರಿಕೆಗೆ ಹೋದಾಗ ಮಾಡಿದರು. ಈ ವಿಜಯದ ಸಂಭ್ರಮವನ್ನು ಸಹಿಸಲಾರದ ಕ್ರೈಸ್ತ ಮಿಷನರಿಗಳು, ಬ್ರಹ್ಮವಿದ್ಯಾವಾದಿಗಳು (ಥಿಯೋಸೋಫಿಸ್ಟ್ಸ್), ಬ್ರಹ್ಮೋ ಮುಂದಾಳು ಪ್ರತಾಪ ಚಂದ್ರ ಮಜುಂದಾರ್ ಅವರ ಬೆಂಬಲದೊಡನೆ ವಿವೇಕಾನಂದರ ಚಾರಿತ್ರ್ಯವಧೆ, ಮಸಿ ಬಳಿಯುವ ಪ್ರಯತ್ನಕ್ಕೆಳೆಸಿದರು. ಈ ಅಪಪ್ರಚಾರಕ್ಕೆ ಅವರು ಸೊಪ್ಪು ಹಾಕದಿದ್ದರೂ ಮದ್ರಾಸಿನ ಶಿಷ್ಯರಿಗೆ ಬರೆದ ಪತ್ರಗಳಲ್ಲಿ ಅವರ ಚಿಂತೆ ವ್ಯಕ್ತವಾಗಿತ್ತು. ಆ ದಿನಗಳಲ್ಲಿ

ದೇಶದಿಂದ ದೇಶಕ್ಕೆ ಶೀಘ್ರ ಸಂಪರ್ಕ ಸಾಧನಗಳಿಲ್ಲದೆ ಬಹಳ ತಡವಾಗುತ್ತಿತ್ತು. ಆದರೂ, ಭಾರತದಲ್ಲೂ ಅಪಪ್ರಚಾರದ ವಿರುದ್ಧ ಪ್ರತಿಭಟನೆಯ ಅನೇಕ ಸಭೆಗಳು ಸೇರಿ ಅದನ್ನು ಖಂಡಿಸಿದ ಪತ್ರಿಕಾವರದಿಗಳು ಅಲ್ಲಿಗೆ ಮುಟ್ಟಿದ ಮೇಲೆ, ಅಮೇರಿಕದ ಕೆಲವು ಪತ್ರಿಕೆಗಳೂ ಅವನ್ನು ಪ್ರಕಟಿಸಿದುವು. ಕ್ರಮೇಣ ಈ ಕೆಟ್ಟ ಅಲೆ ನಿಂತಿತು.

ನ್ಯೂಯಾರ್ಕ್‌ನಲ್ಲಿ ವೇದಾಂತ ಕೇಂದ್ರವನ್ನು ಸ್ಥಾಪಿಸಿದ ಮೇಲೆ, ಇಂಗ್ಲೆಂಡಿಂದ ಬರುತ್ತಿದ್ದ ಒತ್ತಾಯದ ಕರೆಗಳನ್ನು ಒಪ್ಪಿ ಸೆಪ್ಟೆಂಬರ್ 10, 1895 ರಲ್ಲಿ ಲಂಡನ್ ತಲುಪಿದರು. ನಾಲ್ಕು ತಿಂಗಳ ಉಪನ್ಯಾಸ, ವೇದಾಂತ ಪ್ರವಾಸ ಮಾಡಿದನಂತರ ಅಮೆರಿಕಕ್ಕೆ ಹಿಂತೆರಳಿ ಪುನಃ ನಾಲ್ಕು ತಿಂಗಳವರೆಗೆ ಬಿಡುವಿಲ್ಲದ ಕೆಲಸ ನಡೆಸಿ, 1896 ಸೆಪ್ಟೆಂಬರ್ 17ಕ್ಕೆ ಲಂಡನ್‌ಗೆ ಬಂದು ತಮ್ಮ ಕೆಲಸವನ್ನು ಮುಂದುವರೆಸಿದರು. 16 ಡಿಸೆಂಬರ್ 1896 ರಂದು ಲಂಡನ್‌ನಿಂದ ಭಾರತಕ್ಕೆ ಹೊರಟರು. ಮೂರು ವರ್ಷಗಳ ಅವಿರತ ಕೆಲಸ, ಓಡಾಟದಿಂದ ಜರ್ಜರಿತವಾದ ದೇಹಕ್ಕೆ ಹಡಗಿನ ಪ್ರಯಾಣದಲ್ಲಿ ಸ್ವಲ್ಪ ವಿಶ್ರಾಂತಿ ಸಿಕ್ಕಿತು. ಸಮುದ್ರಯಾನದಲ್ಲಿರುವಾಗ ಮೆಡಿಟರೇನಿಯನ್ ಸಮುದ್ರ ಪ್ರಾಂತದಲ್ಲಿ ಕನಸೊಂದು ಕಂಡರು. ಗಡ್ಡ ಬಿಟ್ಟ ಋಷಿಯೊಬ್ಬರು 'ಇದು ಕ್ರೀಟ್‌ದ್ವೀಪ, ಇಲ್ಲಿಂದಲೇ ಕ್ರಿಸ್ತಮತ ಹೊರಟದ್ದು- ... ನಾನು ಬೌದ್ಧ ಸಂಘದ ಪರಿವಾರದ ಹಿರಿಯರ ಮಕ್ಕಳು/ಶಿಷ್ಯರ ಗುಂಪಿನವನು, ಪ್ರಾಚೀನ ತೇರಾ ಪುತ್ರನ ಪರಿವಾರದವನು, ಭಾರತ ಋಷಿಗಳ ಬೋಧನೆಯೇ ನಮ್ಮ ಮೂಲ, ಅಲ್ಲಿಯ ಸತ್ಯ ಮತ್ತು ಆದರ್ಶಗಳನ್ನೇ ಕ್ರಿಸ್ತರು ಅನುಸರಿಸುತ್ತಿರುವರು- 'ಟರ್ಕಿಯ ಸಮೀಪದ ಭೂಭಾಗವನ್ನು ತೋರಿಸಿ 'ಇಲ್ಲಿ ಅಗೆದರೆ ಅನೇಕ ಸಾಕ್ಷ್ಯಾಧಾರಗಳು ದೊರೆಯುತ್ತವೆ' ಎಂದರಂತೆ.

**ಅದ್ದೂರಿ ಸ್ವಾಗತ** : ಅಂತೂ ಜನವರಿ 15, 1897 ರಂದು ಕೊಲಂಬೋಕ್ಕೆ ಬಂದಾಗ, 26 ಜನವರಿ 1897 ರಂದು (ಈ ದಿನದ ಮಹತ್ವ ನೋಡಿ, ಕಾಕತಾಳೀಯವೇ!) ಪಾಂಬನ್‌ಗೆ ಬಂದಾಗ ಅವರಿಗೆ ಅಭೂತಪೂರ್ವ ಸ್ವಾಗತ ಸಿಕ್ಕಿತು, ಅಲ್ಲಿಂದ ಉದ್ದಕ್ಕೂ ತಮಿಳು ನಾಡಿನಲ್ಲೆಲ್ಲಾ ಸಂಭ್ರಮದ ಮೆರವಣಿಗೆಯಾಯಿತು- ಮದ್ರಾಸಿನಲ್ಲಂತೂ ಅಲ್ಲಿಯ ಶಿಷ್ಯ ಅಭಿಮಾನಿ ಅಸಂಖ್ಯಾತರ ಉತ್ಸಾಹ-ಸಂತೋಷ ಹೇಳತೀರದು. ಅವರ ಪ್ರಾರ್ಥನೆಯಂತೆ, ಫೆಬ್ರವರಿ 1897ರಲ್ಲಿ ಕಲ್ಕತ್ತ ಮುಟ್ಟಿದ ಮೇಲೆ ಸಹೋದರ ಸಂನ್ಯಾಸಿ ಸ್ವಾಮಿ ರಾಮಕೃಷ್ಣಾನಂದರನ್ನು ಮದ್ರಾಸಿನಲ್ಲಿ ಮಠ ಸ್ಥಾಪನೆಗೆ (ವಿವೇಕಾನಂದರು) ಕಳುಹಿಸಿದರು. ರಾಮಕೃಷ್ಣ ಸಂನ್ಯಾಸ ಸಂಘದ ಮೊದಲ ಶಾಖಾ ಮಠ ಇದು.

**ಮಠಗಳ ಸ್ಥಾಪನೆ** : ಧ್ವನಿವರ್ಧಕಗಳಿಲ್ಲದ ಆ ಕಾಲದಲ್ಲಿ ಅಸಾಧಾರಣ ಜನಸ್ತೋಮಕ್ಕೆ ಒಂದೆರಡು ಗಂಟೆಗಳ ಭಾಷಣವನ್ನು ಮಾಡುವದು ಎಂತಹ ಶಕ್ತಿಶಾಲಿ ಗಟ್ಟಿಗನಿಗೂ ತಾಪದಾಯಕವೇ. ಇಂತಹ ಎಷ್ಟೋ ಭಾಷಣಗಳನ್ನು

ಉದ್ದಕ್ಕೂ, ದಿನದಿನವೂ ಮಾಡುತ್ತಾ ಬಂದ ವಿವೇಕಾನಂದರು ಬಸವಳಿದುದು ಸಹಜವೇ, ಅವರ ಆರೋಗ್ಯಕ್ಕೆ ಧಕ್ಕೆಯಾಯಿತು. ಅವರ ಕಾಲ, ಶಕ್ತಿಯನ್ನು ಬಳಸುವ ಎಷ್ಟೋ ಮುಖ್ಯ ಕೆಲಸಗಳ ಒತ್ತಡವೂ ಇತ್ತು, ಅವುಗಳಿಗೇ ಭಾಷಣಕ್ಕಿಂತ ಪ್ರಾಧಾನ್ಯತೆಬೇಕಿತ್ತು. ಗುರುದೇವರ ಅವಶೇಷಗಳಿಗಾಗಿ, ಅದರ ಸುತ್ತ ಮಠದ ಮಕ್ಕಳೆನಿಸುವ ಪರಿವಾರ ಒಂದಾಗಿ ಬೆಳೆಯಲು ಅನುಕೂಲವಾಗಿ ಮಠಗಳನ್ನು ಕಟ್ಟುವ ಆಲೋಚನೆ ಅವರಿಗಿತ್ತು. ಮೇ 1, 1897ರಲ್ಲಿ ರಾಮಕೃಷ್ಣ ಮಿಷನ್ ಸ್ಥಾಪಿಸಿದರು. 1898ರಲ್ಲಿ ಸ್ವಾಮೀಜಿಯವರ ಭಕ್ತೆ ಮಿಸ್ ಹೆನ್ರಿಟಾ ಮುಲ್ಲರ್ ಎಂಬ ಇಂಗ್ಲಿಷ್ ಮಹಿಳೆಯ 39000 ರೂ. ದಾನದಿಂದ, ಬೇಲೂರಿನಲ್ಲಿ ಗಂಗಾದಡದಲ್ಲಿ ಸುಮಾರು ಏಳು ಎಕರೆಗಿಂತ ಹೆಚ್ಚು ಜಮೀನನ್ನು ಕೊಂಡರು. ಅಮೆರಿಕೆಯ ಶಿಷ್ಯೆ ಶ್ರೀಮತಿ ಓಲ್ ಬುಲ್ ಕಟ್ಟಡಕ್ಕಾಗಿ ಮತ್ತು ಮಠದ ದತ್ತಿಗಾಗಿ ಹೇರಳವಾದ ಧನಸಹಾಯವನ್ನು ಮಾಡಿದರು. ಜನವರಿ 2, 1899 ರಲ್ಲಿ ಬೇಲೂರು ಮಠ ಅಸ್ತಿತ್ವಕ್ಕೆ ಬಂದಿತು.

**ರಾಮಕೃಷ್ಣ ಮಿಷನ್ :** ದೀನ ದಲಿತರ ಸೇವೆ, ವೇದಾಂತ ಪ್ರಸಾರ, ರಾಷ್ಟ್ರ ಭಕ್ತಿ ಪ್ರೇಮದ ಬೆಳವಣಿಗೆ– ಇವುಗಳೇ ರಾಮಕೃಷ್ಣ ಮಿಷನ್‌ನ ಪ್ರಧಾನ ಕರ್ತವ್ಯಗಳಾದುವು. ಗುರುದೇವ ಹೇಳಿದ್ದೇನು, 'ಅನುಕಂಪವಲ್ಲ, ಎಲ್ಲರಿಗೂ ಸೇವೆ– ಒಳಗಿನ ದೇವರ ಆರಾಧನೆ'. ಇದರಂತೆ ಸ್ವಾಮಿಜಿ ಬಹಳ ದಿನ ಮಠದಲ್ಲಿರದೆ ಈ ಸೇವಾಕಾರ್ಯಕ್ಕೆ ಹೊರಟರು. ಎಲ್ಲಿಹೋದರೂ ವಿಶ್ರಾಂತಿ ಸಿಗುತ್ತಿರಲಿಲ್ಲ, ಜನಸ್ತೋಮ ಅವರನ್ನು ಮುತ್ತಿ ಉಪನ್ಯಾಸ, ಚರ್ಚೆಗಳಿಗೆ ಎಳೆಯುತ್ತಿದ್ದವು. ಇದರಿಂದ ವಿಪರೀತ ದಣಿವಿನ ಜೊತೆಗೆ, ಆ ದಿನಗಳಲ್ಲಿ ಪರಿಣಾಮಕಾರಿ ಚಿಕಿತ್ಸೆ ಇಲ್ಲದ ಸಕ್ಕರೆ ಖಾಯಿಲೆ ಹಣ್ಣು ಮಾಡಿತು. ಆದರೂ 1897–98 ರಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ರಾವಲ್‌ಪಿಂಡಿ, ಲಾಹೋರ್‌ವರೆಗೆ, ಕಾಶ್ಮೀರ ಪಂಜಾಬ್ ಹಾದು, ಅನಂತರ ಸಿಂಧ್, ಕಾಥಿಯಾವಾಡ, ಗುಜರಾತ್ ಪ್ರವಾಸಮಾಡಿದರು. 1899 ರಲ್ಲಿ ರಾಮಕೃಷ್ಣ ಮಿಷನ್‌ಗೆ ಸೇರಿದ ಹೊಸಬರಿಗೆ ಶಿಕ್ಷಣ ಕೊಡುವಲ್ಲಿ ನಿರತರಾದರು. ಪಾಶ್ಚಿಮಾತ್ಯ ಶಿಷ್ಯರ ಧೋರಣೆ, ಜೀವನ ದೃಷ್ಟಿಯನ್ನು ಹಿಂದೂತತ್ತ್ವಗಳ ಅಚ್ಚೊತ್ತಿ ಸಾಕಾರ ಮಾಡುವದೂ ಸೇರಿತು.

**ಎರಡು ಪ್ರಮುಖ ಯಾತ್ರೆಗಳು :** ವಿಶೇಷವಾದದ್ದು ಅವರ ಅಮರನಾಥ್ ಯಾತ್ರೆ– 18000 ಅಡಿ ಎತ್ತರದಲ್ಲಿ ಗುಹೆ ಒಳಗೆ ಮಂಜಿನ ಶಿವಲಿಂಗದ ಭವ್ಯತೆಯಲ್ಲಿ, ಆ ಮಹಾದೇವನ ಭಯಭಕ್ತಿ ಗೌರವ ಸನ್ನಿಧಿಯಲ್ಲಿ ಆನಂದಪರವಶರಾದರು, ನಾಲ್ಕಾರು ದಿನ ಈ ಭಾವನೆಯೇ ಉಳಿದಿತ್ತು. ಶ್ರೀನಗರಕ್ಕೆ ಹಿಂದಿರುಗಿದ ಮೇಲೆ ಅವರಿಗೆ ಮಹಾಮಾತೆಯ ಆರಾಧನೆಯ ಒಲವು ಬಂತು. ಅದರಲ್ಲೇ ತಲ್ಲೀನರಾಗಿ, ವಿಶ್ರಾಂತಿ, ನಿದ್ದೆಯಿಲ್ಲದೆ, ದೋಣಿ ಮನೆಯಲ್ಲಿ ಏಕಾಂತಸ್ಥಳದಲ್ಲಿದ್ದಾಗ, ಹಿಂದೆ ಗುರುದೇವರ ಆಣತಿಯಂತೆ ದುರಿತ ನಿವಾರಣಿ ಕಾಳಿಕಾದೇವಿಯು

ಪ್ರಾರ್ಥನೆಗೆ ಮೈದೋರಿದಂತೆ, ಅದೇ ರೀತಿಯ ಸ್ಪಷ್ಟ ಅನುಭವ, ಮಹಾಕಾಳಿಯ ದರ್ಶನ ಲಭಿಸಿತು. ಉನ್ನತ ಮನೋಭಾವದಲ್ಲಿ ಕವನವೊಂದನ್ನು ಬರೆದು ಮುಗಿಸಿದಾಗ ಪೆನ್ ಕೆಳಗೆ ಬಿತ್ತು, ಹಾಗೇ ಹಿಂದೆ ಒರಗಿದರು, ಭಾವ ಸಮಾಧಿಯಲ್ಲಿ ಮುಳುಗಿದರು.

ಸಂತೋಷವೇ ಗುರಿ ಎನ್ನುವದು ಸರಿಯಲ್ಲ, ಕ್ರೂರ ಯಾತನೆಯಲ್ಲೂ ಆನಂದವಿದೆ, ಭಯಂಕರ ಸ್ವರೂಪದ ದೇವಿ ಆರಾಧನೆಯೇ ಗುರಿಯಾಗಿರಬೇಕು. ಮೃದುತ್ವ ಸಂತೋಷದಲ್ಲಿಯಂತೆ ಭಯಂಕರತೆ, ಕೆಡಕು ದುಃಖ, ನಾಶದಲ್ಲೂ ತಾಯಿಯನ್ನು ಕಾಣುವದನ್ನು ಕಲಿಯಬೇಕು; ಭಗವತಿಯೇ ಬ್ರಹ್ಮ, ಮೃತ್ಯುವಿನ ಧ್ಯಾನ, ಭಯಂಕರಿಯ ಧ್ಯಾನದಿಂದ ಹೃದಯವು ಅಹಂಕಾರ, ಸ್ವಾರ್ಥ ಆಸೆಯ ಸ್ಮಶಾನ ಭೂಮಿಯಾದಾಗಲೇ, ಎಲ್ಲವನ್ನೂ ಸುಟ್ಟು ಬೂದಿಮಾಡಿದಾಗಲೇ, ಭಯಂಕರತೆಯನ್ನು ಗೆದ್ದು ಅಮರತ್ವವನ್ನು ಸಾಧಿಸಬಹುದು. ಆಗಲೇ ಭಗವತಿ ತಾಯಿಯು ಪ್ರತ್ಯಕ್ಷಳಾಗಿ ಬರುವಳು ಎಂಬ ಮನೋಭಾವ, ತತ್ತ್ವದ ಅರಿವಾಯಿತು.

ಅನಂತರ ಕ್ಷೀರ ಭವಾನಿಯ ಚಿಲುಮೆಗಳ ಸ್ಥಳದಲ್ಲಿ ಏಕಾಂಗಿಯಾಗಿ ಆರುದಿನ ಬಹಳ ಕಠಿಣವ್ರತವನ್ನಾಚರಿಸಿದರು. ಹೋಮ, ಕ್ಷೀರ ಸಮರ್ಪಣೆ ದಿನದಿನವೂ ಆಯಿತು, ಅವರ ಮಾನಸಿಕ ಸ್ಥಿತಿ ಸಂಪೂರ್ಣವಾಗಿ 'ತಾಯಿಯ ಹಸುಗೂಸಿ'ನಂತಾಯಿತು. ನಾಯಕ, ಸೇವಾಕರ್ತೃ, ಬೋಧಕ ಎಂಬೆಲ್ಲವೂ ಮನಸ್ಸಿನಿಂದ ಅಳಿದವು–ರಾಷ್ಟ್ರಪ್ರೇಮ ಮಾಯವಾಗಿತ್ತು–ಯಾವದಕ್ಕೂ ಸ್ಥಳವಿರಲಿಲ್ಲ. ಉಳಿದದ್ದು ಒಂದೇ ಭಗವತೀ, ತಾಯೀ ಎನ್ನುವ ಅವಿರತ ಮೊರೆ.

ಕ್ಷೀರ ಭವಾನಿಯ ದೇವಸ್ಥಾನ ಮುಸಲ್ಮಾನರ ಧಾಳಿಯಿಂದ ಜೀರ್ಣವಾಗಿತ್ತು. ಅಲ್ಲಿಯ ಅವಶೇಷಗಳ ನಡುವೆ ಕುಳಿತಾಗ, ತಾನು ಆ ಧಾಳಿ, ವಿನಾಶದ ಕಾಲದಲ್ಲಿದ್ದಿದ್ದರೆ, ಗುಡಿಯನ್ನು ರಕ್ಷಿಸಲು ತನ್ನ ಪ್ರಾಣವನ್ನಾದರೂ ತೆರುತ್ತಿದ್ದೆ ಎಂದುಕೊಂಡರು. ಆಗ ತಾಯಿ ಭವಾನಿಯ ಧ್ವನಿ ಕೇಳಿಸಿತು : "ಅವಿಶ್ವಾಸಿಗಳು ನನ್ನ ದೇವಸ್ಥಾನಕ್ಕೆ ಬಂದರೇನು, ನನ್ನ ಪ್ರತಿಮೆಯನ್ನು ಮಲಿನಗೊಳಿಸಿದರೇನು? ಅದರಿಂದ ನಿನಗೇನು? ನೀನು ನನ್ನನ್ನು ರಕ್ಷಿಸುವೆಯೋ, ನಾನೋ ನಿನ್ನನ್ನು ರಕ್ಷಿಸುವದು? ನನಗೆ ಹಾಗೆ ಇಷ್ಟವಾದರೆ ಅಸಂಖ್ಯಾತ ದೇವಸ್ಥಾನಗಳನ್ನು ಮಠಗಳನ್ನು ಕಟ್ಟಿಸುವೆ– ಈ ಕ್ಷಣದಲ್ಲೇ ಇಲ್ಲಿ, ಇದೇ ಜಾಗದಲ್ಲಿ ಏಳಂತಸ್ತಿನ ಬಂಗಾರದ ದೇವಾಯವನ್ನು ಎಬ್ಬಿಸಬಲ್ಲೆ" ಎಂದಂತೆ ವಿಚಿತ್ರ ಅನುಭವ ಅವರಿಗೆ ಆಯಿತು.

ಛಳಿ, ಬೆಟ್ಟವನ್ನು ಹತ್ತುವ ಪ್ರಯಾಸ, ತೀವ್ರವಾದ ಅತೀಂದ್ರಿಯಾನುಭವಗಳು, ಉತ್ಕಟ ಮನೋಭಾವ ಆವೇಶಗಳು ಅವರ ಹೃದಯ ಗಾತ್ರವನ್ನು ಹೆಚ್ಚು ಮಾಡಿದುವು, ಆಸ್ತಮಾ ಬೇನೆ ಬಂತು– ಅವರ ಮನೋಭಾವ ಈಗ ಜ್ಞಾನದಿಂದ ಭಕ್ತಿಯ ಕಡೆಗೆ ತಿರುಗಿತು.

**ಬೇಲೂರು ಮಠ ಸ್ಥಾಪನೆ :** ಸ್ವಾಮೀಜಿ 18 ಅಕ್ಟೋಬರ್ 1898 ರಲ್ಲಿ ಕಲ್ಕತ್ತಾಕ್ಕೆ ಹಿಂದಿರುಗಿದರು. ಡಿಸೆಂಬರ್ 9ಕ್ಕೆ (1898) ಬೇಲೂರು ಮಠದ ಸಂಪ್ರೋಕ್ಷಣೆಯಾಯಿತು. ಗುರುದೇವರ ಅವಶೇಷಗಳ ಜಾಡಿಯನ್ನು ಸ್ವಾಮೀಜಿಯವರೇ ತನ್ನ ಬಲಭುಜದ ಮೇಲಿಟ್ಟು, ಮೆರವಣಿಗೆಯ ಮುಂದೆ ನಡೆದರು. ಅವರೇ ಹೇಳಿದರಂತೆ: "ಗುರುದೇವರು ಒಮ್ಮೆ ಹೀಗಂದರು, 'ನನ್ನನ್ನು ನಿನ್ನ ಬಲ ಭುಜದ ಮೇಲಿಟ್ಟು ನಿನ್ನ ಸಂತೋಷವೆಲ್ಲೋ ಅಲ್ಲಿಗೆ ತೆಗೆದುಕೊಂಡು ಹೋಗುವದಾದರೆ, ನಾನೂ ಬಂದು ಅಲ್ಲೇ ಇರುವೆನು. ಅದು ಮರದ ಕೆಳಗಾದರೂ ಸರಿ, ಅತಿ ಕೀಳು ಗುಡಿಸಲಾದರೂ ಸರಿ'", ವಾಕ್ಯ; ಇಚ್ಛೆಯೇ ಆ ರೀತಿ. ಆ ದಿನದ ವಿರಜಾ ಹೋಮಕ್ಕೆ ಅಗ್ನಿ ಪ್ರತಿಷ್ಠಾಪನೆ, ನೈವೇದ್ಯಕ್ಕೆ ಪಾಯಸ ಎರಡನ್ನೂ ತಾವೇ ಮಾಡಿ ಆರಾಧನೆಯೊಡನೆ ನೈವೇದ್ಯವನ್ನು ಸಮರ್ಪಿಸಿದರು.

ಕಾರ್ಯಕ್ರಮಗಳೆಲ್ಲ ಮುಗಿದ ಮೇಲೆ "ಭಗವಂತನ ದಯದಿಂದ ಈಗ ಸ್ಥಾಪಿತವಾದದ್ದು, ಪುಣ್ಯಭೂಮಿ, ಧರ್ಮಕ್ಷೇತ್ರ, ಮುಂದೆ ಬಹು ದೊಡ್ಡ ವಿದ್ಯಾಕೇಂದ್ರ, ಪಾರಮಾರ್ಥಿಕ ಕಲಿಕೆಯ ಸ್ಥಾನವಾಗುತ್ತದೆ; ಸಹೋದರರೇ, ನೀವೆಲ್ಲರೂ ಹೃದಯದ ಅಂತರಾಳದಿಂದ ಭಗವಂತನಲ್ಲಿ ಪ್ರಾರ್ಥನೆಮಾಡಿ, ಈ ಯುಗದಲ್ಲಿ ಭಗವಂತನ ಅವತಾರವಾದವನು ಸರ್ವಕಾಲಕ್ಕೂ ಇಲ್ಲಿರಲಿ, ಎಲ್ಲ ಮತ, ಪಂಗಡಗಳ ಸಾಮರಸ್ಯವನ್ನು, ಅನೇಕರ ಒಳಿತಿಗೆ, ಸಂತೋಷಕ್ಕೆ ಹರಸಲಿ ಎಂದು ಪ್ರಾರ್ಥನೆಮಾಡಿ" ಎಂದು ಭಾಷಣ ಮಾಡಿದರು. ಎಲ್ಲಿಯವರೆಗೆ ಗುರುದೇವನ ಪರಿಶುದ್ಧ ಆದರ್ಶಗಳು, ಪಾವಿತ್ರ್ಯತೆ ಮಾನವ ಕುಲಕ್ಕೆಲ್ಲ ಪ್ರೀತಿಯ ಸೇವಾ ಮನೋಭಾವನೆ ಈ ಶಿಷ್ಯರೆಲ್ಲರನ್ನೂ ಸ್ಫೂರ್ತಿಗೊಳಿಸುವದೋ, ಅಲ್ಲಿಯವರೆಗೆ ಗುರುದೇವನ ಕೃಪಾ ಸನ್ನಿಧಾನದಿಂದ ಈ ಸ್ಥಳ ಪುನೀತವಾಗಿರುತ್ತದೆ ಎಂದರು. ಆ ದಿನ, ಡಿಸೆಂಬರ್ 9 ರಿಂದ ಕೆಲವು ಸಂನ್ಯಾಸಿಗಳು ಬೇಲೂರು ಮಠದಲ್ಲಿದ್ದರು, ಜನವರಿ 2, 1899 ರಂದು ಇಡೀ ಮಠ ನೀಲಾಂಬರ ಮುಖರ್ಜಿಯವರ ತೋಟದ ಮನೆ (ಆವರೆಗೂ ಇಲ್ಲೇ ಮಠ ಇತ್ತು) ಯಿಂದ ನೂತನ ಕಟ್ಟಡದಲ್ಲಿ ಆವಾಸವಾಯಿತು.

**ಎರಡನೆಯ ಬಾರಿ ವಿದೇಶಕ್ಕೆ :** 1899 ರಲ್ಲಿ ಜೂನ್ 20 ರಂದು ಸೋದರಿ ನಿವೇದಿತ, ಸ್ವಾಮಿ ತುರೀಯಾನಂದರ ಜೊತೆಗೂಡಿ ಲಂಡನ್‌ಗೆ ಹೋದರು, ಎರಡನೆಯ ಬಾರಿಗೆ ಪಾಶ್ಚಿಮಾತ್ಯ ಪ್ರವಾಸದ ಅಂಗವಾಗಿ. ಅಲ್ಲಿ ಎರಡು ವಾರವಿದ್ದು 28 ಆಗಸ್ಟ್‌ರಲ್ಲಿ ನ್ಯೂಯಾರ್ಕ್ ತಲುಪಿದರು. ಸ್ವಾಮಿ ಅಭೇದಾನಂದರು ಅಲ್ಲಿ ವೇದಾಂತ ಕಾರ್ಯಕ್ಕೆ ಹಾಕಿದ್ದ ಸಬಲ ಅಡಿಪಾಯವನ್ನು ಕಂಡು ಸಂತೋಷಿಸಿದರು. ನವೆಂಬರ್‌ನಲ್ಲಿ ಬಹಳವಾಗಿ ಬೆಳೆದಿದ್ದ ಸ್ನೇಹಿತ, ಶಿಷ್ಯ, ಮೆಚ್ಚುಗೆಯ ಅನುಯಾಯಿಗಳ ವರ್ಗ ಅವರಿಗೆ ಸಾರ್ವಜನಿಕ ಸ್ವಾಗತವನ್ನು ನೀಡಿತು. ಈ ಸಲ ಹೆಚ್ಚು ಉಪನ್ಯಾಸಗಳನ್ನು ಮಾಡಲಿಲ್ಲ. ಆದರೆ ಅವರ

ಉಪನ್ಯಾಸಗಳಿಂದ ಕೇಳಿದವರೆಲ್ಲರೂ ಪ್ರಭಾವಿತರೇ ಆದರು. ಅಮೆರಿಕದ ಪ್ರಜೆ ಬ್ರಹ್ಮಚಾರಿ ಗುರುದಾಸ್ : "ಉಡುಗೆ, ತೊಡುಗೆ, ನಡೆಯಲ್ಲಿ ಸರಳರು. ನೆಲದ ಮೇಲೇ ಕೂರುವರು, ನಗು, ಹಾಸ್ಯ, ಮಾತು ಎಲ್ಲೂ ಔಪಚಾರಿಕತೆಯೇ ಕಾಣದು. ಅವರ ತೀಕ್ಷ್ಣ, ಭವ್ಯ ಕಣ್ಣುಗಳು, ಮೋಹಕ ರೂಪ, ಗಂಭೀರ ಮುಖಮುದ್ರೆಗಳು 'ಎಂತಹ ದೊಡ್ಡ ಮನುಷ್ಯ, ಬುದ್ಧನಿಗೆ ಹೇಳುವಂತೆ ಮಾನವರಲ್ಲಿ ಸಿಂಹ' ಎನಿಸಿದುವು– ಅವರ ಮುಂದೆ ಎಲ್ಲರೂ ಕುಬ್ಜರು– ಮನಸ್ಸು ಮಾಡಿದರೆ ಭೂಮಿ, ಸ್ವರ್ಗಗಳನ್ನೂ ಅಲ್ಲಾಡಿಸಬಲ್ಲವರು"–

ಕ್ಯಾಲಿಫೋರ್ನಿಯಾಕ್ಕೆ ಇದ್ದಕ್ಕಿದ್ದಂತೆ ಬಂದು,–ಅವರ ಆರೋಗ್ಯ ಮತ್ತು ಕೆಲಸಕ್ಕೆ ಉತ್ಸಾಹ ಬಹಳವಾಗಿ ಕುಂದಿದ್ದರೂ–ಆರು ತಿಂಗಳ ಕಾಲ ಬಿರುಸಾಗಿ ಬೋಧನೆಯ ಕೆಲಸವನ್ನು ಮಾಡಿದರು–ಮಾತಿಗೆ ಶುರು ಮಾಡಿದರೆಂದರೆ, ಅವರಲ್ಲಿ ಯಾವ ರೀತಿಯ ಶಕ್ತಿಹೀನತೆ, ದೈಹಿಕ ಸೋಲೂ ಕಾಣುತ್ತಿರಲಿಲ್ಲ. ರ್‍ವೊಡ್ಸ್ಯಾಮೆಲ್ ಎನ್ನುವರ ನೆನಪುಗಳು; "ಶ್ರೋತೃಗಳು ಅವರ ವಿಚಾರಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿದ್ದರು. ಅದಕ್ಕೆ ಮನಸೋತವರ ಮನಗಳ ಮೂಲೆ ಮೂಲೆಯಲ್ಲೂ ಈ ಕಾಂತಿಯುತ ವ್ಯಕ್ತಿತ್ವ ಬೆಳಕು ಬೀರಿತು. ಒಪ್ಪ ಬಾರದೆಂದಿದ್ದವರೂ ಸಹ ಅವರ ವಿರೋಧಿಸಲಾಗದ ತರ್ಕ, ತೀಕ್ಷ್ಣ ಬುದ್ಧಿ ಮತ್ತು ಮಗುವಿನ ಮುಗ್ಧತೆಯ ಮಹಾನ್ ಬೋಧಕರ ಮುಂದೆ ಶರಣಾದರು– ಅವರ ಹೊಳೆಯುವ ಕಣ್ಗಳು, ಮುಖಭಾವದ ಶ್ರೀಮಂತಿಕೆ, ರಿಂಗಣಿಸುವ ಸುಶ್ರಾವ್ಯ ಸಂಸ್ಕೃತ ಶ್ಲೋಕ ಪಠಣ, ಅವುಗಳ ನಗುಮೊಗದ ಆತ್ಮವಿಶ್ವಾಸದ ಅನುವಾದ ಇವುಗಳೆಲ್ಲ ನಿಗೂಢವಾದ ಶಕ್ತಿಯೊಡನೆ ಮನಸ್ಸನ್ನು ಆವರಿಸುತ್ತಿತ್ತು–ಇದೆಲ್ಲಕ್ಕೂ ಶೋಭೆಯಾಗಿರುವಂತಹ ಹಿಂದೂ ಸಂನ್ಯಾಸಿಯ ಪೋಷಾಕು–ಯಾರು ತಾನೇ ಅವರನ್ನು ಮರೆಯಲಾದೀತು?"

ಯಾವದೇ ಟಿಪ್ಪಣಿಗಳಿಲ್ಲದ ಉಪನ್ಯಾಸ, ಕೋರಿಕೆಯ ಮೇಲೆ ಪುನಃ ಅದೇ ವಿಷಯವನ್ನು ಹೇಳಬೇಕಾದರೆ ಪುನರಾವೃತ್ತಿಯಿಲ್ಲ, ಅತೀಂದ್ರಿಯ ಅನುಭವದಿಂದ ತನ್ನ ಒಂದು ಭಾಗವನ್ನೇ ಕೊಡುತ್ತಿದ್ದಂತೆ ಭಾಸವಾಗುತ್ತಿತ್ತು– ವೇದಾಂತದ ಯಾವ ಕ್ಲಿಷ್ಟ ಭಾಗವಾದರೂ ಯಾವದೋ ಅಂತರ್ಗತ ಜೀವಿತದ ಭಾವದಿಂದ ಹೊಮ್ಮುವಂತಿರುತ್ತಿತ್ತು. ಚುರುಕು, ತೀಕ್ಷ್ಣವಾದ ಸಿದ್ಧ ಪ್ರತ್ಯುತ್ತರ, ಸಂತೋಷದಿಂದ ಸುಖಪ್ರಭಾವದಿಂದ ಎಲ್ಲ ವಿರೋಧವನ್ನೂ ಎದುರಿಸಬಲ್ಲವರು, ಸಾಮಾನ್ಯರಿಗೂ ಕ್ಲಿಷ್ಟವಾದದ್ದನ್ನೂ ಅರ್ಥ ಮಾಡಿಸುವ ಶಕ್ತಿ ಅವರ ಸಾಧನೆ. ಕ್ರೈಸ್ತ ಧಾರ್ಮಿಕ ಸಿದ್ಧಾಂತಗಳಿಗೆ ವಿರುದ್ಧವಾದ ಅತ್ಯಂತ ಅದ್ಭುತವಾದ ವೇದಾಂತ ತತ್ತ್ವಗಳನ್ನು ನಗುತ್ತಲೇ ಹೇಳುವರು. ಆಮೇಲೆ ಹಲ್ಲುಗಳಿಂದ ಕೆಳ ತುಟಿಯನ್ನು ಕಡಿಯುತ್ತಾ ಶ್ರೋತೃಗಳ ಪರಿಣಾಮವನ್ನು ಉಸಿರು ಹಿಡಿದು ಕೇಳುವವರಂತೆ ಒಂದೆರಡು ಕ್ಷಣ ನಿಲ್ಲುವರು. ಸಾಂಪ್ರದಾಯಿಕ ಕ್ರಿಶ್ಚಿಯನ್ ಬೋಧನೆಗಳಿಗೆ ಅವರ ಕಿಚ್ಚಿನ

ಎಚ್ಚರಿಕೆಗಳಿಗಿಂತ ಹೆಚ್ಚಿನ ಧಕ್ಕೆ ಸಾಧ್ಯವೇ? "ಪಶ್ಚಾತ್ತಾಪ ಪಡಬೇಡಿ, ಬೇಡ-ಬೇಕಾದರೆ ಉಗುಳಿರೆ, ಆದರೆ ಮುನ್ನಡೆಯಿರಿ- ನಿಮ್ಮನ್ನು ನೀವು ಪಶ್ಚಾತ್ತಾಪದಿಂದ ಅದುಮಬೇಡಿ; ಪಾಪದ ಹೊರೆಯನ್ನು- ಹಾಗೊಂದಿದ್ದರೆ- ಎಸೆಯಿರಿ, ನಿಮ್ಮ ನಿಜಸ್ವರೂಪದ ಅರಿವಿನಿಂದ- ಪರಿಶುದ್ಧ, ಎಂದಿಗೂ ಸ್ವತಂತ್ರ! ನೀವು ಪಾಪಿಗಳು ಅನ್ನುವವನು ಪಾಷಂಡಿ"-

ಈ ಸಲದ ಕ್ಯಾಲಿಫೋರ್ನಿಯಾದ ಉಪನ್ಯಾಸಗಳ ಪಾಠ ದೊರಕುವಂತಿಲ್ಲ, ಏಕೆಂದರೆ ಹಿಂದಿನ ಅಮೆರಿಕ-ಇಂಗ್ಲೆಂಡ್ ಪ್ರವಾಸದಲ್ಲಿ ಇವರ ಉಪನ್ಯಾಸಗಳನ್ನೆಲ್ಲಾ ಶೀಘ್ರಲಿಪಿಯಲ್ಲಿ ಬರೆದುಕೊಂಡು ಜಗತ್ತಿಗೆ ಮಹದುಪಕಾರ ಮಾಡಿದ ಗುಡ್‌ವಿನ್ ಮಹಾಶಯರು (ಇವರು ಸ್ವಾಮೀಜಿಯವರ ಹಿಂದೆ ಬಂದು, ಭಾರತದಲ್ಲೇ ಉಳಿದಿದ್ದರು) ಇನ್ನಿರಲಿಲ್ಲ!

**ಅಂತ್ಯದ ಮುನ್ಸೂಚನೆ :** ಅಲ್ಲಿರುವಾಗಲೇ ಅವರಿಗೆ ತಮ್ಮ ಜೀವನದ ಅಂತ್ಯಕಾಣತೊಡಗಿತು. ಈ ರಕ್ತ ಮಾಂಸದ ಗೂಡು ತನ್ನನ್ನು ಬಹುದಿನಗಳು ಹಿಡಿದಿರಲಾರದು, ತಾನು ದೊಡ್ಡದಾಗಿ ಬೆಳೆದಿದ್ದೇನೆ, ಬೆಳೆಯುತ್ತಿದ್ದೇನೆ- ಹೆಚ್ಚೆಂದರೆ ಮೂರುನಾಲ್ಕು ವರ್ಷಮಾತ್ರವೇ ಇದ್ದೇನು ಎನಿಸಿತ್ತು. ಇದನ್ನು ಅಭೇದಾನಂದರಲ್ಲಿ ಹೇಳಿಕೊಂಡಿದ್ದರು. ಅಲ್ಲಿಂದ, ಪ್ಯಾರಿಸ್‌ನಲ್ಲಿ 1900 ಸೆಪ್ಟೆಂಬರ್‌ನಲ್ಲಿ ನಡೆಯಲುದ್ದೇಶಿಸಿದ ಮತಧರ್ಮಗಳ ಇತಿಹಾಸ ಸಮಾವೇಶಕ್ಕೆ 26 ಜುಲೈನಂದು ಹೊರಟರು. ಪ್ಯಾರಿಸ್‌ನಲ್ಲಿ ಮೂರುತಿಂಗಳಿದ್ದು, ಯೂರೋಪ್ ದೇಶಗಳನ್ನು ನೋಡಿ ಡಿಸೆಂಬರ್ 6 ರಂದು ಬೊಂಬಾಯಿಗೆ ಬಂದರು. ಕೈರೋದಲ್ಲಿದ್ದಾಗಲೇ ಅವರ ಮನಸ್ಸಿಗೆ ಅವರ ಹಳೆಯ ಜೊತೆಗಾರ ಸೆವಿಯರ್‌ನ ಮುನ್ಸೂಚನೆ ಬಂದಿದ್ದರಿಂದ ಪ್ರಯಾಣವನ್ನು ಬೆಳೆಸದೆ ಅನಿರೀಕ್ಷಿತವಾಗಿ ಹಿಂದೆ ಬಂದಿದ್ದರಿಂದ, ಬೊಂಬಾಯಿ, ದಕ್ಷಣೇಶ್ವರಗಳಲ್ಲಿ ಅವರ ಬರುವಿನ ಸುಳಿವೇ ತಿಳಿದಿರಲಿಲ್ಲ. ಅದರಿಂದ ಯಾವ ಸ್ವಾಗತ ಸಂಭ್ರಮವೂ ಇರಲಿಲ್ಲ- ಅಷ್ಟು ಹೊತ್ತಿಗಾಗಲೇ ಸೆವಿಯರ್ ತೀರಿಕೊಂಡಿದ್ದರು, ಮಾಯಾವತಿಯಲ್ಲಿ. ಅವರ ನೆನಪಿಗೆನ್ನುವಂತೆ ಅಲ್ಲಿಯ ಅದ್ವೈತ ಆಶ್ರಮ ಕೇವಲ ಧ್ಯಾನ, ಶ್ರುತಿಯ ಅಧ್ಯಯನ, ಅದ್ವೈತ ಬೋಧನೆಗೆ ಮಾತ್ರ ಮೀಸಲಾಗಿರಬೇಕೆಂದು ನಿರ್ದೇಶಿಸಿದರು, ಬೇಲೂರು ಮಠದ ಆಡಳಿತ ವ್ಯವಸ್ಥೆಯನ್ನು ರೂಪಿಸಿದರು.

**ಅಶಕ್ತತೆಯಲ್ಲೂ ತುಂಬಿದ ಉತ್ಸಾಹ :** ಆಸಕ್ತರ ಆಧ್ಯಾತ್ಮಿಕ ಅವಶ್ಯಕತೆಗಳ ಪೂರೈಕೆಗೆ ಅವರಿಗೆ ಎಷ್ಟು ಮಟ್ಟಿನ ಉತ್ಸಾಹವಿತ್ತೆಂದರೆ, ತಮ್ಮ ದೈಹಿಕ ಆಯಾಸವನ್ನೂ ಮರೆತು, ಡಾಕಾ ಶಿಲಾಂಗ್‌ಗಳಲ್ಲಿ ಕಿಕ್ಕಿರಿದ ಜನಸ್ತೋಮಕ್ಕೆ ದೀರ್ಘ ಉಪನ್ಯಾಸಗಳನ್ನೂ, ಅನೇಕರಿಗೆ ಸಂದರ್ಶನ ಶಿಕ್ಷಣಗಳನ್ನು ನಡೆಸಿದರು. 1902 ರಲ್ಲಿ ಅವರು ಜಪಾನಿನ ಒಕಾಕೂರ ಅವರ ಜೊತೆ ಬುದ್ಧಗಯಾಕ್ಕೆ ತಮ್ಮ

ಕೊನೆಯ ತೀರ್ಥಯಾತ್ರೆಯಾಗಿ ಹೋಗಿಬಂದರು, ಶಿಷ್ಯವೃತ್ತಿ ಸ್ವೀಕರಿಸಿದಾಗಲೂ ಅವರ ಮೊದಲ ತೀರ್ಥಯಾತ್ರೆ ಬುದ್ಧಗಯಾಕ್ಕೇ ಆಗಿತ್ತು. ಒಂದು ವಾರ ಅಲ್ಲಿದ್ದು ವಾರಣಾಸಿಗೆ, ಅಲ್ಲಿಂದ ಬೇಲೂರು ಮಠಕ್ಕೆ ಬಂದರು.

**ಹದಗೆಟ್ಟ ಆರೋಗ್ಯ; ಒಳಿತಾಗಿ ಉಳಿದ ಜ್ಞಾಪಕಶಕ್ತಿ :** ಆ ವೇಳೆಗಾಗಲೇ ಅವರ ಆರೋಗ್ಯ ಅತೀವ ಹದಗೆಟ್ಟಿತ್ತು–ಒಂದು ಕಣ್ಣಿನ ದೃಷ್ಟಿ ಹೋದಂತೆಯೇ ಆಗಿತ್ತು, ಕಾಲುಗಳು ಊದಿಕೊಂಡಿದ್ದವು. ಇಷ್ಟಾದರೂ ಅವರ ಮಾನಸಿಕ ಶಕ್ತಿಗಳು ಉಜ್ವಲವಾಗಿಯೇ ಇದ್ದುವು. ತುಂಬಾ ಸೆಖೆ ಇರುವ ಕಾಲದಲ್ಲಿ ಹಲವಾರು ಬಾರಿ ನೀರು ಕುಡಿಯುತ್ತಿದ್ದವರು, ಅವರಿಗೆ ಶುಶ್ರೂಷೆ ನೀಡುತ್ತಿದ್ದ ಆಯುರ್ವೇದ ವೈದ್ಯರು ಹೇಳಿದಂತೆ 21 ದಿನಕ್ಕೂ ಹೆಚ್ಚು ಒಂದು ತೊಟ್ಟು ನೀರನ್ನು ಕುಡಿಯದಿದ್ದರು. ಮನಸ್ಸು ನೀಡಿದ ಆದೇಶವನ್ನು ಶರೀರ ಕೇಳುತ್ತದೆ ಎಂದು ಅವರ ವಿಶ್ವಾಸ–ಆ ಅವಧಿಯಲ್ಲಿ ಹೊಸದಾಗಿ ಪ್ರಕಟವಾದ ಎನ್‌ಸೈಕ್ಲೊಪೀಡಿಯಾ ಬ್ರಿಟಾನಿಕಾವನ್ನು ಓದುತ್ತಿದ್ದಾಗ, ಶಿಷ್ಯರೊಬ್ಬರು ಆಶ್ಚರ್ಯದಿಂದ ಇವೆಲ್ಲವನ್ನೂ ಒಂದು ಜೀವನ ಕಾಲದಲ್ಲಿ ಓದಿ ಅರಗಿಸಿಕೊಳ್ಳಲಾಗದು ಎಂದು ಉದ್ಗಾರ ತೆಗೆದರು. ಕೂಡಲೇ ಸ್ವಾಮೀಜಿ, ಆ ವೇಳೆಗೆ ಅವರು ಓದಿದ್ದ ಹತ್ತು ಸಂಪುಟಗಳಲ್ಲಿ ಏನನ್ನಾದರ ಕೇಳಲು ಹೇಳಿದರು. ಕುತೂಹಲದಿಂದ ಸಂಪುಟವೊಂದರಿಂದ ಕೇಳಿದ ಎರಡು ಮೂರು ಪ್ರಶ್ನೆಗಳಿಗೆ, ತುಂಬ ಜ್ಞಾನಭರಿತವಾದದ್ದಾದರೂ ಉತ್ತರವನ್ನು ಹೇಳಿದರು, ವಿಶೇಷವೆಂದರೆ ಆ ಪುಸ್ತಕದಲ್ಲಿದ್ದ ಭಾಷೆಯನ್ನೇ ಉದ್ಗರಿಸಿದರು. ಆಶ್ಚರ್ಯಚಕಿತರಾದ ಶಿಷ್ಯರಿಗೆ, ಬಹಳ ಕಟ್ಟುನಿಟ್ಟಾಗಿ ಬ್ರಹ್ಮಚರ್ಯಪಾಲಿಸಿದವರಿಗೆ ಇದು ಸಾಧ್ಯ ಎಂದು ಅವರು ತಿಳಿಸಿದರು.

**ಬ್ರಹ್ಮದರ್ಶನ :** ಒಂದು ಸಂಜೆ ಮಠದ ಅಂಗಳದಲ್ಲಿನ ಮಾವಿನ ಮರದ ಕೆಳಗೆ ಕುಳಿತಾಗ ಕಣ್ಣುಗಳು ಹೊಳೆಯುತ್ತಿದ್ದವು, ಇಡೀ ದೇಹ ಯಾವದೋ ಅಧ್ಯಾತ್ಮಿಕ ಅರಿವಿನ ಜೀವಂತ ಪ್ರಭೆಯನ್ನು ಹೊಂದಿದಂತಿತ್ತು– ಅವರ ಸುತ್ತಲೂ ನಿಂತಿದ್ದ ಸಂನ್ಯಾಸಿಗಳು, ಬ್ರಹ್ಮಚಾರಿಗಳನ್ನು ಕುರಿತು 'ಬ್ರಹ್ಮವನ್ನು ನೀವು ಎಲ್ಲಿ ಕಾಣುವಿರಿ. ಇಲ್ಲೇ, ಎಲ್ಲಾ ಜೀವಿಗಳಲ್ಲೂ– ಇದೇ ದೃಗ್ಗೋಚರನಾದ ಬ್ರಹ್ಮ, ನಿಮ್ಮ ಎದುರಿಗೇ ಇದ್ದಾನೆ, ನಿಮ್ಮ ಕೈಯಲ್ಲಿರುವ ಹಣ್ಣಿನಂತೆ ಸ್ಪಷ್ಟವಾಗಿದ್ದಾನೆ" ಎಂದರು. ತಮ್ಮ ತಕ್ಷಣದ ಬ್ರಹ್ಮಾನುಭವವನ್ನು ತೀವ್ರ ಹುರುಪು ಮತ್ತು ಜೋರಿನಿಂದ ಹೇಳಿದ ಪ್ರಭಾವದಿಂದಾಗಿ ಕೇಳಿದವರ ಅರಿವಿನ ಮಟ್ಟ ಏರಿ ಅವರೆಲ್ಲ ನಿಶ್ಚಲರಾಗಿ ಮೌನವಾಗಿ ಕೆಲ ನಿಮಿಷ ಆಳವಾದ ಧ್ಯಾನದ ಅಂತರ್ದರ್ಶನ ಶಾಂತಿಯಿಂದಿದ್ದರು. ಅಂದರೆ, ಗುರುದೇವರಂತೆ ಸ್ವಾಮೀಜಿಯವರಿಗೂ ಆಧ್ಯಾತ್ಮಿಕ ಅರಿವು, ಮತ್ತು ಅದನ್ನವಲಂಬಿಸಿದ ಮಾನಸಿಕ ಶಕ್ತಿ, ದೈಹಿಕ ತೊಂದರೆಯಿಂದ ಇನಿತೂ ಕನಲಿರಲಿಲ್ಲ– ಗುರುದೇವರು ಹೇಳಿದಂತೆ ವೇದಾಂತ ಪ್ರಸಾರಕಾರ್ಯವನ್ನು ಉತ್ಸಾಹದಿಂದ ಈವರೆಗೆ ಮಾಡಿದವರು, ತಮ್ಮ ಅಂತ್ಯ ಹತ್ತಿರವಾಗಿದೆ ಎಂಬ

ಅರಿವಿನಿಂದ ತಮ್ಮ ನಂಬಿಕಸ್ತ ಶಿಷ್ಯರಿಗೆ ಈ ಕೆಲಸವನ್ನು ಒಪ್ಪಿಸಿದರು.

**ಅಸ್ತಮಾನ ದಿನಗಳು :** ಸ್ವಾಮೀಜಿ ಕೊನೆಯ ಎರಡು ತಿಂಗಳಲ್ಲಿ ಹೆಚ್ಚು ಹೆಚ್ಚು ಅಂತರ್ಮುಖಿಗಳಾಗಿದ್ದರು; ಬಹಳ ಕಾಲ ಧ್ಯಾನಸ್ಥರಾಗಿರುತ್ತಿದ್ದರು. ಆ ವೇಳೆಗಾಗಲೇ ಅವರಿಗೆ ತಮ್ಮ ಅವತಾರ ಸಮಾಪ್ತಿ ಹತ್ತಿರವೇ ಇದೆ ಎನಿಸಿರಬೇಕು; ಅವರ ನಡೆಯೆಲ್ಲಾ ಅಂತಹ ಸೂಚಕಗಳೇ ಆಗಿದ್ದುವು, ಆದರೆ ಇತರರಿಗೆ ಅದರ ಅಲ್ಪ ಸ್ವಲ್ಪ ಸಂದೇಹವಿದ್ದರೂ, ಅವರನ್ನು ಕಳೆದುಕೊಳ್ಳಲಾರದ ಅವರಿನ್ನೂ ತಮ್ಮೊಡನಿರುವ ಅಭಿಲಾಷೆಯ ಸಣ್ಣ ತಂತುವಿನ ಆಶ್ರಯದಲ್ಲೇ ಇದ್ದರು; ಅನುಮಾನ ಸ್ವಲ್ಪ ಬಲವಾದಾಗ, ಅಕಸ್ಮಾತ್ತಾಗಿ, ಪ್ರಾಸಂಗಿಕವಾಗಿ ಸೋದರ ಶಿಷ್ಯನೊಬ್ಬನು (ಮೂಢತನದಿಂದಿರಬಹುದೇ?) ಕೇಳಿದನು 'ಸ್ವಾಮೀಜಿ ನೀವು ಯಾರೆಂದು ತಿಳಿದಿದೆಯೇ?'– 'ಹೌದು, ಈಗ ತಿಳಿವಾಗಿದೆ' ಎಂದು ಅವರು, ಯಾವ ಭಾವವನ್ನೂ ತೋರ್ಪಡಿಸದೆ ಉತ್ತರಿಸಿದರು. ಅಲ್ಲಿದ್ದ ಶಿಷ್ಯರಿಗೆ, ಹಿಂದೆ ಗುರುದೇವರು ಹೇಳಿದ್ದು ನೆನಪಾಯಿತು– ನರೇಂದ್ರನಿಗೆ ತಾನು ಯಾರು ಎಂದು ಅರಿವಾದಾಗ ದೇಹವನ್ನು ಬಿಡುವನು ಎಂದಿದ್ದರು– ಈ ಮಾತಾಗಲೀ, ಬಹಳ ಮುಂಚೆಯೇ ಗುರುದೇವರು ಸಣ್ಣ ಮುಗ್ಧ ಮಗುವಿನಂತೆ ಪ್ರಭಾಲೋಕಕ್ಕೆ ಹೋಗಿ 'ನರ' ಮಹರ್ಷಿಯನ್ನು ತನ್ನೊಡನೆ ಬರಲು ಕರೆದದ್ದು, ಅವರೇ ಇವನು ಎಂದೂ ಶಿಷ್ಯರಿಗೆ ತಿಳಿಸಿದ್ದ ವಿಷಯ ವಿವೇಕಾನಂದರಿಗೆ ಹೇಳಿರಲಿಲ್ಲ. ಈಗ ವಿವೇಕಾನಂದರ ಉತ್ತರ ಕೇಳಿ ಅವರಿಗೆ ವಿವಂಚನೆಯಾಗಿರಬೇಕು.

ಸ್ವಾಮೀಜಿ ಎಲ್ಲ ಸಹೋದರ ಸಂನ್ಯಾಸಿಗಳಿಗೂ ಕರೆ ಕಳಿಸಿದರು. ಪತ್ರಗಳು ಅವರಿಗೆಲ್ಲಾ ಹೋದವು. ಯಾವದೇ ಕಾರಣವನ್ನೂ ಹೇಳದೆ ಬಂಗಾಳೀ ಪಂಚಾಂಗವನ್ನು ತರಿಸಿದರು, ನೋಡಿ ಹಾಗೆಯೇ ಹಿಂದೆ ಕಳಿಸಿದರು, ಈಗಲೂ ಯಾವ ಮಾತೂ ಇಲ್ಲ. ಬಹುಶಃ ಅವರ ದೇವಯಾನದ ಮುಹೂರ್ತವನ್ನು ಗೊತ್ತುಮಾಡಿಕೊಂಡರೇ? ಆದರೆ ಅಂತಹ ಮಹಾನುಭಾವರಿಗೆ ತಿಳಿಯದಿದ್ದುದೇನು, ಇದರಿಂದ ಆಗಬೇಕಾದುದೇನು, ಯಾವ ಗಳಿಗೆಯಲ್ಲಿ ಅವರು ದೇಹ ತಾರಣ ಮಾಡುವರೋ ಅದೇ ಉತ್ತಮ ಮುಹೂರ್ತವಲ್ಲವೇ?

ಜುಲೈ 2 ರಂದು, ಸೋದರಿ ನಿವೇದಿತಾ ಅವರಿಗೆ ಊಟಬಡಿಸುವ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದರು. ಶಿಷ್ಯಳಾದವಳು ಇಂತಹ ಉಪಚಾರ ಒಪ್ಪುವಳೇ– ಆದರೆ ಆಕೆ ಏನು ಹೇಳಿದರೇನು, ಪ್ರತಿಭಟಿಸಿದರೇನು 'ಜೀಸಸ್‌ನು ತನ್ನ ಶಿಷ್ಯನ ಪಾದ ತೊಳೆದನು' ಎಂದಾಗ ಆಕೆ ತೀವ್ರ ಕಸಿವಿಸಿಯಿಂದ ಅವರ ಇಚ್ಛೆಗೆ ಒಪ್ಪಿಸಿಕೊಳ್ಳಬೇಕಾಯಿತು. ತಮ್ಮ ಕೈಯಿಂದಲೇ ಆಕೆಗೆ ಊಟ ಬಡಿಸಿದರು, ಊಟವಾದ ಮೇಲೆ ಕೈತೊಳೆದರು, ವಸ್ತ್ರದಿಂದ ಕೈ ಒರೆಸಿದರು. ಒಂದು ಸಂಜೆ ಮಠದ ಹುಲ್ಲು ಹಾಸಿನ ಮೇಲೆ ಸ್ವಾಮಿ ಪ್ರೇಮಾನಂದರೊಡನೆ ನಡೆದಾಡಿದರು.

ಮಧ್ಯೆ ನಿಂತು ಗಂಗೆಯನ್ನೂ, ಪಾವನ ಗಂಗೆಯ ತಡಿಯಲ್ಲಿನ ಹಾಸನ್ನೂ ದೃಷ್ಟಿಸಿ ನೋಡಿದರು. ಪ್ರೇಮಾನಂದರಿಗೆ ಅಲ್ಲಿಯ ಒಂದು ಸ್ಥಳವನ್ನು ಬೊಟ್ಟು ಮಾಡಿ ತೋರಿದರು. ತಾವು ದೇಹ ಬಿಟ್ಟಾಗ ಅಲ್ಲಿಯೇ ಅವರ ದೇಹ ಸಂಸ್ಕಾರವಾಗಬೇಕು ಎಂಬ ಅಭಿಪ್ರಾಯ-ಅಪೇಕ್ಷೆ-ಆದೇಶವನ್ನೂ ತಿಳಿಸಿದರು. ಅವರನಂತರ ಅಲ್ಲೇ ಅವರ ಸ್ಮಾರಕ ಭವ್ಯ ದೇಗುಲ ಎದ್ದುನಿಂತಿದೆ.

**ಕೊನೆಯ ದಿನ** : ಅದಾದ ಕೆಲವೇ ದಿನಗಳಲ್ಲಿ ಒಂದು ದಿನ ಬಹಳ ಮುಂಚೆಯೇ ಎದ್ದು, ಮಠದ ಬಾಗಿಲು ಹಾಕಿಕೊಂಡು ಮೂರುಗಂಟೆ ಧ್ಯಾನದಲ್ಲಿದ್ದರು- ಏನು ನಡೆದಿರಬಹುದು? ಮಹಾನುಭಾವರು ತಮ್ಮ ದೇಶದ ದೀನದಲಿತರ, ಎಲ್ಲ ಸ್ತರದ ಜನತೆಯ ದಾರಿದ್ರ್ಯ ದುಃಖನಿವಾರಣೆ, ಸಾಂಸ್ಕೃತಿಕ ಪ್ರಗತಿ, ಧಾರ್ಮಿಕ ಸೋಪಾನವನ್ನೇರಿ ಹಿಂದಿನ ಎತ್ತರದಲ್ಲಿ ನಿಲ್ಲುವದನ್ನು ತಾನೆ? ಭಗವತಿಗೆ ಇದೇ ಅವರ ಅಂತಿಮ ಪ್ರಾರ್ಥನೆಯಾಗಿರಬಹುದೇನೋ! ಜೊತೆಗೆ, ತಾಯಿಯ ಅನುಮತಿ, ಗುರುದೇವರ ಒಪ್ಪಿಗೆಯನ್ನೂ ಕೇಳಿರಬಹುದಲ್ಲವೆ! ಕೆಳಗಿಳಿದು ಬಂದರು, ಯೋಚನಾಮಗ್ನರಂತೆ ಅತ್ತಿಂದಿತ್ತ ಹೆಜ್ಜೆ ಹಾಕಿದರು, ಶತಪಥ ನಡೆ- ಜೊತೆಯಲ್ಲಿ ಸ್ವಾಮಿ ಪ್ರೇಮಾನಂದರು ಸೇರಿದ್ದರು. ಮೆಲುದನಿಯಲ್ಲಿ ಸ್ವಗತವೆಂಬಂತೆ ಏನನ್ನೋ ನುಡಿದದ್ದನ್ನು ಪ್ರೇಮಾನಂದರು ಆಲಿಸಿದರು; "ಇನ್ನೊಬ್ಬ ವಿವೇಕಾನಂದನಿದ್ದರೆ, ಈ ವಿವೇಕಾನಂದ ಏನು ಮಾಡಿದ ಎಂಬುದನ್ನು ಅರ್ಥಮಾಡಿಕೊಳ್ಳುತ್ತಿದ್ದ"

ಮಧ್ಯಾಹ್ನ, ಯಾವತ್ತೂ ತನ್ನ ಕೊಠಡಿಗೇ ಊಟ ತರಿಸಿಕೊಂಡು, ಭೋಜನ ಸ್ವೀಕಾರ ಅವರ ಪದ್ಧತಿ. ಆದಿನ ಈ ನಡೆ ವ್ಯತ್ಯಯವಾಯಿತು. ಭೋಜನ ಶಾಲೆಗೇ ಬಂದು ಸೋದರ ಸಂನ್ಯಾಸಿಗಳ ಜೊತೆಯಲ್ಲೇ ಊಟಕ್ಕೆ ಕುಳಿತರು. ಊಟದ ಮಧ್ಯೆ ಮಾತನಾಡುತ್ತಾ- ಜಪಾನ್‌ಗಾಗಿ ಏನಾದರೂ ಮಾಡಿ, ಮಠದಲ್ಲಿ ಕಾಳಿ ಪೂಜೆಯಾಗಬೇಕು, ಪ್ರಸಿದ್ಧ ಪಂಡಿತ- ವಿದ್ವಾಂಸರೂ, ಆಡಳಿತಗಾರರೂ ಆದ ಆರ್. ಸಿ. ದತ್ತರವರನ್ನು ನೋಡಿ, ಎಂಬ ತಮ್ಮ ಮೂರು ಇಚ್ಛೆಗಳನ್ನು ವ್ಯಕ್ತಪಡಿಸಿದರು. ಶಿಷ್ಯರು ವೇದ ಮಂತ್ರಗಳ ನಿಜಾರ್ಥವನ್ನೂ, ಅಂತರಂಗವನ್ನೂ ತಿಳಿಯಲು ಪ್ರಯತ್ನಿಸಬೇಕು ಎಂದು ಸೂಚಿಸಿದರು.

ಊಟವಾದ ಮೇಲೆ ಎಲ್ಲ ಬ್ರಹ್ಮಚಾರಿಣಿಗಳನ್ನೂ ಕೂಡಿಸಿ, ಮೂರು ಗಂಟೆ ಸಂಸ್ಕೃತ ವ್ಯಾಕರಣ ಪಾಠವನ್ನು ಹೇಳಿದರು. ಸಾಯಂಕಾಲ ತಿರುಗಾಟಕ್ಕೆ ಪ್ರೇಮಾನಂದರೊಡನೆ ಹೊರಟರು- ದಾರಿಯಲ್ಲಿ, ಮಠದಲ್ಲಿ ವೇದ ಪಾಠಶಾಲೆಯಾಗಬೇಕು ಎಂಬ ತನ್ನ ಆಶಯವನ್ನು ತಿಳಿಸಿದರು. ಎರಡು ಮೈಲು ಸುತ್ತಾಡಿ ಮಠಕ್ಕೆ ಹಿಂದಿರುಗಿದರು. ಸಾಯಂಕಾಲ ಮಠದ ಪ್ರಾರ್ಥನಾ ಗಂಟೆಯಾಯಿತು. ಅದು ಅವರಿಗೇ ಕರೆ ಎನಿಸಿತೇ! ತಮ್ಮ ಕೋಣೆಗೆ ತೆರಳಿ ಧ್ಯಾನಾಸಕ್ತರಾದರು.

ಧ್ಯಾನದಲ್ಲಿ ಲೀನವಾದವರು ಎಷ್ಟೋ ಸಮಯದನಂತರ ಕಣ್ದೆರೆದು, ಶಿಷ್ಯನನ್ನು ಕರೆದರು. ನೆಲದಮೇಲೆ ಹಾಸಿಗೆಯ ಮೇಲೆ ಮಲಗಿ, ಅವನಿಗೆ ತಮ್ಮ ತಲೆಗೆ ಗಾಳಿ ಹಾಕಲು ಕೇಳಿದರು.

**ಗುರುವಿನೆಡೆ ಸಾಗಿದ ಚೇತನ** : ಒಂದು ಗಂಟೆಯ ನಂತರ ಶಿಷ್ಯನು ಅವರ ಕೈಗಳು ಸ್ವಲ್ಪ ಅಲುಗಿದ್ದನ್ನು ಗಮನಿಸಿದನು. ಅಲ್ಲಿಗೆ ಮುಹೂರ್ತ ಸನ್ನಿಹಿತವಾಗಿತ್ತು, ಪ್ರಯಾಣದ ಮೊದಲ ಹೆಜ್ಜೆ ಅದು. ಮುಂದೆ ಎರಡು ದೀರ್ಘ ಶ್ವಾಸ- ಪ್ರಾಣ ನಿರೋಧ ಮಾಡಿ ಬ್ರಹ್ಮರಂಧ್ರದಲ್ಲಿ ನಿಲ್ಲಿಸಿದರೆಂಬಂತೆ ತೋರುತ್ತೆ. ಅಲ್ಲಿಗೇ ಎಲ್ಲವೂ ಸ್ತಬ್ಧ. ಅಷ್ಟೇ; ಮಹಾಜೀವ, ಅತಿಶಯ ಚೇತನವೊಂದು ಅಸ್ತಮಿಸಿತು, ಅಲ್ಲ, ತನ್ನ ಗುರುದೇವರಲ್ಲಿ ಮಹಾ ಚೇತನನಾದ ಭಗವಂತನಲ್ಲಿ ಲೀನವಾಯಿತು. ಜುಲೈ 4, 1902, ರಾತ್ರಿ ಒಂಭತ್ತು ಗಂಟೆ. ಇದೇ ಕಾಲಕ್ಕೆ ಮದ್ರಾಸಿನಲ್ಲಿದ್ದ ಸ್ವಾಮಿ ರಾಮಕೃಷ್ಣಾನಂದರಿಗೆ ಕನಸ್ಸಿನಲ್ಲೆಂಬಂತೆ ಧ್ವನಿಯೊಂದು ಉಲಿಯಿತು. "ಶಶೀ, (ಸ್ವಾಮಿ ರಾಮಕೃಷ್ಣಾನಂದರ ಪೂರ್ವಾಶ್ರಮದ ಹೆಸರು), ಉಗುಳುವಂತೆಯೇ ನಾನು ದೇಹವನ್ನು ಈಗಷ್ಟೇ ತ್ಯಾಗಮಾಡಿದ್ದೇನೆ".

ಭಗವಾನ್ ನಾರಾಯಣನೇ ಸ್ಥೂಲ ಸೂಕ್ಷ್ಮಲೋಕಗಳೆಲ್ಲವನ್ನೂ ದಾಟಿ, ದೇವತೆಗಳೂ ಪ್ರವೇಶಿಸಲು ಹಿಂಜರಿಯುವ ಜ್ಯೋತಿಲೋಕದಲ್ಲಿ ಕೇವಲ ದೇವಪ್ರಭೆಯೇ ರೂಪುಗೊಂಡಂತಿದ್ದ, ತದೇಕ ಚಿತ್ತದಿಂದ ತಪದಲ್ಲಿ ಕುಳಿತ ಋಷಿಯ ತೊಡೆಯ ಮೇಲೇರಿದ ಮುದ್ದುಮಗುವಾಗಿ ಪರಮಪ್ರೀತಿಯಿಂದ 'ನಾನು ಹೋಗುತ್ತಿದ್ದೇನೆ, ನೀನು ನನ್ನೊಡನೆ ಬರಬೇಕು' ಎಂದು ಪುಟ್ಟಕೈಗಳಿಂದ ಅವರ ಕತ್ತನ್ನು ಬಳಸಿ ಹೇಳಿದನಂತೆ- ಪ್ರೀತಿಯ ಕಣ್ಣುಗಳಿಂದಲೇ ಒಪ್ಪಿಗೆಯನ್ನು ಸೂಚಿಸಿದ ಋಷಿಯು ಪುನಃ ಸಮಾಧಿ ಸ್ಥಿತಿಯಲ್ಲಿ ನಿಂತರು, ಅವರ ದೇಹ ಮನೋಭಾವಗಳ ಭಾಗ ಪ್ರಕಾಶ ಜ್ಯೋತಿಯಂತೆ ಭೂಮಿಯತ್ತ ಧಾವಿಸಿತು. ನಾರಾಯಣನು ರಾಮಕೃಷ್ಣನಾಗಿ ಅವತರಿಸಿದಾಗ, ಆ ಮಹಾತಪಸ್ವಿ 'ನರ' ನೇ ವಿವೇಕಾನಂದರಾಗಿ ಬಂದವರು. ಗುರುದೇವನ ಕಾರ್ಯೋದ್ದೇಶವನ್ನು ಪೂರ್ಣಗೊಳಿಸಿ, ಈ ಲೋಕದಿಂದ ವಿರಮಿಸಿ ಪುನಃ ತನ್ನ ಸ್ವಸ್ಥಾನಕ್ಕೇ ಮರಳಿದರು.

ಆಧ್ಯಾತ್ಮಿಕವಾಗಿ ವಿವೇಕಾನಂದರಿಗೆ ಅಂತ್ಯವಿಲ್ಲ, ಬಹಳ ಮುಂಚೆಯೇ ಅವರು ಮಾಡಿದ ಘೋಷಣೆ ಮೊಳಗುತ್ತಿದೆ. "ನನ್ನ ದೇಹದಿಂದ ಹೊರಗಿರುವದು ಉತ್ತಮವೆಂದು ಹಳತಾದ ಜೀರ್ಣವಸ್ತ್ರವನ್ನು ಕಳಚಿದಂತೆ ನನಗೆ ಕಾಣಬಹುದು. ಆದರೆ ನಾನು ಮಾಡುವ ಕೆಲಸ ನಿಲ್ಲುವುದಿಲ್ಲ, ಪ್ರಪಂಚ ತಾನು ದೇವರೊಡನೆ ಒಂದಾಗಿರುವದೆಂದು ಅರಿಯುವವರೆಗೂ, ಎಲ್ಲೆಲ್ಲೂ ನಾನು ಜನಗಳನ್ನು ಸ್ಫೂರ್ತಿಗೊಳಿಸುತ್ತೇನೆ"

ಆದರೆ, ಈ ಕಾಲಕ್ಕೆ, ಇಂದಿನ ಸಂಕಷ್ಟ ಪರಿಸ್ಥಿತಿಯಲ್ಲಿ, ಹಿಂದಿನ ಅತ್ಯುತ್ತಮ ಶಾಶ್ವತ ಜೀವನ ಮೌಲ್ಯಗಳನ್ನು, ಭಾರತದೇಶದ ಹಿಂದೂಧರ್ಮದ ಅತ್ಯುನ್ನತ ಸಂಸ್ಕೃತಿ, ತತ್ತ್ವಗಳನ್ನು ಕೈಲಾಸವನ್ನು ಕೀಳುವನೆಂದು ಅಲ್ಲಾಡಿಸ ಹೊರಟ ರಾವಣನಂತೆ, ಪಾಶ್ಚಿಮಾತ್ಯ ಅನುಕರಣೆ ಐಷಾರಾಮ ಜೀವನದ ಆಸೆ-ಸ್ವಾರ್ಥ-ದುಡ್ಡೇ ದೇವರೆನ್ನುವ ಅತಿರೇಕದ ಕಂಪನವು ಅತಿಯಾದೀತೆಂದು ಭಯ ಹುಟ್ಟಿಸಿರುವ ಇಂದಿನ ಪರಿಸ್ಥಿತಿಯಲ್ಲಿ, ಶ್ರೀ ಸ್ವಾಮಿ ವಿವೇಕಾನಂದರ ಪ್ರತ್ಯಕ್ಷ ಉಪಸ್ಥಿತಿ, ಭಾರತಾದ್ಯಂತ ಮಿಂಚಿನ ಸಂಚಾರ, ಜನಮನ ತಂತುವನ್ನು ಮಿಡಿದು ದಾರಿತೋರಿ ಕೈ ಹಿಡಿದು ನಡೆಸುವ ಜೀವಂತ ದಿವ್ಯಚೇತನಬೇಕು. ಆಗಸಕೆ ತಲೆ ಎತ್ತಿ, ಕೈ ಮುಗಿದು ಮನ ಬೇಡುತಿದೆ, 'ಆ ದಿನ ಎಂದಿಗೆ'.

**ಹಲವು ಆಧಾರಗಳಿಂದ, ಪ್ರಧಾನವಾಗಿ**

**ಸ್ವಾಮಿ ತಪಸ್ಯಾನಂದರ 'ಸ್ವಾಮಿ ವಿವೇಕಾನಂದ' ಪುಸ್ತಕದಿಂದ.**

---

# ವಿಷಯಾನುಕ್ರಮಣಿಕೆ

ಮುನ್ನುಡಿ– ಶ್ರೀ ಸ್ವಾಮಿ ಜಗದಾತ್ಮಾನಂದ ಜೀ i

ಪ್ರಕಾಶಕರ ಅರಿಕೆ iii

ವಿವೇಕಾನಂದ ಸ್ವಾಮಿಗಳವರು vii

ಮಹಾನ್ ಚೇತನರು ix

**ವಿಶ್ವಧರ್ಮ ಸಮ್ಮೇಳನದಲ್ಲಿ ಉಪನ್ಯಾಸಗಳು** 1

ಅನುವಾದಕರ ಮುನ್ನುಡಿ

ಹಿನ್ನೆಲೆ 5

1. ಸ್ವಾಗತಕ್ಕೆ ಉತ್ತರ 9
2. ನಮ್ಮಲ್ಲಿ ಮತ ಭೇದವಿರುವದೇಕೆ? 11
3. ಹಿಂದೂಧರ್ಮ 13
4. ಇಂಡಿಯಕ್ಕೆ ಧರ್ಮದ ಕೊರತೆಯೇನೂ ಇಲ್ಲ 30
5. ಬೌದ್ಧಧರ್ಮವು ಹಿಂದೂ ಧರ್ಮವನ್ನು ಪರಿಪೂರ್ತಿಗೊಳಿಸಿದ್ದು 31
6. ಕೊನೆಯ ಅಧಿವೇಶನದಲ್ಲಿ ಭಾಷಣ 35
7. ಹಿಂದೂಧರ್ಮ 37
8. ವೇದಾಂತದ ಸ್ವರೂಪವೂ ಪ್ರಭಾವವೂ 42

**ವೇದಾಂತೋಪನ್ಯಾಸಗಳು (1, 2)**

ಇಂಗ್ಲಿಷ್‌ನ ಮೂಲ ಪುಸ್ತಕದ ಮುನ್ನುಡಿ 48

ಅನುವಾದಕರ ಮುನ್ನುಡಿ 50

## ಪ್ರಥಮಾರ್ಧ

9. ಧರ್ಮಕ್ಕೆ ಏಕತ್ವವೇ ಗುರಿ 52

10. ಪ್ರಪಂಚ ತತ್ತ್ವ 58

11. ಪ್ರಕೃತಿ ಪುರುಷ ವಿವೇಕ 69

12. ಸಾಂಖ್ಯವೂ ವೇದಾಂತವೂ 83

13. ನಿತ್ಯಮುಕ್ತನಾದ ಆತ್ಮ 95

14. ನಾನಾ ರೂಪವಾಗಿ ತೋರಿಕೊಳ್ಳುವ ಅದ್ವಿತೀಯ ವಸ್ತು 111

15. ಆತ್ಮೈಕತ್ವ 122

16. ಜ್ಞಾನಯೋಗದ ಸರ್ವೋತ್ಕೃಷ್ಟ ಆದರ್ಶ 132

## ದ್ವಿತೀಯಾರ್ಧ

17. ಕರ್ಮವೂ ಅದರ ರಹಸ್ಯವೂ 142

18. ಮನಸ್ಸಿನ ಶಕ್ತಿಗಳು 151

19. ಭಕ್ತಿ ಅಥವಾ ದೈವ ನಿಷ್ಠೆ 165

20. ವಿಶ್ವವ್ಯಾಪಕ ಧರ್ಮದ ಸಫಲತೆಯ ಮಾರ್ಗ 181

21. ವಿಶ್ವವ್ಯಾಪಕ ಧರ್ಮವೆಂಬ ಹೆಗ್ಗುರಿ 197

22. ಎಲ್ಲರಿಗೂ ತಿಳಿದಿರುವ ರಹಸ್ಯ 218

23. ಆನಂದದ ಹಾದಿ 227

**ವಿ.ಸೂ :** ವಿಶ್ವಧರ್ಮ ಸಮ್ಮೇಳನದ ಭಾಷಣಗಳನ್ನು The Complete Works of Swami Vivekananda-Vol. I ವೇದಾಂತೋಪನ್ಯಾಸಗಳಲ್ಲಿ ಮೊದಲ 8 ಉಪನ್ಯಾಸಗಳು The Science & Philosophy of Religion ಗ್ರಂಥದಿಂದ ಆಯ್ದುಕೊಂಡವು. ಮೊದಲ ಮುದ್ರಣ (1935) ದಲ್ಲಿದ್ದ ಕ್ರಮವನ್ನು ಬದಲಾಯಿಸಿ, ಉದ್ಬೋಧನ ಸಂಸ್ಕರಣಕ್ಕೆ ಅನುಕ್ರಮವಾಗಿ, ಶ್ರೀ ಶ್ರೀಗಳವರು ಉದ್ದೇಶಿಸಿದಂತೆ ಜೋಡಿಸಲಾಗಿದೆ. ಉಳಿದ ಉಪನ್ಯಾಸಗಳನ್ನು The Complete Works of Swami Vivekananda - Vol II, ನಿಂದ ಆರಿಸಿಕೊಂಡಿದೆ. ಇವು ಶ್ರೀ ವಿವೇಕಾನಂದಸ್ವಾಮಿಗಳವರು ಎರಡನೆಯ ಬಾರಿಗೆ ಅಮೆರಿಕಕ್ಕೆ ಹೋದಾಗ, ಕ್ಯಾಲಿಫೋರ್ನಿಯಾದಲ್ಲಿ ಜನವರಿ 1900 ರಲ್ಲಿ ನೀಡಿದ ಉಪನ್ಯಾಸಗಳು.

# ವಿಶ್ವಧರ್ಮಸಮ್ಮೇಳನದಲ್ಲಿ ಉಪನ್ಯಾಸಗಳು

## ಅನುವಾದಕರ ಮುನ್ನುಡಿ

(ಒಂದನೆಯ ಮುದ್ರಣಕ್ಕೆ)

ಶ್ರೀವಿವೇಕಾನಂದಸ್ವಾಮಿಗಳವರು ವಿಶ್ವಧರ್ಮಸಮ್ಮೇಳನದಲ್ಲಿ (PARLIAMENT OF RELIGIONS) ಮಾಡಿದ ಈ ಉಪನ್ಯಾಸಗಳನ್ನು ಅನೇಕ ಕಾರಣಗಳಿಂದ ಕನ್ನಡಿಸಿರುವೆನು. 1893 ನೆಯ ಇಸವಿಗಿಂತ ಹಿಂದೆ ಲೋಕದ ಎಲ್ಲಾ ಧರ್ಮಗಳವರೂ ಒಂದು ಕಡೆ ಸೇರಿ ಮಾತಾಡಿದ್ದೆಂಬುದೇ ಇಲ್ಲ. ಆದರೆ ಆ ವರ್ಷ ಚಿಕಾಗೊ ಪಟ್ಟಣದಲ್ಲಿ ನೆರೆದ ಭೂಲೋಕದ ಸಂತೆಯಲ್ಲಿ ಆದ ವಿಶ್ವಧರ್ಮಸಮ್ಮೇಳನದಲ್ಲಿ ಕ್ರಿಸ್ತಿಯನ್ನ ಮತದ ಪ್ರಬೇಧಗಳ ಪ್ರತಿನಿಧಿಗಳೂ ಸೇರಿದ್ದರು; ಹಿಂದು, ಬೌದ್ಧ, ಜೈನ, ಯೆಹೂದ್ಯ, ಕನ್ಫೂಷಿಯಸ್, ಷಿನ್ಟೊ, ಮಹಮ್ಮದೀಯ, ಪಾರ್ಸಿ–ಈ ಮತಗಳ ಪ್ರತಿನಿಧಿಗಳೆಲ್ಲರೂ ಬಂದಿದ್ದರು. ಎಲ್ಲಾ ಧರ್ಮಗಳೂ ಪರಸ್ಪರ ಸಹಾನುಭೂತಿಯಿಂದ ಒಬ್ಬರ ವಿಷಯವನ್ನೊಬ್ಬರು ತಿಳಿದುಕೊಳ್ಳುವದಕ್ಕೆ ಈ ಸಮ್ಮೇಳನದಲ್ಲಿಯೇ ಮೊದಲಾಯಿತು. ಅಲ್ಲಿ ಸಾವಿರಾರು ಪ್ರಬಂಧಗಳನ್ನು ಪ್ರತಿನಿಧಿಗಳು ಓದಿದರು; ಪೃಥ್ವಿಯ ಮಹಾತತ್ತ್ವಜ್ಞಾನಿಗಳೆನಿಸಿ ಕೊಂಡವರನೇಕರು ಸೇರಿದ್ದರು; ಹತ್ತು ಸಾವಿರದವರೆಗೆ ಸುಸಂಸ್ಕೃತರಾದ ಸಭಿಕರು ಸೇರಿದ್ದರು. ಹದಿನೇಳು ದಿನಗಳವರೆಗೆ ಸಭೆಯು ಕೂಡಿತು. ಇಂಥ ಪ್ರಚಂಡಧರ್ಮಸಭೆ ಯಾದದ್ದು ಇತಿಹಾಸದಲ್ಲಿ ಇದೇ ಮೊದಲು. ಹಿಂದೂ ಧರ್ಮದ ಸಂನ್ಯಾಸಿಯೊಬ್ಬನು ಸಮುದ್ರವನ್ನು ದಾಟಿ ದೂರದೇಶಕ್ಕೆ ಹೋಗಿ ಇಂಥ ಸಭೆಯಲ್ಲಿ ತನ್ನ ಧರ್ಮದ ಪರವಾಗಿ ಮಾತಾಡಿದ್ದೂ, ಅದನ್ನು ಸಭಿಕರು ಆದರದಿಂದ ಕೇಳಿದ್ದೂ, ಜನರ ವಿಚಾರಸರಣಿಯ ಮೇಲೆ ಅದರ ಉತ್ತಮವಾದ ಪರಿಣಾಮವಾದದ್ದೂ ಇತಿಹಾಸದಲ್ಲಿ ಇದೇ ಮೊದಲು.

ಪರಸ್ಪರವಾಗಿ ಔದಾಸೀನ್ಯಭಾವವನ್ನು ಬೆಳೆಯುಗೊಡದೆ, ಹೊರಗಿನ ಆಚರಣೆಯನ್ನೆಲ್ಲ ಒಂದೇ ರೂಪಕ್ಕೆ ತರಬೇಕೆಂದೂ ಪ್ರಯತ್ನಮಾಡದೆ, ಮೈತ್ರಿಯಿಂದ ವಿಚಾರಮಾಡಿ ಒಬ್ಬರ ಧರ್ಮಸ್ವರೂಪವನ್ನು ಮತ್ತೊಬ್ಬರು ತಿಳಿದುಕೊಳ್ಳುವದರ ಮೂಲಕ ಬೇರೆಬೇರೆ ಧರ್ಮಪಂಥಗಳಿಗೆ ಸೇರಿದ ಜನರಲ್ಲಿ ಮಾನವಭ್ರಾತೃತ್ವದ ಭಾವನೆಯು ಬಲಿತುಕೊಳ್ಳುವಂತೆ ಮಾಡುವದು ಸಮ್ಮೇಳನದ ಮುಖ್ಯೋದ್ದೇಶಗಳಲ್ಲಿ ಒಂದಾಗಿತ್ತು. ಈ ಉದ್ದೇಶವು ನೆರವೇರುವದಕ್ಕೆ ಉತ್ತೇಜಕವಾಗಿ ಮಾಡಿದ

ಉತ್ತಮಭಾಷಣಗಳಲ್ಲಿ ಶ್ರೀ ವಿವೇಕಾನಂದ ಸ್ವಾಮಿಗಳವರ ಭಾಷಣವು ಬಹುಮುಖ್ಯಸ್ಥಾನವನ್ನು ಹೊಂದಿತ್ತೆಂದು ಧಾರಾಳವಾಗಿ ಹೇಳಬಹುದು. ಪ್ರಪಂಚದಲ್ಲಿ ಕಾಣಬರುವ ನಾನಾತ್ವವನ್ನೆಲ್ಲ ಕೂಡಿಸುವ ಏಕತ್ವವನ್ನು ಜನರ ಮನಸ್ಸಿಗೆ ತಟ್ಟಿಸುವದೇ ಅಲ್ಲದೆ ಪೂರ್ವಪಶ್ಚಿಮದೇಶಗಳ ಮತಗಳಲ್ಲಿರುವ ತಾರತಮ್ಯವನ್ನು ಮನಗಾಣಿಸುವ ಕಾರ್ಯದಲ್ಲಿಯೂ ಸ್ವಾಮಿಗಳ ಭಾಷಣದಿಂದ ಸಮ್ಮೇಳನಕ್ಕೆ ತುಂಬ ಸಹಾಯವಾಯಿತು. ಅವರು "ಅಮೆರಿಕದ ಅಕ್ಕತಂಗಿಯರಿರ, ಅಣ್ಣತಮ್ಮಂದಿರುಗಳಿರ," ಎಂದು ಪ್ರಾರಂಭ ಮಾಡಿದ ಪ್ರೇಮದ ಮಾತುಗಳೇ ಸಭಿಕರ ಕಿವಿಗೆ ಒಂದು ಹೊಸ ಯಕ್ಷಿಣಿಯ ಮಂತ್ರದಂತೆ ಆದವು; ನೂರುಗಟ್ಟಲೆಯಾಗಿ ಜನರು ಎದ್ದೆದ್ದು ಜಯಘೋಷವನ್ನು ಮಾಡಹತ್ತಿದರು. ಅವರು ಮಾಡಿದ ಭಾಷಣಗಳಲ್ಲಿದ್ದ ಸಹಾನುಭೂತಿಯೂ ಸಮನ್ವಯವೂ ಹೊಸ ವಿಚಾರಗಳ ಸುರಿಮಳೆಯೂ ಅವರನ್ನೆಲ್ಲ ಬೆಪ್ಪುಗೊಳಿಸಿಬಿಟ್ಟವು.

ಸ್ವಾಮಿಗಳವರ ಭಾಷಣದಲ್ಲಿ ಮುಖ್ಯವಾಗಿ ಹಿಂದೂಮತವಿಚಾರವೇ ಇದ್ದರೂ ಅವರು ಆ ಮತದ ಯಾವದೊಂದು ಒಳಪಂಗಡದವರ ಆಚಾರವಿಚಾರಗಳನ್ನೂ ಕುರಿತು ಮಾತಾಡಲಿಲ್ಲ. ಉಪನಿಷತ್ತುಗಳಲ್ಲಿ ಒತ್ತಿ ಹೇಳಿರುವ ಆತ್ಮೈಕತ್ವವೊಂದನ್ನೇ ಅವರು ಸಭಿಕರ ಮುಂದಿಟ್ಟರು. ಮನುಷ್ಯನು ಅನಾದಿಯಿಂದಲೂ ಪಾಪಿಷ್ಠನೆನ್ನುವದಕ್ಕೆ ಬದಲು ಅವನು ಸ್ವರೂಪದಿಂದ ಪರಮಾತ್ಮನೇ ಆಗಿರುವನೆಂಬ ಈ ಹೊಸ ಉಪದೇಶವು ಕಿವಿಗೆ ಬಿದ್ದ ಕೂಡಲೆ ಪಾಶ್ಚಾತ್ಯಸಭಿಕರಿಗೆ ಕಣ್ಪರೆಯು ಕಳಚಿಬಿದ್ದಂತೆ ಆಯಿತು. ಎಲ್ಲರ ಆತ್ಮನೂ ಒಬ್ಬನೇ, ಪರಮೇಶ್ವರನು ಪ್ರಕೃತಿಯನ್ನು ದಾಟಿರುವನು, ಅದನ್ನು ತನ್ನ ವಶದಲ್ಲಿಟ್ಟುಕೊಂಡಿರುವನು, ಆತನು ಸರ್ವವ್ಯಾಪಕನು, ನಿತ್ಯಶುದ್ಧಬುದ್ಧಮುಕ್ತಸ್ವಭಾವನು, ಎಲ್ಲರಿಗೂ ಮುಕ್ತಿಯುಂಟು, ಎಲ್ಲರೂ ಅಮೃತಪುತ್ರರು, ಜ್ಞಾನವೊಂದರಿಂದಲೇ ಈ ಮುಕ್ತಿಯು ವಶವಾಗುವದು–ಎಂಬ ಪರಮಾರ್ಥವನ್ನು ಅವರು ಮತ್ತೊಬ್ಬರ ಮತವನ್ನು ಖಂಡಿಸದೆ, ಯಾರ ಮನಸ್ಸನ್ನೂ ನೋಯಿಸದೆ, ಯಾವ ತರ್ಕದ ವಾದವನ್ನೂ ಹೂಡದೆ, ಅನುಭವಕ್ಕೆ ಹೊಂದುವಂತೆ ಹೃದಯಂಗಮವಾದ ಭಾಷೆಯಲ್ಲಿಟ್ಟು ಎಲ್ಲರ ಚಿತ್ತವನ್ನೂ ಒಲಿಸಿಕೊಂಡರು. ಈ ವಾದವನ್ನು ಮನಗಂಡವರಿಗೆ ಹೊರತೋರುವ ಆತ್ಮಶಕ್ತಿ, ನಾನಾತ್ವದ ಮೂಲಕ ಸಾಧನವನ್ನು ಮಾಡಿ ವಿಚಾರದಿಂದ ಆತ್ಮೈಕ್ಯವನ್ನು ಪಡೆಯುವ ರೀತಿ, ಸಾಧನದಲ್ಲಿರುವ ಆನಂದ–ಈ ಉಪದೇಶಗಳೆಲ್ಲವೂ ಮನಸ್ಸಿನಲ್ಲಿ ಹೊಕ್ಕ ಹಾಗೆ ಸಭಿಕರ ಮೇಲೆ ಹೊಸ ಹೊಸ ಪರಿಣಾಮಗಳನ್ನುಂಟುಮಾಡಿದವು. ಮನುಷ್ಯನು ಅನೇಕ ಜನ್ಮಗಳಲ್ಲಿ ತಾನೇ ಪ್ರಯತ್ನಮಾಡಿ ತನ್ನ ಸ್ವರೂಪವಾಗಿಯೇ ಇರುವ ನಿತ್ಯಾನಂದವನ್ನು ಕಂಡು ಕೊಳ್ಳುವನೆಂಬ ಉಕ್ತಿಯುಕ್ತವಾದ ಅಭಿಪ್ರಾಯವು ಅವರ ಮನಸ್ಸಿಗೆ ನಾಟಿತು; ಮತ್ತೊಬ್ಬ ರಿಂದ ತನ್ನ ರಕ್ಷಣೆಯಾಗಬೇಕು. ಪಾಪಿಗಳಿಗೆ ನಿತ್ಯನರಕವಾಗುವದು, ಪುಣ್ಯವಂತರಿಗೆ ನಿತ್ಯಸ್ವರ್ಗವಾಗುವದು–ಎಂಬ ಯುಕ್ತಿ

ವಿರುದ್ಧವಾದ ಅಭಿಪ್ರಾಯಗಳು ಅವರಿಗೆಲ್ಲ ಜಳ್ಳಾಗಿ ಕಂಡವು.

ಸ್ವಾಮಿಗಳು ಈ ಸಂದರ್ಭದಲ್ಲಿ ಮತಸಹಾನುಭೂತಿಯನ್ನು ತೋರಿಸಿದ್ದು, ಮತಗಳ ಸಾಮರಸ್ಯವನ್ನು ತಿಳಿಸಿದ್ದು, ಸರ್ವರಿಗೂ ಸಮಾನವಾಗಿರುವ ಪರಮಾತ್ಮ ಸ್ವರೂಪವನ್ನು ಮುಂದೆ ಹಿಡಿದದ್ದು-ಈ ಮೂರು ಕೆಲಸಗಳನ್ನು ಮಾಡಿದ್ದಲ್ಲದೆ ಭರತಖಂಡದ ಸನಾತನ ಧರ್ಮಕ್ಕೆ ಒಂದು ಅಮೋಘವಾದ ಉಪಕಾರವನ್ನು ಮಾಡಿದರು. ಈ ಮತಕ್ಕೆ ಸೇರಿದ ಒಳಪಂಗಡಗಳನ್ನೆಲ್ಲ ಸಮಾನವಾಗಿ ಎಣಿಸಿ, ಅವೆಲ್ಲವೂ ಮಾನವಜೀವನ ಅಧಿಕಾರಕ್ಕೆ ತಕ್ಕಂತೆ ಬೇರೆಬೇರೆ ಇಷ್ಟಸಾಧನವನ್ನು ಕಲ್ಪಿಸಿರುವ ಒಟ್ಟು ಮತದ ಶಾಖೆಗಳೆಂದು ಭಾವಿಸಿದ್ದಲ್ಲದೆ, ಹಿಂದೂ ಧರ್ಮವೆಂಬುದು ಪ್ರಪಂಚವ್ಯಾಪಕಧರ್ಮವೆಂಬುದನ್ನೂ ತೋರಿಸಿಕೊಟ್ಟರು; ಪಾಶ್ಚಾತ್ಯನಾಗರಿಕತೆಯ ಸಂಪರ್ಕದಿಂದ ಆ ಕಾಲಕ್ಕೆ ಮತವಿಚಾರಗಳಲ್ಲಿ ಉದಾಸೀನರಾಗುವದಕ್ಕೆ ಮೊದಲುಮಾಡಿದ್ದ ಹಿಂದುಗಳು ತಮ್ಮ ಧರ್ಮದ ಉತ್ತಮ ಸ್ಥಾನವನ್ನು ಕಂಡುಕೊಂಡರು. ಧರ್ಮಗ್ಲಾನಿಯಾಗಿದ್ದ ಕಾಲಕ್ಕೆ ಅದನ್ನುದ್ಧರಿಸುವೆನೆಂದು ಶ್ರೀಕೃಷ್ಣನು ಹೇಳಿರುವ ಮಾತು ಹೀಗೆ ಒಂದು ವಿಲಕ್ಷಣರೀತಿಯಿಂದ ಸಿದ್ಧವಾಗಿ ಅಂದಿನಿಂದ ನಮ್ಮ ದೇಶದಲ್ಲಿ ಧರ್ಮಬ್ರಹ್ಮ ಜಿಜ್ಞಾಸೆಗಳು ಮತ್ತೆ ಕಳೆಗೊಳ್ಳುವಂತಾಯಿತು.

ಸದ್ಯದಲ್ಲಿ ಇಂಡಿಯದೇಶವು ಬಗೆಬಗೆಯ ಕೋಟಲೆಗೊಳಗಾಗಿರುತ್ತದೆ. ನಮ್ಮ ತರುಣರು ಆರ್ಥಿಕ, ಸಾಮಾಜಿಕ, ರಾಜಕೀಯ-ವಿಚಾರಗಳ ಆಂದೋಳನದಲ್ಲಿ ಸಿಕ್ಕಿ ಅತ್ತಿತ್ತ ಉಯ್ಯಾಲೆಯಾಡುತ್ತಿದ್ದಾರೆ; ಎಷ್ಟೋ ಜನರಿಗೆ ಧರ್ಮವಿಚಾರವೂ ತತ್ತ್ವವಿಚಾರವೂ ಮನಸ್ಸಿನಲ್ಲಿ ಹೊಳೆಯುವ ಹಾಗೇ ಇಲ್ಲವೆಂಬುದು ಹಾಗಿರಲಿ, ಬಹುಜನರಿಗೆ ಈ ವಿಚಾರಗಳು ಮಾನವನ ಏಳಿಗೆಗೆ ಅಡ್ಡಬರುವ ಎಡರುಗಳೆಂದೂ ತೋರಹತ್ತಿದೆ. ಇಂಥ ಸಮಯದಲ್ಲಿ ಸ್ವಾಮಿಗಳವರ ಭಾಷಣವನ್ನು ನಮ್ಮ ಯುವಕರಿಗೆ ಕಾಣಿಕೆಯಾಗಿ ಅರ್ಪಿಸುವದು ಭಾರತ ಸಂಸ್ಕೃತಿಯಲ್ಲಿ ಪ್ರೇಮವುಳ್ಳವರೆಲ್ಲರ ಅವಶ್ಯಕರ್ತವ್ಯವಾಗಿರುವ ದೆನ್ನುವದು ತಪ್ಪಾಗಲಾರದು. ಪಶ್ಚಿಮದೇಶಗಳು ತಮ್ಮ ಹೊಸ ನಾಗರಿಕತೆಯ ಬಲೆಯನ್ನು ಭೂಮಂಡಲದ ಮೇಲೆಲ್ಲ ಬೀಸಿದ್ದಲ್ಲದೆ ತಾವೂ ಅದರೊಳಗೆ ಬಿದ್ದು ಸಿಕ್ಕಿಕೊಂಡು ಒದ್ದಾಡುತ್ತಿರುವವು. ಲೋಕವೆಲ್ಲ ಈಗ್ಗೆ ಆರ್ಥಿಕವಿಪ್ಲವದಲ್ಲಿ ನರಳುತ್ತಿರುವದು, ಎಲ್ಲೆಲ್ಲಿಯೂ ಹೊಟ್ಟೆಗಿಲ್ಲದೆ ಬಟ್ಟೆಗಿಲ್ಲದೆ ಬಡವರು ನರಳುತ್ತಿರುವರು ; ಸಾಹುಕಾರರು ಹಣಕಾಸಿನ ಮುಗ್ಗಟ್ಟಿನಿಂದ ಕಣ್ಣುಕಣ್ಣುಬಿಡುತ್ತಿರುವರು; ರಾಜ್ಯಗಳು ಅಂತರರಾಷ್ಟ್ರೀಯವಾದ ತೊಡಕುಗಳಿಂದ ಪಾರಾಗುವ ಬಗೆಯನ್ನು ಕಾಣದೆ ಬೆಪ್ಪಾಗಿರುವವು. ಮತ್ತೊಂದು ಮಹಾಯುದ್ಧದ ಅಶುಭಸೂಚನೆಗಳು ಎಲ್ಲೆಲ್ಲಿಯೂ ತಲೆದೋರುತ್ತಿರುವವು. ಇಂಥ ಇಕ್ಕಟ್ಟಿನಲ್ಲಿ ಅಮೆರಿಕದ ಕೆಲವು ಜನರು ಅಖಿಲಭೂಮಂಡಲದ ಮತಸಮ್ಮೇಳನವೊಂದನ್ನು ಏರ್ಪಡಿಸಿ ಮತಗಳು ಸಹಕಾರಮಂಡಲ (FELLOWSHIP OF FAITHS) ವನ್ನು

ಏರ್ಪಡಿಸಬೇಕೆಂದು ಹವಣಿಸಿದ್ದಾರೆ. ಭೂಮಂಡಲದ ಬೇರೆಬೇರೆ ಮತಗಳ ಪ್ರತಿನಿಧಿಗಳಿಗಿಂತಲೂ ಮೇಲಾಗಿ ಭರತಖಂಡದ ಎಷ್ಟೋ ಜನ ಸಾಧುಗಳಿಗೂ ತತ್ತ್ವ ವಿಚಾರಕರಿಗೂ ಆಹ್ವಾನಪತ್ರಿಕೆಯು ಬಂದಿರುವದು. ಶ್ರೀವಿವೇಕಾನಂದ ಸ್ವಾಮಿಗಳು ತೋರಿಸಿಕೊಟ್ಟಿರುವ ಸನಾತನಧರ್ಮದ ಹಾದಿಯನ್ನು ಈಗಲಾದರೂ ನೆನಪಿಗೆ ತಂದುಕೊಳ್ಳುವದು ನಮಗೆ ಕ್ಷೇಮಕರವಾಗದೆ ? ಈ ಭಾಷಣಮಾಲೆಯನ್ನು ಭರತಖಂಡದ, ಅಥವಾ ಭೂಲೋಕದ, ಎಲ್ಲಾ ಭಾಷೆಗಳಿಗೂ ಪರಿವರ್ತನೆಮಾಡಿ ತರುಣಮಂಡಲಿಗೆಲ್ಲ ಉಚಿತವಾಗಿ ಹಂಚಿದರೆ ಇಡಿಯ ಭೂಗೋಳವನ್ನೇ ಯೋಗ್ಯರಾದ ಸತ್ಪುರುಷರಿಗೆ ದಾನಮಾಡಿದಷ್ಟು ಅಥವಾ ಅದಕ್ಕೂ ಹೆಚ್ಚಿನ ಪುಣ್ಯವು ದೊರಕುವದೆಂದು ನಾನು ನಿಶ್ಚಯವಾಗಿ ನಂಬಿರುವೆನು.

ಸ್ವಾಮಿಗಳವರು ಅಮೆರಿಕದಲ್ಲಿ ಸಮ್ಮೇಳನದ ವಿಜ್ಞಾನಶಾಸ್ತ್ರೀಯಶಾಖೆಯಲ್ಲಿಯೇ ಬಹಳವಾಗಿ ಉಪನ್ಯಾಸಗಳನ್ನು ಮಾಡಿದರು. ಅವುಗಳಲ್ಲಿ ಮುಖ್ಯವಾದ ಐದು ಉಪನ್ಯಾಸಗಳನ್ನೇ ಅಲ್ಲದೆ ಬ್ರೂಕ್ಲಿನ್ ಮತ್ತು ಬೋಸ್ಟನ್–ಎಂಬ ಪಟ್ಟಣಗಳಲ್ಲಿ ಮಾಡಿದ ಮತ್ತೆರಡು ಭಾಷಣಗಳನ್ನೂ ಈ ಗ್ರಂಥಕ್ಕೆ ಸೇರಿಸಿರುತ್ತೇನೆ. ವೇದಾಂತವನ್ನು ಸರಿಯಾಗಿ ಅಭ್ಯಾಸಮಾಡಿ ಅದರ ತತ್ತ್ವಗಳನ್ನು ಮನಗಂಡರೆ ನಮ್ಮ ಕಾಲದಲ್ಲಿ ವಿಚಾರಕರ ಮನಸ್ಸನ್ನು ತಳಮಳಗೊಳಿಸುತ್ತಿರುವ ಎಷ್ಟೋ ಸಮಸ್ಯೆಗಳಿಗೆ ತೃಪ್ತಿಕರವಾದ ಉತ್ತರವನ್ನು ಕಂಡುಕೊಳ್ಳಬಹುದೆಂಬ ಭಾವನೆಯು ಈ ಪುಟ್ಟ ಗ್ರಂಥವನ್ನೋದುವ ಭಾವುಕರ ಮನಸ್ಸಿನಲ್ಲಿ ಮೊಳೆಯುವದೆಂದು ಧಾರಾಳವಾಗಿ ಹೇಳಬಹುದಾಗಿದೆ. ಸ್ವಾಮಿಗಳವರ ಪ್ರಸಾದಿಕ ವಾಣಿಯನ್ನು ನನ್ನ ಅಲ್ಪಮತಿಯಿಂದ ಕನ್ನಡಿಸುವದರಲ್ಲಿ ಎಲ್ಲಾ ಭಾವಗಳೂ ಮೂಲದಲ್ಲಿರುವಂತೆ ಮೂಡಿಲ್ಲವೆಂಬುದನ್ನು ನಾನು ಚೆನ್ನಾಗಿ ಬಲ್ಲೆನು. ಪರಿವರ್ತನೆಗೆ ಸಹಜವಾಗಿರುವ ಈ ದೋಷವನ್ನು ಕ್ಷಮಿಸಿ ವಾಚಕರು ನನ್ನ ಅಳಿಲುಸೇವೆಯನ್ನು ಕೈಕೊಳ್ಳಬೇಕೆಂದು ವಿನಯದಿಂದ ಬೇಡುವೆನು.

ಶ್ರೀಮುಖ,

ಆಷಾಢ ಬ॥ 13, ಶಕೆ 1855

20–7–1933

ಅನುವಾದಕ

# ಹಿನ್ನೆಲೆ

ಶ್ರೀ ಸ್ವಾಮಿ ವಿವೇಕಾನಂದರು ಅಸಾಧಾರಣ ಪುರುಷಶ್ರೇಷ್ಠರು. ಅಸಾಮಾನ್ಯ ಬುದ್ಧಿಮತ್ತೆ, ಅದಮ್ಯ ಉತ್ಸಾಹದ ಬುಗ್ಗೆಯಾಗಿದ್ದವರು. ಯಾವದನ್ನೂ, ಒರೆಹಚ್ಚಿನೋಡದೆ ಯಾವ ವಿಷಯವಾಗಲೀ ತೀವ್ರ ಪರಿಶೀಲನೆಯಿಲ್ಲದೆ ಒಪ್ಪದವರು, ಕುರುಡು ಕಟ್ಟುಪಾಡುಗಳಿಗೆ ಸಿಕ್ಕುವವರಲ್ಲ. ಇಂತಹ ಗಂಗಾಪ್ರವಾಹದಂತಿದ್ದ ವ್ಯಕ್ತಿತ್ವದ ಪ್ರೀತಿಯ ಶಿಷ್ಯನನ್ನು ಗುರು ಶ್ರೀ ರಾಮಕೃಷ್ಣರು ಪಳಗಿಸಿ ಆ ಜೀವನಕ್ಕೊಂದು ಚಿನ್ನದ ಮೆರುಗನ್ನು ನೀಡಿದರು, ಆತನ ಜನ್ಮ ಕೇವಲ ತನ್ನ ಉದ್ಧಾರಕ್ಕಲ್ಲ, ಇಡೀ ಮಾನವ ಕುಲದ ಸೇವೆಗೆ ಎಂಬುದನ್ನು ಮನಗಾಣಿಸಿದ್ದರು; ಜೀವನದ ಮರಳುಗಾಡಿನ ಪಥದಲ್ಲಿ ಬರುವ ಮಾರ್ಗವರಿಯದ ಅಸಂಖ್ಯ ದಾರಿಹೋಕರಿಗೆ ನೆರಳಿನಾಶ್ರಯವನ್ನು ನೀಡುವ ಬೃಹತ್ ಆಲದ ಮರವಾಗಿ, ಸಿಹಿನೀರಿನ ಒರತೆಯಾಗಿ, ಈ ನಿಸ್ಸೀಮ ಭಕ್ತ ದೀನದರಿದ್ರರ ಬಂಧು, ಆಚರಣಯೋಗ್ಯ ವೇದಾಂತ ಬೋಧಕನಾಗಿರಬೇಕೆಂಬುದು ಗುರುವಿನ ಇಚ್ಛೆಯಾಗಿತ್ತು.

ಶ್ರೀ ಪರಮಹಂಸರನಂತರ ಸಂನ್ಯಾಸ ಸ್ವೀಕರಿಸಿ ಪರಿವ್ರಾಜಕನಾಗಿ ದೇಶ ಸುತ್ತಿದ ವಿವೇಕಾನಂದರು ಜನರಲ್ಲಿ ದೇಶಭಕ್ತಿಯ ಅರಿವನ್ನು, ಚೈತನ್ಯವನ್ನು ತುಂಬಿದರು. ತಮ್ಮ ಸಂಚಾರದಲ್ಲಿ ಕಾಥಿಯಾವಾಡದಲ್ಲಿದ್ದಾಗ (1891 ರ ಅಂತ್ಯದಲ್ಲಿ), ಚಿಕಾಗೋನಲ್ಲಿ ನಡೆಯಲಿರುವ ವಿಶ್ವಧರ್ಮಸಮ್ಮೇಳನದ ವಿಷಯ ತಿಳಿಯಿತು. ಕೆಲದಿನಗಳಲ್ಲೇ (ಜನವರಿ 1892) ತಾನೂ ಅದರಲ್ಲಿ ಭಾಗವಹಿಸುವ, ಹಣದ ಅನುಕೂಲವಾದರೆ ಹೋಗುವ ಆಲೋಚನೆಯೂ ಬಂತು. ಇದಕ್ಕೊಂದು ನಿಖರರೂಪ ಬಂದದ್ದು ದಕ್ಷಿಣದ ಕನ್ಯಾಕುಮಾರಿಯ ಸಮುದ್ರದಲ್ಲಿ, ತೀರಕ್ಕೆ ಸಮೀಪವಿದ್ದ ಕಲ್ಲು ಬಂಡೆಯ (ವಿವೇಕಾನಂದ ರಾಕ್) ಮೇಲೆ ಮೂರುದಿನ ಕುಳಿತು ಧ್ಯಾನಸ್ಥರಾದಾಗ. ಇದ್ದ ಅಲ್ಪ ಸ್ವಲ್ಪ ಅನುಮಾನವೂ, ಹೋಗುವದೋ ಹೇಗೋ ಎಂಬ ಹೊಯ್ದಾಟವೂ ಪರಿಹಾರವಾದದ್ದು, ಕನಸಿನಲ್ಲಿ ಶ್ರೀರಾಮಕೃಷ್ಣರು ನೀಡಿದ ಸಾಂಕೇತಿಕ ದೃಶ್ಯದಿಂದ; ಅನಂತರ ಶ್ರೀಶಾರದಾಮಾತೆಯವರ ಆಶೀರ್ವಾದ ಬಂದಾಗ ಉತ್ಸಾಹದಿಂದ, ಹೊರಡುವ ಸಂಕಲ್ಪವನ್ನು ಪ್ರಕಟಮಾಡಿದರು. ಮದ್ರಾಸಿನ ಭಕ್ತರು ಇದಕ್ಕಾಗಿ 4000 ರೂಪಾಯಿ ಸಂಗ್ರಹಿಸಿದರು, ಮೈಸೂರು ಮತ್ತು ರಾಮನಾಡ್ ಮಹಾರಾಜರುಗಳು ಅಲ್ಪ (ಅಂದಿನ ಬ್ರಿಟಿಷ್ ಆಳ್ವಿಕೆಗೆ ಅಂಜಿ, ಅಲ್ಪವಾಗಿರಬಹುದು) ಸಹಾಯವನ್ನು ಮಾಡಿದರು.

ಇದೇ ಸಮಯಕ್ಕೆ ಅವರ ಅನುಪಮ ಭಕ್ತ ಖೇತ್ರಿ ಮಹಾರಾಜರು ಆಗ್ರಹಪೂರ್ವಕವಾಗಿ ಅವರನ್ನು ಕರೆಸಿಕೊಂಡು, ಅವರ ಪ್ರಯಾಣಕ್ಕೆ ಎಲ್ಲ ಸಿದ್ಧತೆಯನ್ನೂ ಮಾಡಿಸಿಕೊಟ್ಟರು. ಅಲ್ಲಿಯವರೆಗೆ ಸಚ್ಚಿದಾನಂದ ಎಂದಿದ್ದ

ಇವರ ಹೆಸರು ಸ್ವಾಮಿ ವಿವೇಕಾನಂದ ಎಂದು ಪರಿವರ್ತನೆಯಾದದ್ದು ಈ ಮಹಾರಾಜ ಭಕ್ತರಿಂದಲೇ.

ಸ್ವಾಮಿಗಳು 1893 ಮೇ ಅಂತ್ಯದ ವೇಳೆಗೆ ಹಡಗಿನಲ್ಲಿ ಹೊರಟು 30 ಜುಲೈ ಚಿಕಾಗೋ ತಲುಪಿದರು. ಅಲ್ಲಿಯೂ ಅವರು ಎದುರಿಸಿದ ಕಷ್ಟಕಾರ್ಪಣ್ಯ, ಅನುಭವಿಸಿದ ಬವಣೆ ಅಷ್ಟಿಷ್ಟಲ್ಲ. ತಮ್ಮ ಪರಿವ್ರಾಜಕ ದಿನಗಳಲ್ಲಿ ಹೇಗೋ ಹಾಗೆ ಈಗಲೂ ದೈವ ಸಹಾಯ ಪ್ರತಿ ಹಂತದಲ್ಲೂ ಸಿದ್ಧವಾಗೇ ಇತ್ತು, ಅವರ ಆಸರೆಗೆ. ದುಬಾರಿಯಾಗಿದ್ದ ಅಮೆರಿಕದಂತಹ ದೂರ ಪರದೇಶದಲ್ಲಿ ಹಣವಾಗಲೀ, ಹಿಂದೂ ಧರ್ಮ ಪ್ರತಿನಿಧಿಯೆಂಬ ಪರಿಚಯಪತ್ರವಾಗಲೀ ಅವರಲ್ಲಿಲ್ಲದೆ ಪರದಾಟವಾದಾಗ ಬೋಸ್ಟನ್‌ಗೆ ಹೋಗುವ ಹಾದಿಯಲ್ಲಿ ಪರಿಚಯವಾದ ಶ್ರೀಮಂತ ಮಹಿಳೆಯೊಬ್ಬರು ಹಾರ್ವರ್ಡ್ ವಿಶ್ವವಿದ್ಯಾಲಯದ ಗ್ರೀಕ್ ಪ್ರೊಫೆಸರ್ ಶ್ರೀ ಜೆ. ಹೆಚ್. ರೈಟ್‌ರಲ್ಲಿಗೆ ಕಳಿಸಿಕೊಟ್ಟರು. ಸ್ವಾಮಿಗಳ ಮಾತುಕತೆಯಿಂದ ಪ್ರಭಾವಿತರಾದ ಅವರು ಸಮ್ಮೇಳನ ಪ್ರತಿನಿಧಿಗಳನ್ನು ಬರಮಾಡಿಕೊಳ್ಳುವ ಡಾ. ಬ್ಯಾರೋಸ್‌ರವರಿಗೆ ಪರಿಚಯ ಪತ್ರವನ್ನೂ, ಚಿಕಾಗೋಗೆ ಟಿಕೆಟನ್ನೂ ತೆಗೆದುಕೊಟ್ಟರು. ಆದರೆ ಈ ವಿಳಾಸ ಹೇಗೋ ಮರೆತು, ದಾರಿಯಲ್ಲಿ ಸರಿಯಾದ ಮಾರ್ಗ ತೋರಿಸುವವರಿಲ್ಲದೆ ಚಿಕಾಗೋ ರಸ್ತೆಯುದ್ದಕ್ಕೂ ನಡೆದು ಸಾಕಾಗಿ ಬಸವಳಿದು ರೈಲು ನಿಲ್ದಾಣದಲ್ಲಿ ಖಾಲಿಯಾದ ಪೆಟ್ಟಿಗೆಯೊಂದರ ಆಶ್ರಯದಲ್ಲಿ ವಿಪರೀತ ಚಳಿಯ ರಾತ್ರಿಯನ್ನು ಕಳೆದರು. ಅದೇ ಅವರ ಪರಿವ್ರಾಜಕ ಜೀವನದ ಕೊನೆಯ ದಿನ.

ಮರುದಿನ ಆಹಾರ ಆಶ್ರಯಕ್ಕಾಗಿ ಹಲವು ಕಡೆ ಭಿಕ್ಷೆ ಬೇಡಿ ಮೂದಲಿಕೆಯನ್ನು ಮಾತ್ರ ಪಡೆದಾಗ, ಹತಾಶರಾಗಿ ದೈವಚಿತ್ತಕ್ಕೆ ತಲೆಬಾಗಿ ತಮ್ಮನ್ನು ಒಪ್ಪಿಸಿಕೊಂಡು ರಸ್ತೆಯ ಪಕ್ಕದಲ್ಲಿ ಕುಳಿತವರಿಗೆ, ಪವಾಡಸದೃಶವಾದ ಸಹಾಯ ಒದಗಿ ಬಂತು. ಅವರು ಕುಳಿತ ಎದುರಿನ ಶ್ರೀಮಂತ ಭವನದಿಂದ ಇವರನ್ನು ನೋಡಿದ ರಾಜಗಾಂಭೀರ್ಯದ ಶ್ರೀಮಂತ ಮಹಿಳೆ ಅವರನ್ನು ಮನೆಗೆ ಕರೆತಂದು ಬೆಳಗಿನ ಉಪಹಾರ ನೀಡಿ, ತಾನೇ ಸಮ್ಮೇಳನ ಸ್ಥಳಕ್ಕೆ ಕರೆತಂದರು. ಆಕೆಯೇ ಶ್ರೀಮತಿ ಜಾರ್ಜ್. ಡಬ್ಲು ಹೇಲ್‌ರವರು. ಅಮೆರಿಕದಲ್ಲಿರುವವರೆಗೂ ಈಕೆಯ ಮನೆಯೇ ಸ್ವಾಮಿಗಳ ಕೇಂದ್ರವಾಗಿತ್ತು. ಇವರ ಸಂಸಾರದೊಡನೆ ಅವರ ಸ್ನೇಹ ಜೀವನಪೂರ್ತವಿತ್ತು.

ವಿಶ್ವಧರ್ಮ ಸಮ್ಮೇಳನ ನಡೆದದ್ದು 1893 ಸೆಪ್ಟಂಬರ್ 11 ರಿಂದ 27 ರವರೆಗೆ, ಚಿಕಾಗೋ ಪಟ್ಟಣದ ಪ್ರಸಿದ್ಧ ಕೊಲಂಬಸ್ ಹಾಲ್‌ನಲ್ಲಿ. ಪಾಶ್ಚಿಮಾತ್ಯರಲ್ಲನೇಕರು ನಿಜವಾದ ಧರ್ಮವೆಂದರೆ ಕ್ರೈಸ್ತಮತವೇ, ಸತ್ಯ ನೀತಿ ಪಾವಿತ್ರ್ಯತೆಗಳು ಕ್ರಿಸ್ತಧರ್ಮದ ಸರ್ವಸ್ವಾಮ್ಯಕ್ಕೊಳಗಾದ ಮೀಸಲು ಎಂದು ಚರ್ಚ್‌ಗಳು ಅಂಧಾಭಿಮಾನದಿಂದ ನಂಬಿದ್ದ ಕಾಲವದು. ಅಂತರರಾಷ್ಟ್ರೀಯ ಮಟ್ಟದಲ್ಲಿ ಬಂದ ಆಗಂತುಕ ಪ್ರತಿನಿಧಿಗಳ

ಮೂಲಕ ಕ್ರೈಸ್ತಧರ್ಮದ ಹಿರಿಮೆಯನ್ನು ಎಲ್ಲೆಡೆಗೂ ನವಿರಾಗಿ ಹರಡುವ ಅಂತರಂಗವಿದ್ದಿರಲೂ ಬಹುದು, ಈ ಸಮ್ಮೇಳನದ ಹಿನ್ನೆಲೆಯಲ್ಲಿ–ಅಂತೂ ಪ್ರಪಂಚದ ನಾನಾ ಧರ್ಮಗಳ ಪ್ರತಿನಿಧಿಗಳು ಅಲ್ಲಿ ಸೇರಿದ್ದರು.

ಸ್ವಾಮಿಗಳ ಮೊದಲ ಚಿಕ್ಕ ಭಾಷಣದ ಪ್ರಾರಂಭ 'ಅಮೆರಿಕದ ಸಹೋದರ ಸಹೋದರಿಯರೇ' ಎಂಬ ಪ್ರೀತಿಯ ಸಂಬೋಧನೆಯಿಂದ. ಈ ಪದಗಳೇ ಒಂದು ಪವಾಡವನ್ನೇ ಸೃಷ್ಟಿಸಿದವು. ಇಡೀ ಹಾಲ್ ಹಾಗೂ ಇದ್ದ ಎಲ್ಲರಲ್ಲೂ ಕಾಣದಂತಹ, ಹೃದಯವನ್ನೇ ಮುಟ್ಟುವ ವಿದ್ಯುತ್ ಸಂಚಾರವಾಯಿತು, ಸುಮಾರು 6000 ಸಭಿಕರೆಲ್ಲರ ಮೇಲೆ ಸಂಮೋಹನವಾದಂತಾಯಿತು. ಎಲ್ಲರೂ ಎದ್ದುನಿಂತು, ಉತ್ಸಾಹದಿಂದ ಹಲವಾರು ನಿಮಿಷಗಳ ಕಾಲ ಪ್ರಚಂಡ ಕರತಾಡನದೊಂದಿಗೆ, ಉಕ್ಕಿಹರಿಯುವ ಸಂತೋಷದಿಂದ ಈ ಹೃದಯಂಗಮ ಮಾತುಗಳನ್ನು, ಅದನ್ನು ಆಡಿದ ವಿವೇಕಾನಂದರನ್ನು ಸ್ವೀಕರಿಸಿದರು.

ಪ್ರಪಂಚದ ಅತ್ಯಂತ ಪ್ರಾಚೀನ ಸಂನ್ಯಾಸ ಮಂಡಲಿಯ, ಅತ್ಯಂತ ಪುರಾತನ ಧರ್ಮ ಹಾಗೂ ಅದರ ಎಲ್ಲ ಮತ ಪಂಗಡಗಳ, ಲಕ್ಷೋಪಲಕ್ಷ ಹಿಂದೂಜನಾಂಗದ ಹೆಸರಿನಲ್ಲಿ ಅಮೆರಿಕದ ಜನತೆಯನ್ನು ಅಭಿನಂದಿಸಿದರು. ಹೀಗೆ ಪ್ರಾರಂಭವಾದ ಈ ಭಾಷಣ ನವ್ಯ ಹಿಂದೂಮತ, ಅದರ ವಿವಿಧ ಭಾಗಗಳಿಗೆ ಅನ್ವಯವಾಗುವ ಎಲ್ಲ ಸಾಮಾನ್ಯ ತತ್ತ್ವಗಳ ನಿರೂಪಣೆಯಂತಾಯಿತು. ಮರುದಿನದ ಪತ್ರಿಕೆಗಳಲ್ಲೆಲ್ಲಾ ಅವರ ಪ್ರಶಂಸೆಯೇ, ದೈವದತ್ತ ಮಾತುಗಾರನೆಂದು ಪ್ರೀತಿಗೌರವದಿಂದ ಕರೆದವು.

ಸ್ವಾಮಿಗಳು ಜನರನ್ನು ಎಷ್ಟು ಆಕರ್ಷಿಸಿದ್ದರೆಂದರೆ, ಸಭಿಕರು ಬೇರೆಯವರ ಭಾಷಣಗಳಿಂದ ಬೇಸರ ತಲೆಚಿಟ್ಟುಹಿಡಿಯಿತೆಂಬ ರೀತಿ ಕಂಡರೆ, ಸ್ವಾಮಿ ವಿವೇಕಾನಂದರು ಭಾಷಣ ಮಾಡಲಿದ್ದಾರೆ ಎಂಬ ಘೋಷಣೆಯನ್ನು ಅಧ್ಯಕ್ಷರು ಮಾಡಿದೊಡನೆ, ಸಭೆ ಹತೋಟಿಗೆ ಬರುತ್ತಿತ್ತು. ಉತ್ಸುಕತೆಯಿಂದ ಉಪನ್ಯಾಸ ಕೇಳಲು ಸಿದ್ಧವಾಗುತ್ತಿತ್ತು. ಸ್ವಾಮಿಗಳನ್ನು ಮುತ್ತಿಕೊಂಡು ಕೈಕುಲುಕಿ ಅಭಿನಂದಿಸಲು ಪ್ರಮುಖ ಸ್ತ್ರೀ ಪುರುಷರು ಸಹ ನೂಕುನುಗ್ಗಲು ಮಾಡುತ್ತಿದ್ದರು. ಅವರನ್ನು ಮನೆಗೆ ಆಮಂತ್ರಿಸಲು ಪೈಪೋಟಿ ಇರುತ್ತಿತ್ತು. ಹೀಗೆ 1893 ಸೆಪ್ಟೆಂಬರ್ 11 ರಂದು ಸ್ವಾಮಿಗಳು ಅನಾಮಧೇಯ ಪರಿವ್ರಾಜಕನಿಂದ ಒಂದೇ ಕ್ಷಣದಲ್ಲಿ ಅಸಾಮಾನ್ಯ ನಾಯಕರಾದರು.

ಭಾರತದಿಂದ ಹೊರಡುವ ಮೊದಲು ಸಹೋದರ ಸಂನ್ಯಾಸಿ ಸ್ವಾಮಿ ತುರೀಯಾನಂದರಿಗೆ ಹೇಳಿದ ಮಾತು 'ಅಲ್ಲಿ (ಸಮ್ಮೇಳನದಲ್ಲಿ) ನಡೆಯುವದೆಲ್ಲಾ ಇದಕ್ಕಾಗಿ' ಎಂದು ಎದೆತಟ್ಟಿದ್ದರು. 'ಇದಕ್ಕಾಗಿಯೇ ಎಲ್ಲವೂ ಏರ್ಪಾಡಾಗಿದೆ' ಎಂಬುದು ನಿಶ್ಚಯವಾಗಿ ರೂಪುಗೊಂಡ ಸತ್ಯ !!

ಅಲ್ಲಿಂದ ಎರಡು ವರ್ಷಕಾಲ ಅಮೆರಿಕದ ಹಲವಾರು ಸ್ಥಳಗಳಲ್ಲಿ, ಪ್ರಸಿದ್ಧ ಸಂಘಸಂಸ್ಥೆಗಳಲ್ಲಿ, ಕಾತರದ ಭಕ್ತರ ಗುಂಪಿನಲ್ಲಿ ಅವರು ಭಾರತ ಮತ್ತು ವೇದಾಂತದ ಬಗ್ಗೆ ಬಿಡುವಿಲ್ಲದಂತೆ ಉಪನ್ಯಾಸಗಳನ್ನು ನೀಡಿದರು; ಅಲ್ಲಿಯ ಪ್ರತಿಭಾವಂತರೊಡನೆ–ಪ್ರೊ. ವಿಲಿಯಮ್ ಜೋನ್ಸ್, ರೈಟ್, ನಿಕೊಲಸ್ ಟೆಸ್ಲ– ವಿಚಾರ ವಿನಿಮಯ ಮಾಡಿದರು. ಶೀಘ್ರದಲ್ಲೇ ಅವರು ಬಹಳ ಜನಪ್ರಿಯರೂ, ಸುಪರಿಚಿತರೂ ಆದರಲ್ಲದೆ, ಅವರು ಬಿತ್ತರಿಸಿದ ವೇದಾಂತದ ಮಹೋನ್ನತ ತತ್ತ್ವಗಳು ಆ ದೇಶದ ಯೋಚನಾಲಹರಿಯ ಮೇಲೆ ಅತ್ಯಂತ ಪ್ರಭಾವ ಬೀರಿದುವು. ಈ ಕಾಲದಲ್ಲೇ ಮಾಡಿದ ಉಪನ್ಯಾಸಗಳು ಅವರ ಭಕ್ತಿಯೋಗ, ಕರ್ಮಯೋಗ, ರಾಜಯೋಗ ಪುಸ್ತಕಗಳ ಹೂರಣವಾಯಿತು. ಈ ಪುಸ್ತಕಗಳು ಹತ್ತು ಹಲವು ಆವೃತಿಗಳಾಗಿ ಪ್ರಚಾರವಾದವು. ಸರ್ವಧರ್ಮ ಸಮ್ಮೇಳನದಲ್ಲಿ ಮಾಡಿದ ಉಪನ್ಯಾಸಗಳಲ್ಲದೆ, ಬೇರೆಯಂತೆ ಮಾಡಿದ ಕೆಲವು 'ವೇದಾಂತೋಪನ್ಯಾಸ' ಗಳೆಂದು ಅಧ್ಯಾತ್ಮ ಪ್ರಕಾಶ ಕಾರ್ಯಾಲಯದಿಂದ ಅಚ್ಚಾಗಿವೆ.

ಅಮೆರಿಕದಿದ 17 ಆಗಸ್ಟ್ 1895 ರಲ್ಲಿ ಹೊರಟು ಸೆಪ್ಟೆಂಬರ್ 10 ರಂದು ಲಂಡನ್‌ಗೆ ಬಂದರು. ನಾಲ್ಕು ತಿಂಗಳನಂತರ, 1896 ರಲ್ಲಿ ಅಮೆರಿಕದಲ್ಲಿ ಸ್ವಲ್ಪಕಾಲವಿದ್ದು ಪುನಃ ಲಂಡನ್‌ಗೆ ಬಂದರು, ಅಲ್ಲಿಯೂ ಅಷ್ಟೆ–ಅನೇಕ ಪ್ರಬುದ್ಧ ಸ್ತ್ರೀ ಪುರುಷರು ಅವರ ಉಪನ್ಯಾಸಗಳಿಗೆ ಮನಸೋತು ಅದರಿಂದ ಪ್ರಭಾವಿತರಾದರು; ಪ್ರೊ. ಮ್ಯಾಕ್ಸ್‌ಮುಲ್ಲರ್, ಪಾಲ್‌ಡ್ಯೂಸನ್ ಮುಂತಾದ ಬೌದ್ಧಿಕ ಮಹಾನ್‌ರೊಡನೆ ಮಾತುಕತೆಯಾಯಿತು. ಸ್ವಾಮೀಜಿಯವರಿಂದ ಸಂಗ್ರಹಿಸಿದ ವಿಷಯಗಳು ಮ್ಯಾಕ್ಸ್‌ಮುಲ್ಲರ್‌ರ 'ರಾಮಕೃಷ್ಣ : ಅವರ ಜೀವನ ಮತ್ತು ವಚನಗಳು' (Ramakrishna: his life and saying) ಪುಸ್ತಕಕ್ಕೆ ವಸ್ತುವಾಯಿತು.

ಪ್ರೊ ಡ್ಯೂಸನ್ ರೊಡನೆ ಮಾತಾಡುತ್ತಿರುವಾಗ ಅವರಲ್ಲಿಯ ಕಾವ್ಯ ಪುಸ್ತಕವೊಂದರಲ್ಲಿ ನಿರತರಾದ ಸ್ವಾಮಿಗಳಿಗೆ ಈ ಕಡೆಯ ಭಾಸವೇ ಇರಲಿಲ್ಲ. ಅನಂತರ ಅದನ್ನು ಗಮನಕ್ಕೆ ತಂದಾಗ, ಸ್ವಾಮಿಗಳು ಕ್ಷಮೆ ಕೇಳಿ, ಕಾರಣ ಹೇಳಿದರೂ ಅವರಿಗೆ ಸಮಾಧಾನವಿರಲಿಲ್ಲ. ಕೆಲವು ಸಮಯದನಂತರ ಸಂಭಾಷಣೆಯ ನಡುವೆ ಆ ಪುಸ್ತಕದ ಪದ್ಯಗಳನ್ನು ಅಲ್ಲಲ್ಲೇ ಹೇಳುತ್ತಾ ಹೋದಂತೆ ಪ್ರೊಫೆಸರಿಗೆ ಪರಮಾಶ್ಚರ್ಯವಾಯಿತು. ಇದು ಸ್ವಾಮಿಗಳ ಮನಕೇಂದ್ರೀಕರಣದ ಉದಾಹರಣೆ.

ಹೀಗೆ 1893 ರಿಂದ 1896 ರ ವರೆಗಿನ ಯಾತ್ರೆಯಲ್ಲಿ, ಅವರು ಅಮೆರಿಕ ಇಂಗ್ಲೆಂಡ್‌ಗಳಲ್ಲಿ ವೇದಾಂತದ ಭದ್ರ ಅಡಿಪಾಯವನ್ನು ಹಾಕಿದರು. ನ್ಯೂಯಾರ್ಕ್, ಲಂಡನ್‌ಗಳಲ್ಲಿ ವೇದಾಂತ ಕೇಂದ್ರಗಳನ್ನು ಸ್ಥಾಪಿಸಿ, ಅಲ್ಲಿಗೆ ತಮ್ಮ ಶಿಷ್ಯರೊಬ್ಬೊಬ್ಬರನ್ನು ವೇದಾಂತ ಪ್ರಸಾರಕ್ಕಾಗಿ ಕಳುಹಿಸಿದರು.

# 1. ಸ್ವಾಗತಕ್ಕೆ ಉತ್ತರ

## (1893ನೆಯ ಸೆಪ್ಟೆಂಬರ್ 11)

ಅಮೆರಿಕದ ಅಕ್ಕತಂಗಿಯರಿರ, ಅಣ್ಣತಮ್ಮಂದಿರುಗಳಿರ,

ನಮ್ಮಗಳಿಗೆ ನೀವು ಪರಮಾದರದಿಂದ ಕೊಟ್ಟಿರುವ ಹೃತ್ಪೂರ್ವಕವಾದ ಸ್ವಾಗತಕ್ಕೆ ಉತ್ತರವನ್ನು ಹೇಳುವದಕ್ಕೆ ನಿಂತಿರುವದೆನ್ನುವದು ನನ್ನ ಹೃದಯದಲ್ಲಿ ಅಷ್ಟಿಷ್ಟೆಂದು ಹೇಳಲಾಗದ ಆನಂದವನ್ನು ತುಂಬಿರುತ್ತದೆ. ಪ್ರಪಂಚದಲ್ಲೆಲ್ಲ ಅತ್ಯಂತಪ್ರಾಚೀನ-ವೆನಿಸಿರುವ ಸಂನ್ಯಾಸಿಪಂಥದವರ ಪರವಾಗಿ ನಿಮಗೆ ನನ್ನ ಕೃತಜ್ಞತೆಯನ್ನರ್ಪಿಸುತ್ತೇನೆ; ಧರ್ಮಗಳಿಗೆಲ್ಲ ತೌರು ಮನೆಯೆನಿಸಿರುವ ಧರ್ಮದ ಪರವಾಗಿ ನಿಮಗೆ ನನ್ನ ಕೃತಜ್ಞತೆಯನ್ನರ್ಪಿಸುತ್ತೇನೆ.

ಇದೇ ಭಾಷಣಪೀಠದಲ್ಲಿ ನಿಂತು ಈಗಾಗಲೇ ಕೆಲವರು ಮಹಾಶಯರು ಮಾತನಾಡಿರುತ್ತಾರೆ; ಅವರಿಗೂ ನನ್ನ ಅಭಿನಂದನೆಗಳು. ಪೂರ್ವದೇಶಗಳಿಂದ ಬಂದಿರುವ ಪ್ರತಿನಿಧಿಗಳ ವಿಷಯವಾಗಿ ಮಾತನಾಡಿದಾಗ ದೂರದೇಶಗಳಲ್ಲಿರುವ ಜನಾಂಗಗಳಿಂದ ಬಂದಿರುವ ಈ ಪ್ರತಿನಿಧಿಗಳು ಸಹಾನುಭೂತಿಯೆಂದರೇನೆಂಬ ಭಾವನೆಯನ್ನು ತಮ್ಮ ತಮ್ಮ ದೇಶಗಳಿಗೆ ಒಯ್ಯುವ ಗೌರವಕ್ಕೆ ಭಾಗಿಗಳಾಗಿರುವರೆಂದು ಆ ಉಪನ್ಯಾಸಕರು ಅಂದಿರುತ್ತಾರೆ. ಮತಸಹಾನುಭೂತಿಯ ಜೊತೆಗೆ ಸಾರ್ವತ್ರಿಕಾಂಗೀಕಾರಮಾಡುವದನ್ನು ಕೂಡ ಪ್ರಪಂಚಕ್ಕೆ ಉಪದೇಶಿಸಿದ ಮತಕ್ಕೆ ಸೇರಿರುವನು ನಾನು. ಎಲ್ಲಾ ಮತಗಳಲ್ಲಿಯೂ ಸಹಾನುಭೂತಿಯಿರಬೇಕೆಂಬುದಿಷ್ಟನ್ನೇ ನಾವು ಇಟ್ಟುಕೊಂಡಿರುವದಿಲ್ಲ, ಎಲ್ಲಾ ಮತಗಳೂ ಸತ್ಯವೆಂದೇ ನಾವು ಅಂಗೀಕರಿಸಿರುತ್ತೇವೆ. ಪ್ರಪಂಚದ ಯಾವ ಮತದವರೇ ಆಗಿರಲಿ, ಪ್ರಪಂಚದ ಯಾವ ಜನಾಂಗದವರೇ ಆಗಿರಲಿ, ಧರ್ಮಕ್ಕಾಗಿ ಹಿಂಸೆಗೆ ಒಳಪಟ್ಟಿದ್ದು ನಮ್ಮಲ್ಲಿಗೆ ಬಂದ ಮಾತ್ರದಿಂದ ಅವರಿಗೆಲ್ಲ ಆಸರೆಯನ್ನಿತ್ತಿರುವ ಜನಾಂಗಕ್ಕೆ ಸೇರಿರುವನು ನಾನು. ಇಸ್ರಎಲ್ ಮತದವರ ಪವಿತ್ರದೇವಾಲಯವು ರೋಮನರ ಬಲಾತ್ಕಾರದಿಂದ ನುಗ್ಗುನುಚ್ಚಾದ ವರ್ಷವೇ, ಆ ಮತದವರು ನಮ್ಮಲ್ಲಿಗೆ ಶರಣುಬಂದರು; ಅವರನ್ನು ನಮ್ಮ ಹೊಟ್ಟೆಯಲ್ಲಿ ಹಾಕಿ ಕೊಂಡಿರುತ್ತೇವೆ. ಆ ಅತ್ಯಂತಶುದ್ಧರಾದ ಇಸ್ರಎಲ್ ವಂಶೀಯರು ನಮ್ಮಲ್ಲಿರುತ್ತಾರೆಂದು ನಿಮಗೆ ಹೇಳಲು ನನ್ನ ಅಭಿಮಾನವು ಉಕ್ಕುತ್ತಿದೆ. ಸೋರೋ ಆಸ್ಟರನ ಮತದವರಾದ ಮಹಾಜನಾಂಗದವರಲ್ಲಿ ಕಳೆದುಳಿದವರಿಗೆ ಆಸರೆಯನ್ನು ಕೊಟ್ಟು ಅವರನ್ನು ಇನ್ನೂ ಸಾಕಿಕೊಂಡೇ ಇರುವ ಮತಕ್ಕೆ ಸೇರಿದವನು ನಾನು.

ಸಹೋದರರೆ, ನಾನು ತೀರ ಚಿಕ್ಕಂದಿನಿಂದಲೂ ಹೇಳಿಕೊಂಡು ಬಂದಿರುವ ಒಂದಾನೊಂದು ಸ್ತೋತ್ರದ ಭಾಗವನ್ನು ಇಲ್ಲಿ ಉದಾಹರಿಸುವೆನು; ಇದನ್ನು ಪ್ರತಿದಿನವೂ ಕೋಟಿಗಟ್ಟಲೆಯ ಜನರು ಹೇಳುತ್ತಿರುವರು:

"ಬೇರೆಬೇರೆ ಕಡೆಯಲ್ಲಿ ಹುಟ್ಟಿರುವ ಬೇರೆಬೇರೆ ಹೊಳೆಗಳೆಲ್ಲವೂ ತಮ್ಮ ನೀರನ್ನು ಸಮುದ್ರದಲ್ಲಿ ಬೆರೆಸಿಬಿಡುವಂತೆ, ಎಲೈ ಈಶ್ವರನೆ, ತಮ್ಮ ತಮ್ಮ ಮನೋವಾಸನೆಗಳಿಗನುಗುಣವಾಗಿ ಜನರು ನಡೆಯುವ ಬೇರೆಬೇರೆ ಹಾದಿಗಳು, ನೆಟ್ಟಗಿರಲಿ ಸೊಟ್ಟಗಿರಲಿ, ಎಷ್ಟೇ ಬೇರೆಬೇರೆಯಾಗಿ ತೋರಲಿ, ಅವೆಲ್ಲವೂ ನಿನ್ನನ್ನೇ ಸೇರುವವು." *

ಈ ಸಮ್ಮೇಳನವು, ಪ್ರಪಂಚದಲ್ಲಿ ಇದುವರೆಗೆ ನಡೆದಿರುವ ಘನತರವಾದ ಮಹಾಸಭೆಗಳಲ್ಲಿ ಒಂದಾಗಿರುವದು; ಗೀತೆಯಲ್ಲಿ ಉಪದಿಷ್ಟವಾಗಿರುವ "ಯಾವ ಯಾವನು ಯಾವ ಯಾವ ರೂಪದಿಂದ ನನ್ನ ಬಳಿಗೆ ಬರುವನೋ, ಅವನನ್ನು ನಾನು ಹಾಗೆ ಹಾಗೆಯೇ ಅನುಗ್ರಹಿಸುವೆನು, ಮನುಷ್ಯರು ಬೇರೆ ಬೇರೆ ದಾರಿಗಳಿಂದ ನನ್ನನ್ನು ಸೇರುವದಕ್ಕೆ ಹೆಣಗಾಡುತ್ತಿರುವರು, ಆ ಹಾದಿಗಳೆಲ್ಲ ಕೊನೆಗೆ ನನ್ನನ್ನೇ ಸೇರುವವು" (4–11) ಎಂಬ ಅದ್ಭುತವಾದ ತತ್ತ್ವವನ್ನು ಸ್ಥಾಪನೆಗೊಳಿಸುವದಕ್ಕೂ ಪ್ರಪಂಚಕ್ಕೆಲ್ಲ ಸಾರುವದಕ್ಕೂ ಈ ಸಮ್ಮೇಳನವೇ ಸಾಕಾಗಿರುವದು. ಮತ ಪ್ರಭೇದಗಳ ಅಭಿಮಾನ, ಸ್ವಮತಾಭಿಮಾನ, ಅದರಿಂದುಂಟಾಗಿರುವ ಅತ್ಯುಗ್ರವಾದ ಧರ್ಮಾಂಧತೆಯ ದುರಭಿಮಾನ–ಇವೆಲ್ಲ ಈ ಸುಂದರತಮವಾದ ಭೂಲೋಕವನ್ನು ಬಹುಕಾಲದಿಂದ ಆಕ್ರಮಿಸಿಕೊಂಡುಬಿಟ್ಟಿರುವವು. ಇವುಗಳಿಂದ ಎಲ್ಲೆಲ್ಲಿಯೂ ಬಲಾತ್ಕಾರವು ನಡೆಯುತ್ತಿರುವದು, ಎಷ್ಟೋ ಸಲ ಮನುಷ್ಯರ ರಕ್ತದ ಕೋಡಿಯು ನೆಲದ ಮೇಲೆ ಹರಿದಿರುವದು; ನಾಗರಿಕತೆಯು ಹಾಳಾಗಿರುವದು; ಎಷ್ಟೋ ಜನಾಂಗಜನಾಂಗಗಳೇ ತಲೆಕೆಳಗಾಗಿರುವವು. ಈ ಭಯಂಕರವಾದ ಪಿಶಾಚಿಗಳಿಲ್ಲದೆ ಇದ್ದಿದ್ದರೆ, ಮಾನವಜಾತಿಯು ಈಗಿರುವದಕ್ಕಿಂತ ಎಷ್ಟೋ ಮುಂದಕ್ಕೆ ಹೋಗಿರಬಹುದಾಗಿತ್ತು. ಇದು ಹೇಗಾದರೂ ಇರಲಿ, ಇನ್ನು ಇವುಗಳ ಕಾಲವು ಸಮೀಪಿಸಿತು ; ಈ ಬೆಳಿಗ್ಗೆ ಈ ಸಮ್ಮೇಳನವು ಪ್ರಾರಂಭವಾಯಿತೆಂಬುದರ ಸೂಚನೆಗೆ ಆದ ಘಂಟಾನಾದವು ಎಲ್ಲಾ ಬಗೆಯ ಧರ್ಮಾಂಧತೆ, ಕತ್ತಿಯಿಂದಲಾಗಲಿ ಲೇಖನಿಯಿಂದಲಾಗಲಿ ಜನರು ಮಾಡಬಹುದಾದ ಮತ ಹಿಂಸೆ, ಒಂದೇ ಧ್ಯೇಯದ ಕಡೆಗೆ ಹೋಗುತ್ತಿರುವ ಜನಗಳಲ್ಲಿ ಒಬ್ಬರಲ್ಲೊಬ್ಬರಿಗುಂಟಾಗುವ ದುರಭಿಪ್ರಾಯ–ಇವುಗಳಿಗೆಲ್ಲ ಮರಣಸೂಚಕವಾದ ಘಂಟಾನಾದವಾಗಲೆಂದು ನಾನು ಮನಃಪೂರ್ವಕವಾಗಿ ಹಾರೈಸುವೆನು.

(Response to welcome : Complete Works, Vol. I, P.3)

---

*ಶಿವಮಹಿಮ್ನಃ ಸ್ತೋತ್ರದ 7ನೆಯ ಶ್ಲೋಕದ ಅಭಿಪ್ರಾಯವುವಿದು.

# 2. ನಮ್ಮಲ್ಲಿ ಮತಭೇದವಿರುವದೇಕೆ ?

## (1893 ನೆಯ ಸೆಪ್ಟೆಂಬರ್ 15)

ನಿಮಗೊಂದು ಚಿಕ್ಕ ಕಥೆಯನ್ನು ಹೇಳುವೆನು, ಕೇಳಿ. ಈಗ ತಾನೆ ಉಪನ್ಯಾಸಮಾಡಿ ಮುಗಿಸಿದ ಮಹನೀಯರು "ಇನ್ನು ಮೇಲೆ ನಾವು ಒಬ್ಬರನ್ನೊಬ್ಬರು ನಿಂದಿಸುವದನ್ನು ಬಿಟ್ಟುಬಿಡೋಣ" ಎಂದು ಹೇಳಿದ್ದನ್ನು ನೀವೆಲ್ಲಾ ಕೇಳಿಯೇ ಇರುತ್ತೀರಿ. ನಮ್ಮಲ್ಲಿ ಯಾವಾಗಲೂ ಇಷ್ಟೊಂದು ಮತಭೇದವುಂಟಾಗುತ್ತಿದೆಯಲ್ಲಾ!–ಎಂದು ಅವರಿಗೆ ವ್ಯಸನವಾಗಿರುತ್ತದೆಯಲ್ಲವೆ?

ಈ ಮತಭೇದಕ್ಕೆ ಕಾರಣವೇನೆಂಬುದನ್ನು ತಿಳಿಯಪಡಿಸುವದಕ್ಕೆ ದೃಷ್ಟಾಂತವಾಗಿ ನಿಮಗೊಂದು ಕಥೆಯನ್ನು ಹೇಳಬೇಕೆನಿಸುತ್ತದೆ. ಒಂದು ಕಪ್ಪೆಯು ಒಂದು ಭಾವಿಯಲ್ಲಿ ವಾಸಮಾಡಿಕೊಂಡಿತ್ತು. ಅದು ಎಷ್ಟೋ ಕಾಲದಿಂದ ಅಲ್ಲಿಯೇ ವಾಸಮಾಡಿಕೊಂಡಿತ್ತು. ಅದು ಅಲ್ಲಿಯೇ ಹುಟ್ಟಿ ಅಲ್ಲಿಯೇ ಬೆಳದದ್ದು. ಆದರೇನು? ಅದಿನ್ನೂ ಅದಿನ್ನೂ ಒಂದು ಸಣ್ಣ, ಪುಟ್ಟ ಕಪ್ಪೆಯೇ ಆಗಿತ್ತು. ಆ ಕಪ್ಪೆಗೆ ಕಣ್ಣು ಕಾಣಿಸುತ್ತಿತ್ತೋ ಇಲ್ಲವೋ ಹೇಳುವದಕ್ಕೆ, ಆಗ ವಿಕಾಸವಾದಿಗಳು ಇರಲೇ ಇಲ್ಲವಷ್ಟೆ. ಇದು ಹೇಗಾದರೂ ಇರಲಿ. ಈ ನಮ್ಮ ಕಥೆಯ ಕಪ್ಪೆಗೆ ಕಣ್ಣುಗಳಿದ್ದವೆಂದೂ ಅದು ಪ್ರತಿದಿನವೂ ನೀರಿನಲ್ಲಿದ್ದ ಹುಳುಗಳನ್ನೂ ಕ್ರಿಮಿಗಳನ್ನೂ ಇಲ್ಲದಂತೆ ಮಾಡುತ್ತಿದ್ದ ಜೋರನ್ನು ನೋಡಿದರೆ ಈಗಿನ ಕ್ರಿಮಿಶಾಸ್ತ್ರಜ್ಞರಿಗೂ ಕೀರ್ತಿಯನ್ನು ತರುವ ಹಾಗಿತ್ತೆಂದೂ ನಾವು ಇಟ್ಟುಕೊಳ್ಳೋಣ. ಹೀಗೆಯೇ ಕೆಲವು ಕಾಲ ಕಳೆಯಲು ಅದರ ಮೈಬಣ್ಣಕ್ಕೆ ಸ್ವಲ್ಪ ಮೆರುಗೂ ಬಂತು, ಅದು ಸ್ವಲ್ಪ ದಪ್ಪನಾಗಿಯೂ ಆಯಿತು.

ಸರಿ, ಹೀಗಿರುವಲ್ಲಿ ಒಂದು ದಿನ ಒಂದು ಸಮುದ್ರದ ಕಪ್ಪೆಯು ಅಲ್ಲಿಗೆ ಬಂದು ಬಾವಿಯೊಳಕ್ಕೆ ಧುಮುಕಿತು. ಆಮೇಲೆ ಇವೆರಡಕ್ಕೂ ಹೀಗೆ ಮಾತು ಕಥೆಗಳು ಜರುಗಿದವು;

"ನೀನು ಎಲ್ಲಿಂದ ಬಂದೆಯಣ್ಣ ?"

"ಸಮುದ್ರದಿಂದ ಬಂದಿದ್ದೇನೆ."

"ಸಮುದ್ರವೆ? ಅದು ಎಷ್ಟು ಅಗಲವಿರುವದು? ಈ ನಮ್ಮ ಬಾವಿಯಷ್ಟು ಅಗಲವಾಗಿದೆಯೇನು?" ಹೀಗೆಂದು ಬಾವಿಯ ಕಪ್ಪೆಯು ಒಂದು ಕಡೆಯಿಂದ ಮತ್ತೊಂದು ಕಡೆಗೆ ನೆಗೆಯಿತು.

ಆಗ ಸಮುದ್ರದ ಕಪ್ಪೆಯು "ಅಪ್ಪ, ಈ ಸಣ್ಣ ಬಾವಿಗೆ ಸಮುದ್ರವನ್ನು ಹೋಲಿಸುವದು ಹೇಗೆ ?" ಎಂದಿತು.

ಆಗ ಈ ಕಪ್ಪೆ ಮತ್ತೊಂದು ಸಲ ನೆಗೆದು "ನಿಮ್ಮ ಸಮುದ್ರವೆಂಬುದು ಇಷ್ಟಗಲವಿದ್ದೀತೆ? ಎಂದಿತು.

"ಸಮುದ್ರವನ್ನು ಈ ನಿನ್ನ ಬಾವಿಗೆ ಹೋಲಿಸುವದೆ ? ಏನು ಹುಚ್ಚು ಮಾತು !"

ಆಗ ಬಾವಿಯ ಕಪ್ಪೆ ಇಂತೆಂದಿತು;– "ಸರಿ, ಸರಿ. ನಮ್ಮ ಬಾವಿಗಿಂತ ಮತ್ತೆ ಯಾವದೂ ದೊಡ್ಡದಾಗಿರಲಾರದು. ಇದಕ್ಕಿಂತ ಯಾವದು ತಾನೆ ದೊಡ್ಡದಾಗಿದ್ದೀತು? ಇವನು ಸುಳ್ಳ ! ಎಲಾ, ಇವನನ್ನು ಆಚೆಗೆ ತಳ್ಳಿರೊ !"

ಇಗೋ ಇದೇ ನಮಗೆ ಯಾವಾಗಲೂ ಒದಗಿರುವ ಕಷ್ಟ. ನಾನೊಬ್ಬ ಹಿಂದು. ನಾನು ನನ್ನ ಸಣ್ಣ ಬಾವಿಯೊಳಗೆ ಕೂತುಕೊಂಡು, ನನ್ನ ಬಾವಿಯೇ ಸಕಲ ಪ್ರಪಂಚವೆಂದು ಭಾವಿಸಿಕೊಂಡಿರುತ್ತೇನೆ. ಕ್ರಿಸ್ತಿಯನ ಮತದವನೊಬ್ಬನು ತನ್ನ ಸಣ್ಣ ಬಾವಿಯೊಳಗೆ ಕೂತುಕೊಂಡು, ತನ್ನ ಬಾವಿಯೇ ಸಕಲಪ್ರಪಂಚವೆಂದು ಭಾವಿಸಿಕೊಂಡಿರುತ್ತಾನೆ. ಮಹಮ್ಮದೀಯಮತದವನು ತನ್ನ ಸಣ್ಣ ಬಾವಿಯೊಳಗೆ ಕೂತುಕೊಂಡು, ಅದೇ ಸಕಲಪ್ರಪಂಚವೆಂದು ಭಾವಿಸಿಕೊಂಡಿರುತ್ತಾನೆ. ಈ ನಮ್ಮ ಸಣ್ಣ ಪ್ರಪಂಚಗಳ ಅಡ್ಡಗೋಡೆಗಳನ್ನು ಕೆಡವಿಸುವದಕ್ಕೆ ಅಮೆರಿಕದವರಾದ ನೀವುಗಳು ಮಾಡುತ್ತಿರುವ ಮಹಾಪ್ರಯತ್ನಕ್ಕಾಗಿ ನಾನು ಧನ್ಯವಾದಗಳನ್ನರ್ಪಿಸಬೇಕು. ಇನ್ನು ಮುಂದೆ ಈ ನಿಮ್ಮ ಉದ್ದೇಶವು ನೆರವೇರುವಂತೆ ಭಗವಂತನು ನಿಮಗೆ ಸಹಾಯಮಾಡುವನೆಂದು ನಾನು ನಂಬಿರುವೆನು.

(Why we disagree : Complete Works, Vol. I, P.4)

# 3. ಹಿಂದೂಧರ್ಮ

## (1893ನೆಯ ಸೆಪ್ಟೆಂಬರ್ 19)

ಇತಿಹಾಸಕಾಲಕ್ಕಿಂತ ಮೊದಲಿನಿಂದ ನಮ್ಮ ಕಾಲದವರೆಗೂ ನಡೆದುಕೊಂಡು ಬಂದಿರುವ ಮೂರು ಧರ್ಮಗಳು ಈಗ ಪ್ರಪಂಚದಲ್ಲಿದ್ದುಕೊಂಡಿವೆ: ಹಿಂದೂಧರ್ಮ, ಸೋರೋಆಸ್ಟರನ ಧರ್ಮ ಮತ್ತು ಯಹೂದ್ಯರ ಧರ್ಮ – ಇವೇ ಆ ಮೂರು. ಇವುಗಳೆಲ್ಲಕ್ಕೂ ಪ್ರಚಂಡವಾದ ಧಕ್ಕೆಗಳು ತಗಲಿವೆ ; ಆದರೂ ಅವು ಉಳಿದು ಕೊಂಡಿರುವದನ್ನು ನೋಡಿದರೆ ಅವುಗಳೊಳಗೆ ಏನೋ ಬಲವಿದೆಯೆಂದು ಸ್ಪಷ್ಟವಾಗಿ ತೋರುವದು. ಇವುಗಳಲ್ಲಿ ಯಹೂದ್ಯರ ಮತವು ಕ್ರಿಸ್ತಿಯನ್‌ಮತವನ್ನು ತನ್ನೊಳಗೆ ಸೇರಿಸಿಕೊಳ್ಳಲಾರದೆ, ತನ್ನಿಂದ ಹುಟ್ಟಿ ಜಯಶೀಲವಾದ ಆ ಧರ್ಮದಿಂದ ತಾನೇ ತನ್ನ ಜನ್ಮಭೂಮಿಯಿಂದ ಹೊರಕ್ಕೆ ತಳ್ಳಲ್ಪಟ್ಟಿತು; ಪಾರ್ಸಿಗಳ ಮಹಾಧರ್ಮದ ವಿಷಯವಾಗಿ ತಿಳಿಸುವದಕ್ಕೆ ಎಲ್ಲಿಯೋ ಒಂದು ಸಣ್ಣ ಹಿಂಡಿನ ಮಟ್ಟಿಗೆ ಆ ಜನರು ಉಳಿದು ಕೊಂಡಿದ್ದಾರೆ, ಅಷ್ಟೆ . ಆದರೆ ಭರತಖಂಡದಲ್ಲಿ ಒಂದು ಉಪಮತವಾಗುತ್ತಲೂ ಮತ್ತೊಂದು ಉಪಮತವು ಮೇಲಕ್ಕೆದ್ದು ವೇದಧರ್ಮದ ತಳಹದಿಯನ್ನೇ ಕಿತ್ತು ಅಲುಗಾಡಿಸುವವೋ ಎನ್ನುವಂತೆ ಕಂಡರೂ, ಭಯಂಕರವಾದ ಭೂಕಂಪವಾದಾಗ ಸಮುದ್ರದ ನೀರು ಸ್ವಲ್ಪಮಟ್ಟಿಗೆ ಹಿಂಜರಿಯುವಂತೆ ಅದು ಸ್ವಲ್ಪ ಕಾಲದವರೆಗೆ ಒಂದಿಷ್ಟು ಹಿಮ್ಮೆಟ್ಟಿತು ; ಆಮೇಲೆ ಎಲ್ಲವನ್ನೂ ತನ್ನೊಳಗೆ ಸೇರಿಸಿಕೊಳ್ಳುವ ಜಲಪ್ರವಾಹದಂತೆ ಹಿಂತಿರುಗಿ ಮೊದಲಿಗಿಂತಲೂ ಸಾವಿರಪಟ್ಟು ಬಲವಾಗಿ ಮೇಲೆ ಬಿದ್ದಿತು. ಈ ನುಗ್ಗುವಿಕೆಯ ಘೋಷವೆಲ್ಲ ಕಳೆದ ಮೇಲೆ ನೋಡಿದರೆ ಈ ಉಪಮತಗಳೆಲ್ಲ ಹೀರಿ, ಒಳಗೆ ಸೇರಿ, ಮೂಲಧರ್ಮದ ಮಹಾ ಶರೀರದೊಳಗೆ ಒಂದಾಗಿಹೋಗಿಬಿಟ್ಟಿದ್ದವು!

ಮೊನ್ನೆ ಮೊನ್ನೆ ಮಾಡಿದ ವಿಜ್ಞಾನಶಾಸ್ತ್ರದ ಹೊಸ ಶೋಧನಗಳು ಕೂಡ ತನ್ನ ಪ್ರತಿಧ್ವನಿಯೋ ಎಂಬಂತೆ ತೋರುವ ವೇದಾಂತದರ್ಶನದ ಉದಾತ್ತವಿಚಾರಗಳಿಂದ ಮೊದಲಾಗಿ ತೀರ ಕೀಳ್ತೆರದ ವಿಗ್ರಹಾರಾಧನೆ, ಅದಕ್ಕೆ ಸಂಬಂಧಪಟ್ಟಿರುವ ಬಗೆಬಗೆಯ ಪುರಾಣದ ಕಥೆಗಳು, ಬೌದ್ಧರ ಸಂಶಯವಾದ* (agnosticism), ಜೈನರ ಅನೀಶ್ವರವಾದ (atheism)–ಇವುಗಳವರೆಗಿನ ಎಲ್ಲಾ ರೀತಿಗಳಿಗೂ ಹಿಂದೂಧರ್ಮದಲ್ಲಿ ಅವಕಾಶವುಂಟು.

ಹಾಗಾದರೆ ಹೀಗೆ ಇಷ್ಟು ದೂರದೂರವಾಗಿ ಒಂದನ್ನೊಂದು ಬಿಟ್ಟು ಹೋಗುತ್ತಿರುವ ತ್ರಿಜ್ಯಗಳಿಗೆಲ್ಲ ಸೇರಿಕೊಳ್ಳುವ ಸಮಾನಕೇಂದ್ರವು ಎಲ್ಲಿರುವದು ?– ನೋಡುವದಕ್ಕೆ ಒಂದಕ್ಕೊಂದು ಒಂದಿಷ್ಟೂ ಆಗದಂತಿರುವ ಈ ತತ್ತ್ವಗಳು ನಿಲ್ಲುವದಕ್ಕೆ ಆಶ್ರಯವಾಗಿರುವ ಸಮಾನವಾದ ಆಧಾರವು ಎಲ್ಲಿರುವದು?– ಎಂಬ ಪ್ರಶ್ನೆಯು ಹುಟ್ಟುವದಷ್ಟೆ. ಈ ಪ್ರಶ್ನೆಗೆ ಉತ್ತರವನ್ನು ಕೊಡಲು ನಾನು ಪ್ರಯತ್ನಮಾಡುವೆನು.

*ಬೌದ್ಧರು ಈಶ್ವರನೊಬ್ಬನು ಇದಾನೆಂದು ಒಪ್ಪುವದಿಲ್ಲವಾದರೂ ಅವನು ಇಲ್ಲವೇ ಇಲ್ಲವೆಂದು ನಿಷೇಧಿಸುವದೂ ಇಲ್ಲ.

ಹಿಂದುಗಳ ಧರ್ಮವೆಂಬುದು ವೇದಗಳೆಂಬ ಆಪ್ತವಾಕ್ಯದ ಮೂಲಕ ಬಂದದ್ದಾಗಿರುವದು. ವೇದಗಳಿಗೆ ಆದಿಯಾಗಲಿ ಅಂತವಾಗಲಿ ಇಲ್ಲವೆಂಬುದು ಅವರ ಮತವು. ಒಂದು ಪುಸ್ತಕವು ಆದಿಯಾಗಲಿ ಅಂತವಾಗಲಿ ಇಲ್ಲದ್ದೆಂಬುದು ಈ ಸಭೆಯವರಿಗೆ ಹಾಸ್ಯಾಸ್ಪದವಾದ ಮಾತಾಗಿ ತೋರಬಹುದು ; ಆದರೆ ವೇದಗಳೆಂದರೆ ಪುಸ್ತಕಗಳಲ್ಲ, ಬೇರೆಬೇರೆ ಕಾಲಗಳಲ್ಲಿ ಬೇರೆಬೇರೆ ಜನರು ಕಂಡುಹಿಡಿದ ಧಾರ್ಮಿಕ ನಿಯಮಗಳ ಒಟ್ಟು ರಾಶಿಯ ಕೋಶವೇ ವೇದಗಳು. ಆಕರ್ಷಣ–ನಿಯಮವೆಂಬುದು ಅದನ್ನು ಕಂಡುಹಿಡಿಯುವದಕ್ಕಿಂತಲೂ ಮೊದಲಿತ್ತು, ಜನರೆಲ್ಲರೂ ಅದನ್ನು ಮರೆತರೂ ಮುಂದೆಯೂ ಇದ್ದುಕೊಂಡಿರುವದು. ಅಲ್ಲವೆ ? ಧಾರ್ಮಿಕ ಪ್ರಪಂಚದಲ್ಲಿರುವ ನಿಯಮಗಳೂ ಇದರಂತೆಯೇ. ಒಬ್ಬ ಜೀವನಿಗೂ ಮತ್ತೊಬ್ಬ ಜೀವನಿಗೂ, ಜೀವರುಗಳಿಗೂ ಮತ್ತು ಜೀವರುಗಳಿಗೆಲ್ಲ ತಂದೆಯಾದ ಪರಮಾತ್ಮನಿಗೂ ಇರುವ ನೈತಿಕ ಮತ್ತು ಧಾರ್ಮಿಕ ಸಂಬಂಧಗಳೆಂಬಿವೂ ಅವುಗಳನ್ನು ಕಂಡು ಹಿಡಿಯುವದಕ್ಕಿಂತ ಮುಂಚೆಯೂ ಇದ್ದುಕೊಂಡಿದ್ದವು ; ನಾವು ಅವುಗಳನ್ನು ಮರೆತುಬಿಟ್ಟರೂ ಅವು ಇದ್ದುಕೊಂಡೇ ಇರುವವು. ಈ ನಿಯಮಗಳನ್ನು ಕಂಡುಹಿಡಿದವರಿಗೆ ಋಷಿಗಳೆಂದು ಹೆಸರು. ಅವರು ಪರಿಪೂರ್ಣರೆಂಬುದರ ಮೇಲೆ ಅವರನ್ನು ನಾವು ಗೌರವಿಸುತ್ತೇವೆ. ಅವರಲ್ಲಿ ಅತ್ಯಂತ ಮಹನೀಯರೆನಿಸಿಕೊಂಡಿದ್ದವರಲ್ಲಿ ಕೆಲವರು ಹೆಂಗಸರೆಂದು ಈ ಸಭಾಸದರಿಗೆ ತಿಳಿಸಲು ನನಗೆ ತುಂಬ ಸಂತೋಷವಾಗಿರುವದು.

ಒಳ್ಳೆಯದು, ಈ ನಿಯಮಗಳು ನಿಯಮಗಳಾದ್ದರಿಂದ ಅವಕ್ಕೆ ಅಂತವಿಲ್ಲದಿದ್ದರೆ ಹೋಗಲಿ;ಅವುಗಳಿಗೆ ಆದಿಯಿದ್ದೇ ತೀರಬೇಕಲ್ಲ ?– ಎಂದು ಯಾರಾದರೂ ಕೇಳಬಹುದು. ಸೃಷ್ಟಿಗೆ ಆದಿಯಾಗಲಿ ಅಂತವಾಗಲಿ ಇಲ್ಲವೆಂಬುದು ವೇದಗಳ ಉಪದೇಶವು. ಈ ಬ್ರಹ್ಮಾಂಡದಲ್ಲಿರುವ ಒಟ್ಟು ಶಕ್ತಿರಾಶಿಯು ಯಾವಾಗಲೂ ಒಂದೇ *ಆಗಿರುವದೆಂದು ಸಿದ್ಧಮಾಡಿರುವದಾಗಿ ಹೇಳುತ್ತಾರಷ್ಟೆ., ಹಾಗಾದರೆ, ಏನೇನೂ ಇಲ್ಲದ ಒಂದು ಕಾಲವೂ ಇದ್ದಿತೆಂದು ಒಪ್ಪುವದಾದರೆ ವ್ಯಕ್ತವಾಗಿ ತೋರುವ ಈ ಶಕ್ತಿಯೆಲ್ಲ ಆಗ ಎಲ್ಲಿದ್ದಿತು ? ಕೆಲವರು ಇದು ದೇವರಲ್ಲಿ ಅವ್ಯಕ್ತರೂಪದಲ್ಲಿದ್ದಿತೆನ್ನುವರು. ಆ ಪಕ್ಷದಲ್ಲಿ ದೇವರು ಕೆಲವು ವೇಳೆ ಅವ್ಯಕ್ತನಾಗಿಯೂ ಕೆಲವು ವೇಳೆ ವ್ಯಕ್ತನಾಗಿಯೂ ಇದ್ದಾನೆಂದಾಗುವದು; ಆಗ ಅವನು ವಿಕಾರಿಯೆಂದಾಯಿತು. ಯಾವದು ವಿಕಾರಿಯೋ, ಅದು ಸಾವಯವವಾಗಿರುವದು; ಸಾವಯವವಾಗಿರುವದೆಲ್ಲ ನಾಶವೆಂದು ವಿಕಾರವನ್ನು ಹೊಂದಲೇಬೇಕು. ಆದ್ದರಿಂದ ದೇವರು ಸಾಯುವನೆಂದಾಗುವದು; ಇದು ಅನಿಷ್ಟವು. ಆದ್ದರಿಂದ ಸೃಷ್ಟಿಯಿಲ್ಲದ ಕಾಲವೇ ಇಲ್ಲವೆನ್ನುವದೇ ಸರಿ.

ಇದಕ್ಕೊಂದು ಉಪಮಾನವನ್ನು ಉಪಯೋಗಿಸುವೆನು. ಸೃಷ್ಟಿಯೂ ಸೃಷ್ಟಿಕರ್ತನೂ ಮೊದಲೂ ಕೊನೆಯೂ ಇಲ್ಲದ ಎರಡು ರೇಖೆಗಳು; ಇವು ಒಂದಕ್ಕೊಂದು ಸಮಾಂತರವಾಗಿರುವವು. ಈಶ್ವರನೆಂಬುವನು ಸರ್ವದಾ ಸೃಷ್ಟಿಮಾಡುತ್ತಿರುವ ದೇವನು; ಆತನ

---

*ಈ ನಿಯಮಕ್ಕೆ ಶಕ್ತಿಯ ಸಮಷ್ಟ್ಯೈಕತ್ವವೆಂದು (Law of Conservation of Energy) ಹೆಸರು. ಅನಂತಕಾಲದಲ್ಲಿ ಕೆಲಸಮಾಡುತ್ತಲೂ ದೃಶ್ಯವಿಶೇಷಗಳನ್ನುಂಟು ಮಾಡುತ್ತಲೂ ಇರುವ ಶಕ್ತಿಗಳ ಒಟ್ಟು ಒಂದೇ, ಅದು ಮಾರ್ಪಡದು– ಎಂಬುದೇ ಈ ನಿಯಮದ ಸಾರವು.

ಮಹಿಮೆಯಿಂದ ಎಷ್ಟೋ ಬ್ರಹ್ಮಾಂಡಗಳು ಒಂದಾಗುತ್ತಲೂ ಒಂದು ಅವ್ಯಕ್ತಾಕಾಶದಿಂದ ಹೊರಬಿದ್ದು ಕೆಲವು ಕಾಲವಿದ್ದುಕೊಂಡು ಮತ್ತೆ ಮತ್ತೆ ಲಯವಾಗುತ್ತಿರುವವು. ಬ್ರಾಹ್ಮಣರ ಹುಡುಗನು ಈ ಮಂತ್ರವನ್ನು ಪ್ರತಿದಿನವೂ * ಜಪಿಸುತ್ತಿರುವನು: "ಸೂರ್ಯಾಚನ್ದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್"– (ಆ ಕರ್ತನು ಸೂರ್ಯಚಂದ್ರರನ್ನು ಮೊದಲಿನಂತೆಯೇ ಸೃಷ್ಟಿಮಾಡಿದನು.)

ಇಗೋ ನಾನು ಇಲ್ಲಿ ನಿಂತಿದೇನಷ್ಟೆ ; ನಾನು ಕಣ್ಣುಗಳನ್ನು ಮುಚ್ಚಿಕೊಂಡು 'ನಾನು', 'ನಾನು', 'ನಾನು'–ಎಂಬ ಈ ನನ್ನ ಇರವಿನ ವಿಷಯವನ್ನು ಮನಸ್ಸಿಗೆ ತಂದುಕೊಂಡರೆ ನನ್ನ ಮುಂದೆ ಬಂದು ನಿಲ್ಲುವ ಭಾವನೆ ಯಾವದು ? ಒಂದು ಶರೀರವೆಂಬ ಭಾವನೆ. ಹಾಗಾದರೆ 'ನಾನು' ಎಂದರೆ ಭೌತಿಕವಸ್ತುಗಳ ಸಂಯೋಗವೇ ಹೊರತು ಮತ್ತೇನೂ ಇಲ್ಲವೇನು? ವೇದಗಳು ಹೇಳವದೇನೆಂದರೆ; ಹಾಗಲ್ಲ, ನಾನೆಂದರೆ ಶರೀರದಲ್ಲಿರುವ ಒಂದು ಚೈತನ್ಯವು. ನಾನು ಶರೀರವಲ್ಲ. ಶರೀರವು ಸತ್ತುಹೋಗುವದು. ನಾನು ಸಾಯುವದಿಲ್ಲ. ಇಗೋ ನಾನು ಈ ಶರೀರದಲ್ಲಿರುವೆನಷ್ಟೆ; ಇದು ಬಿದ್ದುಹೋಗುವದು, ಆದರೆ ನಾನು ಮಾತ್ರ ಇದ್ದುಕೊಂಡೇ ಇರುವೆನು. ನಾನು ಹಿಂದೆಯೂ ಇದ್ದೆನು. ಆತ್ಮವೆಂಬುದು ಸೃಷ್ಟಿಯಾದದ್ದಲ್ಲ✞, ಏಕೆಂದರೆ ಸೃಷ್ಟಿಯೆಂದರೆ ಜೋಡಣೆ. ಜೋಡಣೆಯಾದ ಅವಯವಗಳು ಬೇರ್ಪಟ್ಟು ಮುಂದೆ ನಾಶವಾಗುವದೆಂಬುದು ಖಂಡಿತ. ಆದ್ದರಿಂದ ಆತ್ಮವು ಸೃಷ್ಟವಾಗಿದ್ದರೆ ಅದು ಸತ್ತುಹೋಗಲೇಬೇಕಾಗುವದು. ಕೆಲವರು ಹುಟ್ಟುತ್ತಲೇ ಸುಖಿಗಳಾಗಿರುವರು, ಪೂರ್ಣಾರೋಗ್ಯವನ್ನು ಹೊಂದಿರುತ್ತಾರೆ; ಅವರು ಶರೀರದಲ್ಲಿ ಸೌಂದರ್ಯ ವುಳ್ಳವರಾಗಿಯೂ ಬುದ್ಧಿಯಲ್ಲಿ ಶಕ್ತಿಯುಳ್ಳವರಾಗಿಯೂ ಇರುವರಲ್ಲದೆ ಅವರಿಗೆ ಬೇಕಾದದ್ದೆಲ್ಲ ಸಿದ್ಧವಾಗಿರುವದು. ಇನ್ನು ಕೆಲವರು ಹುಟ್ಟುತ್ತಲೇ ದುಃಖಿಗಳಾಗಿರುವರು; ಕೆಲವರಿಗೆ ಕೈಕಾಲುಗಳಿರುವದಿಲ್ಲ. ಮತ್ತೆ ಕೆಲವರು ಬುದ್ಧಿಮಂಕರಾಗಿರುವರು; ಅವರು ಹೇಗೋ ಕಷ್ಟದಿಂದ ಕಾಲಹಾಕುತ್ತಿರುವರು. ಇದೇಕೆ? ಇವರೆಲ್ಲರೂ ಸೃಷ್ಟರೇ ಆಗಿರುವರಾದರೆ ನ್ಯಾಯಪ್ರಿಯನಾಗಿಯೂ ಕರುಣಾನಿಧಿಯೂ ಆಗಿರುವ ದೇವರು ಒಬ್ಬನನ್ನು ಸುಖಿಯನ್ನಾಗಿಯೂ ಮತ್ತೊಬ್ಬನನ್ನು ದುಃಖಿ ಯನ್ನಾಗಿಯೂ ಸೃಷ್ಟಿಸುವದೇಕೆ ? ಆತನು ಇಂಥ ಪಕ್ಷಪಾತವನ್ನು ಮಾಡಿರುವದೇಕೆ?" ಈಗ ದುಃಖಿಗಳಾಗಿರು ವವರು ಮುಂದೆ ☙ ಸುಖಿಗಳಾಗುವರೆಂದು ಹೇಳುವದರಿಂದಲೂ ಈ ತೊಂದರೆಯು ನಿವಾರಣೆಯಾಗುವದಿಲ್ಲ. ಏಕೆಂದರೆ ನ್ಯಾಯಪ್ರಿಯನೂ ಕರುಣಾವಂತನೂ ಆದ ಈಶ್ವರನ ರಾಜ್ಯದಲ್ಲಿ ಜನರು

---

* ಋಗ್ವೇದಿಗಳ ಸಂಧ್ಯಾವಂದನೆಯಲ್ಲಿ ಈ ಮಂತ್ರವು ಬರುವದು.

✞ ಆತ್ಮನನ್ನು ದೇವರು ಸೃಷ್ಟಿಮಾಡಿದನೆಂದೂ ಅದು ಮುಂದೆ ಮಾತ್ರ ಸಾಯುವದಿಲ್ಲವೆಂದೂ ಕ್ರಿಸ್ತಿಯನರ ನಂಬಿಕೆಯಿರುವದು. ಸೃಷ್ಟಿಯಾದ ವಸ್ತುವು ಸಾವಯವವಾಗಿರುವದರಿಂದಲೂ ಸಂಯುಕ್ತವಾದದ್ದು ವಿಯುಕ್ತವಾಗಲೇಬೇಕಾದ್ದರಿಂದಲೂ ಜೀವವು ಸೃಷ್ಟವೆಂದು ಒಪ್ಪಿಕೊಂಡರೆ ನಾಶವಾಗುವದೆಂದು ಹೇಳಬೇಕಾಗುವದು. ಆದ್ದರಿಂದ ಜೀವವು ನಿತ್ಯ–ಎಂದು ಸ್ವಾಮಿಗಳವರು ವೇದೋಕ್ತವಾದ ಜೀವನಿತ್ಯತ್ವವನ್ನು ಇಲ್ಲಿ ಯುಕ್ತಿಯಿಂದ ಸಾಧಿಸಿ ತೋರಿಸಿರುತ್ತಾರೆ.

☙ ಸ್ವರ್ಗದಲ್ಲಿ

ಇಲ್ಲಿಯಾದರೂ ದುಃಖಿಗಳಾಗಿರಬೇಕಾದದ್ದೇಕೆ ?–ಎಂಬ ಪ್ರಶ್ನೆಯು ಆಗಲೂ ಉಳಿದುಕೊಂಡೇ ಇರುವದು.

ಇದೂ ಅಲ್ಲದೆ ಸೃಷ್ಟಿಕರ್ತನಾದ ಈಶ್ವರನನ್ನಿಟ್ಟುಕೊಂಡರೆ ಈ ಹೆಚ್ಚು ಕಡಿಮೆಯ ಕಾರಣವನ್ನು ವಿವರಿಸಿದಂತಾಗುವದಿಲ್ಲ; ಇದೆಲ್ಲ ಒಬ್ಬ ಸರ್ವಶಕ್ತನ ಕ್ರೂರಸಂಕಲ್ಪವೆಂದು ಮಾತ್ರ ತಿಳಿಸಿ ಕೊಟ್ಟಂತಾಗುವದು. ಆದಕಾರಣ ಮನುಷ್ಯನು ಸುಖಿಯಾಗಿರುವದಕ್ಕೂ ದುಃಖಿಯಾಗಿರುವದಕ್ಕೂ ಕಾರಣಗಳು ಅವನು ಹುಟ್ಟುವ ಮುಂಚೆಯೇ ಇದ್ದಿರಬೇಕೆಂದಾಯಿತು. ಈ ಕಾರಣಗಳೇ ಆತನ ಹಿಂದಿನ ಜನ್ಮದ ಕರ್ಮಗಳು.

ಮನಸ್ಸಿನ ಮತ್ತು ಶರೀರದ ಪ್ರವೃತ್ತಿಗಳೆಲ್ಲ ತಂದೆತಾಯಿಗಳಿಂದ ಬಂದ ಯೋಗ್ಯತೆಯ ಫಲವೆಂದು ಹೇಳಕೂಡದೆ ? ಇಗೋ ಇಲ್ಲಿ ಎರಡು ಬಗೆಯ ಇರವುಗಳಿವೆ. ಇವೆರಡೂ ಒಂದರ ಜೊತೆಗೊಂದು ಕಾಣಿಸಿಕೊಳ್ಳುತ್ತಿವೆ ; ಮನಸ್ಸಿನ ಇರವು ಒಂದು, ಭೌತಿಕವಸ್ತುವಿನ ಇರವು ಮತ್ತೊಂದು. ನಮ್ಮಲ್ಲಿರುವದೆಲ್ಲಕ್ಕೂ ಭೌತಿಕಪದಾರ್ಥ ಮತ್ತು ಅದರ ಮಾರ್ಪಾಡುಗಳೇ ಕಾರಣವೆಂಬುದು ಸಿದ್ಧವಾಗಿಬಿಟ್ಟರೆ, ಆತ್ಮನೆಂಬುದು ಬೇರೆ ಇದೆಯೆಂದು ಇಟ್ಟುಕೊಳ್ಳುವದಕ್ಕೇನೂ ಅವಶ್ಯಕತೆಯಿರುವದಿಲ್ಲ. *ಆದರೆ ಭೌತಿಕವಸ್ತುವಿನಿಂದ ಜ್ಞಾನವು ಉಂಟಾಯಿತೆಂಬುದನ್ನು ತೋರಿಸುವದಕ್ಕೆ ಆಗುವದೇ ಇಲ್ಲ. ತತ್ತ್ವಶಾಸ್ತ್ರದಲ್ಲಿ ಏಕತ್ವವೆಂಬುದನ್ನು ✞ ಬಿಡುವದಕ್ಕೆ ಆಗುವ ಹಾಗೇ ಇಲ್ಲವಾದರೆ ಜ್ಞಾನೈಕತ್ವವೆಂಬುದೇ ತರ್ಕಸಿದ್ಧವಾಗುತ್ತದೆ ; ಭೌತಿಕೈಕತ್ವಕ್ಕಿಂತ ಇದೇನೂ ಹೆಚ್ಚು ಅನಿಷ್ಟವೂ ಅಲ್ಲ. ಆದರೆ ಈ ಎರಡು ವಾದಗಳಲ್ಲಿ ಯಾವದೊಂದೂ ಇಲ್ಲಿ ಅಗತ್ಯವಿರುವದಿಲ್ಲ.

ತಾಯಿತಂದೆಗಳಿಂದ ಶರೀರಗಳಿಗೆ ಕೆಲವು ಪ್ರವೃತ್ತಿಗಳು ಬಂದಿರುವವೆಂಬುದನ್ನೇನೂ ಇಲ್ಲವೆನ್ನುವದಕ್ಕಾಗುವದಿಲ್ಲ; ಆದರೆ ಈ ಪ್ರವೃತ್ತಿಗಳು ಶರೀರದ ಆಕಾರವಿಶೇಷಕ್ಕೆ ಮಾತ್ರ ಸಂಬಂಧಪಟ್ಟಿರುತ್ತವೆ. ಅದರ ಮೂಲಕ ಒಂದಾನೊಂದು ಬಗೆಯ ಮನಸ್ಸು ಮಾತ್ರ ಒಂದಾನೊಂದು ಬಗೆಯಲ್ಲಿ ಕೆಲಸಮಾಡಬಹುದಾಗಿರುತ್ತದೆ. ಹಿಂದಿನ ಜನ್ಮದ ಕರ್ಮಗಳಿಂದ ಆಗಿ ಜೀವನಿಗೆ ಅಸಾಧಾರಣವಾಗಿರುವ ಪ್ರವೃತ್ತಿಗಳೂ ಉಂಟು. ಇಂಥಿಂಥ ವಾಸನೆಯುಳ್ಳ ಜೀವನು ಈ ವಾಸನೆಯನ್ನು ತೋರ್ಪಡಿಸಿಕೊಳ್ಳುವದಕ್ಕೆ ಅತ್ಯಂತ ಚೆನ್ನಾಗಿ ತಕ್ಕದ್ದಾಗಿರುವ ಶರೀರದಲ್ಲಿ ಹುಟ್ಟಬೇಕೆಂಬುದು ಪ್ರತಿನಿಯತಸಂಬಂಧದ ನಿಯಮವಾಗಿರುತ್ತದೆ. ಇದು

---

* ಜ್ಞಾನವನ್ನು ಭೌತಿಕಶರೀರದ ಧರ್ಮವೆಂದೇ ತೋರಿಸಿಕೊಡುವದಾದರೆ ಆತ್ಮನನ್ನು ಬೇರೆ ಅಂಗೀಕರಿಸಬೇಕಾದ ಕಾರಣವೇ ಇಲ್ಲದೆ ಹೋಗುವದೆಂದು ಭಾವ. ತರ್ಕದೃಷ್ಟಿಯಿಂದ ಇದೇ ಸರಿ. ಆದರೆ ಅನುಭವದ ದೃಷ್ಟಿಯಿಂದ ನೋಡಿದರೆ ಜ್ಞಾನದಿಂದಲೇ ಎಲ್ಲವನ್ನೂ ವಿಷಯೀಕರಿಸಿ ಅರಿಯಬೇಕಾಗುವದರಿಂದ ವಿಷಯಿಯಾದ ಜ್ಞಾನವು ಸ್ವತಂತ್ರವೆಂದೂ ವಿಷಯವಾದ ಭೌತಿಕವಸ್ತುವಿನ ಧರ್ಮವಾಗಲಾರದೆಂದೂ ತಾನೇ ಸಿದ್ಧವಾಗುವದು.

✞ ಜಗತ್ತಿಗೆಲ್ಲ ಒಂದೇ ಒಂದು ತತ್ತ್ವವಿರಬೇಕೆಂದು ಅನೇಕ ವಿಚಾರಕರ ಅಭಿಪ್ರಾಯವಿರುವದಾದರೂ ಭೌತಿಕವಸ್ತುವೇ ತತ್ತ್ವವೆಂದೂ ಅದರಿಂದಲೇ ಚೈತನ್ಯವು ಕೂಡ ಹುಟ್ಟಿರುವದೆಂದೂ ಜಡಾದ್ವೈತವಾದಿಗಳು ಹೇಳುವರು ; ಚೈತನ್ಯವೇ ಪರಮತತ್ತ್ವವೆಂದು ಚೈತನ್ಯಾದ್ವೈತವಾದಿಗಳು ಹೇಳುವರು.

ಭೌತಿಕವಿಜ್ಞಾನಶಾಸ್ತ್ರಕ್ಕೂ ಹೊಂದಿಕೆಯಾಗಿರುತ್ತದೆ; ಹೇಗೆಂದರೆ ವಿಜ್ಞಾನಶಾಸ್ತ್ರದಲ್ಲಿ ಪದ್ಧತಿಯಿಂದಲೇ ಎಲ್ಲಕ್ಕೂ ಕಾರಣವನ್ನು ಕೊಡುವದಕ್ಕೆ ಹೋಗುತ್ತಾರೆ; ಈ ಪದ್ಧತಿಯೆಂಬುದು ಮತ್ತೆ ಮತ್ತೆ ಮಾಡುವ ಅಭ್ಯಾಸಗಳಿಂದಲೇ ಬರತಕ್ಕದ್ದಾಗಿದೆ. ಆದ್ದರಿಂದ ಹೊಸದಾಗಿ ಹುಟ್ಟಿದ ಜೀವನಲ್ಲಿ ಸಹಜವಾಗಿರುವ ಪದ್ಧತಿಗಳಿಗೆ ಸರಿಯಾದ ಕಾರಣವನ್ನು ಹೇಳುವದಕ್ಕೆ ಅಭ್ಯಾಸಗಳು ಅವಶ್ಯಕವೆಂದಾಯಿತು; ಈ ಅಭ್ಯಾಸಗಳು ಈ ಜನ್ಮದಲ್ಲಿ ಆಗಿರುವದಿಲ್ಲವಾದ್ದರಿಂದ ಅವು ಹಿಂದಿನ ಜನ್ಮಗಳಿಂದಲೇ ಬಂದವುಗಳಾಗಿರಬೇಕು.

ಇನ್ನೊಂದು ಪ್ರಶ್ನೆ: ಇದೆಲ್ಲ ನಿಜವೇ ಆಗಲಿ; ಆದರೆ ನಮಗೆ ಹಿಂದಿನ ಜನ್ಮದ ನೆನಪೇ ಒಂದಿಷ್ಟೂ ಇರುವದಿಲ್ಲವಲ್ಲ, ಇದಕ್ಕೆ ಕಾರಣವೇನು ? ಇದಕ್ಕೆ ಸಮಾಧಾನವನ್ನು ಹೇಳುವದು ಸುಲಭವಾಗಿದೆ. ಈಗ ನಾನು ಇಂಗ್ಲಿಷು ಮಾತಾಡುತ್ತಿದ್ದೇನಷ್ಟೆ. ಇದೇನೂ ನನ್ನ ಮಾತೃಭಾಷೆಯಲ್ಲ. ನಿಜವಾಗಿ ನೋಡಿದರೆ ನನ್ನ ಮಾತೃಭಾಷೆಗೆ ಸೇರಿದ ಯಾವ ಶಬ್ದಗಳೂ ಈಗ ನನ್ನ ಅರಿವಿನಲ್ಲಿರುವದೇ ಇಲ್ಲ. ಆದರೆ ಅವುಗಳನ್ನು ನೆನಪಿಗೆ ತಂದುಕೊಳ್ಳಬೇಕೆಂದು ಪ್ರಯತ್ನ ಮಾಡಿದರೆ ಸರಿ, ಕೂಡಲೆ ಅವು ನುಗ್ಗಿಬಿಡುತ್ತವೆ. ಅರಿವೆಂಬುದು ಮಾನಸಸಾಗರದ ಬರಿಯ ಮೇಲುಮೈಯೆಂದೂ ಅದರ ಕೆಳಭಾಗದಲ್ಲಿ ನಮ್ಮ ಅನುಭವಗಳೆಲ್ಲ ರಾಶಿಯಾಗಿರುವವೆಂದೂ ಇದರಿಂದ ಗೊತ್ತಾಗುತ್ತದೆ. ಪ್ರಯತ್ನಮಾಡಿ ಕಷ್ಟಪಟ್ಟರೆ * ಅವು ಮೇಲಕ್ಕೆ ಬರುತ್ತವೆ; ಆಗ ನಿಮ್ಮ ಹಿಂದಿನ ಜನ್ಮದ ಅರಿವು ಕೂಡ ಆಗಬಹುದು. ಇದು ನೇರಾದ ಸಮರ್ಪಕವಾದ ಪ್ರಮಾಣವಾಗಿದೆ. ಯಾವದೊಂದು ವಾದಕ್ಕೇ ಆಗಲಿ, ಅದನ್ನು ಸರಿಯೆಂದು ತಾಳೆಹಾಕಿ ತೋರಿಸುವ ಸಂವಾದವೇ ಪೂರ್ಣವಾದ ರುಜುವಾತಲ್ಲವೆ? ಇಗೋ, ಋಷಿಗಳು ಇಡಿಯ ಪ್ರಪಂಚವನ್ನೇ ಕರೆದು ಎದೆತಟ್ಟಿ ಹೇಳಿಕೊಳ್ಳುತ್ತಿದ್ದಾರೆ. ಮೇಧಾಶಕ್ತಿಯೆಂಬ ಸಾಗರದ ತೀರ ತಳದ ಭಾಗವನ್ನು ಕೂಡ ಕಲಕಿ ಎಬ್ಬಿಸುವ ರಹಸ್ಯವನ್ನು ನಾವು ಕಂಡುಹಿಡಿದಿರುತ್ತೇವೆ; ಪ್ರಯತ್ನಮಾಡಿ ನೋಡಿರಿ, ಆಗ ನಿಮಗೆ ಹಿಂದಿನ ಜನ್ಮದ ನೆನಪು ಸಂಪೂರ್ಣವಾಗಿ ಬಂದುಬಿಡುತ್ತದೆ–ಎನ್ನುತ್ತಿದ್ದಾರೆ.

ಅಂತೂ ಹಿಂದುವಿನ ನಂಬಿಕೆಯೇನೆಂದರೆ ತಾನು ಆತ್ಮನೇ. "ಈ ಆತ್ಮನನ್ನು ಕತ್ತಿಯು ಕತ್ತರಿಸಲಾರದು, ಅವನನ್ನು ಬೆಂಕಿಯು ಸುಡಲಾರದು, ಅವನನ್ನು ನೀರು ಕರಗಿಸಲಾರದು, ಅವನನ್ನು ಗಾಳಿಯು ಒಣಗಿಸಲೂ ಆರದು." (ಗೀ. 2–23) ಹಿಂದುವಿನ ಅಭಿಪ್ರಾಯದಲ್ಲಿ ಪ್ರತಿಯೊಬ್ಬ ಜೀವನೂ ಒಂದೊಂದು ವೃತ್ತವು; ಈ ವೃತ್ತದ ಪರಿಧಿಯು ಎಲ್ಲಿಯೂ ಇರುವದಿಲ್ಲ, ಇದರ ಕೇಂದ್ರವು ಮಾತ್ರ ಶರೀರದೊಳಗಡೆ ಇರುತ್ತದೆ. ಸಾವೆಂದರೆ ಈ ಕೇಂದ್ರವು ಒಂದು

* ಎಷ್ಟೋ ಕನಸುಗಳು ನಮಗೆ ಆದರೂ ಎಚ್ಚರವಾದ ಕೂಡಲೆ ಅವುಗಳೆಲ್ಲ ಮರೆತುಹೋಗಿಬಿಡುತ್ತವೆ; ಎಚ್ಚರದ ವ್ಯವಹಾರದಲ್ಲಿರುವ ಹೆಚ್ಚಿನ ಆಸಕ್ತಿಯೇ ಇದಕ್ಕೆ ಕಾರಣ. ಕನಸಿನಲ್ಲಿ ನಾವು ಕಂಡಿದ್ದ ವಿಷಯವನ್ನು ನೆನಪಿಗೆ ತರುವ ನಿಮಿತ್ತವೇನಾದರೂ ನಮ್ಮ ಮನಸ್ಸಿಗೆ ಉಂಟಾದರೆ ಥಟ್ಟನೆ ಮತ್ತೆ ಕನಸಿನ ನೋಟದ ನೆನಪೂ ಉಂಟಾಗುತ್ತದೆ. ಇದೊಂದು ಸ್ವಾಮಿಗಳವರ ಅಭಿಪ್ರಾಯಕ್ಕೆ ಸಾಧಕವಾದ ಉದಾಹರಣೆಯು. ಆದರೆ ನಮ್ಮ ನೆನಪಿಗೆ ಬರದೆ ಇರುವದನ್ನು ನಾವು ಅನುಭವಿಸಲೇ ಇಲ್ಲವೆಂದು ಹೇಳಲಾಗುವದಿಲ್ಲ ; ಉದಾಹರಣೆಗೆ ಕನಸಿನಲ್ಲಿ ನಮಗೆ ಎಚ್ಚರದನುಭವದ ನೆನಪು ಆಗುವದೇ ಇಲ್ಲ. ಆದ ಮಾತ್ರಕ್ಕೆ ನಾವು ಎಚ್ಚರವನ್ನನುಭವಿಸಲೇ ಇಲ್ಲವೆಂದೇನೂ ಭಾವಿಸುವದಿಲ್ಲ.

ಶರೀರವನ್ನು ಬಿಟ್ಟು ಮತ್ತೊಂದು ಶರೀರಕ್ಕೆ ಹೋಗುವದೇ. ಆ ಆತ್ಮವು ಭೌತಿಕವಸ್ತುವಿನ ಕಟ್ಟುಪಾಡುಗಳಿಂದ ಬಿಗಿವಡೆದಿರುವದೂ ಇಲ್ಲ. ಅದರ ತಿರುಳನ್ನು ನೋಡಿದರೆ, ಅದು ಮುಕ್ತವಾಗಿರುವದು, ಎಲ್ಲೆಕಟ್ಟಿಲ್ಲದ್ದಾಗಿರುವದು, ಪರಿವೃತವಾಗಿರುವದು, ಪರಿಶುದ್ಧವಾಗಿಯೂ ಪರಿಪೂರ್ಣವಾಗಿಯೂ ಇರುವದು. ಆದರೆ, ಅದೇನು ಕಾರಣವೊ, ಪ್ರಕೃತಿಗೆ ತಾನು ಕಟ್ಟುಬಿದ್ದಿರುವೆನೆಂದೇ ಅದಕ್ಕೆ ತೋರುತ್ತಿರುವದು ; ತಾನೂ ಪ್ರಕೃತಿಯೆಂದೇ ಅದು ಭಾವಿಸಿಕೊಳ್ಳುತ್ತಿರುವದು.

ನಿತ್ಯಮುಕ್ತವಾಗಿಯೂ ಪರಿಪೂರ್ಣವಾಗಿಯೂ ಪರಿಶುದ್ಧವಾಗಿಯೂ ಇರುವ ಈ ಆತ್ಮವು ಪ್ರಕೃತಿಯಿಂದ ಹೀಗೆ ಬದ್ಧನಾಗುವದೇಕೆ ?–ಎಂಬುದು ಮುಂದಿನ ಪ್ರಶ್ನೆ. ಪರಿಪೂರ್ಣವಾದ ಆತ್ಮವು ತಾನು ಅಪರಿಪೂರ್ಣನೆಂದು ಭಾವಿಸುವ ಭ್ರಾಂತಿಗೊಳಗಾದದ್ದು ಹೇಗೆ ? ಹಿಂದುಗಳು ಈ ಪ್ರಶ್ನೆಗೆ ಉತ್ತರವನ್ನು ಹೇಳುವದಕ್ಕೆ ಹಿಂಜರಿಯುತ್ತಾರೆಂದೂ ಈ ಪ್ರಶ್ನೆಯನ್ನು ಕೇಳಲಾಗದೆನ್ನುತ್ತಾರೆಂದೂ ಕೆಲವರು ಆಡಿಕೊಳ್ಳುವದುಂಟು. ಇದಕ್ಕೆ ಉತ್ತರಹೇಳುವದಕ್ಕೆಂದು ಕೆಲವು ಜನ ತತ್ತ್ವವಿಚಾರಕರು ಒಂದು ಅಥವಾ ಹೆಚ್ಚು ಪೂರ್ಣಕಲ್ಪವಾಗಿರುವ ತತ್ತ್ವಗಳನ್ನು ಕಲ್ಪಿಸಿಕೊಂಡು ಇಲ್ಲಿ ಬಿಟ್ಟಿರುವ ಬಿರುಕನ್ನು ಭರ್ತಿಮಾಡುವದಕ್ಕೆ ದೊಡ್ಡ ದೊಡ್ಡ ಶಾಸ್ತ್ರೀಯ ಪರಿಭಾಷೆಗಳನ್ನುಪಯೋಗಿಸುವರು. ಆದರೆ ಸುಮ್ಮನೆ ಹೆಸರು ಹೇಳಿದ ಮಾತ್ರಕ್ಕೆ ಉತ್ತರವನ್ನು ಕೊಟ್ಟಂತಾಗುವದಿಲ್ಲ. ಏಕೆಂದರೆ ಮೊದಲಿನ ಪ್ರಶ್ನೆಯು ಹಾಗೇ ಉಳಿದುಕೊಂಡಿರುತ್ತದೆ. ಪರಿಪೂರ್ಣವಾಗಿದ್ದದ್ದು ಹೀಗೆ ಪೂರ್ಣಕಲ್ಪವಾಗಿ ಹೇಗಾಯಿತು? ಪರಿಶುದ್ಧವಾಗಿಯೂ ನಿರಪೇಕ್ಷವಾಗಿಯೂ ಇರುವ ವಸ್ತುವು ತನ್ನ ಸ್ವಭಾವದಲ್ಲಿ ಒಂದಣುವಿನಷ್ಟಾದರೂ ಹೆಚ್ಚುಕಡಿಮೆಯಾದದ್ದು ಹೇಗೆ ? ಈ ವಿಷಯದಲ್ಲಿ ಹಿಂದುವು ಮನಃ ಶುದ್ಧಿಯಿಂದ ಇದ್ದದ್ದು ಇದ್ದಹಾಗೆ ಉತ್ತರಕೊಟ್ಟುಬಿಡುತ್ತಾನೆ. ಕುತರ್ಕವನ್ನು ಮರೆಹೊಕ್ಕು ಕಷ್ಟದಿಂದ ಪಾರಾಗುವದು ಅವನಿಗೆ ಇಷ್ಟವಿಲ್ಲ. ಈ ಪ್ರಶ್ನೆಗೆ ಎದೆಗೊಟ್ಟು ಅವನು ಧೈರ್ಯದಿಂದಲೇ ಉತ್ತರಹೇಳಿಬಿಡುತ್ತಾನೆ. ಅವನ ಉತ್ತರವೇನೆಂದರೆ, "ನಾನರಿಯೆನು, ಪರಿಪೂರ್ಣವಾಗಿದ್ದ ಆತ್ಮವಸ್ತುವು ತಾನು ಅಪರಿಪೂರ್ಣವಾಗಿರುವೆನೆಂದು ಹೇಗೆ ತಿಳಿದುಕೊಂಡಿತೋ, ಪ್ರಕೃತಿಗೆ ಸಂಬಂಧಪಟ್ಟು ಅದರ ಅಳತೆಗೆ ಸಿಕ್ಕಿರುವೆನೆಂದು ಹೇಗೆ ಭಾವಿಸಿಕೊಂಡಿತೋ, ನಾನರಿಯೆನು." * ಇಷ್ಟಾದರೂ ಹೀಗಾಗಿರುವದೇನೋ ಖಂಡಿತ. ತಾನು ತನ್ನನ್ನು ಶರೀರವೆಂದು ಭಾವಿಸಿಕೊಳ್ಳುತ್ತಿರುವೆನೆಂಬುದು ಪ್ರತಿಯೊಬ್ಬನಿಗೂ ತಿಳಿದಿರುವ ವಿಷಯವಾಗಿದೆ. ಹಿಂದುವು ನಾವು ಶರೀರವೆಂದು ತಿಳಿದುಕೊಂಡಿರುವ ದೇತಕ್ಕೆಂಬುದನ್ನು ವಿವರಿಸುವದಕ್ಕೆ ಹೋಗುವದಿಲ್ಲ. ಇದೆಲ್ಲ ಈಶ್ವರನ ಸಂಕಲ್ಪವೆಂದು ಹೇಳುವದೇನೂ ಸಮಂಜಸವಾದ

*ನಾವು ನಮ್ಮನ್ನು ಶರೀರವೆಂದು ತಪ್ಪಾಗಿ ತಿಳಿದುಕೊಂಡಿರುವದೂ ವಿಚಾರ ಮಾಡಿದ ಮೇಲೆ ಈ ತಪ್ಪುತಿಳಿವಳಿಕೆಯು ಹೋಗಿ ನಾವು ಪರಿಪೂರ್ಣಾತ್ಮಸ್ವರೂಪರೆಂದು ಅರಿವು ಉಂಟಾಗುವದೂ ಅನುಭವದಿಂದ ಸಿದ್ಧವಾಗುತ್ತದೆ. ಪರಿಪೂರ್ಣನಾದ ಆತ್ಮನು ತನ್ನನ್ನು ತಾನೇ ಒಂದಾನೊಂದು ಕಾಲದಲ್ಲಿ ಅಪರಿಪೂರ್ಣನೆಂತ ತಿಳಿದುಕೊಂಡನೆಂದು ತಪ್ಪಾಗಿ ಇಟ್ಟುಕೊಂಡು ಆಕ್ಷೇಪಕನು ಪ್ರಶ್ನೆಯನ್ನು ಹಾಕಿರುತ್ತಾನೆ.

ಉತ್ತರವಲ್ಲ; ಇದೂ 'ನನಗೆ ತಿಳಿಯದು' ಎಂದು ಹಿಂದುವು ಹೇಳುವ ಉತ್ತರವೇ ಹೊರತು ಬೇರೆಯೇನೂ ಅಲ್ಲ.

ಸರಿ. ಅಂತೂ ಜೀವನು ನಿತ್ಯನಾಗಿಯೂ ಮರಣರಹಿತನಾಗಿಯೂ ಪರಿಪೂರ್ಣನಾಗಿಯೂ ಅನಂತನಾಗಿಯೂ ಇರುತ್ತಾನೆಂದೂ ಮರಣವೆಂದರೆ ಕೇಂದ್ರವು ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ ಹೋಗುವ ಮಾರ್ಪಾಡೇ ಎಂದೂ ಆಯಿತಷ್ಟೆ. ಈಗಿನ ಸ್ಥಿತಿಯು ಹಿಂದಿನ ಕರ್ಮಗಳ ಫಲವಾಗಿರುತ್ತದೆ, ಮುಂದಿನ ಸ್ಥಿತಿಯು ಈಗಿನ ಕರ್ಮಗಳ ಫಲವಾಗಿರುವದು. ಒಂದು ಜನ್ಮವಾಗುತ್ತಲೂ ಮತ್ತೊಂದು ಜನ್ಮವನ್ನೂ ಒಂದು ಮರಣವಾಗುತ್ತಲೂ ಮತ್ತೊಂದು ಮರಣವನ್ನೂ ಪಡೆಯುತ್ತಾ ಈ ಜೀವನು ಮುಂದುಮುಂದಕ್ಕೆ ವಿಕಾಸಹೊಂದುತ್ತಲೋ ಇಲ್ಲದಿದ್ದರೆ ಹಿಂದುಹಿಂದಕ್ಕೆ ಮುದುರಿಕೊಳ್ಳುತ್ತಲೋ ಇರುವನು. ಇಲ್ಲಿ ಮತ್ತೊಂದು ಪ್ರಶ್ನೆಯು ಎದ್ದುಕೊಳ್ಳುವದು: ಹಾಗಾದರೆ ಮನುಷ್ಯನೆಂಬುವನು ಒಂದು ಕ್ಷಣದಲ್ಲಿ ಒಂದು ಹೆದ್ದೆರೆಯ ನೊರೆಯ ತಲೆಯ ಮೇಲಕ್ಕೇರುವದು, ಮುಂದಿನ ಕ್ಷಣದಲ್ಲಿ ಬಾಯಿಬಿಟ್ಟುಕೊಂಡಿರುವ ಕಗ್ಗುಡಿಗೆ ದೊಪ್ಪೆಂದು ಬೀಳುವದು ಹೀಗೆ ಬಿರುಗಾಳಿಗೆ ಸಿಕ್ಕು ಒದ್ದಾಡುತ್ತಿರುವ ಕಿರುದೋಣಿಯೇನು? ಒಳ್ಳೆಯ ಕರ್ಮಗಳ ಮತ್ತು ಕೆಟ್ಟ ಕರ್ಮಗಳ ಕೈಗೆ ಸಿಕ್ಕು ಏನುಮಾಡುವದಕ್ಕೂ ಕೈಲಿ ಸಾಗದೆ ಸುಮ್ಮನೆ ಹಿಂದಕ್ಕೂ ಮುಂದಕ್ಕೂ ಹೊರಳಾಡುತ್ತಿರುವನೇನು? ಇವನು ಎಂದೆಂದಿಗೂ ಮೊರೆಯುತ್ತಿರುವ, ಎಂದೆಂದಿಗೂ ನುಗ್ಗಿ ಹರಿಯುತ್ತಿರುವ, ಒಂದಿಷ್ಟೂ ಕರುಣವಿಲ್ಲದ, ಕಾರ್ಯಕಾರಣಭಾವವೆಂಬ ಪ್ರವಾಹಕ್ಕೆ ಸಿಕ್ಕುಬಿದ್ದಿರುವ, ಹಡಗಿನ ಮುರುಕೇನು ? ಇವನು ದಾರಿಯಲ್ಲಿ ಸಿಕ್ಕವರನ್ನೆಲ್ಲ ಅಜ್ಜುಗುಜ್ಜಾಗುವಂತೆ ಅರಚಿಹಾಕುತ್ತಾ ವಿಧವೆಯರ ಕಣ್ಣೀರನ್ನಾಗಲಿ ತಬ್ಬಲಿ ಮಕ್ಕಳ ಗೋಳನ್ನಾಗಲಿ ಕಂಡು ನಿಲ್ಲದೆ ಉರುಳಿಕೊಂಡೇ ಹೋಗುತ್ತಿರುವ ಕಾರ್ಯಕಾರಣ ಭಾವವೆಂಬ ಚಕ್ರದ ಕೆಳಗೆ ಸಿಕ್ಕುಬಿದ್ದಿರುವ ಸಣ್ಣ ಹುಳುವೇನು ? ಈ ವಿಷಯವನ್ನು ಮನದಂದರೆ ಎದೆಯು ಝುಮ್ಮೆನುವದು ; ಆದರೇನು, ಇದೇ ಪ್ರಕೃತಿನಿಯಮ ವಾಗಿರುವದು. ಹಾಗಾದರೆ ಇನ್ನೇನೂ ಆಸೆಯಿಲ್ಲವೆ? ತಪ್ಪಿಸಿಕೊಳ್ಳುವದಕ್ಕೆ ಯಾವದೊಂದೂ ಮಾರ್ಗವಿಲ್ಲವೆ?–ಎಂದು ನಿರಾಶೆಯ ಹೃದಯದ ತಳದಿಂದ ಒಂದು ಮೊರೆಯು ಮೇಲಕ್ಕೆದ್ದಿತು. ಕರುಣಾಶಾಲಿಯಾದ ಭಗವಂತನ ಗದ್ದುಗೆಗೆ ಅದು ಮುಟ್ಟಲು, ಭರವಸೆಯನ್ನೂ, ಸಮಾಧಾನವನ್ನೂ ಕೊಡುವ ಅಭಯವಚನಗಳು ಕೆಳಕ್ಕಿಳಿದು ಒಬ್ಬ ವೈದಿಕ ಋಷಿಯನ್ನುತ್ಸಾಹಗೊಳಿಸಿದವು. ಆತನು ಎದ್ದುನಿಂತು ಈ ಲೋಕವನ್ನೆಲ್ಲ ಕುರಿತು ಘನಗಂಭೀರಧ್ವನಿಯಿಂದ ಈ ಆನಂದದ ಸುದ್ದಿಯನ್ನು ಸಾರಿದನು: "ಎಲೈ ಅಮೃತದ ಪುತ್ರರೆ, ಕೇಳಿ. ದಿವ್ಯಲೋಕಗಳಲ್ಲಿ ಇರುವವರೇ ನೀವು ಕೂಡ, (ಕೇಳಿರಿ); ನಾನು ಈ ಕತ್ತಲೆಯಿಂದಾಚೆಗೆ ಇರುವ, ಭ್ರಾಂತಿಯಿಂದಾಚೆಗೆ ಇರುವ, ಈ ಪೂರ್ವಪುರುಷನನ್ನು ಕಂಡುಕೊಂಡಿರುತ್ತೇನೆ; ಇವನನ್ನು ಅರಿತರೆ ಮಾತ್ರ ನೀವು ಮೃತ್ಯುವನ್ನು ದಾಟುವಿರಿ"* "ಅಮೃತದ ಪುತ್ರರು !"– ಆಹ! ಇದು ಎಂಥ ಇಂಪಾದ, ಎಂಥ ಆಶೋತ್ಪಾದಕವಾದ ಹೆಸರು, ನೋಡಿ ! ಸಹೋದರರೆ, ಆ ಇಂಪಾದ ಹೆಸರಿನಿಂದ ನಿಮ್ಮನ್ನು ನಾನು ಕರೆಯುವೆನು. ಅಮೃತದ ಪುತ್ರರೆ, (ಸಾವಿಲ್ಲದ

---

* ಶ್ವೇತಾಶ್ವತರ 2–5, 3–8– ಈ ಮಂತ್ರಗಳ ಭಾವಾರ್ಥವಿದು.

ಆನಂದಕ್ಕೆ ಹಕ್ಕುದಾರರಾಗಿರುವವರೆ,) ನಿಮ್ಮನ್ನು ಪಾಪಿಗಳೆಂದು ಕರೆಯುವದು ಹಿಂದುಗಳ ಮನಸ್ಸಿಗೆ ಬರುವದಿಲ್ಲ. ನೀವು ದೇವರ ಮಕ್ಕಳು, ಸಾವಿಲ್ಲದ ಆನಂದಕ್ಕೆ ಪಾಲುಗಾರರು, ಪವಿತ್ರತಮರಾದವರು, ಪರಿಪೂರ್ಣರಾದವರು. ಎಲೈ ಭೂದೇವತೆಗಳಿರ, ನೀವು ಪಾಪಿಗಳೆ? ಮನುಷ್ಯನನ್ನು ಪಾಪಿಯೆಂದು ಕರೆಯುವದೇ ಪಾಪವು; ಅದು ಮನುಷ್ಯಸ್ವಭಾವಕ್ಕೇ ಶಾಶ್ವತವಾದ ಕಲಂಕವನ್ನು ಹಚ್ಚಿದಂತೆ. ಎಲೈ ಸಿಂಹಗಳಿರ, ಮೇಲಕ್ಕೆ ಬನ್ನಿ ! ನೀವು ಕುರಿಗಳೆಂಬ ಭ್ರಾಂತಿಯನ್ನು ಕೊಡವಿಹಾಕಿರಿ. *ನೀವು ಅಮೃತಸ್ವರೂಪರಾದ ಆತ್ಮರು, ನಿತ್ಯಮುಕ್ತರೂ ಆನಂದರೂಪರೂ ಶಾಶ್ವತರೂ ಆದ ಆತ್ಮರು ; ನೀವು ಪ್ರಕೃತಿಯಲ್ಲ, ನೀವು ಶರೀರಗಳಲ್ಲ; ಪ್ರಕೃತಿಯು ನಿಮ್ಮ ಅಡಿಯಾಳೇ ಹೊರತು ನೀವು ಪ್ರಕೃತಿಯ ಅಡಿಯಾಳುಗಳಲ್ಲ.

ಹೀಗೆ ವೇದಗಳು ನಿರ್ದಯವಾಗಿರುವ ಪ್ರಕೃತಿನಿಯಮಗಳ ಭಯಂಕರವಾದ ಕೂಟವನ್ನು ಹೇಳಿರುವದಿಲ್ಲ, ಕೊನೆಗಾಣದಿರುವ ಕಾರ್ಯ ಕಾರಣವೆಂಬ ಕಾರಾಗಾರವನ್ನು ಹೇಳಿರುವದಿಲ್ಲ; ಈ ನಿಯಮಗಳ ಮೇಲೆಲ್ಲ, ಪ್ರಕೃತಿಯ ಮತ್ತು ಶಕ್ತಿಯ ಒಂದೊಂದು ಪರಿಮಾಣುವಿನೊಳಗೆಲ್ಲ, "ಯಾವಾತನ ಹೆದರಿಕೆಯಿಂದ ಗಾಳಿಯು ಬೀಸುತ್ತಿರುವದೋ, ಬೆಂಕಿಯು ಸುಡುತ್ತಿರುವದೋ, ಮೋಡಗಳು ಮಳೆಗರೆಯುತ್ತಿರುವವೋ, ಮೃತ್ಯುವು ಭೂಮಿಯುಮೇಲೆ ನಡುಕಟ್ಟಿಕೊಂಡು ಓಡಾಡುತ್ತಿರುವದೋ" (ತೈ.2-8) ಅಂಥ ಪುರುಷನೊಬ್ಬನು ಇರುವನೆಂದು ಸಾರುತ್ತಿರುವವು.

ಆತನ ಸ್ವಭಾವವೇನು ? ಆತನು ಎಲ್ಲೆಲ್ಲಿಯೂ ಇರುತ್ತಿರುವನು, ಪರಿಶುದ್ಧನಾಗಿರುವನು, ನಿರಾಕಾರನಾಗಿರುವನು, ಸರ್ವಶಕ್ತನಾಗಿರುವನು, ದಯಾ ಮಯನಾಗಿರುವನು. "ನೀನೇ ನಮ್ಮ ತಂದೆಯು, ನೀನೇ ನಮ್ಮ ತಾಯಿಯು, ನೀನೇ ನಮ್ಮ ಪ್ರಿಯಸಖನು; ನೀನೇ ಬಲಕ್ಕೆಲ್ಲ ಮೂಲವು, ನಮಗೆ ಬಲವನ್ನು ಕೊಡು. ಈ ಪ್ರಪಂಚದ ಹೊರೆಗಳನ್ನೆಲ್ಲ ಹೊರುವನು ನೀನೆ; ಈ ಸಂಸಾರದ ಸಣ್ಣ ಹೊರೆಯನ್ನು ಹೊರುವದಕ್ಕೆ ನನಗೆ ಶಕ್ತಿಯನ್ನು ಅನುಗ್ರಹಿಸು." ಹೀಗೆಂದು ವೇದದ ಋಷಿಗಳು ಆತನನ್ನು ಕೇಳಿಕೊಂಡಿರುತ್ತಾರೆ. ಹಾಗಾದರೆ ಆತನನ್ನು ಆರಾಧನೆಮಾಡುವದು ಹೇಗೆ? ಪ್ರೇಮದಿಂದ. "ಆತನನ್ನು ಪ್ರಿಯನೆಂದು, ಈ ಲೋಕದಲ್ಲಿಯಾಗಲಿ ಪರ-ಲೋಕದಲ್ಲಿಯಾಗಲಿ ಇರುವದೆಲ್ಲಕ್ಕಿಂತಲೂ ಪ್ರಿಯನೆಂದು, ಉಪಾಸನೆಮಾಡಬೇಕು."

ಇದು ವೇದದಲ್ಲಿ ಹೇಳಿರುವ ಭಕ್ತಿಮಾರ್ಗವು. ಇದನ್ನು ಶ್ರೀಕೃಷ್ಣನು ಹೇಗೆ ಪೂರ್ಣವಾಗಿ ಬೆಳೆಯಿಸಿ ಉಪದೇಶಿಸಿರುತ್ತಾನೆಂಬುದನ್ನು ನೋಡೋಣ. ಶ್ರೀಕೃಷ್ಣನು ಭೂಮಿಯಲ್ಲಿ ಅವತರಿಸಿದ ಪರಮಾತ್ಮನೇ ಎಂಬುದು ಹಿಂದುಗಳ ನಂಬಿಕೆ. ಆತನ ಉಪದೇಶವೇನೆಂದರೆ, ಈ ಲೋಕದಲ್ಲಿ ಮನುಷ್ಯನು ತಾವರೆಯೆಲೆಯಂತೆ

* ಸಿಂಹದ ಮರಿಯೊಂದನ್ನು ಹಿಡಿದು ಕುರುಬನು ಸಾಕಲು, ಅದು ತಾನೂ ಕುರಿಯೆಂದೇ ತಿಳಿದುಕೊಂಡಿತ್ತೆಂದೂ ಮತ್ತೊಂದು ಸಿಂಹದ ಬೋಧೆಯಿಂದ ತನ್ನ ನಿಜವಾದ ಸ್ವರೂಪವನ್ನು ಅರಿತುಕೊಂಡಿತೆಂದೂ ಕಥೆ.

ಜೀವನವಮಾಡಬೇಕು; ಈ ಎಲೆಯು ನೀರಿನಲ್ಲಿಯೇ ಇದ್ದರೂ ಎಂದಿಗೂ ಒದ್ದೆಯಾಗುವದೇ ಇಲ್ಲ. ಇದರಂತೆಯೇ ಮನುಷ್ಯನು ಈ ಲೋಕದಲ್ಲಿ ಬಾಳುಮಾಡಿಕೊಂಡಿರಬೇಕು; ದೇವರಲ್ಲಿ ಹೃದಯವನ್ನು ಇಟ್ಟು, ಕೆಲಸಕ್ಕೆ ಕೈಹಾಕಬೇಕು.

ಈ ಲೋಕದಲ್ಲಿಯಾಗಲಿ ಪರಲೋಕದಲ್ಲಿಯಾಗಲಿ ತಕ್ಕ ಫಲವಾಗುವದೆಂಬ ಆಸೆಯಿಂದ ದೇವರನ್ನು ಪ್ರೀತಿಸುವದೂ ಒಳ್ಳೆಯದೆ; ಆದರೆ ಪ್ರೇಮಕ್ಕಾಗಿಯೇ ಆ ಭಗವಂತನನ್ನು ಪ್ರೀತಿಸುವದು ಮತ್ತೂ ಒಳ್ಳೆಯದು. ಈ ಸ್ತೋತ್ರವನ್ನು ಕೇಳಿ: "ಭಗವಂತನೆ, ನನಗೆ ಹಣಕಾಸು ಬೇಡ, ಮಕ್ಕಳುಮರಿಗಳೂ ಬೇಡ, ವಿದ್ಯೆಯೂ ಬೇಡ, ನನಗೆ ಜನ್ಮಾಂತರಗಳಾಗಬೇಕೆಂದು ನಿನ್ನ ಸಂಕಲ್ಪವಿದ್ದರೆ, ಎಷ್ಟು ಜನ್ಮಗಳಾದರೂ ಬರಲಿ; ಆದರೆ ಇದೊಂದನ್ನು ಮಾತ್ರ ನನಗೆ ಅನುಗ್ರಹಿಸು–ಪ್ರತಿಫಲವನ್ನು ಅಪೇಕ್ಷಿಸದೆ ಪ್ರೇಮಕ್ಕಾಗಿಯೇ ನಿನ್ನಲ್ಲಿ ಪ್ರೇಮವಿಡುವಂತೆ ಮಾಡು." ಶ್ರೀಕೃಷ್ಣನ ಶಿಷ್ಯರಲ್ಲೊಬ್ಬನು, ಆಗಿನ ಕಾಲಕ್ಕೆ ಭರತಖಂಡದ ಚಕ್ರವರ್ತಿಯಾಗಿದ್ದನು. ಶತ್ರುಗಳು ಆತನನ್ನು ರಾಜ್ಯದಿಂದ ಹೊರಗಟ್ಟಲು, ಆತನು ರಾಣಿಯೊಡನೆ ಹಿಮಾಲಯದ ತಪ್ಪಲಲ್ಲಿದ್ದ ಒಂದಾನೊಂದು ಕಾಡನ್ನು ಸೇರಿದನು. ಅಲ್ಲಿ ಒಂದು ದಿನ ರಾಣಿಯು ಆತನನ್ನು ಕುರಿತು 'ಲೋಕದಲ್ಲೆಲ್ಲ ಧರ್ಮಿಷ್ಠನೆನಿಸಿರುವ ನಿನಗೂ ಇಂಥ ಕಷ್ಟವು ಬರುವದಕ್ಕೆ ಕಾರಣವೇನು?' ಎನ್ನಲು ಯುಧಿಷ್ಠಿರನಿಂತೆಂದನು: "ಪ್ರಿಯಳೆ, ಇಗೋ ಈ ಹಿಮಾಲಯಪರ್ವತಶ್ರೇಣಿಯನ್ನು ನೋಡು; ಎಷ್ಟು ಅದ್ಭುತವಾಗಿ, ಎಷ್ಟು ಸುಂದರವಾಗಿದೆ ! ಅದನ್ನು ಕಂಡರೆ ನನಗೆ ಬಹಳ ಪ್ರೀತಿ. ಅದರಿಂದ ನನಗೇನೂ ಸಿಕ್ಕುವದಿಲ್ಲ; ಆದರೂ ವಿಭೂತಿಯಿಂದೊಡಗೂಡಿರುವ ಸುಂದರವಾದ ವಸ್ತುವನ್ನೆಲ್ಲ ಪ್ರೀತಿಸುವದು ನನ್ನ ಸ್ವಭಾವವು, ಆದ್ದರಿಂದ ಅದನ್ನು ನಾನು ಪ್ರೀತಿಸುತ್ತೇನೆ. ಇದರಂತೆ ನಾನು ಭಗವಂತನಲ್ಲಿ ಭಕ್ತಿಯುಳ್ಳವನಾಗಿರುತ್ತೇನೆ ; ಏಕೆಂದರೆ ಆತನೇ ಎಲ್ಲಾ ಸೌಂದರ್ಯಕ್ಕೂ ಎಲ್ಲ ವಿಧವಾದ ಮಹತ್ತಿಗೂ ಕಾರಣನಾಗಿರುವನು; ಆತನೇ ಪ್ರೇಮಕ್ಕೆಲ್ಲ ವಿಷಯವಾಗಲರ್ಹನು. ಆತನನ್ನು ಪ್ರೀತಿಸುವದು ನನಗೆ ಸ್ವಭಾವವು, ಆದ್ದರಿಂದ ಆತನನ್ನು ನಾನು ಪ್ರೀತಿಸುತ್ತೇನೆ. ನನಗೆ ಏನಾದರೂ ಬೇಕೆಂದು ಆತನನ್ನು ನಾನು ಭಜಿಸುತ್ತಿರುವದಿಲ್ಲ, ನನಗೇನೂ ಆಗಬೇಕಾದದ್ದೂ ಇಲ್ಲ. ನನ್ನನ್ನು ಎಲ್ಲಿಡಬೇಕೆಂದು ಆತನಿಗೆ ಇಚ್ಛೆ ಬರುವದೋ ಅಲ್ಲಿಡಲಿ. ಆತನನ್ನು ಪ್ರೀತಿಗಾಗಿಯೇ ನಾನು ಪ್ರೀತಿಸುತ್ತಿರುವೆನು. ನಾನು ಪ್ರೇಮದಲ್ಲಿ ವ್ಯಾಪಾರಮಾಡಲಾರೆ."

ಆತ್ಮನೆಂಬುದು ನಿಜವಾಗಿ ಈಶ್ವರಸ್ವರೂಪವಾಗಿಯೇ ಇರುವದೆಂದೂ, ಆದರೆ ಅದು ಪ್ರಕೃತಿಯ ಬಂಧದಲ್ಲಿ ಸಿಕ್ಕುಬಿದ್ದಿರುವದೆಂದೂ ವೇದಗಳು ಹೇಳುತ್ತಿವೆ. ಈ ಬಂಧವು ಕಡಿದುಹೋದರೆ ಪೂರ್ಣತೆಯನ್ನು ಪಡೆದಂತಾಗುತ್ತದೆ. ಆದ್ದರಿಂದ ಆ ಪೂರ್ಣತೆಗೆ ವೇದಗಳಲ್ಲಿ ಉಪಯೋಗಿಸಿರುವ ಮಾತು ಯಾವದೆಂದರೆ ಮುಕ್ತಿ(ಬಿಡುಗಡೆ) ; ಮುಕ್ತಿ ಎಂದರೆ ಅಪೂರ್ಣತೆಯೆಂಬ ಬಂಧದಿಂದ ಬಿಡುಗಡೆಯಾಗುವದು, ಮರಣದಿಂದಲೂ ದುಃಖದಿಂದಲೂ ಬಿಡುಗಡೆಹೊಂದುವದು.

ಈ ಬಂಧವು ತೊಲಗಿಹೋಗಬೇಕಾದರೆ ಪರಮೇಶ್ವರನ ಅನುಗ್ರಹವಾಗಬೇಕು. ಈ

ಅನುಗ್ರಹವೆಂಬುದು ಪರಿಶುದ್ಧರಾದವರಿಗೆ ಮಾತ್ರ ದೊರಕುವದು. ಆದ್ದರಿಂದ ಆತನು ಪ್ರಸನ್ನನಾಗುವದಕ್ಕೆ ನಾವು ಪರಿಶುದ್ಧರಾಗಿರುವದವಶ್ಯವೆಂದಾಯಿತು. ಈ ಅನುಗ್ರಹದ ಪರಿಣಾಮವೇನು ? ಪರಿಶುದ್ಧಾತ್ಮರಾದವರಿಗೆ ಆತನು ತನ್ನ ಸ್ವರೂಪವನ್ನು ಪ್ರಕಟಗೊಳಿಸುವನು; ಪರಿಶುದ್ಧರೂ ಕಲ್ಮಷರಹಿತರೂ ಆದವರು ದೇವರನ್ನು ಕಾಣುತ್ತಾರೆ. ಈ ಜನ್ಮದಲ್ಲಿಯೇ ಕಾಣುತ್ತಾರೆ. ಹೃದಯದ ಡೊಂಕೆಲ್ಲ ಹೋಗಿ ನೆಟ್ಟಗಾಗುವದು ಆಗಲೇ; ಆಗ ಸಂಶಯವೆಲ್ಲ ನಿಂತುಹೋಗುವದು. ಅವರು ಕಾರ್ಯಕಾರಣದ ಕಟ್ಟಿಗೆ ಇನ್ನು ಮೇಲೆ ಸಿಕ್ಕಿ ನರಳಬೇಕಾದದ್ದೇನೂ ಇರುವದಿಲ್ಲ.

ಇದೇ ಹಿಂದೂಧರ್ಮದ ಪರಮಕೇದ್ರವು, ಇದೇ ಅದರ ಜೀವವು. ಹಿಂದುಗಳು ಬರಿಯ ಮಾತುಗಳನ್ನಾಗಲಿ ವಾದಗಳನ್ನಾಗಲಿ ನಂಬಿಕೊಂಡು ಕೂರುವದಿಲ್ಲ. ಇಂದ್ರಿಯಕ್ಕೆ ಗೋಚರವಾಗಿರುವ ವಿಷಯಗಳಿಗೆ ಅತೀತವಾಗಿರುವ ಸ್ಥಿತಿಯೂ ಇರುವದಾದರೆ, ಅವುಗಳನ್ನು ಸಾಕ್ಷಾತ್ತಾಗಿ ಕಂಡುಕೊಳ್ಳಬೇಕೆಂಬುದು ಹಿಂದುವಿನ ಸಂಕಲ್ಪವು. ತನ್ನಲ್ಲಿ ಪ್ರಕೃತಿಯಲ್ಲದ ಆತ್ಮವೊಂದು ಇರುವದು ನಿಜವಾದರೆ, ಕರುಣಾಮಯನಾದ ವಿಶ್ವಾತ್ಮನೊಬ್ಬನು ಇರುವದು ನಿಜವಾದರೆ, ತಾನು ಆತನ ಬಳಿಗೇ ನೇರಾಗಿ ಹೋಗಬೇಕೆನ್ನುತ್ತಾನೆ. ಆತನನ್ನು ಕಂಡುಕೊಳ್ಳಬೇಕು. ಆಗಲೇ ಸಂದೇಹಗಳೆಲ್ಲ ನಿವಾರಣೆಯಾದಾವು. ಆದ್ದರಿಂದ ಆತ್ಮದ ವಿಷಯದಲ್ಲಿಯಾಗಲಿ ದೇವರ ವಿಷಯದಲ್ಲಿಯಾಗಲಿ ಪ್ರಮಾಣವೇನೆಂದು ಕೇಳಿದರೆ ಹಿಂದೂಜ್ಞಾನಿಯು "ನಾನು ಆತ್ಮನನ್ನು ಕಂಡುಕೊಂಡಿದ್ದೇನೆ, ನಾನು ದೇವರನ್ನು ಕಂಡಿದ್ದೇನೆ" ಎನ್ನುತ್ತಾನೆ. ಇದೇ ಆತನು ತೋರಿಸುವ ಉತ್ತಮಪ್ರಮಾಣವು. ಪೂರ್ಣನಾಗುವದಕ್ಕೆ ಇದೊಂದೇ ಬೇಕಾದದ್ದು. ಹಿಂದೂಧರ್ಮವೆಂದರೆ ಯಾವದಾದರೊಂದು ಉಪದೇಶವನ್ನಾಗಲಿ ಮತಪದ್ಧತಿಯನ್ನಾಗಲಿ ನಂಬುವದಕ್ಕಾಗಿ ಮಾಡಬೇಕಾಗಿರುವ ಹೆಣಗಾಟಗಳಲ್ಲ, ಪ್ರಯತ್ನಗಳಲ್ಲ; ಸಾಕ್ಷಾತ್ಕಾರಮಾಡುವದೇ ಹಿಂದೂಧರ್ಮವು. ನಂಬುವದಲ್ಲ; ಅದರಂತೆ ಇರುವದು, ಆಗುವದು. ಹೀಗೆ ಅವರ ಮತದ ಮುಖ್ಯೋದ್ದೇಶವೆಂದರೆ ಮತ್ತೆ ಮತ್ತೆ ಎಡೆಬಿಡದೆ ಸಾಧನಮಾಡಿ ಪೂರ್ಣನಾಗುವದು, ದೇವನಾಗುವದು, ದೇವರನ್ನು ಸೇರಿ ದೇವರನ್ನು ಕಂಡುಕೊಳ್ಳುವದೇ. ಹೀಗೆ ದೇವರನ್ನು ಸೇರಿ ದೇವರನ್ನು ಕಂಡುಕೊಳ್ಳುವದೆಂಬುದೇ, ವೈಕುಂಠದಲ್ಲಿ ಪರಮೇಶ್ವರನಂತೆ ತಾನೂ ಪರಿಪೂರ್ಣನಾಗುವದೇ, ಹಿಂದುಗಳ ಧರ್ಮವಾಗಿರುತ್ತದೆ. ಹೀಗೆ ಪರಿಪೂರ್ಣನಾದವನು ಹೇಗೆ ವ್ಯವಹರಿಸುತ್ತಾನೆ ? ಅವನು ಪರಮಾನಂದದಿಂದ ಇರುವನು. ಮನುಷ್ಯನಿಗೆ ಸಂತೋಷಕ್ಕೆ ಕಾರಣವಾಗಿರುವ ಒಂದೇ ಒಂದು ಪದಾರ್ಥವಾದ ಪರಮೇಶ್ವರನನ್ನು ಹೊಂದಿರುವದರಿಂದ ಆತನು ಆ ಪರಮೇಶ್ವರನೊಂದಿಗೆ ಆನಂದದಿಂದಿರುವನು, ಪರಿಪೂರ್ಣವಾದ ಆನಂದವನ್ನು ಅನುಭವಿಸುತ್ತಿರುವನು.

ಇಲ್ಲಿಯವರೆಗೆ ಹಿಂದುಗಳೆಲ್ಲ ಒಂದೇ ಅಭಿಪ್ರಾಯವುಳ್ಳವರಾಗಿರುತ್ತಾರೆ. ಇದು ಭರತಖಂಡದಲ್ಲಿರುವ ಎಲ್ಲ ಪಂಗಡದವರಿಗೂ ಒಪ್ಪಾಗಿರುವ ಮತವು. ಆದರೆ

ಪೂರ್ಣತ್ವವೆಂಬುದು ನಿರಪೇಕ್ಷವಾಗಿರಬೇಕು. ನಿರಪೇಕ್ಷಪೂರ್ಣತ್ವವೆಂಬುದು ಎರಡೂ ಮೂರೂ ಆಗಲಾರದು. ಅದರಲ್ಲಿ ಯಾವ ಗುಣಗಳೂ ಇರಲಾರವು. ಅದು ಒಂದು ವ್ಯಕ್ತಿಯಾಗಿರಲಾರದು. ಆದ್ದರಿಂದ ಆತ್ಮವು ಪರಿಪೂರ್ಣವಾದಾಗ, ಅದು ನಿರಪೇಕ್ಷ ಸ್ವಾತಂತ್ರ್ಯವನ್ನು ಪಡೆದಾಗ, ಅದು ಬ್ರಹ್ಮಸಾಯುಜ್ಯವನ್ನೇ ಪಡೆಯಬೇಕು. ಆಗ ಅದು ಪರಮೇಶ್ವರನನ್ನು ತನ್ನ ಸ್ವರೂಪದ ಮತ್ತು ತನ್ನ ಇರವಿನ ಪರಿಪೂರ್ಣತೆಯೆಂದೇ ಅದರ ಪರಮಾರ್ಥವೆಂದೇ ಕಂಡುಕೊಳ್ಳಬೇಕು; ನಿರಪೇಕ್ಷಸತ್ಯವನ್ನಾಗಿಯೂ ನಿರಪೇಕ್ಷಜ್ಞಾನಸ್ವರೂಪವನ್ನಾಗಿಯೂ ನಿರಪೇಕ್ಷಾನಂದಸ್ವರೂಪವನ್ನಾಗಿಯೂ ಕಂಡುಕೊಳ್ಳಬೇಕು.

ಕೆಲವರು ಇದರಲ್ಲಿ ಕಲ್ಲುಬಂಡೆಯಂತೆ ಜಡವಾಗಿಬಿಡುವದೆಂತಲೂ ಆತ್ಮವು ಕೊರಡಿನಂತೆ ಅಥವಾ ಕಲ್ಲುಬಂಡೆಯಂತೆ ಜಡವಾಗಿಬಿಡುವದೆಂತಲೂ ಹಾಸ್ಯ ಮಾಡಿರುವದನ್ನು ಗ್ರಂಥಗಳಲ್ಲಿ ನಾವು ಆಗಾಗ್ಗೆ ಓದಿರುವದುಂಟು. "ಯಾವನಿಗೆ ಗಾಯವೇ ಆಗಿರುವದಿಲ್ಲವೋ ಅವನಿಗೆ ಗಾಯದ ಕಲೆಯನ್ನು ಕಂಡರೆ ಪರಿಹಾಸ್ಯ." ಮುಕ್ತಿಯೆಂಬುದು ಈ ಜನರು ವರ್ಣಿಸಿರುವಂಥದ್ದೇನೂ ಅಲ್ಲವೆಂದು ಖಂಡಿತವಾಗಿ ತಿಳಿಯಿರಿ. ಈ ಒಂದು ಸಣ್ಣ ಶರೀರವಿದೆಯೆಂಬ ಅರಿವನ್ನು ಅನುಭವಿಸುವದೆಂಬುದು ಸುಖವಾಗಿದ್ದರೆ, ಎರಡು ಶರೀರಗಳ ಅನುಭವವಿರುವದು ಮತ್ತೂ ಸುಖವಾಗಿರಬೇಕಲ್ಲವೆ? ಶರೀರದ ಸಂಖ್ಯೆಯು ಹೆಚ್ಚಿದಂತೆಲ್ಲ ಸೌಖ್ಯವೂ ಹೆಚ್ಚುತ್ತಾ ಹೋಗಿ ಕೊನೆಗೆ ಸಾರ್ವತ್ರಿಕಾನುಭವವುಂಟಾದರೆ ಮಿಗಿಲಿಲ್ಲವೆನಿಸುವ ಪರಮಾವಧಿಯ ಆನಂದವಾಗಬೇಕಾಯಿತು. ಆದ್ದರಿಂದ ಈ ಅನಂತವಾದ ಸಾರ್ವತ್ರಿಕವ್ಯಕ್ತಿತ್ವವನ್ನು ಸಂಪಾದಿಸಿಕೊಳ್ಳಬೇಕಾದರೆ ಈ ಬಡ ಸೆರೆಮನೆಯ ಪುಟ್ಟವ್ಯಕ್ತಿತ್ವವು ತೊಲಗಬೇಕು. ನಾನೂ ಪ್ರಾಣವೂ ಒಂದಾದಾಗ ಮಾತ್ರ ನನಗೆ ದುಃಖವಿಲ್ಲದಂತಾದೀತು; ನಾನೂ ಜ್ಞಾನವೂ ಒಂದಾದಾಗ ಮಾತ್ರ ನನಗೆ ದುಃಖವಿಲ್ಲದಂತಾದೀತು ; ನಾನೂ ಜ್ಞಾನವೂ ಒಂದಾದಾಗ ಮಾತ್ರ ನನ್ನಲ್ಲಿರುವ ಅಜ್ಞಾನಗಳೆಲ್ಲ ಇಲ್ಲದಂತಾದಾವು. ಆದ್ದರಿಂದ ಇದೊಂದೇ ಶಾಸ್ತ್ರೀಯವಾದ ತೀರ್ಮಾನವಾಗಿರುತ್ತದೆ. ಈ ಭೌತಿಕವ್ಯಕ್ತಿತ್ವವೆಂಬುದು ಭ್ರಾಂತಿಯೆಂದೂ ನಿಜವಾಗಿ ನೋಡಿದರೆ ಈ ನನ್ನ ಶರೀರವೆಂಬುದು ಅಖಂಡವಾದ ಭೌತಿಕ ಸಾಗರದಲ್ಲಿ ಎಡೆಬಿಡದೆ ಮಾರ್ಪಡುತ್ತಿರುವ ಒಂದಲೆಯೆಂದೂ ಭೌತಿಕ ವಿಜ್ಞಾನಶಾಸ್ತ್ರವು ಸಿದ್ಧಾಂತಮಾಡಿರುತ್ತದೆ. ಇದರಂತೆ ನನ್ನಲ್ಲಿರುವ ಮತ್ತೊಂದು ಭಾಗವಾದ ಆತ್ಮವೆಂಬುದೂ ಅದ್ವೈತವೇ ಆಗಿರಬೇಕೆಂಬುದೇ ನ್ಯಾಯವಾದ ತೀರ್ಮಾನವಾಗಿರುವದು.

ಶಾಸ್ತ್ರವೆಂದರೆ ಏಕತ್ವವನ್ನು ಕಂಡುಕೊಳ್ಳುವದೇ ಹೊರತು ಮತ್ತೆ ಬೇರೆಯಲ್ಲ. ಶಾಸ್ತ್ರಕ್ಕೆ ಪೂರ್ಣವಾದ ಏಕತ್ವವು ದೊರಕಿದರೆ ಇನ್ನು ಮುಂದೆ ಅದು ಬೆಳೆಯಲೇ ಆರದು, ಏಕೆಂದರೆ ಆಗ ಅದು ತನ್ನ ಗುರಿಯನ್ನು ಮುಟ್ಟಿದಂತಾಗಿರುವದು. ಉದಾಹರಣೆಗೆ ಒಂದೇ ಧಾತುವಿನಿಂದ ಮಿಕ್ಕ ಧಾತುಗಳನ್ನೆಲ್ಲ ಮಾಡಬಹುದೆಂಬುದನ್ನು ಕಂಡುಹಿಡಿದ ಮೇಲೆ ರಸಾಯನಶಾಸ್ತ್ರವು ಇನ್ನು ಮುಂದಕ್ಕೆ ಬೆಳೆಯಲಾರದು; ಎಲ್ಲಾ ಶಕ್ತಿಗಳೂ ಯಾವದೊಂದು ಶಕ್ತಿಯ

ವ್ಯಕ್ತರೂಪಾಂತರಗಳಾಗಿರುವವೋ ಅಂಥ ಶಕ್ತಿಯೊಂದನ್ನು ಕಂಡುಹಿಡಿದರೆ ಶಕ್ತಿಶಾಸ್ತ್ರವು ಅಲ್ಲಿಗೇ ನಿಲ್ಲುವದು. ಇದರಂತೆ ಯಾವನು ಮರಣಮಯವಾದ ಈ ಪ್ರಪಂಚದಲ್ಲಿ ಒಬ್ಬನೇ ಪ್ರಾಣನಾಗಿಯೂ ಎಂದೆಂದಿಗೂ ಮಾರ್ಪಡುತ್ತಿರುವ ಈ ಪ್ರಪಂಚಕ್ಕೆ ಎಂದಿಗೂ ಮಾರ್ಪಡದ ಕೂಟಸ್ಥಾಧಾರನಾಗಿಯೂ ಮಿಕ್ಕ ಎಲ್ಲಾ ಆತ್ಮಗಳೂ ತನ್ನ ಭ್ರಾಂತಿಮಯ-ರೂಪಾಂತರಗಳಾಗಿರುವ ಒಬ್ಬ ಪರಮಾತ್ಮನಾಗಿಯೂ ಇರುವನೋ ಆತನನ್ನು ಕಂಡುಕೊಂಡರೆ ಧರ್ಮದ ತತ್ತ್ವಶಾಸ್ತ್ರವೂ ಪೂರ್ಣವಾಗುವದು. ಈ ರೀತಿಯಲ್ಲಿ ನಾನಾತ್ಮದ ಮತ್ತು ದ್ವೈತದ ಮೂಲಕವಾಗಿ ಕೊನೆಯಲ್ಲಿ ಏಕತ್ವವೇ ಸಿಕ್ಕುತ್ತದೆ. ಧರ್ಮವೆಂಬುದು ಇನ್ನು ಮುಂದಕ್ಕೆ ಹೋಗಲಾರದು; ಇದು ಎಲ್ಲಾ ಶಾಸ್ತ್ರಗಳಿಗೂ ಗುರಿಯಾಗಿರುತ್ತದೆ.

ಯಾವ ಶಾಸ್ತ್ರವೇ ಆಗಲಿ, ಒಂದಲ್ಲದಿದ್ದರೆ ಒಂದು ಕಾಲದಲ್ಲಿ ಈ ನಿರ್ಣಯಕ್ಕೆ ಬಂದೇ ತೀರಬೇಕಾಗುವದು. ಈಗಿನ ಶಾಸ್ತ್ರದಲ್ಲಿ 'ವ್ಯಕ್ತವಾಗುವದು' ಎಂಬ ಶಬ್ದವಿದೆಯೇ ಹೊರತು ಸೃಷ್ಟಿ ಎಂಬ ಸೊಲ್ಲೇ ಇಲ್ಲ. ಇದನ್ನು ಕೇಳಿ–ತಾನು ಎಷ್ಟೋ ಯುಗಗಳಿಂದ ಹೃದಯದಲ್ಲಿ ಮೆಚ್ಚಿ ಇಟ್ಟುಕೊಂಡಿದ್ದ ಈ ತತ್ತ್ವವನ್ನು ಇನ್ನೂ ಬಲವಾದ ಭಾಷೆಯಲ್ಲಿ ವಿಜ್ಞಾನಶಾಸ್ತ್ರದ ಅತ್ಯಂತ ನೂತನಸಿದ್ಧಾಂತಕ್ಕೊಪ್ಪುವ ಹೊಸ ಸಾಧಕಯುಕ್ತಿಗಳನ್ನೂ ಸೇರಿಸಿ ಬೋಧಿಸುವರಲ್ಲ ! ಎಂದು ಹಿಂದುವಿಗೆ ಪರಮಸಂತೋಷವಾಗಿರುತ್ತದೆ.

ತತ್ತ್ವಶಾಸ್ತ್ರದ ಈ ಹೆಚ್ಚಿನ ಆಶೋತ್ತರಗಳು ಹಾಗಿರಲಿ, ಇವನ್ನು ಬಿಟ್ಟು ಮೂಢರ ಧರ್ಮದ ಕಡೆಗೆ ಈಗ ಇಳಿದು ಬರೋಣ. ಮೊಟ್ಟಮೊದಲು ನಾನು ನಿಮಗೆ ತಿಳಿಸಬೇಕಾಗಿ-ರುವದೇನೆಂದರೆ ಭರತಖಂಡದಲ್ಲಿ ಬಹುದೇವತಾಪೂಜೆಯೆಂಬುದೇ ಇಲ್ಲ. ಪ್ರತಿಯೊಂದು ದೇವಾಲಯದಲ್ಲಿಯೂ ನಿಂತು ಕೇಳಿದರೆ ಆರಾಧಕರು ಮೂರ್ತಿಗಳಿಗೆ ಸರ್ವವ್ಯಾಪಕತ್ವವೇ ಮುಂತಾದ ಈಶ್ವರನ ಸಕಲವಿಶೇಷಣಗಳನ್ನೂ ಹಾಕುತ್ತಾರೆಂಬುದು ಕಂಡುಬರುತ್ತದೆ. ಇದು ಬಹುದೇವತಾರಾಧನೆಯಲ್ಲ. ಇದನ್ನು 'ಒಬ್ಬ ಈಶ್ವರನ ಆರಾಧನೆ'* (henotheism) ಎಂದು ಕರೆದರೂ ಇದನ್ನು ವಿವರಿಸಿದಂತಾಗುವದಿಲ್ಲ. "ಗುಲಾಬಿಯನ್ನು ಮತ್ತೆ ಯಾವ ಹೆಸರಿನಿಂದ ಕರೆದರೂ ಅಷ್ಟೇ ಸುವಾಸನೆಯಾಗಿರುತ್ತದೆ." ಬರಿಯ ಹೆಸರುಗಳನ್ನು ಇಟ್ಟಮಾತ್ರದಿಂದ ವಿಷಯವನ್ನು ವಿವರಿಸಿದಂತೆ ಆಗುವದೂ ಇಲ್ಲ.

ನಾನು ಹುಡುಗನಾಗಿದ್ದಾಗ ಭರತಖಂಡದಲ್ಲಿ ಒಬ್ಬ ಕ್ರೈಸ್ತಪಾದ್ರಿಯು ಒಂದು ದಿನ ಜನರಿಗೆ ಮತಬೋಧನೆಯನ್ನು ಮಾಡುತ್ತಿದ್ದನು. ಅದು ಈಗ ನನ್ನ ನೆನಪಿಗೆ ಬಂತು. ಅವನು ಏನೇನೋ ಅವರಿಗೆ ಹೇಳಿ ನಡುವೆ "ಇಗೋ, ಈ ಕೋಲಿನಿಂದ ಒಂದೇಟನ್ನು ನಿಮ್ಮ ವಿಗ್ರಹಕ್ಕೆ ಕೊಟ್ಟರೆ ಅದೇನು ಮಾಡೀತು ?" ಎಂದನು. ಇದನ್ನು ಕೇಳುತ್ತಿದ್ದವರಲ್ಲಿ ಒಬ್ಬನು ತಟ್ಟನೆ "ನಾನು ನಿಮ್ಮ ದೇವರನ್ನು ಬಯ್ದರೆ ಅವನು ತಾನೆ ಏನು ಮಾಡಿಯಾನು?" ಎಂದು ಕೇಳಿದನು. ಆಗ ಬೋಧಕನು "ನೀನು ಸತ್ತಬಳಿಕ ಅದಕ್ಕೆ ನಿನಗೆ ಶಿಕ್ಷೆಮಾಡುವನು" ಎನ್ನಲು, ಆ ಹಿಂದುವು "ನಮ್ಮ ದೇವರೂ ಹಾಗೆಯೇ, ನೀನು ಸತ್ತಬಳಿಕ ನಿನಗೆ ಶಿಕ್ಷೆಮಾಡುತ್ತಾನೆ !" ಎಂದುತ್ತರವಿತ್ತನು.

*ದೇವರು ಒಬ್ಬನೇ, ಎರಡನೆಯ ದೇವರು ಇಲ್ಲ– ಎಂದು ಹೇಳದೆ ಒಂದು ದೇವತೆಯನ್ನೇ ಪೂಜಿಸುವ ಮತಕ್ಕೆ 'ಹೀನೋಥೀ ಇಸಮ್' ಎಂಬ ಹೆಸರನ್ನು ಧರ್ಮೇತಿಹಾಸತತ್ತ್ವ ಶೋಧಕರಾದ ಪಾಶ್ಚಾತ್ಯವಿದ್ವಾಂಸರು ಕೊಟ್ಟಿರುವರು.

ಮರದ ಯೋಗ್ಯತೆಯನ್ನು ಅದರ ಹಣ್ಣುಗಳಿಂದ ಗೊತ್ತುಮಾಡಬೇಕಷ್ಟೆ. ವಿಗ್ರಹಾರಾಧಕರೆಂದು ನೀವು ಕರೆಯುವ ಜನರಲ್ಲಿಯೇ ನೀತಿಯಲ್ಲಾಗಲಿ ಆತ್ಮಶಕ್ತಿಯಲ್ಲಾಗಲಿ ಪ್ರೇಮದಲ್ಲಾಗಲಿ ಎಲ್ಲೆಲ್ಲಿಯೂ ಕಾಣಬರದಂಥ ಜನರು ಕಂಡುಬಂದಿರುವದರಿಂದ ನನಗೆ ಈ ಪ್ರಶ್ನೆಯು ಮುಂದೆ ನಿಲ್ಲುವದು : "ಪಾಪದಿಂದ ಪಾವಿತ್ರ್ಯವುಂಟಾದೀತೆ ?"

ಮೂಢಭಕ್ತಿಯು ಮನುಷ್ಯನಿಗೆ ದೊಡ್ಡ ಶತ್ರುವೇ ಸರಿ, ಆದರೆ ಧರ್ಮಾಂಧತೆಯೆಂಬುದು ಅದಕ್ಕಿಂತ ಕೆಟ್ಟದ್ದು. ಕ್ರಿಸ್ತಿಯನ್ನರು ದೇವಮಂದಿರಕ್ಕೆ (church) ಹೋಗುವದೇಕೆ ? ಶಿಲುಬೆಯು (cross) ಪವಿತ್ರವೆನ್ನುವದೇಕೆ? ಪ್ರಾರ್ಥನೆಮಾಡುವಾಗ ಕ್ರಿಸ್ತಿಯನರು ಆಕಾಶದ ಕಡೆಗೆ ಮುಖ ತಿರುಗಿಸುವದೇಕೆ ? ಕ್ಯಾಥೊಲಿಕರ * ದೇವಮಂದಿರಗಳಲ್ಲಿ ಅಷ್ಟೊಂದು ಪ್ರತಿಮೆಗಳಿರುವದೇಕೆ? ಪ್ರಾಟೆಸ್ತೆಂತರು ಪ್ರಾರ್ಥನೆಮಾಡುವಾಗ ಅವರ ಮನಸ್ಸಿನಲ್ಲಿ ಅಷ್ಟೊಂದು ಮೂರ್ತಿಗಳಿರುವದೇಕೆ? ಭ್ರಾತೃಗಳಿರ, ಉಸಿರಾಡದೆ ಬದುಕಿರುವದು ಹೇಗೆ ಆಗಲಾರದೋ ಹಾಗೆಯೇ ಮಾನಸಚಿತ್ರವನ್ನು ಮಾಡಿಕೊಳ್ಳದೆ ಯಾವದಾದರೊಂದು ವಸ್ತುವಿನ ವಿಷಯವಾಗಿ ಆಲೋಚನೆಮಾಡುವದೆಂಬುದೂ ಆಗಲಾರದು. ಬಾಹ್ಯಮೂರ್ತಿಯು ಮಾನಸಭಾವನೆ ಯನ್ನುಂಟುಮಾಡುವದೂ ಇದಕ್ಕೆ ಬದಲಾಗಿ ಮಾನಸ ಭಾವನೆಯು ಬಾಹ್ಯಮೂರ್ತಿಯನ್ನು ನೆನಪುಗೊಡುವದೂ ಸಹಚಾರನಿಯಮವು. ✝ ಆರಾಧನೆಯಲ್ಲಿ ಹಿಂದುವು ಹೊರಗೆ ಯಾವದಾದರೊಂದು ಸಂಕೇತವನ್ನುಪಯೋಗಿಸುತ್ತಿರುವದಕ್ಕೆ ಇದೇ ಕಾರಣವು. ಯಾವಾತನನ್ನು ತಾನು ಪ್ರಾರ್ಥಿಸುವನೋ ಅವನಲ್ಲಿಯೇ ಮನಸ್ಸನ್ನು ನಿಲ್ಲಿಸುವದಕ್ಕೆ ಇದು ಸಹಾಯಕರವಾಗಿರುವದೆಂದು ಅವನು ನಿಮಗೆ ಹೇಳುತ್ತಾನೆ. ಮೂರ್ತಿಯು ದೇವರಲ್ಲವೆಂಬುದನ್ನೂ ಅದು ಸರ್ವವ್ಯಾಪಿಯಲ್ಲವೆಂಬುದನ್ನೂ ಅವನೂ ನಿಮ್ಮಂತೆಯೇ ಬಲ್ಲನು. ಇದೆಲ್ಲ ಇರಲಿ, ಸರ್ವವ್ಯಾಪಕತ್ವವೆಂದರೆ ಈ ಪ್ರಪಂಚದಲ್ಲಿ ಮುಕ್ಕಾಲುಪಾಲು ಜನರಿಗೇನು ಅರ್ಥವಾಗುವದೆಂಬುದನ್ನು ಬಲ್ಲಿರ ? ಅದು ಅವರಿಗೆ ಬರಿಯ ಶಬ್ದ ಮಾತ್ರ ವಾಗಿರುವದು, ಬರಿಯ ಸಂಕೇತವಾಗಿರುವದು. ದೇವರಿಗೆ ಮೇಲ್ಮೈನ ಅಳತೆಯುಂಟೇನು? ಇಲ್ಲದಿದ್ದರೆ ಸರ್ವವ್ಯಾಪಿಯೆಂಬ ಮಾತನ್ನುಪಯೋಗಿಸುವಾಗ ಎಲ್ಲೆಲ್ಲಿಯೂ ಹರಡಿರುವ ಆಕಾಶವನ್ನೋ ಬಯಲನ್ನೋ ನಾವು ಯೋಚಿಸಿಕೊಳ್ಳುತ್ತೇವೆಯೇ ಹೊರತು ಮತ್ತೇನೂ ಇಲ್ಲವಲ್ಲ !

ಅದೇಕೋ ಏನೋ, ಅನಂತವೆಂಬ ಭಾವನೆಗೂ ನೀಲಾಕಾಶ ಅಥವಾ ಸಾಗರ ಇವುಗಳ ಕಲ್ಪನೆಗೂ ಗಂಟುಹಾಕುವದೇ ನಮ್ಮ ಮನಸ್ಸಿನ ಸ್ವಭಾವವೆಂದು ಕಂಡುಬಂದಿರುವಂತೆಯೇ ಪಾವಿತ್ರ್ಯಭಾವನೆಯನ್ನೂ ಪ್ರಾರ್ಥನಾಮಂದಿರ, ಮಸೀದಿ ಅಥವಾ ಶಿಲುಬೆ–ಇಂಥ ವಸ್ತುಗಳ ಕಲ್ಪನೆಗೆ ನಾವು ಸಹಜವಾಗಿ ಸಂಬಂಧಿಸಿಕೊಳ್ಳುತ್ತಿದ್ದೇವೆ. ಇದರಂತೆ ಹಿಂದುಗಳೂ ಪಾವನತ್ವ, ಪರಿಶುದ್ಧಿ, ಸತ್ಯ, ಸರ್ವವ್ಯಾಪಕತ್ವ– ಮುಂತಾದ ಭಾವನೆಗಳನ್ನು ಬೇರೆ ಬೇರೆ ವಸ್ತುಗಳ ಕಲ್ಪನೆಗಳಿಗೂ ಆಕಾರಗಳಿಗೂ ಸಂಬಂಧಿಸಿಕೊಳ್ಳುತ್ತಾರೆ. ಆದರೆ ಇಲ್ಲಿ ಒಂದು ತಾರತಮ್ಯವುಂಟು. ಕೆಲವು ಜನರು ದೇವಮಂದಿರವೆಂಬ ಮೂರ್ತಿಗೇ ತಮ್ಮ ಜೀವಮಾನವನ್ನು

---

* ಕ್ರೈಸ್ತಜನರಲ್ಲಿ ಸುಧಾರಣೆಮಾಡಿಕೊಂಡಿರುವರೆಂದು ಹೇಳಿಕೊಳ್ಳುವ ಗುಂಪಿನವರನ್ನು ಪ್ರಾಟೆಸ್ತೆಂತರೆಂದು ಕರೆಯುವರು, ಹಳೆಯ ಗುಂಪಿಗೇ ಸೇರಿದವರು ಕ್ಯಾಥೊಲಿಕರೆನಿಸುವರು.

✝ ಎರಡು ಸಂಬಂಧಿಗಳಲ್ಲಿ ಒಂದರ ಅರಿವಿನಿಂದ ಮತ್ತೊಂದರ ನೆನಪಾಗುವದೆಂಬ ನಿಯಮಕ್ಕೆ ಸಹಚಾರನಿಯಮ (Law of Association) ವೆಂದು ಹೆಸರು.

ತೆತ್ತಿರುತ್ತಾರೆ, ಏಕೆಂದರೆ ಅವರ ಅಭಿಪ್ರಾಯದಲ್ಲಿ ಧರ್ಮವೆಂದರೆ ಕೆಲವು ತತ್ತ್ವಗಳಿಗೆ ಮನಸ್ಸಿನ ಒಪ್ಪಿಗೆಯನ್ನು ಕೊಡುವದು ಮತ್ತು ಪರೋಪಕಾರಮಾಡುವದು, ಇಷ್ಟೇ; ಆದರೆ ಹಿಂದುಗಳ ಧರ್ಮವೆಂಬುದಕ್ಕೆಲ್ಲ ಸಾಕ್ಷಾತ್ಕಾರವೇ ಕೇಂದ್ರವಾಗಿರುವದು. ಮನುಷ್ಯನು ದೇವರನ್ನು ಸಾಕ್ಷಾತ್ಕರಿಸಿಕೊಂಡು ತಾನೂ ದೇವರಾಗಬೇಕು; ವಿಗ್ರಹಗಳು, ದೇವಾಲಯಗಳು, ಮಂದಿರಗಳು, ಮತಗ್ರಂಥಗಳು–ಇವೆಲ್ಲ ಧಾರ್ಮಿಕ ಬಾಲ್ಯಾವಸ್ಥೆಯಲ್ಲಿ ಅವನಿಗೆ ನೆರವಾಗಿರುವದಕ್ಕೆ ಕೊಟ್ಟಿರುವ ಊರುಗೋಲು ಮಾತ್ರವಾಗಿದೆ; ಅವನು ಮಾತ್ರ ಮುಂದುಮುಂದಕ್ಕೆ ನಡೆದೇತೀರಬೇಕಾಗಿರುವದು.

ಅವನು ಎಲ್ಲಿಯೂ ನಿಲ್ಲಕೂಡದು. ಬಾಹ್ಯಪೂಜೆಯೆಂಬುದು, ಮೂರ್ತಿ–ಪೂಜೆಯೆಂಬುದು, ತೀರ ಕೀಳುತರಗತಿಯದು. ಮೇಲುಮೇಲಕ್ಕೇರುವದಕ್ಕೆ ಪ್ರಯತ್ನಿಸುತ್ತಿದ್ದರೆ ಮಾನಸ ಪ್ರಾರ್ಥನೆಯೆಂಬ ಮುಂದಿನ ಅಂತಸ್ತು ಸಿಗುತ್ತದೆ ; ಪರಮೇಶ್ವರನನ್ನು ಸಾಕ್ಷಾತ್ಕರಿಸಿಕೊಂಡರೆ ಆಗ ಎಲ್ಲಕ್ಕೂ ಮೇಲಿನ ಅಂತಸ್ತನ್ನು ಮುಟ್ಟಿದಂತಾಗುವದು– ಎಂದು ವೇದಗಳು ಸಾರುತ್ತಿವೆ. ಇಲ್ಲಿ ನೋಡಿ, ಮೂರ್ತಿಗೆ ಶ್ರದ್ಧೆಯಿಂದ ವಂದಿಸುವ ಭಕ್ತನೇ ಹೀಗೆನ್ನುತ್ತಿರುವನು : "ಆತನನ್ನು ಸೂರ್ಯನು ಬೆಳಗಲಾರನು, ಚಂದ್ರನಾಗಲಿ ನಕ್ಷತ್ರಗಳಾಗಲಿ ಬೆಳಗಲಾರವು ; ಮಿಂಚೂ ಬೆಳಗಲಾರದು, ನಾವು ಬೆಂಕಿಯೆನ್ನುವದಂತೂ ಬೆಳಗಲೇ ಆರದು; ಆತನಿಂದಲೇ ಅವುಗಳೆಲ್ಲವೂ ಬೆಳಗುತ್ತಿರುವವು." (ಮುಂ.)

ಆದರೆ ಅವನು ಯಾವ ವಿಗ್ರಹವನ್ನೂ ಬಯ್ಯುವದಿಲ್ಲ, ಅದನ್ನು ಪೂಜಿಸುವದು ಪಾಪವೆಂದೂ ಹೇಳುವದಿಲ್ಲ. ಅದೂ ಜೀವಮಾನದ ಒಂದಾನೊಂದು ಅವಸ್ಥೆಯಲ್ಲಿ ಬೇಕಾಗುವದೆಂದು ಅವನು ಅರಿತುಕೊಂಡಿರುತ್ತಾನೆ. "ಮಗುವೇ ಮನುಷ್ಯನಿಗೆ ತಂದೆಯು"; ದೊಡ್ಡವನಾದವನು ಮಗುವಾಗಿರುವದೂ ಪ್ರಾಯದವನಾಗಿರುವದೂ ಪಾಪವೆನ್ನಬಹುದೇನು? ಮೂರ್ತಿಯ ಸಹಾಯದಿಂದ ಒಬ್ಬನಿಗೆ ತನ್ನ ಪರಮಾತ್ಮಸ್ವರೂಪದ ಸಾಕ್ಷಾತ್ಕಾರವಾಗುವಂತಿದ್ದರೆ, ಅದನ್ನು ಪಾಪವೆಂದು ಕರೆಯಬಹುದೇನು? ಈ ಅವಸ್ಥೆಯನ್ನು ದಾಟಿದ ಮೇಲೂ ಇದನ್ನು ತಪ್ಪೆನ್ನಲಾಗದು. ಹಿಂದುಗಳ ದೃಷ್ಟಿಯಿಂದ ನೋಡಿದರೆ ಮಾನವನು ತಪ್ಪಿನಿಂದ ನಿಜಕ್ಕೆ ಹೋಗುತ್ತಲಿಲ್ಲ, ನಿಜದಿಂದ ನಿಜಕ್ಕೆ ಕೆಳಗಿನಂತಸ್ತಿನ ನಿಜದಿಂದ ಮೇಲಿನಂತಸ್ತಿನ ನಿಜಕ್ಕೆ ಹೋಗುತ್ತಿದ್ದಾನೆ. ಅಧಮಾಧಮವಾಗಿರುವ ಜಡಾರಾಧನೆಯಿಂದ* ಹಿಡಿದು ಉತ್ತಮೋತ್ತಮವಾದ ಬ್ರಹ್ಮಾರಾಧನೆಯ ಎಲ್ಲಾ ಮತಗಳೂ ಅನಂತವಾದ ಪರಮಾರ್ಥವನ್ನು ಗ್ರಹಣಮಾಡಿ ಸಾಕ್ಷಾತ್ಕಾರಗೊಳಿಸುವದಕ್ಕೆಂದು ಮನುಷ್ಯನ ಮನಸ್ಸು ಮಾಡುವ ಪ್ರಯತ್ನಗಳೆಂದೂ ಆಯಾ ಜೀವನ ಜನ್ಮಸನ್ನಿವೇಶಗಳಿಗೆ ತಕ್ಕಂತೆ ಈ ಬೇರೆಬೇರೆ ಮತಗಳು ಉಂಟಾಗಿರುವವೆಂದೂ ಅವುಗಳಲ್ಲಿ ಒಂದೊಂದೂ ತಾರತಮ್ಯದಿಂದ ಒಂದಕ್ಕಿಂತ ಮತ್ತೊಂದು ಮೇಲ್ತರದವಾಗಿರುವವೆಂದೂ ಅವನ ಅಭಿಪ್ರಾಯವು. ಪ್ರತಿಯೊಂದು ಜೀವವೂ ಒಂದೊಂದು ಡೇಗೆಯ ಮರಿಯಂತಿರುವದು ; ಅದು ಮೇಲುಮೇಲಕ್ಕೆ ಹಾರುತ್ತಾ ಹೆಚ್ಚು ಹೆಚ್ಚು ಬಲವನ್ನು ಸಂಪಾದಿಸಿಕೊಂಡು ಕೊನೆಗೆ ತೇಜಃಪುಂಜನಾದ ಸೂರ್ಯನನ್ನೇ ಮುಟ್ಟುವದು.

---

* ಕಲ್ಲು, ಮಣ್ಣು ಹೆಂಟೆ ಮುಂತಾದವುಗಳನ್ನೇ ಪೂಜಿಸುವದು. ಇವುಗಳಲ್ಲೆಲ್ಲ ಒಂದು ದೇವತೆ ಇರುವದೆಂದು ಈ ಆರಾಧಕರು ನಂಬುವರು.

ನಾನಾತ್ವದಲ್ಲಿ ಏಕತ್ವವಿರುವದೆಂಬುದು ಪ್ರಕೃತಿಯ ಕ್ರಮವು. ಇದನ್ನು ಹಿಂದುವು ಕಂಡುಕೊಂಡಿರುತ್ತಾನೆ. ಮಿಕ್ಕ ಯಾವ ಮತವೇ ಆಗಲಿ, ಕೆಲವು ಗೊತ್ತಾದ ತತ್ತ್ವಗಳನ್ನು ಉಪದೇಶಿಸಿ ಜನರೆಲ್ಲ ಅವನ್ನೇ ಅವಲಂಬಿಸಬೇಕೆಂದು ಬಲಾತ್ಕರಿಸುವದಕ್ಕೆ ಹೋಗುತ್ತದೆ. ಅದು ಮಾನವಸಮಾಜದ ಮುಂದಕ್ಕೆ ತಂದಿರುವದು ಒಂದು ಅಂಗಿ ; ಜ್ಯಾಕನಾಗಲಿ ಜಾನನಾಗಲಿ ಹೆನ್ರಿಯಾಗಲಿ ಎಲ್ಲರೂ ಅದನ್ನೇ ಹಾಕಿಕೊಳ್ಳಬೇಕು. ಜಾನನಿಗೊ ಹೆನ್ರಿಗೊ ಅದು ಸರಿಹೋಗದಿದ್ದರೆ, ಅವನು ಮೈಗೆ ಅಂಗಿಯೇ ಇಲ್ಲದಿರಬೇಕು. ನಿರಪೇಕ್ಷವಾದ ಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಳ್ಳುವದಾಗಲಿ ವಿಚಾರಮಾಡುವದಾಗಲಿ ಅಥವಾ ಶಬ್ದಗಳಿಂದ ಹೇಳುವದಾಗಲಿ ಸಾಪೇಕ್ಷವಾಗಿರುವದರ ಮೂಲಕವೇ ಆಗಬೇಕಾಗಿರುವದೆಂಬುದನ್ನೂ ಮೂರ್ತಿಗಳು, ಶಿಲುಬೆಗಳು, ಅರ್ಧಚಂದ್ರಾಕೃತಿಗಳು* –ಇವೆಲ್ಲ ಬರಿಯ ಸಂಕೇತಗಳು, ಆಧ್ಯಾತ್ಮಿಕಭಾವನೆಗಳನ್ನು ತಗಲುಹಾಕುವ ಗೂಟಗಳು–ಎಂಬುದನ್ನು ಹಿಂದುಗಳು ಕಂಡುಕೊಂಡಿರುತ್ತಾರೆ. ಈ ಸಹಾಯವೂ ಎಲ್ಲರಿಗೂ ಬೇಕೆಂದಲ್ಲ, ಆದರೆ ಯಾರಿಗೆ ಇದು ಬೇಡವೋ ಅವರು ಇದು ತಪ್ಪೆಂದು ಮಾತ್ರ ಹೇಳುವದಕ್ಕೆ ಯಾವ ಕಾರಣವೂ ಇರುವದಿಲ್ಲ. ಹಿಂದುಗಳ ಮತದಲ್ಲಿ ಇದನ್ನುಪಯೋಗಿಸಿಯೇತೀರಬೇಕೆಂಬ ಬಲಾತ್ಕಾರವೇನೂ ಇರುವದೂ ಇಲ್ಲ.

ಇಲ್ಲಿ ಒಂದು ವಿಷಯವನ್ನು ನಿಮಗೆ ನಾನು ತಿಳಿಸುವದಗತ್ಯವು. ಭರತಖಂಡದಲ್ಲಿರುವ ವಿಗ್ರಹಾರಾಧನೆಯೆಂಬುದು ಅಸಹ್ಯಕರವಾದದ್ದೇನೂ ಅಲ್ಲ. ಇದರಿಂದ ವ್ಯಭಿಚಾರಿಣಿಯರೇನೂ ಉಂಟಾಗುವದಿಲ್ಲ (ವಿಚಾರ–ತತ್ವ ವ್ಯಭಿಚಾರವಲ್ಲ). ಅದಕ್ಕೆ ಬದಲು ಇದು ಅತ್ಯಂತಗಹನವಾದ ಅಧ್ಯಾತ್ಮತತ್ತ್ವಗಳನ್ನು ಗ್ರಹಿಸುವದಕ್ಕೆಂದು ಚೆನ್ನಾಗಿ ಪಕ್ವವಾಗದ ಮನಸ್ಸಿನವರು ಮಾಡುತ್ತಿರುವ ಪ್ರಯತ್ನವಾಗಿರುತ್ತದೆ. ಹಿಂದುಗಳಲ್ಲಿಯೂ ದೋಷವಿದೆ, ಅವರು ಕೆಲವು ನಿಯಮಗಳಿಗೆ ಪ್ರತಿಷೇಧವಾಗಿರುವರೆಂಬುದೂ ನಿಜವೆ ; ಆದರೆ ಇದೊಂದನ್ನು ಲಕ್ಷ್ಯದಲ್ಲಿಡಿ : ಅವರು ತಮ್ಮ ದೇಹವನ್ನು ತಾವು ದಂಡಿಸಿಕೊಳ್ಳುವರೇ ಹೊರತು ನೆರೆಯವರ ಕತ್ತುಕೊಯ್ಯುವದಕ್ಕೆ ಹೋಗುವದಿಲ್ಲ. ಹಿಂದೂ ಮತಾಭಿಮಾನಿಯು ಚಿತಾಗ್ನಿಯನ್ನು ಪ್ರವೇಶಿಸುವದುಂಟು, ಆದರೆ ಬೇರೆ ಮತದವರನ್ನು ಸುಡುವ ಹಿಂಸಾಗ್ನಿಯನ್ನು ✞ ಅವನೆಂದಿಗೂ ಹತ್ತಿಸುವದಿಲ್ಲ. ಮಂತ್ರಗಾತಿಯನ್ನು ಸುಟ್ಟದ್ದು ಕ್ರಿಸ್ತಮತದ ದೋಷವೆಂದು ಹೇಗೆ ಹೇಳುವದಕ್ಕೆ ಬರುವದಿಲ್ಲವೋ ಅದರಂತೆ ಈ ಅಗ್ನಿಪ್ರವೇಶವು ಕೂಡ ಹಿಂದೂಮತಕ್ಕೆ ಸೇರಿದ ದೋಷವೆನ್ನುವದಕ್ಕಿಲ್ಲ.

ಅಂತೂ ಹಿಂದುವಿನ ಅಭಿಪ್ರಾಯದಲ್ಲಿ ಪ್ರಪಂಚದಲ್ಲಿರುವ ಮತಗಳೆಂದರೆ ಬರಿಯ ಪ್ರಯಾಣವು, ಬೇರೆಬೇರೆ ಸ್ತ್ರೀಪುರುಷರು ನಾನಾವಿಧವಾದ ಸ್ಥಿತಿಗಳನ್ನೂ ಸನ್ನಿವೇಶಗಳನ್ನೂ ದಾಟಿ ಒಂದೇ ಸ್ಥಾನವನ್ನು ಮುಟ್ಟುವದು. ಪ್ರತಿಯೊಂದು ಮತವೂ ಮನುಷ್ಯನೆಂಬ ವಸ್ತುವಿನಿಂದ ದೇವರನ್ನು ಹೊಂದಿಸುತ್ತಿರುವದು; ಒಬ್ಬ ದೇವರೇ ಈ

---

* ಶಿಲುಬೆಯು ಕ್ರಿಸ್ತಿಯನರಿಗೆ ಪವಿತ್ರವಾಗಿರುವಂತೆ ಅರ್ಧಚಂದ್ರಾಕೃತಿಯು ಮಹಮ್ಮದೀಯರಿಗೆ ಪವಿತ್ರವಾಗಿರುವದು.

✞ ಕ್ರಿಸ್ತಿಯನರಲ್ಲಿ ಕೆಲವರು ಮತಕ್ಕೆ ನಿಯಮತಪ್ಪಿ ನಡೆಯುವವರನ್ನು ಅಗ್ನಿಗೆ ಆಹುತಿಯಾಗಿ ಕೊಡುವದೇ ಮುಂತಾದ ಚಿತ್ರಹಿಂಸೆಯನ್ನು ಮಾಡಿರುತ್ತಾರೆ.

ಎಲ್ಲಾ ಮತಗಳಿಗೂ ಪ್ರೇರಕನಾಗಿರುತ್ತಾನೆ. ಹಾಗಾದರೆ ಇಷ್ಟೊಂದು ವಿರೋಧಗಳಿರುವದೇಕೆ? ಎಂದರೆ, ಅವು ನೋಡುವದಕ್ಕೆ ವಿರೋಧಗಳಾಗಿ ಕಾಣುತ್ತಿವೆಯೇ ಹೊರತು ನಿಜವಾಗಿ ವಿರೋಧಗಳಲ್ಲ–ಎಂಬುದು ಹಿಂದುವಿನ ಉತ್ತರವು. ಬೇರೆಬೇರೆ ಸ್ವಭಾವದ ಬೇರೆಬೇರೆ ಸನ್ನಿವೇಶಗಳಿಗೆ ತಕ್ಕಂತೆ ಅದೇ ತತ್ತ್ವವು ರೂಪುಗೊಳ್ಳುವದರಿಂದ ಈ ವಿರೋಧಗಳುಂಟಾಗಿರುತ್ತವೆ.

ಒಂದೇ ಪ್ರಕಾಶವು ಬೇರೆಬೇರೆ ಬಣ್ಣದ ಗಾಜಿನ ತುಂಡುಗಳಲ್ಲಿ ಹಾದುಬರುವದರಿಂದ ಹೇಗೆ ಬೇರೆಬೇರೆಯಾಗಿ ತೋರುವದೋ ಅದರಂತೆಯೇ ಇದನ್ನು ಅರಿಯಬೇಕು. ಈ ಸಣ್ಣ ಸಣ್ಣಸಣ್ಣ ಮಾರ್ಪಾಡುಗಳು ಆಯಾ ಸನ್ನಿವೇಶಕ್ಕೆ ಹೊಂದಿಕೊಳ್ಳುವದಕ್ಕೆ ಅವಶ್ಯವಾಗಿರುತ್ತವೆ. ಆದರೆ ಪ್ರತಿಯೊಂದು ಹೃದಯದಲ್ಲಿಯೂ ಅದೇ ನಿಜವೇ ಆಳುತ್ತಿರುವದು. ಶ್ರೀಕೃಷ್ಣಾವತಾರವನ್ನು ಮಾಡಿದಾಗ ಪರಮೇಶ್ವರನು ಹಿಂದುಗಳಿಗೆ ಹೇಳಿರುವದೇನೆಂದರೆ "ಮುತ್ತುಗಳೊಳಗೆ ಹಾದು ಹೋಗಿರುವ ದಾರದಂತೆ ನಾನು ಪ್ರತಿಯೊಂದು ಧರ್ಮದಲ್ಲಿಯೂ ಇರುತ್ತಿರುವೆನು. ಎಲ್ಲೆಲ್ಲಿ ಅತಿಶಯವಾದ ಪಾವಿತ್ರ್ಯವೂ ಅತಿಶಯವಾದ ಶಕ್ತಿಯೂ ಮಾನವಸಮಾಜವನ್ನು ಮೇಲಕ್ಕೆತ್ತಿ ಪರಿಶುದ್ಧಿಗೊಳಿಸುತ್ತಿರುವದೋ ಅಲ್ಲೆಲ್ಲ ನಾನಿರುವೆನೆಂದು ತಿಳಿ" (ಗೀ. 7. 7, 40–41) *ಇದರ ಫಲವೇನಾಗಿದೆ ಬಲ್ಲಿರಾ ? ಸಂಸ್ಕೃತದಲ್ಲಿರುವ ತತ್ತ್ವಶಾಸ್ತ್ರದಲ್ಲೆಲ್ಲ ಪ್ರಪಂಚದಲ್ಲಿ ಯಾರು ಬೇಕಾದರೂ ಹುಡುಕಿ, ಹಿಂದುಗಳಿಗೆ ಮಾತ್ರ ಮುಕ್ತಿಯಾಗುವದೇ ಹೊರತು ಮಿಕ್ಕವರಿಗೆ ಆಗುವದಿಲ್ಲವೆಂಬರ್ಥದ ಮಾತುಗಳೇನಾದರೂ ಇವೆಯೆ, ನೋಡಲಿ. "ನಮ್ಮ ವರ್ಣಾಶ್ರಮಧರ್ಮಕ್ಕೆ ಆಚೆಯೂ ಜ್ಞಾನಿಗಳಿರುತ್ತಾರೆ" (ಬ್ರ. ಸೂ. 3–4–36) ✠ ಎಂದು ವ್ಯಾಸರು ಹೇಳಿರುತ್ತಾರೆ.

ಇನ್ನೊಂದು ವಿಷಯ. ಹಿಂದುವಿನ ವಿಚಾರವೆಲ್ಲ ಈಶ್ವರನನ್ನು ಹೊಂದಿಕೊಂಡಿದೆಯಷ್ಟೆ ಇಂಥವನು ಅಜ್ಞಾತವಾದವನ್ನನುಸರಿಸುವ ಬೌದ್ಧಮತವನ್ನಾಗಲಿ ನಿರೀಶ್ವರವಾದವನ್ನು ಅವಲಂಬಿಸಿರುವ ಜೈನಮತವನ್ನಾಗಲಿ ಒಪ್ಪುವದು ಹೇಗೆ ? ಬೌದ್ಧರಾಗಲಿ ಜೈನರಾಗಲಿ ದೇವರನ್ನು ನಂಬಿರುವದಿಲ್ಲ; ಆದರೂ ಅವರ ಮತದ ಶಕ್ತಿಯೆಲ್ಲ ಮನುಷ್ಯನಿಂದ ದೇವರನ್ನು ಏರ್ಪಡಿಸುವದೆಂಬ ಪ್ರತಿಯೊಂದು ಧರ್ಮದ ಮಹಾಮುಖ್ಯತತ್ತ್ವದ ಕಡೆಗೇ ವಿನಿಯೋಗವಾಗಿರುತ್ತದೆ. ಅವರು ತಂದೆಯನ್ನು ಕಂಡಿರುವದಿಲ್ಲ, ಆದರೆ ಅವರು ಮಗನನ್ನು ಕಂಡಿರುತ್ತಾರೆ ; ಮಗನನ್ನು ಕಂಡವರು ತಂದೆಯನ್ನು ಕಂಡಂತೆಯೇ.

ಭ್ರಾತೃಗಳಿರ, ಇದೀಗ ಹಿಂದುಗಳ ಧಾರ್ಮಿಕಭಾವನೆಗಳ ಸಂಗ್ರಹವು. ಹಿಂದುವು ತಾನು ಆಲೋಚಿಸಿಕೊಂಡಿರುವ ಕಲ್ಪನೆಗಳನ್ನೆಲ್ಲ ಆಚರಣೆಗೆ ತರದೆ ಇರಬಹುದು. ಆದರೆ ಇನ್ನು ಮುಂದಾದರೂ ಎಲ್ಲರಿಗೂ ಹೊಂದುವ ಧರ್ಮವೊಂದಿರಬೇಕಾದರೆ ಅದು ಇಂಥ ದೇಶದ್ದೆಂಬ ಅಥವಾ ಇಂಥ ಕಾಲದ್ದೆಂಬ ಕ್ಲಿಪ್ತಿಯುಳ್ಳದ್ದಾಗಿರಕೂಡದು ; ತಾನು ಹೇಳುವ ದೇವರಂತೆ ಅದೂ

---

* ಇದು ಶ್ಲೋಕಗಳ ಅಕ್ಷರಾರ್ಥವಲ್ಲ, ಆರ್ಥಿಕಾರ್ಥ

✠ ಈ ಸೂತ್ರದಲ್ಲಿ ಆಶ್ರಮವೊಂದನ್ನೇ ಕುರಿತು ವಿಚಾರಮಾಡಿದ್ದರೂ ಸಮಾನನ್ಯಾಯದಿಂದ ವರ್ಣವ್ಯವಸ್ಥೆಗೂ ಇದು ಅನ್ವಯಿಸುತ್ತದೆ.

ಅನಂತವಾಗಿರಬೇಕು ; ಅದರ ಸೂರ್ಯನು ಕೃಷ್ಣನ ಅನುಯಾಯಿಗಳ ಮೇಲೂ ಪ್ರಕಾಶಿಸುತ್ತಿರಬೇಕು, ಕ್ರೈಸ್ತನ ಅನುಯಾಯಿಗಳ ಮೇಲೂ ಪ್ರಕಾಶಿಸುತ್ತಿರಬೇಕು; ಅದು ಬ್ರಾಹ್ಮಣಮತವಾಗಿರಬಾರದು, ಬೌದ್ಧಮತವಾಗಿರಬಾರದು, ಕ್ರಿಸ್ತಿಯನಮತವಾಗಿರಬಾರದು, ಮಹಮ್ಮದೀಯಮತವಾಗಿರಬಾರದು; ಇವುಗಳೆಲ್ಲವನ್ನೂ ಸೇರಿಕೊಂಡು ಇನ್ನೂ ಬೆಳೆಯುವದಕ್ಕೆ ಬೇಕಾದಷ್ಟು ಅವಕಾಶವನ್ನುಳ್ಳದ್ದಾಗಿರಬೇಕು; ಅದು ಸರ್ವಸಮ ಬುದ್ಧಿಯಿಂದ ಪ್ರತಿಯೊಬ್ಬ ಮಾನವನನ್ನೂ ತನ್ನ ಅನಂತಬಾಹುಗಳಿಂದ ಆಲಿಂಗಮಾಡುವದಾಗಿರಬೇಕು, ಮೃಗಕ್ಕಿಂತ ಅಷ್ಟೇನೂ ಮೇಲಲ್ಲವೆನ್ನುವಷ್ಟು ತುಚ್ಛನಾದ ಕಾಡುಮನುಷ್ಯನಿಂದ ಹಿಡಿದು ತಿಳಿವಳಿಕೆಯಿಂದಲೂ ಸರ್ವಭೂತಪ್ರೇಮದಿಂದಲೂ ಮನುಷ್ಯರೆಲ್ಲರಿಗಿಂತಲೂ ಮೇಲೆನಿಸುವಷ್ಟು ಉತ್ತಮನಾಗಿ ಜನರೆಲ್ಲರೂ ಭಯಭಕ್ತಿಯಿಂದ ದೂರದಲ್ಲಿ ನಿಂತು ಇವನೂ ನಮ್ಮಂತೆ ಮನುಷ್ಯನೆ?–ಎಂದು ಸಂಶಯಪಡುವಂಥ ಪುರುಷೋತ್ತಮನವರೆಗಿನ ಎಲ್ಲಾ ಮನುಷ್ಯರಿಗೂ ಸ್ಥಳವನ್ನು ಕಲ್ಪಿಸಿರಬೇಕು. ಆ ಮತದ ನೀತಿಯಲ್ಲಿ ಅನ್ಯಮತೀಯರ ಹಿಂಸೆಗಾಗಲಿ ಅನ್ಯಮತದ ಅಸಹನೆಗಾಗಲಿ ಎಡೆಯಿರಲೇಬಾರದು ; ಅದು ಪ್ರತಿಯೊಬ್ಬ ಸ್ತ್ರೀಯಲ್ಲಿಯೂ ಪ್ರತಿಯೊಬ್ಬ ಪುರುಷನಲ್ಲಿಯೂ ಪರಮಾತ್ಮನನ್ನು ಕಾಣುವದಾಗಿರಬೇಕು; ಅದರ ಉದ್ದೇಶವೆಲ್ಲ, ಅದರ ಶಕ್ತಿಯೆಲ್ಲ, ಮಾನವವರ್ಗವು ತನ್ನ ನಿಜವಾದ ಪಾರಮೇಶ್ವರ–ಭಾವವನ್ನು ಕಂಡುಕೊಳ್ಳುವದಕ್ಕೆ ಸಹಾಯಮಾಡುವದಕ್ಕೇ ವಿನಿಯೋಗವಾಗಿರಬೇಕು. ಇಂಥ ಧರ್ಮವನ್ನು ನೀವು ತಂದಿಟ್ಟರೆ ಎಲ್ಲಾ ಜನಾಂಗದವರೂ ನಿಮ್ಮನ್ನೇ ಹಿಂಬಾಲಿಸುವರು.

ಅಶೋಕನ ಸಭೆಯು ಬರಿಯ ಬೌದ್ಧಧರ್ಮದ ಸಭೆಯಾಗಿದ್ದಿತು; ಅಕಬರನ ಸಭೆಯು ಅದಕ್ಕಿಂತ ಉತ್ತಮವಾಗಿದ್ದಿತಾದರೂ ಎಲ್ಲಿಯೋ ಕೆಲವು ಜನರು ಮಾತ್ರ ಸೇರಿದ ಸಭೆಯಾಯಿತು. ಭಗವಂತನು ಪ್ರತಿಯೊಂದು ಮತದಲ್ಲಿಯೂ ಇರುತ್ತಾನೆಂಬುದನ್ನು ಪ್ರಪಂಚದ ಎಲ್ಲಾ ಭಾಗಗಳಿಗೂ ಸಾರಿ ಹೇಳುವದು ಅಮೆರಿಕದವರ ಪಾಲಿಗೇ ಉಳಿದಿತ್ತು. ಯಾವನು ಹಿಂದುಗಳ ಬ್ರಹ್ಮವಾಗಿಯೂ, ಝೋರೊಅಸ್ತ್ರೀಯನರ ಅಹುರ–ಮಝ್ದನಾಗಿಯೂ, ಬೌದ್ಧರ ಬುದ್ಧನಾಗಿಯೂ, ಯಹೋದ್ಯರ ಯಹೋವನಾಗಿಯೂ, ಕ್ರಿಸ್ತಿಯನರ ಪರಲೋಕದ ತಂದೆಯಾಗಿಯೂ ಇರುವನೋ ಆತನು ನಿಮ್ಮ ಈ ಘನವಾದ ಭಾವನೆಯನ್ನೂ ಆಚರಣೆಗೆ ತರುವ ಶಕ್ತಿಯನ್ನೂ ಅನುಗ್ರಹಿಸಲಿ ! ನಕ್ಷತ್ರವು ಪೂರ್ವದಿಕ್ಕಿನಲ್ಲಿ ಮೂಡಿತು ; ಅದು ಕೆಲವು ವೇಳೆಗಳಲ್ಲಿ ಮಂಕಾಗುತ್ತಲೂ ಮತ್ತೆ ಕೆಲವು ವೇಳೆಗಳಲ್ಲಿ ಥಳಗುಟ್ಟುತ್ತಲೂ ಪಶ್ಚಿಮದ ಕಡೆಗೇ ಬಂದಿತು ; ಕೊನೆಗೆ ಭೂಮಿಯನ್ನೆಲ್ಲ ಪ್ರದಕ್ಷಿಣೆಮಾಡಿ ಪೂರ್ವದ ದಿಗಂತರವೇ ಆಗಿರುವ ಸಾಂಪೊವಿನ ದಡದ ಮೇಲೆಯೇ, ಹಿಂದೆ ತಾನು ಇದ್ದದ್ದಕ್ಕಿಂತಲೂ ಸಾವಿರಪಟ್ಟು ಪ್ರಕಾಶವಾಗಿ ಮತ್ತೆ ಉದಯಿಸುತ್ತಿದೆ. ಸ್ವಾತಂತ್ರ್ಯದ ಮಾತೃಭೂಮಿಯಾದ ಕೊಲಂಬಿಯದೇಶವೇ ಜಯುಜಯು ! ನೆರೆಯುವರ ರಕ್ತದಲ್ಲಿ ಎಂದಿಗೂ ಕೈಯುದ್ದದೆ ಇರುವ, ಐಶ್ವರ್ಯವಂತರಾಗುವದಕ್ಕೆ ನೆರೆಯವರನ್ನು ಸುಲಿಗೆ ಮಾಡುವದೇ ಸುಲಭೋಪಾಯವೆಂದು ಎಂದಿಗೂ ತಿಳಿಯದೆ ಇರುವ ನಿನಗೇ ಇದು ಸಲ್ಲುವದು ; ಸಾಮರಸ್ಯದ ಧ್ವಜವನ್ನು ಹಿಡಿದುಕೊಂಡು ನಾಗರಿಕತೆಯ ಮುಂಚೂಣಿಯಲ್ಲಿ ನಡೆಯುವದು ನಿನಗೇ ಸಲ್ಲುವದು.

(Paper on Hinduism : Complete Works, Vol. I, P.6)

# 4

# ಇಂಡಿಯಕ್ಕೆ ಧರ್ಮದ ಕೊರತೆಯೇನೂ ಇಲ್ಲ

## (1893ನೆಯ ಸೆಪ್ಟೆಂಬರ್ 20)

ಕ್ರಿಸ್ತಿಯನರೆನಿಸಿಕೊಂಡವರು ನ್ಯಾಯವಾದ ದೋಷೋದ್ಘಾಟನೆಗೆ ಯಾವಾಗಲೂ ಸಿದ್ಧರಾಗಿರಬೇಕಷ್ಟೆ ; ಆದ್ದರಿಂದ ನಾನು ಒಂದಿಷ್ಟು ದೋಷವನ್ನು ತೆಗೆದು ತೋರಿಸಿದರೆ ನಿಮಗೇನೂ ಅಸಮಾಧಾನವಾಗದೆಂದು ನಾನು ನಂಬಿರುವೆನು. ಕ್ರಿಸ್ತಿಯನ್ನರಲ್ಲದವರ ಆತ್ಮವನ್ನು ಕಾಪಾಡುವದಕ್ಕೆಂತ ಮಿಷನೆರಿಗಳನ್ನು ಕಳುಹಿಸುವದೆಂದರೆ ನಿಮಗೆ ತುಂಬ ಅಕ್ಕರೆಯಲ್ಲವೆ ? ಇಂಥ ಕ್ರಿಸ್ತಿಯನ್ನರಾದ ನೀವು ಅವರು ಹೊಟ್ಟೆಗಿಲ್ಲದೆ ಸಾಯದ ಹಾಗೆ ಅವರ ಶರೀರಗಳನ್ನು ಕಾಪಾಡುವದಕ್ಕೇಕೆ ಪ್ರಯತ್ನಿಸುವದಿಲ್ಲ ? ಭರತಖಂಡದಲ್ಲಿ ಭಯಂಕರವಾದ ಕ್ಷಾಮಗಳು ಬಂದೊದಗಿದಾಗ ಸಾವಿರಾರು ಜನರು ಹಸಿವಿನಿಂದ ಪ್ರಾಣವನ್ನು ಬಿಟ್ಟರು ; ಆದರೂ ಕ್ರಿಸ್ತಿಯನ್ನರೆನಿಸಿಕೊಂಡ ನೀವು ಏನೂ ಮಾಡಲಿಲ್ಲ. ಭರತಖಂಡದಲ್ಲೆಲ್ಲ ನೀವು ಪ್ರಾರ್ಥನಾಲಯಗಳನ್ನು ಕಟ್ಟಿಸುತ್ತಿರುವಿರಿ, ಆದರೆ ಪೂರ್ವದೇಶಗಳಲ್ಲಿರುವ ಕೊರತೆಯು ಧರ್ಮದ್ದಲ್ಲ, ಅವರಲ್ಲಿ ಸಾಕೆನಿಸುವಷ್ಟು ಧರ್ಮವಿದೆ ; ಬೆಂದು ಬೆಂಡಾಗಿರುವ ಭರತಖಂಡದಲ್ಲಿ ಲಕ್ಷಗಟ್ಟಲೆಯ ಜನರು ಒಣಗಿದ ಗಂಟಲಿನಿಂದ ಕಿರಿಚಿಕೊಳ್ಳುತ್ತಿರುವದು ಅನ್ನಕ್ಕೆ. ಅವರು ಅನ್ನವನ್ನು ಕೊಡಿರೆಂದರೆ ನಾವು ಅವರಿಗೆ ಕಲ್ಲನ್ನು ಕೊಡುತ್ತಿರುವೆವು. ಹಸಿವಿನಿಂದ ಸಾಯುತ್ತಿರುವ ಜನರಿಗೆ ಧರ್ಮವನ್ನು ಕೊಡುವದಕ್ಕೆ ಹೋಗುವದೆಂದರೆ ಅವರಿಗೆ ಅಪಮಾನ ಮಾಡಿದಂತೆ. ಹಸಿವಿನಿಂದ ಸಾಯುತ್ತಿರುವವನಿಗೆ ವೇದಾಂತದ ಉಪದೇಶವನ್ನು ಮಾಡುವದು ಅವನಿಗೆ ಅಪಮಾನಮಾಡಿದಂತೆ. ಭರತಖಂಡದಲ್ಲಿ ಯಾವನಾದರೂ ದುಡ್ಡುತೆಗೆದುಕೊಂಡು ಧರ್ಮೋಪದೇಶಮಾಡುವದಕ್ಕೆ ಹೋದರೆ ಅವನನ್ನು ಜನರು ಜಾತಿಯಿಂದ ಹೊರಕ್ಕೆ ಹಾಕುತ್ತಾರೆ, ಅವನ ಮುಖದ ಮೇಲೆ ಉಗುಳುತ್ತಾರೆ. ನಮ್ಮ ದೇಶದ ದಟ್ಟದರಿದ್ರರಿಗೆ ಏನಾದರೂ ಸಹಾಯವು ದೊರೆತೀತೆಂದು ನಾನು ಇಲ್ಲಿಗೆ ಬಂದೆನು ; ಆದರೆ ಕ್ರಿಸ್ತಿಯನ್ನರಲ್ಲದವರಿಗೆ ಕ್ರಿಸ್ತಿಯನ್ ದೇಶದಲ್ಲಿ ಸಹಾಯವನ್ನು ಪಡೆಯುವದೆಂಬುದು ಎಷ್ಟುಕಷ್ಟವೆಂಬುದು ನನಗೆ ಈಗ ಚೆನ್ನಾಗಿ ಮನದಟ್ಟಾಯಿತು.

(Religion not the crying need of India : Complete Works, Vol. I, P.20)

– – – – – – –

# 5

# ಬೌದ್ಧಧರ್ಮವು ಹಿಂದೂಧರ್ಮವನ್ನು ಪರಿಪೂರ್ತಿಗೊಳಿಸಿದ್ದು

## (1893ನೆಯ ಸೆಪ್ಟೆಂಬರ್ 26)

ನೀವು ತಿಳಿದಿರುವಂತೆ ನಾನು ಬೌದ್ಧನಲ್ಲ, ಆದರೂ ಒಂದು ಬಗೆಯಿಂದ ನೋಡಿದರೆ ನಾನು ಬೌದ್ಧನೆ. ಚೀನ, ಜಪಾನ್, ಸಿಂಹಳ–ಈ ದೇಶಗಳಲ್ಲಿಯ ಜನರು ಆ ಪರಮಾಚಾರ್ಯನ ಉಪದೇಶವನ್ನು ಅನುಸರಿಸಿರುತ್ತಾರೆ ; ಆದರೆ ಭರತಖಂಡದವರು ಆತನು ಪರಮೇಶ್ವರನ ಅವತಾರವೇ ಎಂದು ಆತನನ್ನು ಪೂಜಿಸುತ್ತಾರೆ. ನಾನು ಬೌದ್ಧಮತವನ್ನು ಖಂಡಿಸುವದಕ್ಕೆ ಹೊರಟಿದ್ದೇನೆಂದು ನಿಮಗೆ ಈಗ ತಿಳಿವಳಿಕೆ ಕೊಟ್ಟಿರುತ್ತಾರಷ್ಟೆ , ಅದರ ಅಭಿಪ್ರಾಯವು ಇಷ್ಟೆ: ಯಾವಾತನನ್ನು ಪರಮೇಶ್ವರನ ಅವತಾರವೆಂದೇ ನಾನು ಪೂಜಿಸುತ್ತಿರುವೆನೋ ಅಂಥವನನ್ನು ಖಂಡಿಸುವ ಯೋಚನೆಯು ನನಗೆ ಎಂದಿಗೂ ಬೇಡ. ಆದರೆ ಬುದ್ಧನ ವಿಷಯದಲ್ಲಿರುವ ನಮ್ಮ ಅಭಿಪ್ರಾಯವೇನೆಂದರೆ, ಆತನ ಅನುಯಾಯಿಗಳು ಆತನ ಅಭಿಪ್ರಾಯವನ್ನು ಸರಿಯಾಗಿ ತಿಳಿದುಕೊಳ್ಳಲಾರದೆ ಹೋದರು.

ಹಿಂದೂಧರ್ಮಕ್ಕೂ–ಹಿಂದೂಧರ್ಮವೆಂದರೆ ವೈದಿಕಧರ್ಮವು–ಈಗ ನಾವು ಬೌದ್ಧಧರ್ಮವೆಂದು ಕರೆಯುತ್ತಿರುವ ಮತಕ್ಕೂ ಇರುವ ಸಂಬಂಧವು ಸ್ವಲ್ಪ ಹೆಚ್ಚುಕಡಿಮೆಯಾಗಿ ಯೆಹೂದ್ಯರ ಮತಕ್ಕೂ ಕ್ರಿಸ್ತಿಯನ್ ಮತಕ್ಕೂ ಇರುವ ಸಂಬಂಧದಂತೆ ಇದೆ. ಜೇಸಸ್ ಕ್ರೈಸ್ತನು ಯೆಹೂದ್ಯನು, ಶಾಕ್ಯಮುನಿಯು ಹಿಂದು. ಯೆಹೂದ್ಯರು ಕ್ರೈಸ್ತನನ್ನು ಪರಿತ್ಯಜಿಸಿದರು, ಅಷ್ಟೇ ಅಲ್ಲ, ಆತನನ್ನು ಶಿಲುಬೆಗೆ ಹಾಕಿ ಕೊಂದರು ; ಆದರೆ ಹಿಂದುಗಳು ಶಾಕ್ಯಮುನಿಯನ್ನು ದೇವರೆಂದೇ ಭಾವಿಸಿ ಆತನನ್ನು ಪೂಜಿಸುತ್ತಿದ್ದಾರೆ. ಈಗಿನ ಬೌದ್ಧಮತಕ್ಕೂ ಬುದ್ಧಭಗವಂತನ ಉಪದೇಶವೆಂದು ತಿಳಿದುಕೊಳ್ಳಬೇಕಾಗಿರುವ ಧರ್ಮಕ್ಕೂ ಇರುವ ನಿಜವಾದ ತಾರತಮ್ಯವು ಯಾವುದೆಂದರೆ ಹಿಂದುಗಳಾದ ನಾವು ಹೇಳುವದು ಇಷ್ಟು : ಶಾಕ್ಯಮುನಿಯು ಯಾವದೊಂದು ಹೊಸ ತತ್ತ್ವವನ್ನೂ ಬೋಧಿಸುವದಕ್ಕೆ ಬರಲಿಲ್ಲ. ಆತನೂ ಜೇಸಸ್ ಕ್ರೈಸ್ತನಂತೆ ಹಿಂದಿನದನ್ನು ಪರಿಪೂರ್ತಿಗೊಳಿಸುವದಕ್ಕೆ ಬಂದನೇ ಹೊರತು ಅದನ್ನು ನಾಶಗೊಳಿಸಲಿಕ್ಕೆ ಬರಲಿಲ್ಲ.* ಆದರೆ ಒಂದು ವಿಶೇಷವುಂಟು. ಜೇಸಸ್ಸಿನ ವಿಷಯದಲ್ಲಾದರೆ ಆತನ ಆಶಯವನ್ನು ಅರಿತುಕೊಳ್ಳಲಾರದೆ ಹೋದವರು ಹಿಂದಿನವರಾದ ಯೆಹೂದ್ಯರು ; ಬುದ್ಧನ ವಿಷಯದಲ್ಲಿಯೋ ಎಂದರೆ ಆತನ ಉಪದೇಶದ ತಾತ್ಪರ್ಯವನ್ನು ಅರಿತುಕೊಳ್ಳಲಾರದೆ

---

*ಬೈಬಲ್ಲಿನ ಮ್ಯಾಥ್ಯೂ 5–17ರ ಸೂಚನೆ.

ಹೋದವರು ಆತನ ಅನುಯಾಯಿಗಳೇ ಆಗಿದ್ದರು. ಯೆಹೂದ್ಯರಿಗೆ ಹಳೆಯ ಒಡಂಬಡಿಕೆಯು ಈಗ ಕ್ರೈಸ್ತನಿಂದ ಪರಿಪೂರ್ತಿಗೊಂಡಿತೆಂಬುದು ಹೇಗೆ ತಿಳಿಯಲಿಲ್ಲವೋ, ಅದರಂತೆ ಬೌದ್ಧರಿಗೆ ಹಿಂದೂಧರ್ಮದ ತತ್ತ್ವಗಳು ಈಗ ಬುದ್ಧನಿಂದ ಪರಿಪೂರ್ತಿಗೊಂಡವೆಂಬುದು ತಿಳಿಯದೆ ಹೋಯಿತು. ನಿಜವಾಗಿಯೂ ಶಾಕ್ಯಮುನಿಯು ಹಿಂದೂಧರ್ಮವನ್ನು ನಾಶಗೊಳಿಸುವದಕ್ಕೆ ಬರಲಿಲ್ಲವೆಂದೂ ಆತನು ಆ ಧರ್ಮದ ಪರಿಪೂರಕನು, ಅದೇ ನ್ಯಾಯದ ನಿಗಮನಸ್ಥಾನೀಯನು. ನ್ಯಾಯಬದ್ಧವಾಗಿ ಅದನ್ನು ವಿಕಾಸಗೊಳಿಸಿದವನು– ಎಂದೂ ನಾನು ಇನ್ನೊಂದು ಸಲವೂ ಸಾರಿ ತಿಳಿಸಬೇಕಾಗಿದೆ.

ಹಿಂದೂಧರ್ಮದಲ್ಲಿ ಕರ್ಮಭಾಗವೆಂದೂ ಜ್ಞಾನಭಾಗವೆಂದೂ ಎರಡು ಭಾಗಗಳಿವೆ. ಜ್ಞಾನಭಾಗವನ್ನು ಮುಖ್ಯವಾಗಿ ಸಂನ್ಯಾಸಿಗಳೇ ಅಭ್ಯಾಸಮಾಡುತ್ತಾರೆ. ಅದರಲ್ಲಿ ಜಾತಿಭೇದವಿಲ್ಲ. ಭರತಖಂಡದಲ್ಲಿ ಅತ್ಯಂತ ಉಚ್ಚಜಾತಿಯವನೂ ಅತ್ಯಂತ ನೀಚ ಜಾತಿಯವನೂ ಸಂನ್ಯಾಸಿಯಾದನೆಂದರೆ ಆ ಎರಡು ಜಾತಿಗಳೂ ಸಮಾನವಾಗುವವು. ಧರ್ಮದಲ್ಲಿ ಜಾತಿಯಿಲ್ಲ; ಜಾತಿಯೆಂಬುದು ಬರಿಯ ಸಾಮಾಜಿಕಸಂಸ್ಥೆಯು. ಶಾಕ್ಯಮುನಿಯೂ ಒಬ್ಬ ಸಂನ್ಯಾಸಿಯೆ. ಆತನು ರಹಸ್ಯವಾಗಿದ್ದ ವೇದಗಳಲ್ಲಿದ್ದ ತತ್ತ್ವಗಳನ್ನು ಪರಮೌದಾರ್ಯದಿಂದ ಹೊರಕ್ಕೆ ತಂದು ಪ್ರಪಂಚಕ್ಕೆಲ್ಲ ಹರಡಿದ್ದು ಆತನಲ್ಲಿದ್ದ ಮಹಿಮೆಯು. ಪ್ರಪಂಚದಲ್ಲಿ ಮಂತ್ರೋಪದೇಶವನ್ನು ಆಚರಣೆಗೆ ತಂದವರಲ್ಲಿ ಆತನು ಮೊಟ್ಟಮೊದಲನೆಯವನು, ಅಷ್ಟೇಕೆ ? ಮತದೀಕ್ಷೆಯನ್ನು ಕೊಡುವ ಹಂಚಿಕೆಯನ್ನು ಹೂಡಿದವರಲ್ಲಿ ಆತನೇ ಮೊಟ್ಟಮೊದಲನೆಯವನು.

ಆ ಆಚಾರ್ಯನ ಮಹಾಮಹಿಮೆಯೆಂದರೆ ಎಲ್ಲರಲ್ಲಿಯೂ, ಮುಖ್ಯವಾಗಿ ಮೂಢರಲ್ಲಿಯೂ ಬಡವರಲ್ಲಿಯೂ, ಅವನಿಗಿದ್ದ ಆಶ್ಚರ್ಯಕರವಾದ ಸಹಾನುಭೂತಿಯು. ಆತನ ಶಿಷ್ಯರಲ್ಲಿ ಕೆಲವರು ಬ್ರಾಹ್ಮಣರೂ ಇದ್ದರು. ಬುದ್ಧನು ಉಪದೇಶಿಸುತ್ತಿದ್ದ ಕಾಲದಲ್ಲಿ ಸಂಸ್ಕೃತವು ಇಂಡಿಯದ ಆಡುಮಾತಾಗಿರಲಿಲ್ಲ, ಆಗ್ಗೆ ಅದು ಕೇವಲ ಪಂಡಿತರ ಗ್ರಾಂಥಿಕ ಭಾಷೆಯಾಗಿತ್ತು. ಬುದ್ಧನ ಬ್ರಾಹ್ಮಣಶಿಷ್ಯರಲ್ಲಿ ಕೆಲವರು ಆತನ ಉಪದೇಶಗಳನ್ನು ಸಂಸ್ಕೃತಕ್ಕೆ ಪರಿವರ್ತನೆಮಾಡಬೇಕೆಂದಿದ್ದರು; ಆದರೆ ಆತನು "ನಾನು ಬಡವರಿಗಾಗಿ, ಸಾಮಾನ್ಯಜನರಿಗಾಗಿ, ಉಪದೇಶಿಸುತ್ತಿರುವೆನು; ಆದ್ದರಿಂದ ಜನರು ಆಡುವ ಭಾಷೆಯಲ್ಲಿಯೇ ನಾನೂ ಮಾತಾಡುವೆನು" ಎಂದು ಹೇಳಿಬಿಟ್ಟನು. ಆದ್ದರಿಂದಲೇ ಆತನ ಉಪದೇಶಗಳಲ್ಲಿ ಮುಕ್ಕಾಲುಪಾಲೆಲ್ಲ ಆ ಕಾಲದ ದೇಶಭಾಷೆಯಲ್ಲಿಯೇ* ಇದ್ದುಬಿಟ್ಟಿದೆ.

ತತ್ತ್ವಶಾಸ್ತ್ರವು ಏನೇ ಹೇಳಲಿ, ವೇದಾಂತದಲ್ಲಿ ಏನೇ ಅಭಿಪ್ರಾಯವಿರಲಿ, ಈ ಪ್ರಪಂಚದಲ್ಲಿ ಮರಣವೆಂಬುದೊಂದು ಇರುವವರೆಗೂ, ಮನುಷ್ಯನ ಹೃದಯದಲ್ಲಿ ದೌರ್ಬಲ್ಯವೆಂಬುದೊಂದು ಇರುವವರೆಗೂ, ದುರ್ಬಲನಾದ ಮನುಷ್ಯನ

---

* ಪಾಳಿಭಾಷೆಯಲ್ಲಿ.

ಹೃದಯದಿಂದ 'ಅಯ್ಯೋ !' ಎಂಬ ಮೊರೆಯು ಹೊರಡುತ್ತಿರುವವರೆಗೂ, ಈಶ್ವರನೊಬ್ಬನಿದ್ದಾನೆಂಬ ನಂಬಿಕೆಯು ಇದ್ದೇ ಇರುವದು. ತತ್ತ್ವಶಾಸ್ತ್ರದ ದೃಷ್ಟಿಯಿಂದ ನೋಡಿದರೆ, ಈ ಪರಮಾಚಾರ್ಯನ ಶಿಷ್ಯರು ವೇದಗಳೆಂಬ ಶಾಶ್ವತವಾದ ಬಂಡೆಗಳ ಮೇಲೆ ಬಿದ್ದು ಅವುಗಳನ್ನು ಪುಡಿಮಾಡಲಾರದೆ ಹೋದರು ; ಆದರೆ ಇತ್ತ ಕಡೆ ನೋಡಿದರೆ ಪ್ರತಿಯೊಬ್ಬ ಪುರುಷನೂ ಪ್ರತಿಯೊಬ್ಬ ಸ್ತ್ರೀಯೂ ಬಿಡಲಾರದೆ ನಂಬಿಕೊಂಡಿರುವ ನಿತ್ಯೇಶ್ವರನನ್ನು ಜನರಿಂದ ಕಸಿದುಕೊಂಡುಬಿಟ್ಟರು. ಇದರ ಫಲಿತಾಂಶವೇನಾಯಿತೆಂದರೆ, ಬೌದ್ಧಧರ್ಮವು ಭರತಖಂಡದಲ್ಲಿ ತನ್ನಷ್ಟಕ್ಕೆ ತಾನೇ ಸತ್ತುಹೋಯಿತು. ಇಂದಿನ ದಿನದಲ್ಲಿ ಆ ಧರ್ಮದ ಜನ್ಮಭೂಮಿಯಾದ ಭರತಖಂಡದಲ್ಲಿ ತಾನು ಬೌದ್ಧನು ಎಂದು ಹೇಳಿಕೊಳ್ಳುವವನು ಒಬ್ಬನು ಕೂಡ ಇರುವದಿಲ್ಲ*

ಆದರೆ ಬ್ರಾಹ್ಮಣಧರ್ಮಕ್ಕೂ ಸ್ವಲ್ಪ ನಷ್ಟವಾಯಿತು. ಸುಧಾರಣೆಯಲ್ಲಿದ್ದ ಆ ಶ್ರದ್ಧೆ, ಪ್ರತಿಯೊಬ್ಬನಲ್ಲಿಯೂ ಇರಬೇಕಾದ ಆ ಅದ್ಭುತವಾದ ಸಹಾನುಭೂತಿ ಮತ್ತು ದಯೆ, ಬೌದ್ಧಧರ್ಮವು ಸಾಮಾನ್ಯಜನರನ್ನು ಮೇಲಕ್ಕೆತ್ತಿ 'ಹಿಂದುಗಳಲ್ಲಿ ಯಾರೊಬ್ಬನೂ ಸುಳ್ಳುಹೇಳುವದಿಲ್ಲ, ಯಾವಳೊಬ್ಬಳೂ ವ್ಯಭಿಚಾರಿಣಿ ಎನಿಸಿರುವದಿಲ್ಲ' ಎಂದು ಆ ಕಾಲದ ಒಬ್ಬ ಗ್ರೀಕ್ ಇತಿಹಾಸಜ್ಞನಿಂದ ಬರೆಯಿಸುವಷ್ಟು ಇಂಡಿಯದ ಜನತೆಯನ್ನು ಉತ್ತಮಸ್ಥಿತಿಗೆ ತಂದಿದ್ದ ಆ ಅದ್ಭುತವಾದ ಮಾರ್ಪಾಡು- ಇವೆಲ್ಲ ಹೋಗಿಬಿಟ್ಟವು.

ಹಿಂದೂಧರ್ಮವು ಬೌದ್ಧಧರ್ಮವನ್ನು ಬಿಟ್ಟು ಬದುಕಲಾರದು ; ಹಿಂದೂಧರ್ಮವನ್ನು ಬಿಟ್ಟು ಬೌದ್ಧಧರ್ಮವೂ ಬದುಕಲಾರದು. ಈ ಅಗಲುವಿಕೆಯಿಂದ ನಮಗಾಗಿರುವ ಅನುಭವವನ್ನು ಮನಸ್ಸಿಗೆ ತಂದುಕೊಳ್ಳಿರಿ; ಬೌದ್ಧರು ಬ್ರಾಹ್ಮಣರ ಬುದ್ಧಿ ಅವರ ತತ್ತ್ವಶಾಸ್ತ್ರ- ಇವನ್ನು ಬಿಟ್ಟಿರಲಾರರು ; ಬ್ರಾಹ್ಮಣರು ಬೌದ್ಧರ ಹೃದಯವನ್ನು ಬಿಟ್ಟಿರಲಾರರು. ಬೌದ್ಧರೂ ಬ್ರಾಹ್ಮಣರೂ ಹೀಗೆ ಒಬ್ಬರನ್ನೊಬ್ಬರು ಅಗಲಿದುದೇ ಭರತಖಂಡದ ಅಧಃಪತನಕ್ಕೆ ಕಾರಣವು. ಆದ್ದರಿಂದಲೇ ಇಂಡಿಯದಲ್ಲಿ ಈಗ ಮೂವತ್ತು ಕೋಟಿ ತಿರುಕರಿರುವರು. ಆದ್ದರಿಂದಲೇ ಈಗ ಸಾವಿರ ವರ್ಷಗಳಿಂದಲೂ ಇಂಡಿಯವು ಜಯಶೀಲರಾದ ಪರದೇಶಿಗಳ ದಾಸ್ಯದಲ್ಲಿರುವದು. ಹೀಗಿರುವದರಿಂದ

* ಈಚೆಗೆ ಅಲ್ಲಲ್ಲಿ ಬೌದ್ಧರು ಕಾಣಬರುತ್ತಿದಾರೆ ; ಬೌದ್ಧಧರ್ಮದ ಉಪದೇಶಕರೂ ಸಂಚರಿಸುತ್ತಿದಾರೆ.

ಇನ್ನು ನಾವು ಬ್ರಾಹ್ಮಣನ ಅದ್ಭುತವಾದ ಜ್ಞಾನದೊಂದಿಗೆ ಆ ಪರಮಾಚಾರ್ಯನ ಹೃದಯ, ಆ ಘನವಾದ ಪ್ರೇಮ– ಎಲ್ಲವನ್ನೂ ನಿಜವಾದ ಮಾನವರನ್ನಾಗಿ ಮಾಡುವ ಆ ಅದ್ಭುತಶಕ್ತಿಯನ್ನೂ ಸೇರಿಸಿಕೊಳ್ಳೋಣ.

(Buddhism, the Fulfilment of Hinduism : Complete Works, Vol. I, P.21)

– – – – –  – – –

# 6

# ಕೊನೆಯ ಅಧಿವೇಶನದಲ್ಲಿ ಭಾಷಣ

## (1893ನೆಯ ಸೆಪ್ಟೆಂಬರ್ 27)

ವಿಶ್ವಧರ್ಮಸಮ್ಮೇಳನವೆಂಬುದು ಇಲ್ಲಿಗೆ ಸಿದ್ಧಿಯಾದಂತಾಯಿತು; ಇದನ್ನು ನಡೆಯಿಸಬೇಕೆಂದು ಪ್ರಯತ್ನಪಟ್ಟವರಿಗೆ ದಯಾಘನನಾದ ಲೋಕಪಿತನು ಒತ್ತಾಸೆಯನ್ನಿತ್ತು ಅವರ ಅತ್ಯಂತ ಅಸ್ವಾರ್ಥಪ್ರಯಾಸವನ್ನು ಜಯಶೀಲವಾಗಿ ಮಾಡಿರುತ್ತಾನೆ.

ವಿಶಾಲಹೃದಯರೂ ಪರಮಾರ್ಥಪ್ರೇಮಿಗಳೂ ಆದ ಯಾವ ಮಹಾಶಯರು ಈ ಅದ್ಭುತಸ್ವಪ್ನವನ್ನು ಕಂಡು ಅದನ್ನೇ ಗಟ್ಟಿಗೊಳಿಸಿದರೋ ಅಳವಡಿಸಿದರೋ ಅವರಿಗೆ ನನ್ನ ಕೃತಜ್ಞತೆಯನ್ನರ್ಪಿಸುವೆನು. ಈ ಸಭಾಪೀಠದಲ್ಲಿ ತುಂಬಿ ತುಳುಕುತ್ತಲಿದ್ದ ಉದಾರಭಾವಗಳ ಸುರಿಮಳೆಗೆ, ನನ್ನ ಕೃತಜ್ಞತೆಯನ್ನರ್ಪಿಸುವೆನು. ನನ್ನನ್ನು ಯಾವಾಗಲೂ ದಯಾದೃಷ್ಟಿಯಿಂದ ನೋಡಿದ್ದಕ್ಕಾಗಿಯೂ ಧರ್ಮಗಳಲ್ಲಿ ಒಂದಕ್ಕೊಂದಕ್ಕಿರುವ ತಿಕ್ಕಾಟವು ಕಡಿಮೆಯಾಗುವದಕ್ಕೆ ಸಹಕಾರಿಯಾಗುವ ಪ್ರತಿಯೊಂದು ಅಭಿಪ್ರಾಯಕ್ಕೂ ತಕ್ಕ ಬೆಲೆಯನ್ನು ಕಟ್ಟಿದ್ದಕ್ಕಾಗಿಯೂ ಪ್ರತಿಭಾಶಾಲಿಗಳಾದ ಈ ಸಭಿಕರಿಗೆ ನನ್ನ ಕೃತಜ್ಞತೆಯನ್ನು ಅರ್ಪಿಸುವೆನು. ಇಷ್ಟೊಂದು ಹೊಂದಿಗೆಯಾಗಿದ್ದ ಈ ಶ್ರುತಿಯಲ್ಲಿಯೂ ಆಗಾಗ್ಗೆ ಕೆಲವು ಕರ್ಕಶಧ್ವನಿಗಳು ಕೇಳಬಂದವು ; ಅವಕ್ಕಾಗಿ ನಾನು ವಿಶೇಷವಾಗಿ ಕೃತಜ್ಞನಾಗಿರುವೆನು, ಏಕೆಂದರೆ ಅವು ತಾವೇ ಒಂದು ಬಗೆಯಾಗಿರುವದರಿಂದ ಒಟ್ಟಿನ ಸುಸ್ವರವು ಇನ್ನೂ ಇಂಪಾಗಿರುವಂತೆ ಮಾಡಿರುತ್ತವೆ.

ಧರ್ಮಗಳೆಲ್ಲ ಒಂದೆಂಬ ಬಗ್ಗೆ ಎಲ್ಲಕ್ಕೂ ಸಮಾನವಾಗಿರುವ ಆಧಾರ ತತ್ತ್ವದ ವಿಚಾರವಾಗಿ ಎಷ್ಟೋ ಜನರು ಮಾತನಾಡಿರುತ್ತಾರೆ. ಈ ವಿಷಯದಲ್ಲಿ ನನ್ನ ಅಭಿಪ್ರಾಯವೇನೆಂಬುದನ್ನೇನೂ ನಾನು ಇಲ್ಲಿ ಹೇಳುವದಕ್ಕೆ ಹೋಗುವದಿಲ್ಲ. ಆದರೆ ಇಲ್ಲಿರುವವರಲ್ಲಿ ಯಾರಾದರೂ ಧರ್ಮಗಳಲ್ಲಿ ಯಾವದಾದರೊಂದು ಜಯಶೀಲವಾಗಿ ಮಿಕ್ಕವುಗಳೆಲ್ಲ ನಾಶವಾಗುವದರಿಂದಲೇ ಈ ಏಕತ್ವವೆಂಬುದು ಉಂಟಾಗಬೇಕೆಂದು ತಿಳಿದಿದ್ದರೆ, ಆತನಿಗೆ ನಾನು ಹೇಳುವದೇನೆಂದರೆ "ತಮ್ಮ, ಈ ನಿನ್ನದು ಎಂದೆಂದಿಗೂ ಕೈಗೂಡದ ಆಸೆ." ಕ್ರಿಸ್ತಿಯನರು ಹಿಂದುಗಳಾಗಬೇಕೆಂದು ನನ್ನ ಆಶೆಯಿರುವದೆನ್ನುವಿರೇನು ? ಛೇ, ಎಂದಿಗೂ ಇಲ್ಲ. ಹಿಂದುವಾಗಲಿ, ಬೌದ್ಧನಾಗಲಿ ಕ್ರಿಸ್ತಿಯನ್ನನಾಗಬೇಕೆಂದು ನನ್ನ ಆಸೆಯಿರುವದೆನ್ನುವಿರೇನು ? ಛೇ, ಎಂದಿಗೂ ಇಲ್ಲ.

ಬೀಜವನ್ನು ನೆಲದಲ್ಲಿ ಬಿತ್ತಿ ಅದರ ಸುತ್ತಲೂ ಮಣ್ಣು, ಗಾಳಿ, ನೀರು ಇವುಗಳನ್ನು ಹಾಕುತ್ತೇವೆಂದು ಇಟ್ಟುಕೊಳ್ಳಿ, ಆ ಬೀಜವು ಮಣ್ಣಾಗಿ ಅಥವಾ ಗಾಳಿಯಾಗಿ ಅಥವಾ ನೀರಾಗಿ ಆಗುವದೆ ? ಇಲ್ಲ. ಅದು ಗಿಡವೇ ಆಗುವದು, ಅದು ತನ್ನ ಬೆಳೆವಣಿಗೆಯು

ನಿಯಮವನ್ನನುಸರಿಸಿಯೇ ವಿಕಾರವಾಗುತ್ತದೆ ; ಗಾಳಿ, ಮಣ್ಣು, ನೀರು– ಇವುಗಳನ್ನು ಹೀರಿಕೊಂಡು ಅವುಗಳನ್ನು ಗಿಡದ ಪದಾರ್ಥವಾಗಿ ಮಾಡಿಕೊಂಡು, ಗಿಡವಾಗಿಬಿಡುತ್ತದೆ. ಧರ್ಮದ ವಿಚಾರವೂ ಹೀಗೆಯೇ. ಕ್ರಿಸ್ತಿಯವನು ಹಿಂದೂ ಅಥವಾ ಬೌದ್ಧನಾಗಬೇಕಾದುದಿಲ್ಲ, ಹಿಂದುವಾಗಲಿ ಬೌದ್ಧನಾಗಲಿ ಕ್ರಿಸ್ತಿಯನ್ನನಾಗಬೇಕಾದದ್ದಿಲ್ಲ. ಆದರೆ ಪ್ರತಿಯೊಬ್ಬನೂ ಮಿಕ್ಕವರ ಅಭಿಪ್ರಾಯವನ್ನು ತನ್ನದಾಗಿ ಮಾಡಿಕೊಂಡು ತಾನುತಾನಾಗಿಯೇ ಇದ್ದುಕೊಂಡು, ತನ್ನ ತನ್ನ ಬೆಳೆವಣಿಗೆಯ ನಿಯಮಕ್ಕನುಗುಣವಾಗಿ ಬೆಳೆಯಬೇಕು.

ಈ ಧರ್ಮಗಳ ಸಮ್ಮೇಳನವು ಪ್ರಪಂಚಕ್ಕೆ ತೋರಿಸಿಕೊಟ್ಟಿರುವದು ಏನಾದರೂ ಇದ್ದರೆ ಇದೊಂದೇ : ಪಾವಿತ್ರ್ಯ, ಪರಿಶುದ್ಧಿ, ದಯಾಧರ್ಮ–ಇವು ಈ ಲೋಕದಲ್ಲಿ ಯಾವದೊಂದು ಗೊತ್ತಾದ ಸಂಘಕ್ಕೂ ಮುಡುಪಾಗಿರುವ ಆಸ್ತಿಯಲ್ಲವೆಂದೂ ಪ್ರತಿಯೊಂದು ಧರ್ಮದಲ್ಲಿಯೂ ಅತ್ಯಂತ ನಿರ್ದಿಷ್ಟವಾದ ನಡತೆಯ ಸ್ತ್ರೀಪುರುಷರು ಹುಟ್ಟಿರುತ್ತಾರೆಂದೂ ಇದು ಸಿದ್ಧಮಾಡಿಕೊಟ್ಟಿರುತ್ತದೆ. ಇಂಥ ಪ್ರಮಾಣವಿದ್ದರೂ ತನ್ನ ಧರ್ಮವೊಂದೇ ಕೊನೆಗೂ ಬದುಕಿರುವದೆಂದೂ ಮಿಕ್ಕದ್ದೆಲ್ಲವೂ ಮಡಿದುಹೋಗುವದೆಂದೂ ಯಾರಾದರೂ ಕನಸಿನಲ್ಲಿ ಕಂಡುಕೊಂಡಿದ್ದರೆ ಅಂಥವನಿಗಾಗಿ ನಾನು ಹೃತ್ಪೂರ್ವಕವಾಗಿ ಮರುಗುವೆನು. ಅವನಿಗೆ ನಾನು ಇಷ್ಟನ್ನು ತಿಳಿಸಿಕೊಡುವೆನು : ಪ್ರತಿಯೊಂದು ಧರ್ಮದ ಬಾವುಟದ ಮೇಲೆಯೂ ಆ ಧರ್ಮಗಳು ಒಲ್ಲೆನೆಂದರೂ "ಸಹಾಯವೇ ಹೊರತು ಕಾದಾಟವಲ್ಲ", "ನಮಗೆ ತಕ್ಕಂತೆ ಹೊಂದಿಸಿಕೊಳ್ಳುವದೇ ಹೊರತು ನಾಶಪಡಿಸುವದಲ್ಲ", "ಹೊಂದಿಗೆಯಾಗಿ ಶಾಂತಿಯಿಂದಿರುವದೇ ಹೊರತು ಕಚ್ಚಾಟವಲ್ಲ"– ಎಂಬೀ ಮಾತುಗಳನ್ನು ಬರೆಯಲಾಗುವದು.

(Address at the Final Session : Complete Works, Vol. I, P.23)

– – – – – – – – – –

# 7

# ಹಿಂದೂಧರ್ಮ

## (1894ನೆಯ ಡಿಸೆಂಬರ್30, ಬ್ರೂಕ್ಲಿನ್ ಎಥಿಕಲ್ ಅಸೋಸಿಯೇಷನ್* ಎಂಬ ಸಮಾಜದಲ್ಲಿ)

ಕಲಿತುಕೊಳ್ಳುತ್ತಿರುವದೇ ನನ್ನ ಧರ್ಮ. ನಾನು ನಮ್ಮ ಬೈಬಲನ್ನು ಓದುವಾಗ ನಿಮ್ಮ ಬೈಬಲಿಗೆ ಹೋಲಿಸಿಕೊಂಡರೆ ನನಗೆ ಹೆಚ್ಚು ಅನುಕೂಲವಾಗುತ್ತದೆ. ನಮ್ಮ ಧರ್ಮದಲ್ಲಿ ಅರ್ಥವಾಗದೆ ಇದ್ದ ಎಷ್ಟೋ ಭವಿಷ್ಯವಾಣಿಗಳು ನಿಮ್ಮ ಪ್ರವಾದಿಗಳ ಭವಿಷ್ಯವಾಣಿಗಳಿಗೆ ಹೋಲಿಸಿದಾಗ ಸ್ಫುಟವಾಗಿ ತಿಳಿಯಹತ್ತುವವು. ನಿಜವೆಂಬುದು ಯಾವಾಗಲೂ ಸಾರ್ವತ್ರಿಕವಾಗಿಯೇ ಇರುವದು. ನಿಮಗೆಲ್ಲರಿಗೂ ಐದೇ ಬೆರಳುಗಳಿರುವಾಗ, ನನಗೊಬ್ಬನಿಗೇ ಕೈಯಲ್ಲಿ ಆರು ಬೆರಳುಗಳಿದ್ದರೆ ನನ್ನ ಕೈಯು ಸೃಷ್ಟಿಯ ನಿಜವಾದ ಉದ್ದೇಶಕ್ಕೆ ಸರಿಯಾಗಿ ಹುಟ್ಟಿರುವದೆಂದೇನೂ ನೀವು ಭಾವಿಸುವದಿಲ್ಲ, ಇದು ಅಸ್ವಾಭಾವಿಕವಾದದ್ದೆಂದೂ ಇದರಲ್ಲೇನೋ ದೋಷವಿರಬೇಕೆಂದೂ ಭಾವಿಸುವಿರಿ. ಧರ್ಮದ ವಿಷಯದಲ್ಲಿಯೂ ಹೀಗೆಯೇ. ಒಂದೇ ಒಂದು ಮತವು ನಿಜವಾಗಿದ್ದು ಮಿಕ್ಕವುಗಳೆಲ್ಲ ಸುಳ್ಳಾಗಿದ್ದಿದ್ದರೆ ಆ ಮತದಲ್ಲೇನೋ ದೋಷವಿರಬೇಕೆಂದು ಹೇಳುವದೇ ನ್ಯಾಯವಾಗಿರುವದು; ಒಂದು ಮತವು ನಿಜವಾಗಿದ್ದರೆ ಮಿಕ್ಕ ಮತಗಳೆಲ್ಲವೂ ನಿಜವಾಗಿಯೇ ಇರಬೇಕು. ಹೀಗೆ ನೋಡಿದರೆ ಹಿಂದೂಧರ್ಮವೆಂಬುದು ಎಷ್ಟರಮಟ್ಟಿಗೆ ನನ್ನ ಸ್ವತ್ತಾಗಿರುವದೊ ಅಷ್ಟರಮಟ್ಟಿಗೆ ನಿಮ್ಮದೂ ಆಗಿರುವದು. ಇಂಡಿಯದಲ್ಲಿರುವ ಇನ್ನೂರ ತೊಂಬತ್ತು ಮಿಲಿಯನ್✞ ಜನರಲ್ಲಿ ಎರಡು ಮಿಲಿಯನ್ ಜನರು ಮಾತ್ರ ಕ್ರಿಸ್ತಿಯನ್ನರಾಗಿರುವರು, ಅರವತ್ತು ಮಿಲಿಯನ್ ಜನರು ಮಹಮ್ಮದೀಯರು, ಉಳಿದವರೆಲ್ಲ ಹಿಂದುಗಳು.

ಹಿಂದುಗಳ ಮತವು ಪುರಾತನವಾದ ವೇದಗಳ ಆಧಾರದ ಮೇಲೆ ನಿಂತಿರುವದು. ವೇದವೆಂಬ ಮಾತು 'ವಿದ್-ತಿಳಿ' ಎಂಬ ಧಾತುವಿನಿದ ಹುಟ್ಟಿರುವದು. ಈ ವೇದಗಳೆಂಬ ಗ್ರಂಥಾವಳಿಗಳಲ್ಲಿ ಎಲ್ಲಾ ಧರ್ಮಗಳ ಸಾರವೂ ಅಡಗಿರುವದೆಂದು ನಮ್ಮಗಳ ಭಾವನೆ; ಆದರೆ ಇವುಗಳಲ್ಲಿ ಮಾತ್ರವೇ ನಿಜವಿರುವದೆಂದೇನೂ ನಾವು ಎಣಿಸಿರುವದಿಲ್ಲ.

---

*ಇದು "THE BROOKLYN STANDARD" ಎಂಬ ಪತ್ರಿಕೆಯಲ್ಲಿ ಪ್ರಕಟಿತವಾದ ಭಾಷಣಭಾಗ. ಸಂಪಾದಕರ ಪೀಠಿಕೆಯನ್ನು ಇಲ್ಲಿ ಕನ್ನಡಿಸಿಲ್ಲ.

✞ ಮಿಲಿಯನ್ ಎಂದರೆ ಹತ್ತು ಲಕ್ಷ.

ಆ ವೇದಗಳಲ್ಲಿ ಆತ್ಮವು ಮರಣವಿಲ್ಲದ್ದೆಂದು ಹೇಳಿರುತ್ತದೆ. ಪ್ರತಿಯೊಂದು ದೇಶದಲ್ಲಿಯೂ ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿಯೂ ಏನಾದರೊಂದು ಶಾಶ್ವತವಾದ ಸಮಸ್ಥಿತಿಯನ್ನು– ಮಾರ್ಪಾಡಾಗದ ಯಾವದಾದರೊಂದು ವಸ್ತುವನ್ನು– ಕಂಡುಕೊಳ್ಳಬೇಕೆಂಬ ಆಸೆಯು ಸ್ವಾಭಾವಿಕವಾಗಿರುವದು. ಇದು ಪ್ರಪಂಚದೊಳಗೆ ದೊರೆಯಲಾರದು, ಏಕೆಂದರೆ ಪ್ರಪಂಚವೆಂಬುದು ಮಾರ್ಪಾಡುಗಳ ಒಂದು ಅನಂತರಾಶಿಯೇ ಹೊರತು ಮತ್ತೇನೂ ಅಲ್ಲ. ಆದರೆ ಇಷ್ಟು ಮಾತ್ರದಿಂದ ಮಾರ್ಪಾಡಿಲ್ಲದ್ದು ಯಾವದೊಂದೂ ಇಲ್ಲವೇ ಇಲ್ಲವೆಂದೂ ಊಹಿಸುವದು ದಾಕ್ಷಿಣಾತ್ಯ ಬೌದ್ಧರೂ * ಚಾರ್ವಾಕರೂ ಮಾಡಿದ ತಪ್ಪನ್ನೇ ಮಾಡಿದಂತೆ ಆಗುತ್ತದೆ. ಎಲ್ಲವೂ ಭೌತಿಕವೇ, ಚೇತನವೆಂಬುದೇ ಇಲ್ಲ ; ಧರ್ಮವೆಂಬುದೆಲ್ಲ ಮೋಸವೇ, ಒಳ್ಳೆಯ ನಡೆನುಡಿಗಳೆಂಬವು ವ್ಯರ್ಥವಾದ ಮೂಢವಿಶ್ವಾಸಗಳು– ಎಂಬುದು ಚಾರ್ವಾಕರ ನಂಬಿಕೆ. ವೇದಾಂತಶಾಸ್ತ್ರದ ಉಪದೇಶವೇನೆಂದರೆ : ಮನುಷ್ಯನು ತನ್ನ ಐದು ಇಂದ್ರಿಯಗಳಿಗೇ ಕಟ್ಟುಬಿದ್ದಿರುವವನಲ್ಲ. ಅವುಗಳಿಗೆ ಈಗಿನ ಕಾಲವೊಂದು ತಿಳಿಯುವದೇ ಹೊರತು ಮುಂದಿನ ಕಾಲವಾಗಲಿ ಹಿಂದಿನ ಕಾಲವಾಗಲಿ ತಿಳಿಯದು; ಆದರೆ ವರ್ತಮಾನವೆಂದರೆ ಭೂತಕಾಲವೂ ಭವಿಷ್ಯತ್ಕಾಲವೂ ಇದ್ದೇ ತೀರಬೇಕಾದ್ದರಿಂದಲೂ ಈ ಮೂರೂ ಕಾಲದ ವಿಭಾಗಗಳೇ ಆಗಿರುವದರಿಂದಲೂ ಇಂದ್ರಿಯಗಳನ್ನು ಮೀರಿದ್ದಾಗಿಯೂ ಕಾಲಾತೀತವಾಗಿಯೂ ಹಿಂದುಮುಂದಿನ ಕಾಲಗಳನ್ನು ಈಗಿನ ಕಾಲಕ್ಕೆ ಸಂಬಂಧಿಸಬಲ್ಲದ್ದಾಗಿಯೂ ಇರುವ ಯಾವದೋ ಒಂದು ಇದ್ದ ಹೊರತು ಈಗಿನ ಕಾಲವೆಂಬುದೂ ಅಜ್ಞಾತವಾಗಬೇಕಾಗುತ್ತದೆ.

ಆದರೆ ಹೀಗೆ ಸ್ವತಂತ್ರವಾಗಿರುವದೆಂಬುದು ಯಾವದು ?– ಎಂದು ನೋಡಿದರೆ ಶರೀರವಲ್ಲ, ಏಕೆಂದರೆ ಅದು ಹೊರಗಿನ ಸನ್ನಿವೇಶಗಳನ್ನು ಆಶ್ರಯಿಸಿರುತ್ತದೆ ; ನಮ್ಮ ಮನಸ್ಸೂ ಅಲ್ಲ, ಏಕೆಂದರೆ ಅದು ವೃತ್ತಿಮಯವಾಗಿರುತ್ತದೆ, ವೃತ್ತಿಗಳೆಲ್ಲವೂ ಕಾರ್ಯವಾಗಿರುತ್ತವೆ; ಮತ್ತೇನೆಂದರೆ ನಮ್ಮ ಆತ್ಮವೇ. ವೇದಗಳಲ್ಲಿ ಹೇಳಿರುವ ಪ್ರಕಾರ ಪ್ರಪಂಚವೆಲ್ಲ ಸ್ವತಂತ್ರಪರತಂತ್ರಗಳ, ಸ್ವಾತಂತ್ರ್ಯ ಮತ್ತು ದಾಸ್ಯ – ಇವುಗಳ, ಮಿಶ್ರಣವೇ ಆಗಿರುವದು; ಆದರೆ ಇವುಗಳೊಳಗೆಲ್ಲ ಸ್ವತಂತ್ರವಾಗಿಯೂ ಮರಣರಹಿತವಾಗಿಯೂ ಪರಿಶುದ್ಧವಾಗಿಯೂ ಪರಿಪೂರ್ಣವಾಗಿಯೂ ಪವಿತ್ರವಾಗಿಯೂ ಇರುವ ಆತ್ಮವು ಬೆಳಗುತ್ತಿರುವದು. ಏಕೆಂದರೆ ಅದು ಸ್ವತಂತ್ರವಾಗಿರುವದಾದರೆ ಅದು ನಾಶವಾಗಲಾರದು, ಮರಣವೆಂಬುದೂ ಒಂದು ವಿಕಾರವಾದ್ದರಿಂದ ಕೆಲವು ಕಾರಣಗಳಿಗೆ ಅಧೀನವಾಗಿರುವದು; ಅದು ಸ್ವತಂತ್ರವಾಗಿರುವದಾದರೆ ಅದು ಪರಿಪೂರ್ಣವಾಗಿಯೂ ಇರಬೇಕು. ಏಕೆಂದರೆ ಅಪರಿಪೂರ್ಣತೆಯೆಂಬುದೇ ಒಂದು ಕಾರಣಕ್ಕೆ ಅಧೀನವಾಗಿರುವದಾಗಿರುತ್ತದೆ. ಈ ಮರಣರಹಿತವಾಗಿರುವ ಪರಿಪೂರ್ಣವಾದ ಆತ್ಮವು ಸರ್ವೋತ್ತಮನಾದ ದೇವರಲ್ಲಿಯೂ ಅತ್ಯಂತ ದೀನನಾದ ಮಾನವನಲ್ಲಿಯೂ ಒಂದೇ ಆಗಿರಬೇಕು. ಅವೆರಡಕ್ಕೂ ಇರುವ ಹೆಚ್ಚುಕಡಿಮೆಯೆಂಬುದು ಈ ಆತ್ಮವು ವ್ಯಕ್ತವಾಗುವ ಪರಿಮಾಣದಲ್ಲಿರಬೇಕೇ ಹೊರತು ಮತ್ತೇತರಲ್ಲಿಯೂ ಇರಲಾರದು.

---

*ಬೌದ್ಧರಲ್ಲಿ ದಕ್ಷಿಣದ ಬೌದ್ಧರೆಂದೂ ಉತ್ತರದ ಬೌದ್ಧರೆಂದೂ ಎರಡು ಬಗೆ ; ದಕ್ಷಿಣದ ಬೌದ್ಧರನ್ನು ಹೀನಯಾನದವರೆಂದೂ ಕರೆಯುತ್ತಾರೆ. ಇವರು ಎಲ್ಲವೂ ಕ್ಷಣಿಕವಾಗಿರುವದೆಂದೂ ನಿತ್ಯವಾಗಿರುವ ಆತ್ಮನೊಬ್ಬನಿಲ್ಲವೆಂದೂ ಹೇಳುತ್ತಾರೆ.

ಸರಿ. ಆದರೆ ಆತ್ಮವು ಶರೀರವನ್ನೇಕೆ ಧರಿಸಬೇಕು ? ಎಂದರೆ ನಾವು ಕನ್ನಡಿಯನ್ನೇಕೆ ತೆಗೆದುಕೊಳ್ಳುವೆವೋ ಅದಕ್ಕೆ, ಎಂದರೆ ತನ್ನನ್ನು ತಾನೇ ಕಾಣುವದಕ್ಕೆ. ಈ ರೀತಿಯಲ್ಲಿ ಶರೀರದಲ್ಲಿ ಆತ್ಮವೂ ಪ್ರತಿಬಿಂಬಿಸಿರುವದು. ಆತ್ಮವು ದೇವರೇ, ಪ್ರತಿಯೊಬ್ಬ ಮಾನವನಲ್ಲಿಯೂ ಪರಿಪೂರ್ಣವಾದ ಈಶ್ವರತ್ವವೇ ಇರುವದು ; ಪ್ರತಿಯೊಬ್ಬನೂ ಇಂದಲ್ಲದಿದ್ದರೆ ಮುಂದೆ ಎಂದಾದರೂ ಒಂದು ದಿನ ತನ್ನ ಈಶ್ವರತ್ವವನ್ನು ವ್ಯಕ್ತಿಗೊಳಿಸಿಯೇ ತೀರುವನು. ನಾನು ಒಂದು ಕತ್ತಲೆಯ ಕೋಣೆಯಲ್ಲಿದ್ದೇನೆಂದು ಇಟ್ಟುಕೊಳ್ಳಿ ; 'ಅಯ್ಯೋ ಕತ್ತಲೆಯಾಗಿದೆಯಲ್ಲ!'– ಎಂದು ಎಷ್ಟು ಅರಚಿಕೊಂಡರೂ ಬೆಳಕಾಗಲಾರದು, ಬೆಂಕಿಕಡ್ಡಿಯನ್ನೇ ಗೀರಬೇಕು. ಇದರಂತೆ ನಾವು ಎಷ್ಟು ಗೋಣಗುಟ್ಟಿಕೊಂಡರೂ ಎಷ್ಟು ಅತ್ತರೂ ನಮ್ಮ ಅಪರಿಪೂರ್ಣವಾದ ಈ ಶರೀರವು ಹೆಚ್ಚು ಪರಿಪೂರ್ಣವಾಗಲರಿಯದು. ಆದ್ದರಿಂದ ವೇದಾಂತವು ಉಪದೇಶ ಮಾಡುವದೇನೆಂದರೆ: ನಿಮ್ಮ ಆತ್ಮವನ್ನು ಮೇಲಕ್ಕೆಬ್ಬಿಸಿರಿ, ನಿಮ್ಮ ಈಶ್ವರತ್ವವನ್ನು ತೋರಿಸಿಕೊಳ್ಳಿರಿ, ನಿಮ್ಮ ಮಕ್ಕಳಿಗೆ ಅವರು ಬ್ರಹ್ಮಸ್ವರೂಪರೆಂಬುದನ್ನು ತಿಳಿಸಿರಿ ; ಧರ್ಮವೆಂದರೆ ನಿಜವಾಗಿ ವಿಧಿರೂಪವಾಗಿರುವದೆಂದೂ ಸುಮ್ಮನೆ ನಿಷೇಧರೂಪವಾಗಿರುವ ಹುಚ್ಚಾಟವಲ್ಲವೆಂಬುದನ್ನೂ ತಿಳಿಸಿರಿ ; ಏನಾದರೂ ಸಂಕಟಕ್ಕೆ ಸಿಕ್ಕಿದರೆ ಸಹಿಸಿಕೊಂಡು ನರಳಾಡುವದಲ್ಲ, ಆದರೆ ವಿಸ್ತಾರವಾಗುವದು, ವ್ಯಕ್ತವಾಗುವದು– ಎಂಬುದನ್ನು ಕಲಿಸಿರಿ.

ಮಾನವನ ಈಗಿನ ಸ್ಥಿತಿಯೂ ಮುಂದಿನ ಸ್ಥಿತಿಯೂ ಹಿಂದಿನ ಸ್ಥಿತಿಯಿಂದ ಬದಲಾಗುತ್ತಿರುವವೆಂದೂ ಈಗಿನ ಸ್ಥಿತಿಯೆಂಬುದು ಹಿಂದಿನ ಸ್ಥಿತಿಯ ಫಲಿತಾಂಶವೇ ಎಂದೂ ಪ್ರತಿಯೊಂದು ಧರ್ಮದಲ್ಲಿಯೂ ಹೇಳಿರುತ್ತದೆ. ಹಾಗಾದರೆ ಪ್ರತಿಯೊಂದು ಮಗುವಿನಲ್ಲಿಯೂ ಪಿತ್ರಾರ್ಜಿತವೆಂದು ಹೇಳುವದಕ್ಕೆ ಆಗದಂಥ ಅನುಭವವಿಶೇಷವು ಹುಟ್ಟುತ್ತಲೇ ಕಾಣುವದಲ್ಲ. ಅದು ಹೇಗಾಯಿತು ? ಒಬ್ಬನು ಒಳ್ಳೆಯ ತಾಯಿತಂದೆಗಳ ಮಗನಾಗಿ ಹುಟ್ಟಿ ಒಳ್ಳೆಯ ವಿದ್ಯೆಯನ್ನು ಕಲಿತುಕೊಂಡು ಒಳ್ಳೆಯವನಾಗುತ್ತಾನೆ ; ಆದರೆ ಮತ್ತೊಬ್ಬನು ಅವಿವೇಕಿಗಳ ಮಗನಾಗಿ ಹುಟ್ಟಿ ಗಲ್ಲಿನ ಮೇಲೆ ಪ್ರಾಣವನ್ನು ಬಿಡುತ್ತಾನೆ. ಇದೇಕೆ ? ದೇವರಿಗೆ ಪಕ್ಷಪಾತವನ್ನೊಡ್ಡದೆ ಈ ವೈಷಮ್ಯಕ್ಕೆ ಕಾರಣವನ್ನು ಹೇಳುವದು ಹೇಗೆ ? ದಯಾಘನನಾದ ತಂದೆಯೆನಿಸಿರುವಾತನು ತನ್ನ ಕಂದನನ್ನು ಇಂಥ ಸ್ಥಿತಿಯಲ್ಲಿಟ್ಟು ಕಷ್ಟಕ್ಕೀಡುಮಾಡುವದೇಕೆ ? ಇದಕ್ಕೆಲ್ಲ ದೇವರು ಕೊನೆಯಲ್ಲಿ ಲುಕ್ಸಾನುಕಟ್ಟಿ ಕೊಡುತ್ತಾನೆಂದು ಹೇಳಿದರೆ ಸರಿಯಾದ ಕಾರಣವನ್ನು ಹೇಳಿದಂತೆ ಆಗುವದಿಲ್ಲ. ಏಕೆಂದರೆ ದೇವರು ಒಬ್ಬರನ್ನು ಕೊಂದು ಪರಿಹಾರದ್ರವ್ಯವನ್ನು ಕೊಡುವಾತನಲ್ಲ. ಇದೂ ಅಲ್ಲದೆ, ಇದೇ ನನ್ನ ಮೊದಲನೆಯ ಜನ್ಮವಾದರೆ ನನ್ನ ಸ್ವಾತಂತ್ರ್ಯಕ್ಕೇನು ಗತಿ ? ಹಿಂದಿನ ಜನ್ಮದ ಅನುಭವವೇನೂ ಇಲ್ಲದೆ ಈ ಪ್ರಪಂಚಕ್ಕೆ ಬಂದಿದ್ದರೆ ನನಗೆ ಸ್ವಾತಂತ್ರ್ಯವೇ ಇರಲಾರದು ; ಏಕೆಂದರೆ ಆಗ ನಾನು ನಡೆಯಬೇಕಾದ ಹಾದಿಯನ್ನು ಮತ್ತೊಬ್ಬರ ಅನುಭವದಿಂದಲೇ ಗೊತ್ತುಪಡಿಸಬೇಕಾಗುತ್ತದೆ. ನನ್ನ ಸುಖಕ್ಕೆ ನಾನೇ ಕಾರಣನಲ್ಲದೆ ಹೋದರೆ ನಾನು ಸ್ವತಂತ್ರನಲ್ಲವೆಂದೇ ಆಗುವದು. ಆದ್ದರಿಂದ ಈ ಜನ್ಮದಲ್ಲಿರುವ ದುಃಖಕ್ಕೆ ನಾನೇ ಕಾರಣನೆಂದು ಒಪ್ಪಿಕೊಳ್ಳಬೇಕು ; ನಾನು ಮತ್ತೊಂದು ಜನ್ಮದಲ್ಲಿ ಮಾಡಿರಬಹುದಾದ ಪಾಪಕ್ಕೆ ಪರಿಹಾರವನ್ನು ಮಾಡಿಕೊಳ್ಳುವೆನೆನ್ನಬೇಕು. ಇಗೋ ಇದೇ ನಾವು ಹೇಳುವ ಜೀವ ಸಂಸಾರವಾದವು. ಈ ಜನ್ಮಕ್ಕೆ ನಾವು ಬರುವಾಗಲೇ ಮತ್ತೊಂದು ಜನ್ಮದ ಅನುಭವದಿಂದೊಡಗೂಡಿ ಬಂದಿರುತ್ತೇವೆ, ಇಲ್ಲಿ ನಮಗೆ ಆಗುವ ಸುಖವಾಗಲಿ

ದುಃಖವಾಗಲಿ ಹಿಂದಿನ ಜನ್ಮದಲ್ಲಿ ನಾವು ಮಾಡಿರುವ ಕರ್ಮದ ಫಲವು. ಹೀಗೆಯೇ ಮಾಡುತ್ತ ಮಾಡುತ್ತ ಮುಂದುಮುಂದಕ್ಕೆ ಹೋಗುವೆವು, ಕೊನೆಗೆ ಪರಿಪೂರ್ಣತೆಯನ್ನು ಹೊಂದುವೆವು.

ಈ ಪ್ರಪಂಚಕ್ಕೆಲ್ಲ ತಂದೆಯಾಗಿರುವ ಅನಂತನಾದ ಸರ್ವಶಕ್ತನಾದ ಈಶ್ವರನನ್ನು ನಾವು ಅಂಗೀಕರಿಸಿರುತ್ತೇವೆ. ಆದರೆ ನಮ್ಮ ಆತ್ಮವು ಕೊನೆಗೆ ಪರಿಪೂರ್ಣವಾದಾಗ ಅದೂ ಅನಂತವಾಗಿಬಿಡುತ್ತದೆ. ಆದರೆ ಎರಡು ಅನಂತವಾದ ಅಪರಿಚ್ಛಿನ್ನವಾದ ಇರವುಗಳಿಗೆ ಅವಕಾಶವಿರುವದಿಲ್ಲ ; ಆದ್ದರಿಂದ ನಾವು ನಂಬುವದೇನೆಂದರೆ ಒಬ್ಬ ಈಶ್ವರನಿರುವನು, ನಾವೇ ಆತನು.

ಪ್ರತಿಯೊಂದು ಧರ್ಮದಲ್ಲಿಯೂ ಈ ಮೂರು ಭೂಮಿಕೆಗಳಿರುವವು ; ಮೊದಲು ದೇವರು ಅತ್ಯಂತ ದೂರದಲ್ಲಿರುವನೆಂದು ನಮಗೆ ತೋರುವದು ; ಆಮೇಲೆ ನಾವು ಆತನ ಹತ್ತಿರಹತ್ತಿರಕ್ಕೆ ಬಂದು ಅವನಿಗೆ ಸರ್ವವ್ಯಾಪಕತ್ವವನ್ನು ಕೊಡುವೆವು, ಆಗ ನಾವು ಆತನಲ್ಲಿಯೇ ಇದ್ದುಕೊಂಡಿರುವೆವು. ಕೊನೆಗೆ ನಾವೇ ಆತನೆಂಬುದನ್ನು ಕಂಡುಕೊಳ್ಳುವೆವು. ಹೊರಗೆ ದೇವರಿದಾನೆಂಬ ಭಾವನೆಯೇನೂ ಸುಳ್ಳಲ್ಲ– ನಿಜವಾಗಿ ನೋಡಿದರೆ ದೇವರ ವಿಷಯದಲ್ಲಿರುವ ಪ್ರತಿಯೊಂದು ಭಾವನೆಯೂ ಸರಿಯೆ, ಆದ್ದರಿಂದ ಪ್ರತಿಯೊಂದು ಧರ್ಮವೂ ಸರಿಯೆ ; ಏಕೆಂದರೆ ಪ್ರತಿಯೊಂದು ಧರ್ಮವೂ ನಾವು ಮಾಡುತ್ತಿರುವ ಪಯಣದಲ್ಲಿ ಒಂದೊಂದು ಮಜಲು. ವೇದಗಳಲ್ಲಿರುವ ಪೂರ್ಣಭಾವನೆಯೇ ಈ ಪಯಣದ ಗುರಿಯು. ಆದ್ದರಿಂದಲೇ ನಾವು ಮತ್ತೊಂದು ಮತದಲ್ಲಿ ಸಹಾನುಭೂತಿಯಿಂದಿರುವೆವೆಂಬುದಿಷ್ಟೇ ಅಲ್ಲ, ಹಿಂದುಗಳಾದ ನಾವು ಪ್ರತಿಯೊಂದು ಧರ್ಮವನ್ನೂ ಸರಿಯೆಂದೊಪ್ಪಿಕೊಂಡಿರುವೆವು. ನಾವು ಮುಸಲ್ಮಾನರ ಮಸೀದಿಯಲ್ಲಿ ಪ್ರಾರ್ಥನೆಮಾಡುವೆವು, ಸೋರೋ–ಆಸ್ಟ್ರಿಯನ್ನರ ಅಗ್ನಿಯನ್ನು ಅರ್ಚನೆ ಮಾಡುವೆವು, ಕ್ರಿಸ್ತಿಯನ್ನರ ಶಿಲುಬೆಯ ಮುಂದೆ ಮೊಳಕಾಲೂರಿ ನಮಸ್ಕರಿಸುವೆವು; ಅತ್ಯಂತ ಕೀಳಾದ ಜಡವಸ್ತುಪೂಜೆಯಿಂದ ಹಿಡಿದು ಅತ್ಯಂತ ಮೇಲಿನ ಬ್ರಹ್ಮಾರಾಧನೆಯವರೆಗಿನ ಧರ್ಮಗಳೆಲ್ಲವೂ ಅನಂತವಾದ ಪರಮಾರ್ಥವಸ್ತುವನ್ನು ಗ್ರಹಿಸಿ ಸಾಕ್ಷಾತ್ಕಾರ ಮಾಡಿಕೊಳ್ಳುವದಕ್ಕೆಂದು ಮನುಷ್ಯಾತ್ಮನು ಮಾಡಿದ ಬೇರೆಬೇರೆ ಪ್ರಯತ್ನಗಳೆಂತಲೂ ಪ್ರತಿಯೊಂದು ಧರ್ಮವೂ ಅದು ಹುಟ್ಟಿರುವ ಸಂದರ್ಭ ಸನ್ನಿವೇಶಗಳಿಂದ ಆಯಾ ರೂಪವನ್ನು ಹೊಂದಿರುವದೆಂತಲೂ ಪ್ರತಿಯೊಂದು ಧರ್ಮವೂ ಮುಂದುವರಿಯುತ್ತಾ ಒಂದೊಂದು ಮಜಲುಮುಟ್ಟಿರುವದೆಂತಲೂ ನಾವು ತಿಳಿದಿರುವೆವು. ನಾವು ಈ ಕುಸುಮಗಳನ್ನೆಲ್ಲ ಆರಿಸಿಕೊಂಡು ಪ್ರೇಮವೆಂಬ ದಾರದಿಂದ ಕಟ್ಟಿ ಪರಮೇಶ್ವರನ ಆರಾಧನೆಗೊಂದು ವಿಚಿತ್ರವಾದ ಗುಚ್ಛವನ್ನು ಸಜ್ಜುಗೊಳಿಸುವೆವು.

ನಾನೇ ದೇವರಾಗಿದ್ದರೆ ನನ್ನ ಅಂತಃಕರಣವೆಂಬುದು ಆ ಪರಮೇಶ್ವರನ ದೇವಾಲಯವಾಯಿತು. ನನ್ನ ಪ್ರತಿಯೊಂದು ವ್ಯಾಪಾರವೂ ಒಂದೊಂದು ಬಗೆಯ ಆರಾಧನೆಯಾಗಿರಬೇಕಾಯಿತು. ಪ್ರೇಮಕ್ಕಾಗಿ ಪ್ರೇಮ, ಕರ್ತವ್ಯಕ್ಕಾಗಿ ಕರ್ತವ್ಯ ; ಇಲ್ಲಿ ಪ್ರತಿಫಲದಾಸೆಯಿಲ್ಲ, ಶಿಕ್ಷೆಯ ಹೆದರಿಕೆಯಿಲ್ಲ. ಹೀಗೆ ನಮ್ಮ ಧರ್ಮವೆಂದರೆ ವಿಕಾಸವಾಗುವದು, ವಿಕಾಸವಾಗುವದೆಂದರೆ ಸಾಕ್ಷಾತ್ಕರಿಸುವದು, ಪರಮಾರ್ಥವಾಗಿಯೂ ನೇರಾಗಿ

ಕಂಡುಕೊಳ್ಳುವದು– ಏನೋ ಸುಮ್ಮನೆ ಮಾತುಗಳನ್ನು ಮುಟಗುಟ್ಟುವದಲ್ಲ, ಮೊಳಕಾಲುಮಡಿಯುವದೂ ಅಲ್ಲ. ಮಾನವನು ದಿನದಿನಕ್ಕೂ ಈಶ್ವರತ್ವವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾ ಅನಂತಕಾಲದ ಅಭ್ಯಾಸದಿಂದ ಪರಮೇಶ್ವರನಾಗತಕ್ಕದ್ದು.

(The Hindu Religion : Complete Works, Vol. I, P.329)

# 8

# ವೇದಾಂತದ ಸ್ವರೂಪವೂ ಪ್ರಭಾವವೂ

## (ಬೋಸ್ಟನ್ ನಗರಿಯ ಇಪ್ಪತ್ತನೆಯ ಶತಮಾನದ ಸಮಾಜ (TWENTIETH CENTURY CLUB)ದಲ್ಲಿ ಮಾಡಿದ ಭಾಷಣ)

ಈ ಮಧ್ಯಾಹ್ನಾನ್ತರ ನಾನು ಮಾಡಬೇಕಾದ ಭಾಷಣದ ವಿಷಯುವನ್ನು ತೆಗೆದುಕೊಳ್ಳುವದಕ್ಕೆ ಮೊದಲು ನಿಮಗೆಲ್ಲ ನನ್ನ ಕೃತಜ್ಞತೆಯನ್ನು ಅರ್ಪಿಸುವದಕ್ಕೆ ಈ ಸುಸಮಯುವನ್ನು ಉಪಯೋಗಿಸಬೇಕೆಂದಿರುವೆನು; ಇದಕ್ಕೆ ಅವಕಾಶವನ್ನು ಕೊಡುವಿರೇನು? ನಿಮ್ಮಗಳೊಡನೆ ನಾನು ಮೂರು ವರ್ಷಗಳ ಕಾಲವಿದ್ದದ್ದಾಗಿದೆ; ಸ್ವಲ್ಪ ಹೆಚ್ಚುಕಡಿಮೆಯಾಗಿ ಅಮೆರಿಕದಲ್ಲೆಲ್ಲ ಸುತ್ತಾಡಿದ್ದಾಗಿದೆ. ಇನ್ನು ಇಲ್ಲಿಂದ ನಾನು ನಮ್ಮ ದೇಶಕ್ಕೆ ಹೊರಡಬೇಕೆಂದಿರುವದರಿಂದ ಈ ಸಂದರ್ಭದಲ್ಲಿ, ಅಮೆರಿಕದ ಅಥೆನ್ಸೆನಿಸಿಕೊಂಡಿರುವ* ಈ ನಗರದಲ್ಲಿ ನಾನು ನನ್ನ ಕೃತಜ್ಞತೆಯನ್ನು ತಿಳಿಸತಕ್ಕದ್ದು ಯುಕ್ತವಾಗಿರುವದು. ಈ ದೇಶಕ್ಕೆ ಮೊದಲು ನಾನು ಬಂದು ಕೆಲವು ದಿನಗಳಾದ ಮೇಲೆ ಈ ಜನಾಂಗದ ವಿಷಯದಲ್ಲಿ ನಾನು ಒಂದು ಗ್ರಂಥವನ್ನು ಬರೆಯಬಹುದೆಂದೆಣಿಸಿ ಕೊಂಡಿದ್ದೆನು; ಆದರೆ ಇಲ್ಲಿ ಮೂರು ವರ್ಷಗಳಿದ್ದ ಮೇಲೆ ಈಗ ನನಗೆ ಒಂದು ಪುಟವನ್ನು ಕೂಡ ಬರೆಯುವದಕ್ಕೆ ಆಗುವ ಹಾಗಿಲ್ಲವೆನಿಸುತ್ತಿದೆ. ಇದು ಹಾಗಿರಲಿ. ಬೇರೆಬೇರೆ ದೇಶಗಳಲ್ಲಿ ಪ್ರಯಾಣಮಾಡಿದ ಮೇಲೆ ನನಗೆ ತೋರಿಬಂದಿರುವದೇನೆಂದರೆ: ಉಡುಗೆತೊಡಿಗೆಗಳಲ್ಲಿಯೂ ತಿಂಡಿತೀರ್ಥಗಳಲ್ಲಿಯೂ ನಡೆನುಡಿಗಳ ಒಳಭೇದಗಳಲ್ಲಿಯೂ ಕಾಣಬರುತ್ತಿರುವ ಮೇಲುಮೇಲಿನ ಹೆಚ್ಚುಕಡಿಮೆಗಳು ಇದ್ದರೂ ಮಿಕ್ಕ ವಿಷಯದಲ್ಲಿ ಪ್ರಪಂಚದಲ್ಲೆಲ್ಲ ಮನುಷ್ಯನು ಮನುಷ್ಯನೇ ; ಎಲ್ಲೆಲ್ಲಿಯೂ ಅದೇ ವಿಚಿತ್ರ ಮನುಷ್ಯಸ್ವಭಾವವೇ ಕಾಣಿಸಿಕೊಳ್ಳುತ್ತಿದೆ. ಹೀಗಿದ್ದರೂ ಒಂದೊಂದು ಕಡೆ ಒಂದೊಂದು ವಿಲಕ್ಷಣವಾದ ಗುರುತುಗಳಿದ್ದೇ ಇರುತ್ತವೆ ; ನನಗೆ ಇಲ್ಲಿ ಆಗಿರುವ ಅನುಭವಗಳನ್ನೆಲ್ಲ ಒಂದೆರಡು ಮಾತುಗಳಲ್ಲಿ ಸಂಗ್ರಹಿಸಿ ಹೇಳಬೇಕೆಂತ ನನ್ನ ಮನಸ್ಸಿಗೆ

---

*ಅಥೆನ್ಸು ನಗರಿಯು ಪ್ರಾಚೀನ ಗ್ರೀಸುದೇಶದ ಸಂಸ್ಕೃತಿಯ ಮುಖ್ಯನಗರಿಯಾಗಿತ್ತು.

ಬಂದಿರುತ್ತದೆ. ಈ ಅಮೆರಿಕ ಎಂಬ ದೇಶದಲ್ಲಿ ಮನುಷ್ಯರಲ್ಲಿರುವ ಆಗಂತುಕ ಧರ್ಮಗಳನ್ನು ಅಷ್ಟೊಂದು ಲೆಕ್ಕಕ್ಕೆ ತರುವದಿಲ್ಲ. ಮನುಷ್ಯನು ಮನುಷ್ಯನಾಗಿದ್ದರೆ ಸಾಕು, ಕೂಡಲೆ ಅವನನ್ನು ತಮ್ಮವನನ್ನಾಗಿ ಮಾಡಿಕೊಂಡುಬಿಡುತ್ತಾರೆ ; ಇದನ್ನು ಪ್ರಪಂಚದಲ್ಲಿ ಮತ್ತೆ ಯಾವ ದೇಶದಲ್ಲಿಯೂ ನಾನು ನೋಡಲಿಲ್ಲ.

ನಾನು ಇಲ್ಲಿಗೆ ಇಂಡಿಯದ ಒಂದಾನೊಂದು ತತ್ತ್ವಶಾಸ್ತ್ರವನ್ನು ತಿಳಿಸುವದಕ್ಕೆಂದು ಬಂದೆನು, ಅದಕ್ಕೆ ವೇದಾಂತದರ್ಶನವೆಂದು ಹೆಸರು. ಆ ದರ್ಶನವು ಬಹಳ ಬಹಳ ಪುರಾತನವಾದದ್ದು; ಅದು ವೇದಗಳೆಂದು ಪ್ರಸಿದ್ಧವಾಗಿರುವ ಪುರಾತನಾರ್ಯರ ವಾಙ್ಮಯರಾಶಿಯ ಫಲಿತಾಂಶವಾಗಿರುವದು. ಎಷ್ಟೋ ಶತಮಾನಗಳಿಂದ ಕೂಡಿಸಿ ಆರಿಸಿಟ್ಟಿರುವ ಆ ವಾಙ್ಮಯರಾಶಿಯಲ್ಲಿ ಸೇರಿಕೊಂಡಿರುವ ಎಲ್ಲಾ ತರ್ಕಗಳ, ಅನುಭವಗಳ, ವಿಮರ್ಶೆಗಳ ಉತ್ತಮಸಾರಾಮೃತವೇ ಅದು ಎಂದು ಹೇಳಬಹುದಾಗಿದೆ. ಈ ವೇದಾಂತದರ್ಶನದಲ್ಲಿ ಕೆಲವು ವಿಶೇಷಗಳುಂಟು. ಮೊದಲನೆಯದಾಗಿ, ಅದು ಸ್ವಲ್ಪವೂ ಪುರುಷಾಪೇಕ್ಷೆಯಿಲ್ಲದೆ ಇರುವದು; ಅದು ಯಾವನೊಬ್ಬ ಪುರುಷನಿಂದ, ಯಾವನಾದರೊಬ್ಬ ಪ್ರವಾದಿಯಿಂದ ಹುಟ್ಟಿದ್ದಲ್ಲ; ಅದು ಒಬ್ಬ ಮನುಷ್ಯನನ್ನು ಕೇಂದ್ರೀಕರಿಸಿಕೊಂಡು ಆತನ ಸುತ್ತಲೂ ಬೆಳದದ್ದಾಗಿರುವದಿಲ್ಲ. ಹೀಗಿದ್ದರೂ ಕೆಲವು ಪುರುಷರನ್ನು ಆಶ್ರಯಿಸಿಯೇ ಬೆಳೆದುಕೊಂಡಿರುವ ಮಿಕ್ಕ ದರ್ಶನಗಳಿಗೆ ವಿರುದ್ಧವಾಗಿ ಅದು ಏನನ್ನೂ ಹೇಳುವದಿಲ್ಲ. ಇಂಡಿಯದಲ್ಲಿ ಇತ್ತೀಚೆಗೆ ಮತ್ತೆ ಬೇರೆ ದರ್ಶನಗಳೂ ಸಿದ್ಧಾಂತಗಳೂ ಒಬ್ಬೊಬ್ಬ ಪುರುಷನನ್ನಾಶ್ರಯಿಸಿಕೊಂಡು ಹುಟ್ಟಿರುತ್ತವೆ. ಉದಾಹರಣೆಗೆ ಬೌದ್ಧದರ್ಶನವೂ ಈಗಿನ ಎಷ್ಟೋ ಮತಪ್ರಭೇದಗಳೂ ಈ ರೀತಿಯಲ್ಲಿ ಹುಟ್ಟಿರುತ್ತವೆ. ಅವುಗಳಲ್ಲಿ ಪ್ರತಿಯೊಂದೂ ಕ್ರಿಸ್ತಿಯನರಂತೆಯೂ ಮಹಮ್ಮದೀಯರಂತೆಯೂ ಒಬ್ಬೊಬ್ಬ ಸಂಪ್ರದಾಯಕರ್ತನನ್ನು ಆಶ್ರಯಿಸಿರುತ್ತವೆ. ಆದರೆ ವೇದಾಂತದರ್ಶನವು ಈ ಎಲ್ಲ ಪ್ರಭೇದಗಳಿಗೂ ಆಧಾರವಾಗಿದ್ದುಕೊಂಡಿರುತ್ತದೆ, ವೇದಾಂತಕ್ಕೂ ಪ್ರಪಂಚದ ಮತ್ತೆ ಯಾವ ಸಿದ್ಧಾಂತಕ್ಕೂ ಜಗಳವಾಗಲಿ ವಿರೋಧವಾಗಲಿ ಇಲ್ಲವೇ ಇಲ್ಲ.

ಇದರಲ್ಲಿ ಒಂದು ಸಿದ್ಧಾಂತವುಂಟು– ಈ ಸಿದ್ಧಾಂತವು ಪ್ರಪಂಚದ ಪ್ರತಿಯೊಂದು ಧರ್ಮದಲ್ಲಿಯೂ ಕಂಡುಬರುತ್ತದೆಯೆಂಬುದು ವೇದಾಂತದ ಹೇಳಿಕೆ. ಅದೇನೆಂದರೆ, ಮನುಷ್ಯನು ಈಶ್ವರನೇ ಆಗಿರುವನೆಂದೂ ನಮ್ಮ ಸುತ್ತಲೂ ಕಾಣಬರುವದೆಲ್ಲ ಈ ಈಶ್ವರತ್ವಭಾವನೆಯ ಫಲವೆಂದೂ ಇದು ಹೇಳುವದು. ಮನುಷ್ಯಸ್ವಭಾವದಲ್ಲಿ ಯಾವಯಾವದು ಬಲವಾಗಿರುವದೋ, ಒಳ್ಳೆಯದಾಗಿರುವದೋ, ಶಕ್ತಿಯುತವಾಗಿರುವದೋ, ಅದೆಲ್ಲ ಆ ಈಶ್ವರತ್ವದ ಫಲವೆ ; ಅನೇಕರಲ್ಲಿ ಅದು ಅವ್ಯಕ್ತವಾಗಿದ್ದರೂ ಆತ್ಮದೃಷ್ಟಿಯಿಂದ ಒಬ್ಬ ಮನುಷ್ಯನಿಗೂ ಮತ್ತೊಬ್ಬ ಮನುಷ್ಯನಿಗೂ ಯಾವ ಹೆಚ್ಚು ಕಡಿಮೆಯೂ ಇರುವದಿಲ್ಲ, ಎಲ್ಲರೂ ಈಶ್ವರತ್ವದಲ್ಲಿ ಸಮಾನರೇ. ನಮ್ಮೆಲ್ಲರ ಹಿಂದುಗಡೆಯಲ್ಲಿ ಒಂದು ಅನಂತವಾದ ಸಾಗರವು ಇದ್ದುಕೊಂಡಿರುವದು; ನಾನು, ನೀವು–ಎಲ್ಲರೂ ಆ ಸಾಗರದ ಬೇರೆಬೇರೆ ಅಲೆಗಳಾಗಿರುವೆವು; ನಮ್ಮಲ್ಲಿ ಪ್ರತಿಯೊಬ್ಬರೂ ಆ ನಮ್ಮ ಹೊರಗಿರುವ ಆ ಅನಂತತತ್ತ್ವವನ್ನು ವ್ಯಕ್ತಗೊಳಿಸುವದಕ್ಕೆ ಪ್ರಯತ್ನ ಮಾಡುತ್ತಿರುವೆವು. ಹೀಗೆ ಈ ಅನಂತವಾದ ಸಚ್ಚಿದಾನಂದಸಾಗರವು ನಮ್ಮ

ಆಜನ್ಮಸಿದ್ಧವಾದ ಹಕ್ಕಾಗಿ, ನಮ್ಮ ನಿಜವಾದ ಸ್ವರೂಪವಾಗಿ ನಮ್ಮ ಒಬ್ಬೊಬ್ಬರಲ್ಲಿಯೂ ಅವ್ಯಕ್ತರೂಪದಿಂದ ಇದ್ದುಕೊಂಡಿರುವದು ; ಮತ್ತು ನಮ್ಮಗಳಲ್ಲಿ ಒಬ್ಬೊಬ್ಬರಿಗಿರುವ ತಾರತಮ್ಯವೆಂಬುದು ಆ ಈಶ್ವರತ್ವವನ್ನು ವ್ಯಕ್ತಗೊಳಿಸುವದಕ್ಕೆ ನಮ್ಮಲ್ಲಿರುವ ಹೆಚ್ಚಿನ ಅಥವಾ ಕಡಿಮೆಯ ಶಕ್ತಿಯಿಂದ ಆಗಿರುತ್ತದೆ*. ಆದ್ದರಿಂದ ವೇದಾಂತವು ಹೇಳುವದೇನೆಂದರೆ, ಪ್ರತಿಯೊಬ್ಬನೂ ಎಷ್ಟೆಷ್ಟು ವ್ಯಕ್ತಗೊಳಿಸಿರುತ್ತಾನೋ ಅಷ್ಟರ ಮೇಲಿಂದ ಅವನ ಯೋಗ್ಯತೆಯನ್ನು ಕಟ್ಟಕೂಡದು, ಅವನು ಯಾವದರ✝ ಹೊರ ಗುರುತಾಗಿರುತ್ತಾನೋ ಅದರಿಂದಲೇ ಕಟ್ಟಬೇಕು. ಪ್ರತಿಯೊಬ್ಬ ಮಾನವನೂ ಬ್ರಹ್ಮಕ್ಕೇ ಹೊರಗುರುತಾಗಿರುತ್ತಾನೆ ; ಆದ್ದರಿಂದ ಪ್ರತಿಯೊಬ್ಬ ಗುರುವೂ ಸಾಧಕನಿಗೆ ಸಹಾಯವನ್ನು ಮಾಡಬೇಕಾದರೆ ಅವನನ್ನು ಜರಿದು ಕುಗ್ಗಿಸಬಾರದು, ಅವನೊಳಗಿರುವ ಬ್ರಹ್ಮತ್ವವನ್ನು ಹೊರಕ್ಕೆ ತರುವಂತೆ ಸಹಾಯಮಾಡಬೇಕು.

ಈ ವೇದಾಂತದಲ್ಲಿರುವ ಮತ್ತೊಂದುಪದೇಶವೇನೆಂದರೆ, ಸಮಾಜದಲ್ಲಿಯೂ ಪ್ರತಿಯೊಂದು ಕರ್ಮಕ್ಷೇತ್ರದಲ್ಲಿಯೂ ಕಾಣಬರುವ ಶಕ್ತಿರಾಶಿಯೆಲ್ಲ ಒಳಗಿನಿಂದಲೇ ಹೊರಕ್ಕೆ ಬಂದಿರುವದು. ಆದ್ದರಿಂದ ಮಿಕ್ಕಮತದವರು ಪ್ರೇರಣೆ (ಉಚ್ಛ್ವಾಸ☞) ಎಂದು ಕರೆಯುವದನ್ನು ಮನುಷ್ಯನ ನಿಶ್ವಾಸವೆಂದು ಕರೆಯಬೇಕೆಂಬುದು ವೇದಾಂತಿಯ ಅರಿಕೆಯಾಗಿರುವದು. ಆದರೂ ವೇದಾಂತವು ಮಿಕ್ಕ ಮತಗಳೊಡನೆ ಕಲಹಮಾಡುವದಿಲ್ಲ. ಮನುಷ್ಯನಲ್ಲಿ ಈಶ್ವರತ್ವವಿರುವದೆಂಬುದನ್ನು ಯಾರು ತಿಳಿಯಲಾರರೋ ಅವರಿಗೂ ವೇದಾಂತಕ್ಕೂ ಜಗಳವೇನೂ ಇಲ್ಲ. ತಿಳಿದೋ ತಿಳಿಯದೆಯೋ ಪ್ರತಿಯೊಬ್ಬನೂ ಆ ಈಶ್ವರತ್ವವನ್ನು ವಿಕಾಸಗೊಳಿಸುವದಕ್ಕೇ ಪ್ರಯತ್ನಿಸುತ್ತಿರುತ್ತಾನೆ.

ಮನುಷ್ಯನು ಒಂದು ಸಣ್ಣ ಪೆಟ್ಟಿಗೆಯಲ್ಲಿ ಸಿಂಬೆಸುತ್ತಿಟ್ಟಿರುವ ಅನಂತವಾದ ತಂತಿಯ ಹಾಗಿರುತ್ತಾನೆ; ಈ ಸಿಂಬೆಯು ಬಿಚ್ಚಿಕೊಳ್ಳುವದಕ್ಕೆ ಯತ್ನಿಸುತ್ತಾ ಇದೆ; ಈಗ ನಮಗೆ ಕಾಣಬರುತ್ತಿರುವ ಸಾಮಾಜಿಕ ದೃಶ್ಯಗಳೆಲ್ಲ ಈ ಬಿಚ್ಚಿಕೊಳ್ಳುವ ಯತ್ನದ ಫಲವೇ ಆಗಿವೆ. ನಮ್ಮ ಸುತ್ತಲೂ ಕಾಣಬರುತ್ತಿರುವ ಮೇಲಾಟಗಳು, ಹೆಣಗಾಟಗಳು, ದುಃಖಗಳು– ಇವೆಲ್ಲ ಈ ಬಿಚ್ಚುವಿಕೆಗೆ ಕಾರಣವೂ ಅಲ್ಲ, ಕಾರ್ಯವೂ ಅಲ್ಲ. ನಮ್ಮ ದೇಶದ ಮಹಾತತ್ತ್ವಶಾಸ್ತ್ರಜ್ಞರಲ್ಲೊಬ್ಬನು

---

* ಇದೆಲ್ಲ ವ್ಯವಹಾರದೃಷ್ಟಿಯಿಂದ ಹೇಳಿದ್ದು. ಸಾಧಕನು ತಾನು ಮನುಷ್ಯನು, ಹೀನವೀರ್ಯನು – ಎಂದು ತಿಳಿದುಕೊಂಡಿದ್ದರೂ ಶಾಸ್ತ್ರದೃಷ್ಟಿಯಿಂದ ನೋಡಿದರೆ ತಾನು ಸರ್ವಜ್ಞವೂ ಸರ್ವಶಕ್ತಿಯೂ ಆಗಿರುವ ನಿತ್ಯಶುದ್ಧಬುದ್ಧಮುಕ್ತಸ್ವಭಾವವಾದ ಬ್ರಹ್ಮವೇ ಎಂದು ನಂಬಬೇಕಾಗಿರುವದು ; ಮತ್ತು ಆ ಸ್ವರೂಪವನ್ನು ಕಂಡುಕೊಳ್ಳುವದಕ್ಕೆ ಯತ್ನಿಸಬೇಕಾಗಿರುವದು. ಆದರೆ ಪರಮಾರ್ಥದೃಷ್ಟಿಯಿಂದ ನೋಡಿದರೆ ಅಜ್ಞಾನದಿಂದಲೇ ಎಲ್ಲಾ ತಾರತಮ್ಯವೂ ಆಗಿರುವದು, ನಿಜವಾಗಿ ಅದ್ವಿತೀಯವಾದ ಬ್ರಹ್ಮವೊಂದೇ ಇರುವದು.

✝ ಪರಬ್ರಹ್ಮಕ್ಕೆ.

☞ ದೇವಪ್ರೇರಣೆಯಿಂದ ಜನರು ಬೈಬಲ್ಲು ಮುಂತಾದ ಗ್ರಂಥಗಳನ್ನು ಬರೆದಿರುವರೆಂದು ಕ್ರಿಸ್ತಿಯನ್ನರೇ ಮೊದಲಾದವರು ನಂಬುವರು ; ಪ್ರೇರಣೆಯೆಂಬರ್ಥದ ಇಂಗ್ಲಿಷಿನ ಮಾತಿಗೆ ಉಚ್ಛ್ವಾಸವೆಂದೂ ಅರ್ಥವಾಗುವದು.

* ಅಂದಿರುವಂತೆ ಹೊಲಕ್ಕೆ ನೀರುಹಾಯಿಸುವಾಗ ಕೆರೆಯು ಮೇಲುಗಡೆ ಎಲ್ಲಿಯೋ ಒಂದು ಕಡೆ ಇರುತ್ತದೆ ; ನೀರು ಹೊಲಕ್ಕೆ ನುಗ್ಗುವದಕ್ಕೆ ಪ್ರಯತ್ನಮಾಡುತ್ತಿರುತ್ತದೆ. ಅದಕ್ಕೆ ಅಡ್ಡಲಾಗಿ ಒಂದು ಅಡ್ಡಬಾಗಿಲನ್ನು ಹಾಕಿರುತ್ತಾರೆ. ಈ ಬಾಗಿಲನ್ನು ತೆರೆದರೋ ಇಲ್ಲವೋ, ನೀರು ತನ್ನಷ್ಟಕ್ಕೆ ತಾನೇ ನುಗ್ಗಿಬಿಡುತ್ತದೆ ; ದಾರಿಯಲ್ಲಿ ಧೂಳಾಗಲಿ ಕೊಳೆಯಾಗಲಿ ಇದ್ದರೆ ನೀರು ಅವುಗಳ ಮೇಲೂ ಹರಿದುಹೋಗುತ್ತದೆ. ಆದರೆ ಧೂಳೂ ಕೊಳೆಯೂ ಮನುಷ್ಯನ ದೈವಿಕ ಸ್ವಭಾವವು ಬಿಚ್ಚಿಕೊಳ್ಳುವದರ ಕಾರ್ಯವೂ ಅಲ್ಲ, ಕಾರಣವೂ ಅಲ್ಲ. ಅವೂ ಆ ಕಾಲಕ್ಕೆ ಇರುವವುಗಳಾಗಿವೆ, ಅಷ್ಟೆ ; ಆದ್ದರಿಂದ ಅವುಗಳನ್ನು ಪರಿಹರಿಸಿಕೊಳ್ಳಬಹುದಾಗಿರುತ್ತದೆ.

ಈ ಅಭಿಪ್ರಾಯವು, ಇಂಡಿಯದೊಳಗಾಗಲಿ ಆ ದೇಶದ ಹೊರಗಾಗಲಿ ಇರುವ ಪ್ರತಿಯೊಂದು ಮತದಲ್ಲಿಯೂ ಇದ್ದೇ ಇರುವದೆಂದು ವೇದಾಂತದ ಹೇಳಿಕೆ ; ಆದರೆ ಕೆಲವು ಮತಗಳಲ್ಲಿ ಇದನ್ನು ಪುರಾಣದ ಮೂಲಕವೂ ಮತ್ತೆ ಕೆಲವು ಮತಗಳಲ್ಲಿ ಸಂಕೇತಗಳ ಮೂಲಕವೂ ತಿಳಿಸಿರುತ್ತದೆ, ಅಷ್ಟೇ ವಿಶೇಷ. ವೇದಾಂತಿಗಳು ಅಭಿಪ್ರಾಯಪಡುವದೇನೆಂದರೆ, ಯಾವದೊಂದು ಮತದ ಆವಿರ್ಭಾವವಾಗಿರಲಿ, ಯಾವನೊಬ್ಬ ದೈವಿಕ ಪುರುಷನು ಅವತಾರವಾಗಿರಲಿ, ಅವನು ಎಷ್ಟೇ ದೊಡ್ಡವನಾಗಿರಲಿ, ಆ ಆವಿರ್ಭಾವವು ಅಥವಾ ಅವತಾರವು ಮಾನವಸ್ವಭಾವದಲ್ಲಿ ಈ ಅನಂತವಾದ ಏಕತ್ವವನ್ನೇ ಹೊರಪಡಿಸಿರುತ್ತದೆ; ನೀತಿ, ನಡತೆ, ಪರೋಪಕಾರ– ಎಂದು ನಾವು ಕರೆಯುತ್ತಿರುವದೆಲ್ಲ ಈ ಏಕತ್ವದ ಹೊರತೋರುವಿಕೆಯೇ ಆಗಿರುತ್ತದೆ. ಪ್ರತಿಯೊಬ್ಬನೂ ಕೆಲಕೆಲವು ಸಮಯಗಳಲ್ಲಿ ತಾನೂ ಪ್ರಪಂಚವೂ ಒಂದೇ ಎಂಬ ಭಾವನೆಯನ್ನು ತಾಳಿಬಿಡುತ್ತಾನೆ. ಆಗ ತಿಳಿದೋ ತಿಳಿಯದೆಯೋ ಅವನು ಈ ಐಕ್ಯವನ್ನು ತೋರಿಸಿಕೊಳ್ಳುವದಕ್ಕೆ ಮುಂದಕ್ಕೆ ನುಗ್ಗುತ್ತಾನೆ. ಈ ಐಕ್ಯಪ್ರಕಾಶವನ್ನೇ ನಾವು ಪ್ರೇಮವೆಂದೂ ಸಹಾನುಭೂತಿಯೆಂದೂ ಕರೆಯುತ್ತಿರುವೆವು, ನಮ್ಮ ನೀತಿಗೂ ನಡತೆಗೂ ಇದೇ ಆಧಾರವು. ಇದನ್ನು ವೇದಾಂತ ಸಿದ್ಧಾಂತದಲ್ಲಿ "ತತ್ತ್ವಮಸಿ" (ಅದೇ ನೀನಾಗಿರುವೆ) ಎಂಬ ಸೂತ್ರವಾಕ್ಯದಲ್ಲಿ ಸಂಗ್ರಹಿಸಿ ಹೇಳಿರುತ್ತದೆ.

ಇದನ್ನು ಪ್ರತಿಯೊಬ್ಬನಿಗೂ ಉಪದೇಶಮಾಡಿರುತ್ತದೆ : ನೀನು ಈ ವಿಶ್ವಾತ್ಮನೇ, ಆದ್ದರಿಂದ ಲೋಕದಲ್ಲಿರುವ ಪ್ರತಿಯೊಂದು ಆತ್ಮವೂ ನಿನ್ನಾತ್ಮವೇ, ಲೋಕದಲ್ಲಿರುವ ಪ್ರತಿಯೊಂದು ಶರೀರವೂ ನಿನ್ನ ಶರೀರವೇ ; ಮತ್ತೊಬ್ಬರನ್ನು ನೋಯಿಸಿದರೆ ನಿನ್ನನ್ನೇ ನೋಯಿಸಿಕೊಂಡಂತೆ, ಮತ್ತೊಬ್ಬರನ್ನು ಪ್ರೀತಿಸಿದರೆ ನಿನ್ನನ್ನೇ ಪ್ರೀತಿಸಿಕೊಂಡಂತೆ. ದ್ವೇಷದ ಪ್ರವಾಹವೊಂದನ್ನು ನೀವು ಹೊರಕ್ಕೆ ಬಿಟ್ಟರೋ ಇಲ್ಲವೋ, ಅದು ಯಾರನ್ನಾದರೂ ಸಂಕಟಪಡಿಸಲಿ, ನಿಮ್ಮನ್ನೂ ಸಂಕಟಗೊಳಿಸಿಯೇ ತೀರುವದು ; ನಿಮ್ಮಿಂದ ಪ್ರೇಮವು ಹೊರಟಿತೆಂದರೆ ಅದು ಮತ್ತೆ ನಿಮ್ಮನ್ನು ಬಂದು ಸೇರಿಯೇ ತೀರುವದು. ಏಕೆಂದರೆ ನಾನೇ ಪ್ರಪಂಚವು; ಈ ಪ್ರಪಂಚವೆಂಬುದು ನನ್ನ ಶರೀರವು. ನಾನೇ ಅನಂತವಾದ ಪರಮಾರ್ಥವು, ಆದರೆ ನನಗೆ ಇದರ ಅರಿವಿಲ್ಲ, ಅಷ್ಟೆ ; ಆದರೆ ಈ ಅನಂತದ ಅರಿವನ್ನು ಪಡೆದುಕೊಳ್ಳಬೇಕೆಂದು ನಾನು ಹಾತುವರಿಯುತ್ತಿರುವೆನು, ಈ ಅನಂತದ ಪೂರ್ಣವಾದ ಅರಿವು ನನಗೆ ಬಂದ ಮೇಲೆ ಪರಿಪೂರ್ಣತೆಯನ್ನು ಮುಟ್ಟಿದಂತಾಗುವದು.

---

* ಪತಂಜಲಿಸೂತ್ರ (4–3) ವನ್ನು ನೋಡಿ.

ವೇದಾಂತದಲ್ಲಿರುವ ಮತ್ತೊಂದು ವಿಶೇಷಭಾವನೆಯೇನೆಂದರೆ, ಧಾರ್ಮಿಕವಿಚಾರದಲ್ಲಿ ಕಾಣಬರುವ ಈ ಅನಂತಭೇದಕ್ಕೂ ಅವಕಾಶವಿರಲೇಬೇಕು. ಪ್ರತಿಯೊಬ್ಬನನ್ನೂ ಒಂದೇ ಅಭಿಪ್ರಾಯಕ್ಕೆ ತಿರುಗಿಸುವ ಪ್ರಯತ್ನವನ್ನು ಮಾಡಬಾರದು. ಏಕೆಂದರೆ ಎಲ್ಲರೂ ಮುಟ್ಟಬೇಕಾದ ಕೊನೆಯ ಸ್ಥಾನವು ಒಂದೇ ಆಗಿರುತ್ತದೆ. ವೇದಾಂತಿಯು ಆಲಂಕಾರಿಕ ಭಾಷೆಯಲ್ಲಿ ಹೇಳಿರುವಂತೆ "ಬೇರೆಬೇರೆ ಪರ್ವತಗಳಲ್ಲಿ ಹುಟ್ಟಿರುವ ನದಿಗಳು ಕೆಳಕ್ಕೆ ಬಂದು ನೆಟ್ಟಗೋ ಸೊಟ್ಟಗೋ ಅತ್ತಿತ್ತ ಹರಿದಾಡಿ ಕೊನೆಗೆ ಸಮುದ್ರವನ್ನೇ ಹೇಗೆ ಸೇರುವವೋ– ಇದರಂತೆಯೇ ಈ ಎಲ್ಲಾ ಉಪಮತಗಳೂ ಬೇರೆಬೇರೆ ದೃಷ್ಟಿಯಿಂದ ಉಂಟಾದವುಗಳಾಗಿ ನೇರಾಗಿಯೇ ಸೊಟ್ಟಾಗಿಯೇ ಓಡಾಡಿ ಕೊನೆಗೆ ಪರಮೇಶ್ವರನೆ, ನಿನ್ನನ್ನೇ ಬಂದು ಸೇರುತ್ತವೆ."

ಇದನ್ನು ಆಚರಣೆಗೆ ತರುವದರಲ್ಲಿ ಈ ಅತ್ಯಂತ ಪ್ರಾಚೀನದರ್ಶನವು ತನ್ನ ಪ್ರಭಾವದಿಂದ ಸಾಕ್ಷಾತ್ತಾಗಿ ಪ್ರಪಂಚದಲ್ಲೆಲ್ಲ ಮೊಟ್ಟಮೊದಲನೆಯ ಉಪದೇಶಧರ್ಮವೆನಿಸಿರುವ ಬೌದ್ಧಧರ್ಮಕ್ಕೆ ಉತ್ತೇಜಕವಾಯಿತೆಂದು ಕಂಡುಬಂದಿರುತ್ತದೆ ; ಅಲೆಗ್ಸಾಂಡ್ರಿಯದವರು, ಜ್ಞಾನವಾದಿಗಳು (Gnostics), ಮಧ್ಯಯುಗದ ಯೂರೋಪಿನ ದಾರ್ಶನಿಕರು– ಇವರ ಮೂಲಕ ಪರಂಪರೆಯಾಗಿ ಕ್ರಿಸ್ತಿಯನ್ನರ ಮತದ ಮೇಲೂ ಇದು ತನ್ನ ಪ್ರಭಾವವನ್ನು ಬೀರಿ ತತ್ತ್ವಶಾಸ್ತ್ರ ಮನಶ್ಶಾಸ್ತ್ರಗಳ ಕ್ಷೇತ್ರಗಳಲ್ಲಿ ಇದೊಂದು ಮಹಾಕ್ರಾಂತಿಯನ್ನೇ ಉಂಟು-ಮಾಡಿರುವದೆನ್ನಬೇಕಾಗಿದೆ. ಇಷ್ಟಾದರೂ ಈ ಎಲ್ಲಾ ಪ್ರಭಾವವನ್ನೂ ಸ್ವಲ್ಪ ಹೆಚ್ಚುಕಡಿಮೆ ಜನರಿಗೆ ಗೊತ್ತಾಗದಂತೆಯೇ ಮೆಲ್ಲಗೆ ಲೋಕದ ಮೇಲೆ ಹಬ್ಬಿಸಿರುತ್ತದೆ. ರಾತ್ರಿಯಲ್ಲಿ ಮೆಲ್ಲಗೆ ಬೀಳುವ ಇಬ್ಬನಿಯು ಸಸ್ಯಗಳಿಗೆಲ್ಲ ಪೋಷಣವನ್ನು ಹೇಗೆ ತಂದುಕೊಡುತ್ತದೆಯೋ, ಹಾಗೆ ಮೆಲ್ಲಮೆಲ್ಲಗೆ ಯಾರೂ ಅರಿಯದಂತೆಯೇ ಈ ದೈವಿಕದರ್ಶನವು ಜನರ ಕಲ್ಯಾಣಕ್ಕಾಗಿ ಪ್ರಪಂಚದಲ್ಲೆಲ್ಲ ಹರಡಿಬಿಟ್ಟಿರುತ್ತದೆ. ಈ ಧರ್ಮವನ್ನುಪದೇಶಿಸುವದಕ್ಕೆ ಯಾವ ದಂಡಿನ ಧಾಳಿಯನ್ನೂ ಉಪಯೋಗಿಸಿರುವದಿಲ್ಲ. ಬೌದ್ಧಮತವು ಅತ್ಯಂತವಾಗಿ ಮತೋಪದೇಶವನ್ನು ಕೈಕೊಂಡಿರುವ ಧರ್ಮಗಳಲ್ಲೊಂದಷ್ಟೆ. ಅದರ ಸಂಬಂಧವಾಗಿ ಅಶೋಕನೆಂಬ ಮಹಾಚಕ್ರವರ್ತಿಯ ಶಾಸನಗಳು ಇನ್ನೂ ಇವೆ; ಅಲೆಗ್ಸಾಂಡ್ರಿಯ, ಆಂಟಿಯೊಕ್, ಪರ್ಷಿಯ, ಚೈನ– ಮುಂತಾದ ಆಗಿನ ನಾಗರಿಕಪ್ರಪಂಚದ ಬೇರೆಬೇರೆ ದೇಶಗಳಿಗೆ ಉಪದೇಶಕರನ್ನು ಕಳುಹಿಸಿದರೆಂಬುದು ಅವುಗಳಲ್ಲಿ ಬರೆದಿದೆ. ಇದು ಕ್ರೈಸ್ತನು ಹುಟ್ಟುವ ಮುನ್ನೂರು ವರ್ಷಗಳ ಮುಂಚೆ. ಉಪದೇಶಕರಿಗೆ ಪರಧರ್ಮದವರನ್ನು ದೂಷಿಸಬಾರದೆಂಬ ತಿಳಿವಳಿಕೆಯನ್ನು ಕೊಟ್ಟುಕಳುಹಿಸಿದ್ದರು. "ಧರ್ಮಗಳು ಎಲ್ಲಿಯೇ ಇರಲಿ, ಎಲ್ಲಾ ಧರ್ಮಗಳಿಗೂ ಆಧಾರವು ಒಂದೇ ; ಅವುಗಳಿಗೆಲ್ಲ ನಿಮ್ಮ ಕೈಲಾದಷ್ಟು ಸಹಾಯಮಾಡಿರಿ, ಆದರೆ ಅವುಗಳಿಗೆ ತೊಂದರೆಮಾಡುವದಕ್ಕೆ ಹೋಗಬೇಡಿರಿ."

ಹೀಗೆ ಇಂಡಿಯದಲ್ಲಿ ಹಿಂದುಗಳು ಧರ್ಮನಿಮಿತ್ತವಾಗಿ ಯಾರೊಬ್ಬರಿಗೂ ಹಿಂಸೆಕೊಟ್ಟದ್ದು ಇಲ್ಲವೇ ಇಲ್ಲ, ಅದಕ್ಕೆ ಬದಲು ಪ್ರಪಂಚದ ಧರ್ಮದಲ್ಲೆಲ್ಲ ಅವರು ಇಟ್ಟುಕೊಂಡಿರುವ ಆ ಅದ್ಭುತಪೂಜ್ಯಬುದ್ಧಿಯೊಂದೇ ಇರುತ್ತಿತ್ತು. ಯೆಹೂದ್ಯರು ತಮ್ಮ ದೇಶದಿಂದ ಹೊರಡಿಸಲ್ಪಟ್ಟಾಗ ಅವರಲ್ಲಿ ಕೆಲವರಿಗೆ ಇವರು ಆಸರೆಯನ್ನು ಕೊಟ್ಟರು; ಇದರ ಫಲಿತಾಂಶವಾಗಿ ಮಲೆಯಾಳದ ಯೆಹೂದ್ಯರು ಇಂದಿಗೂ ಅಲ್ಲಿರುತ್ತಾರೆ. ಮತ್ತೊಂದು

ಕಾಲದಲ್ಲಿ ಪರ್ಷಿಯದೇಶದವರು ಸ್ವಲ್ಪ ಹೆಚ್ಚುಕಡಿಮೆ ಇಲ್ಲವೇ ಇಲ್ಲವೆನ್ನುವಷ್ಟಾಗುತ್ತಿರುವಲ್ಲಿ ಅವರಲ್ಲಿ ಕಳೆದುಳಿದವರಿಗೂ ಆಸರೆಯನ್ನು ಕೊಟ್ಟರು ; ಅವರು ಬೊಂಬಾಯಿಯ ಪಾರ್ಸಿಗಳೆಂಬ ಹೆಸರಿನಿಂದ ಇಂದಿಗೂ ನಮ್ಮಲ್ಲಿಯೇ ಸೇರಿಕೊಂಡು ನಮ್ಮ ಪ್ರೇಮಪಾತ್ರರಾಗಿರುತ್ತಾರೆ. ಜೀಸಸ್ ಕ್ರೈಸ್ತನ ಶಿಷ್ಯನಾದ ಸೇಂಟ್‌ಥಾಮಸ್ ಎಂಬಾತನೊಡನೆ ಬಂದೆವೆಂದು ಹೇಳಿಕೊಂಡ ಕೆಲವರು ಕ್ರಿಸ್ತಿಯನ್ನರೂ ಉಂಟು ; ತಮ್ಮ ಮತವನ್ನು ಇಟ್ಟುಕೊಂಡೇ ಇಂಡಿಯದಲ್ಲಿ ನೆಲಸಿರುವದಕ್ಕೆ ಅವರಿಗೂ ಅವಕಾಶವು ದೊರೆಯಿತು, ಅವರದೂ ಒಂದು ಪಾಳ್ಯವು ಈಗಲೂ ಇಂಡಿಯದಲ್ಲಿರುತ್ತದೆ. ಈ ಸಹಾನುಭೂತಿಯ ಭಾವನೆಯು ಇನ್ನೂ ಸತ್ತುಹೋಗಿಲ್ಲ ; ಅದು ಅಲ್ಲಿ ಸತ್ತುಹೋಗುವದೂ ಇಲ್ಲ, ಸತ್ತುಹೋಗಲೂ ಆರದು.

ವೇದಾಂತವು ನಮಗೆ ಕಲಿಸಿಕೊಡುವ ಉತ್ತಮಪಾಠಗಳಲ್ಲಿ ಇದು ಒಂದಾಗಿರುತ್ತದೆ. ತಿಳಿದೋ ತಿಳಿಯದೆಯೋ ನಾವು ಅದೇ ಗತಿಯನ್ನು ಪಡೆಯುವದಕ್ಕೆ ಹೆಣಗಾಡುತ್ತಿದ್ದೇವೆಂಬುದನ್ನು ಅರಿತ ಮೇಲೆ ನಾವು ಏತಕ್ಕೆ ಆತುರಪಡಬೇಕು ? ಒಬ್ಬನು ಮತ್ತೊಬ್ಬನಿಗಿಂತ ನಿಧಾನವಾಗಿದ್ದರೆ ನಾವು ಆತುರಪಡಬೇಕಾದದ್ದಿಲ್ಲ, ಅವನನ್ನು ನಾವು ಶಪಿಸಬೇಕಾದದ್ದಿಲ್ಲ, ಬಯ್ಯಬೇಕಾದದ್ದಿಲ್ಲ. ನಮ್ಮ ಕಣ್ಣುಪರೆಯು ತೆರೆದುಕೊಂಡು ಹೃದಯವು ಶುದ್ಧಿಯಾದರೆ, ಪ್ರತಿಯೊಂದು ಮಾನವಹೃದಯದಲ್ಲಿಯೂ ಅದೇ ದೈವಿಕ ಶಕ್ತಿಯು ಕೆಲಸಮಾಡುತ್ತಿದೆಯೆಂಬುದು, ಅದೇ ಭಗವತ್ತತ್ತ್ವವು ವಿಕಾಸವಾಗುತ್ತಿದೆಯೆಂಬುದು, ವ್ಯಕ್ತವಾಗುವದು ; ಮನುಷ್ಯರೆಲ್ಲ ಅಣ್ಣತಮ್ಮಂದಿರೆಂದು ಹೇಳಿಕೊಳ್ಳುವದಕ್ಕೆ ಆಗಲೇ ನಾವು ತಕ್ಕವರಾಗುವೆವು. ಯಾವಾಗ ಮನುಷ್ಯನು ಪರಗತಿಯನ್ನು ಹೊಂದುವನೋ, ಯಾವಾಗ ಹೆಂಗಸು ಗಂಡಸೆಂಬ ಭೇದವನ್ನಾಗಲಿ ಲಿಂಗ, ಮತ, ಬಣ್ಣ, ಜನ್ಮ– ಮುಂತಾದ ಭೇದಗಳನ್ನಾಗಲಿ ಕಾಣದೆ ಇರುವನೋ, ಯಾವಾಗ ಇವುಗಳನ್ನೆಲ್ಲ ಮೀರಿ ಪ್ರತಿಯೊಬ್ಬ ಮನುಷ್ಯನಿಗೂ ಅಧಿಷ್ಠಾನವಾಗಿರುವ ಆ ಪರಮಾತ್ಮನನ್ನೇ ಕಂಡುಕೊಳ್ಳುವನೋ, – ಆಗಲೇ ವಿಶ್ವಭ್ರಾತೃತ್ವವನ್ನು ಅವನು ಮುಟ್ಟಿದಂತಾಯಿತು, ಆ ಮನುಷ್ಯನೇ ವೇದಾಂತಿಯು.

ಇವು ವೇದಾಂತದಿಂದ ಆಗಿರುವ ವ್ಯಾವಹಾರಿಕಪ್ರಯೋಜನಗಳೆಂದು ಇತಿಹಾಸದಿಂದ ತಿಳಿಯಬರುವ ಕೆಲವು ಪ್ರಯೋಜನಗಳು.

(The Spirit and Influence of Vedanta : Complete Works, Vol. I, P.387)

– – – – – – – –

# ವೇದಾಂತೋಪನ್ಯಾಸಗಳು: ಇಂಗ್ಲಿಷ್‌ನ ಮೂಲ ಪುಸ್ತಕಕ್ಕೆ– ಸಂಪಾದಕರ ಮುನ್ನುಡಿ

"ಯಾವದೇ ವಿಜ್ಞಾನ ನಿರ್ದ್ವಂದ್ವಸ್ಥಿತಿ ಮುಟ್ಟಿದರೆ, ಅದು ಇನ್ನು ಮುಂದೆ ಸಾಗಲು ಸಾಧ್ಯವಾಗಲಾರದು. ನೀವು ಪರತತ್ತ್ವದ ಪರಿಪೂರ್ಣಭಾವವನ್ನು ಎಂದರೆ ಯಾವದರಿಂದ ಈ ವಿಶ್ವದ ಪ್ರತಿಯೊಂದೂ ಉಗಮವಾಗಿದೆಯೋ ಆ ಏಕತೆಯ ಭಾವವನ್ನು ಮೀರಿ ಹೋಗಲಾರಿರಿ...... ಅದ್ವೈತದ ಅಂತಿಮ ಘೋಷಣೆ 'ತತ್ತ್ವಮಸಿ'– 'ಇರುವ ಆ ಅದು ನೀನೇ'. ಪುಸ್ತಕದ ಕೊನೆಯಲ್ಲಿ, ಪ್ರಸಕ್ತ ಸಂಪುಟದ ಲೇಖಕರ ಮಾತುಗಳು ಇವು. ಬಹು ಪ್ರಾಚೀನ ಕಾಲದಿಂದಲೂ, ಭಾರತದ ಮಹರ್ಷಿಗಳು ಇಂತಹ ಏಕತೆಯನ್ನು ಧಾರ್ಮಿಕ ಕ್ಷೇತ್ರದಲ್ಲಿ ಸಾಧಿಸಿ, ಧರ್ಮವನ್ನು ನಿಷ್ಕೃಷ್ಟ ಮತ್ತು ಸಮಗ್ರತೆಯ ವಿಜ್ಞಾನದ ಗೌರವ ಹಂತಕ್ಕೆ ತಂದಿರುವೆವೆಂದು ಸಾಧಿಸಿಕೊಳ್ಳುವ ಸ್ಪಷ್ಟ ಮತ್ತು ಸಂಕ್ಷಿಪ್ತ ಹೇಳಿಕೆ ಇದು. ಈ ನಿರ್ಧಾರಕ್ಕೆ ಬರಲು ಅವರು ಬಳಸಿದ ವಿಧಾನಗಳು ಇಂದಿನ ದಿನದ ಎಲ್ಲ ವಿಜ್ಞಾನಗಳೂ ಅನುಸರಿಸಿದವೇ ಆಗಿವೆ– ಅಂದರೆ, ನಮ್ಮ ಅನುಭವದ ಸಂಗತಿಗಳ ಸೂಕ್ಷ್ಮ ಗಮನಿಸುವಿಕೆ, ಮತ್ತು ವಿಶ್ಲೇಷಣೆ, ಹಾಗೂ ಅದರಿಂದ ಬರುವ ಫಲಿತಾಂಶಗಳ ಸಮನ್ವಯದಿಂದ ಇವೇ ಸಂಗತಿಗಳನ್ನು ಗುರುತಿಸುವದು. ಕಪಿಲ, ವ್ಯಾಸ, ಪತಂಜಲಿ ಮತ್ತು ವಾಸ್ತವವಾಗಿ ಅನೇಕ ವೇದ ದರ್ಶನಕಾರ ಋಷಿಗಳನ್ನೊಳಗೊಂಡಂತೆ ಭಾರತದ ಎಲ್ಲ ತತ್ತ್ವಜ್ಞರೂ ಇದೇ ವಿಧಾನಗಳಿಂದ ತಮ್ಮ ತಮ್ಮ ನಿರ್ಧಾರಗಳನ್ನು ಕೈಗೊಂಡರು. ಇವೆಲ್ಲವನ್ನೂ ಇದೇ ಲೇಖಕರು ವಿವಿಧ ಯೋಗಗಳ ಮೇಲಿನ ತಮ್ಮ ಪುಸ್ತಕಗಳಲ್ಲಿ ಸಾದ್ಯಂತವಾಗಿ ವಿಮರ್ಶಿಸಿರುವರು.

ಬೆರಗುಗೊಳಿಸುವ ಮತ್ತು ಮೇಲ್ನೋಟಕ್ಕೆ ಅನುಭವವೆಂದು ಕಾಣುವ ಈ ಸಾಧಿತಗಳ ಆಧಾರ ಭೂಮಿಕೆಯನ್ನು ಪಕ್ಕಕ್ಕಿಡುವ ಶಕ್ತಿಯಾಗಲಿ ಬಲವಾಗಲಿ ಪ್ರಪಂಚಕ್ಕಿರಲಿಲ್ಲ...... ಬಳಕೆಯಲ್ಲಿಲ್ಲದ ಹಳತಾದ ಭಾಷೆ, ವಾಕ್ಸರಣಿ ಮತ್ತು ಶಬ್ದ ಚಿತ್ರವರ್ಣನೆ, ಅತಿ ಸಂಕ್ಷಿಪ್ತ ರೀತಿಯ ಸೂತ್ರಗಳು ಮತ್ತು ಕಾಲ ಕ್ರಮಾಗತ ನಿಸ್ಸಾರತೆಗಳು ವಿವಶತೆಯನ್ನುಂಟು ಮಾಡುತ್ತಿದ್ದವು, ಅಥವಾ ಇದೇ ಮಾರ್ಗದಲ್ಲಿ ಪ್ರಯತ್ನಿಸುವವರನ್ನು ಗೊತ್ತುಗುರಿಯಿಲ್ಲದ ಅಲೆತ ತೊಳಲಾಟಗಳಲ್ಲಿ ಸಿಲುಕಿಸುತ್ತಿದ್ದವು: ಅದೇ ಕಾಲದಲ್ಲಿ ಇಂತಹ ಹಿರಿದಾದ ವಿಷಯ ಪ್ರಕಾಶನದಲ್ಲಿಯ ಅತಿಮಾನವ ಪ್ರಯತ್ನಗಳಿಂದ ಸಂಪೂರ್ಣವಾಗಿ ಬಳಲಿದ ಭಾರತದ ಪ್ರಜ್ಞೆಯು ಶತಮಾನಗಳವರೆಗೆ ನಿದ್ರಿಸುತ್ತಿತ್ತು. ಆ ಸ್ಥಿತಿಯನ್ನು ದೂರಗೊಳಿಸಿ ಪ್ರಸಕ್ತಕಾಲದಲ್ಲಿ ಪುನರ್ಜಾಗೃತಿಗೆ ಕಾರಣವಾದವು ಭಗವಾನ್ ಶ್ರೀರಾಮಕೃಷ್ಣರ ಅತಿಮಾನುಷ ಕಾಣ್ಕೆ, ಮತ್ತು ಸ್ವಾಮಿ ವಿವೇಕಾನಂದರ ದೈವದತ್ತವಾದ ಮೇಧಾಶಕ್ತಿ ಹಾಗೂ ಧರ್ಮದ ತವರಾದ ಭಾರತದಲ್ಲಿಯೂ ಹೊರದೇಶಗಳಲ್ಲಿಯೂ ಹಿರಿಯ ಸತ್ಯವನ್ನು ದೈನಂದಿನ ಜೀವನದಲ್ಲಿ ಅವಡಿಸುವ ಕೌಶಲದ ಪ್ರಕಟೀಕರಣ. ಏಕೆಂದರೆ ಶುದ್ಧಾಂಗವಾಗಿ ಭಾರತೀಯವಾದ ವಸ್ತು–ವಿಷಯಗಳ ಸಮರ್ಥ ವ್ಯಾಖ್ಯೆಯು ಭಾರತೀಯ ಮನಸ್ಸಿನಿಂದ ಮಾತ್ರ ಶಕ್ಯ. ಹೇಗಾದರೂ ಸ್ವಾಮಿಗಳ ಮಹಿಮೆಯನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಲು, 1896ರ ಪ್ರಾರಂಭದಲ್ಲಿ ನ್ಯೂಯಾರ್ಕ್‌ನಲ್ಲಿ ನಡೆಸಿದ ಈ ಏಳು ಉಪನ್ಯಾಸಗಳ ಸರಣಿಯ ಪಾಠಗಳನ್ನು ಯಾವ ಟಿಪ್ಪಣಿಯೂ ಇಲ್ಲದೆ ನೀಡಿದ್ದೇವೆಂಬ ವಾಸ್ತವತೆಯನ್ನೂ ನೆನಪಿನಲ್ಲಿಟ್ಟುಕೊಳ್ಳಬೇಕು. ಆ ಕಾಲದಲ್ಲಿ ಇವುಗಳನ್ನು ಶೀಘ್ರಲಿಪಿಯಲ್ಲಿ ಬರೆದುಕೊಳ್ಳಲಾಗಿತ್ತೆಂಬುದು ಭಾಗ್ಯವೇ ಸರಿ: ಅದರಿಂದಾಗಿ ಇಷ್ಟು ದೀರ್ಘಕಾಲ ಕಳೆದ ಮೇಲೂ ಈಗಿನ ರೂಪದಲ್ಲಿ ಇಲ್ಲಿರುವ

ಪಾಠಗಳನ್ನು ಅಚ್ಚು ಮಾಡಿಸಲು ನಮಗೆ ಸಾಧ್ಯವಾಯಿತು. 1897ರ ಪ್ರಾರಂಭದಲ್ಲಿ ಅಮೆರಿಕದಲ್ಲಿರುವಾಗ ಈ ಕೆಲಸವನ್ನು ತಮಗೆ ಕೊಟ್ಟುದಕ್ಕಾಗಿ ಸಂಪಾದಕರು ಆಭಾರಿಯಾಗಿದ್ದಾರೆ.

ಈ ಉಪನ್ಯಾಸಗಳಲ್ಲಿ 'ನೇಚರ್' ಎಂಬುದಕ್ಕೆ ಪ್ರಕೃತಿ ಎಂಬ ಪದವನ್ನು ಉಪಯೋಗಿಸಿರುವದನ್ನು ಬಿಟ್ಟರೆ ಯಾವದೇ ಮುಖ್ಯವಾದ ಬದಲಾವಣೆಗಳನ್ನು ಈ ಉಪನ್ಯಾಸಗಳಲ್ಲಿ ಮಾಡಿಲ್ಲ. (ಸಂಪಾದಕರ ವಿನಯಪೂರ್ವಕ ಅಭಿಪ್ರಾಯದಂತೆ ಈ ಸಂಸ್ಕೃತದ ಪದಕ್ಕೆ ಇಂಗ್ಲಿಷಿನಲ್ಲಿ ಸಮಾನಾರ್ಥವುಳ್ಳ ಪದವಿಲ್ಲ, ನೇಚರ್ ಶಬ್ದದಲ್ಲಿ ಇಂಗಿತವಾದ ಅರ್ಥವು ಪ್ರಕೃತಿ ಎಂಬ ಪದದ ಅಂತರಾರ್ಥದ ಸಂಸ್ಕರಿಸಿದ ಫಲ. ಆದುದರಿಂದ ಪ್ರಕೃತಿ ಎಂದಿಗೂ 'ನೇಚರ್' ನ ಅರ್ಥ ನೀಡಲಾರದು, ಬದಲಾಗಿ ಪ್ರಕೃತಿಯೆಂದರೆ ಪಂಚಭೂತಗಳು ಮತ್ತು ಶಕ್ತಿಗಳು. ಇವು ವಿಶ್ವದ ಸೃಷ್ಟಿಗೆ ಬೇಕಾದ ವಸ್ತುಗಳನ್ನು ರೂಪಿಸುವವು. ಪ್ರಕೃತಿಯು ಕಾರಣ: ಇದರ ಪರಿಣಾಮವೇ 'ನೇಚರ್'– ಅಥವಾ ಪ್ರಕೃತಿಯಿಂದಲೇ 'ನೇಚರ್' ಉತ್ಪನ್ನವಾಗುತ್ತದೆ. 'ಮೂಲವಸ್ತು ಮತ್ತು ಶಕ್ತಿಯ ಸಮತೋಲನದ ಇರುವಿಕೆ' ಅಥವಾ 'ಮೂಲವಸ್ತು ಮತ್ತು ಶಕ್ತಿಯ ಸುಪ್ತಾವಸ್ಥೆ' ಎಂಬುದು ಈ ಭಾವವನ್ನು ಸರಿಯಾಗಿ ವ್ಯಕ್ತಪಡಿಸುತ್ತದೆ. ಮುಂದಿನ ಪುಟಗಳಲ್ಲಿನ ಸ್ವಾಮಿಗಳ ಪದಗಳನ್ನು ಅರ್ಥಮಾಡಿಕೊಳ್ಳಲು ಇದನ್ನು ಓದುಗನು ಚೆನ್ನಾಗಿ ತನ್ನ ಮನಸ್ಸಿನಲ್ಲಿ ಮುದ್ರಿತಗೊಳಿಸಿಕೊಳ್ಳಲೆಂದು ನಾವು ಕೇಳಿಕೊಳ್ಳುತ್ತೇವೆ, ಇದರಿಂದ ಮುಂದಿನ ಪುಟಗಳ ಸ್ವಾಮಿಗಳ ಪದಗಳನ್ನು ಅರಿಯಲು ಅನುಕೂಲವಾಗುತ್ತದೆ.

ಸ್ವಾಮಿ ಶಾರದಾನಂದರು, ಸಂಪಾದಕರು

ಈ ಪುಸ್ತಕದ ಮೂಲ ವಸ್ತು ವಿಷಯವನ್ನು ಸ್ವಾಮಿ ವಿವೇಕಾನಂದರ ಸಂಪೂರ್ಣ ಕೃತಿ ಶ್ರೇಣಿಯ ವಿವಿಧ ಸಂಪುಟಗಳಿಂದ ಆಯ್ದುಕೊಂಡಿದೆ. ಶ್ರೀ ರಾಮಕೃಷ್ಣರ ಧೀಮಂತ ಶಿಷ್ಯರಲ್ಲೊಬ್ಬರೂ, ಸ್ವಾಮಿ ವಿವೇಕಾನಂದರು ತಮ್ಮ ಅನಂತರ ಪಾಶ್ಚಿಮಾತ್ಯರಲ್ಲಿ ಧರ್ಮಬೋಧನೆಯ ಚಟುವಟಿಕೆಗಳಿಗಾಗಿ ಆರಿಸಿಕೊಂಡವರೂ ಆದ ಸ್ವಾಮಿ ಶಾರದಾನಂದರು ಈ ಉಪನ್ಯಾಸಗಳ ಹೊಸ ಧ್ವನಿ ಮತ್ತು ಅನ್ಯೋನ್ಯ ಸಂಬಂಧಗಳನ್ನು ಚೆನ್ನಾಗಿ ಹೊರತರುವ ಉದ್ದೇಶದಿಂದ, ಯೋಗ್ಯ ಶಿರೋನಾಮಗಳೊಡನೆ ಮತ್ತು ಅಲ್ಲಲ್ಲಿ ಅಲ್ಪ ಮಾರ್ಪಾಟುಗಳೊಡನೆ ಸಂಪಾದಿಸಿದರು. ಈ ಉಪನ್ಯಾಸಗಳಿಗೆ ಹೀಗೊಂದು ಪುಸ್ತಕ ರೂಪವನ್ನು ಕೊಟ್ಟು, 'ಧರ್ಮದ ವಿಜ್ಞಾನ ಮತ್ತು ತತ್ತ್ವ' ಎಂಬ ಹೆಸರನ್ನೂ, 'ಸಾಂಖ್ಯ, ವೇದಾಂತ ಮತ್ತು ಇತರ ತತ್ತ್ವಚಿಂತನ ಪದ್ಧತಿಗಳ ತುಲನಾತ್ಮಕ ಪರಾಮರ್ಶೆ' ಎಂಬ ಉಪಶೀರ್ಷಿಕೆಯನ್ನೂ ಕೊಟ್ಟು, ಜೊತೆಗೆ ಪುಸ್ತಕಕ್ಕೆ ಮುನ್ನುಡಿಯನ್ನೂ ಬರೆದರು.

ಪ್ರಕಾಶಕರು

ಈ ಪುಸ್ತಕದ ಉತ್ಕೃಷ್ಟತೆ ಮತ್ತು ಅನುಕೂಲ್ಯಗಳನ್ನು ಗಮನಿಸಿ, ಇದರಲ್ಲಿ ಯಾವ ಬದಲಾವಣೆಗಳನ್ನೂ ಮಾಡದೆ ಹಲವಾರು ಪುನಃ ಪ್ರಕಟಣೆಗಳನ್ನು ಮಾಯಾವತಿಯ ಅದ್ವೈತ ಆಶ್ರಮದವರು ಹೊರತಂದಿದ್ದಾರೆ. ಈ ಪುನರಾವರ್ತನೆಗಳು ಪುಸ್ತಕದ ಜನಪ್ರಿಯತೆಯ ಸೂಚಿಯಾಗಿದೆ. ಆಸಕ್ತ ಓದುಗರು ಉಪನ್ಯಾಸಗಳ ಮೂಲವನ್ನು ಓದಲು ಅನುಕೂಲಿಸುವಂತೆ ಪ್ರತಿ ಅಧ್ಯಾಯದ ಕೊನೆಯಲ್ಲೂ "ಸ್ವಾಮಿವಿವೇಕಾನಂದರ ಸಂಪೂರ್ಣ ಕೃತಿಗಳು' ಪುಸ್ತಕದಲ್ಲಿ ಅದು ತಿಳಿಯುವ ಮೂಲವನ್ನು ಪ್ರಕಾಶಕರು ತಿಳಿಸುತ್ತಾರೆ.

# ಪೀಠಿಕೆ

ಈಗ ಇಲ್ಲಿ ವಾಚಕರ ಮುಂದಿಟ್ಟಿರುವ ವೇದಾಂತೋಪನ್ಯಾಸಗಳೆಲ್ಲವೂ ಒಂದೇಸಲಕ್ಕೆ ಕನ್ನಡಿಸಿದವುಗಳಲ್ಲ. ಇವುಗಳಲ್ಲಿ ಮೊದಲನೆಯ ಮೂರು "ಅಧ್ಯಾತ್ಮಪ್ರಕಾಶಮಾಸಪತ್ರಿಕೆ"ಯಲ್ಲಿ ಪ್ರಕಟಿಸಿದ ಭಾಗದಿಂದ ತೆಗೆದಚ್ಚುಗಳು ; ಅಲ್ಲಿಂದ ಮುಂದಿನ ಮೂರು ಈಚೆಗೆ ಮತ್ತೆ ಕನ್ನಡಿಸಿ ಸೇರಿಸಿದವುಗಳಾಗಿವೆ. ಇದೂ ಅಲ್ಲದೆ ಮೊದಲು ಕನ್ನಡಿಸುವಾಗ Complete Works of Swami Vivekananda (ಶ್ರೀ ವಿವೇಕಾನಂದ ಸ್ವಾಮಿಗಳವರ ಪೂರ್ಣಗ್ರಂಥಸಂಗ್ರಹ) ಎಂಬ ಮಾಯಾವತೀ ಸಂಸ್ಕರಣ (Advaita Asrama, Mayavati, Almora, Himalayas) ವನ್ನು ಅನುಸರಿಸಿದೆ. ಈ ಮೂರು ಉಪನ್ಯಾಸಗಳು ಆ ಸಂಸ್ಕರಣದ ಮೂರನೆಯ ಸಂಪುಟದ ಆದಿಭಾಗದಿಂದ ತೆಗೆದುಕೊಂಡವುಗಳಾಗಿವೆ. ಆದರೆ ಮಿಕ್ಕ ಮೂರನ್ನೂ ಕನ್ನಡಿಸುವಾಗ ಅದೇ ಸಂಸ್ಕರಣದ ಎರಡನೆಯ ಭಾಗವನ್ನೂ ಜೊತೆಗೆ ಕಲಕತ್ತದ ಉದ್ಬೋಧನ ಕಾರ್ಯಾಲಯದವರು (udbodhan Office, Mukarjee Lane, Bagh Bazaar, Calcutta) ಪ್ರಕಟಿಸಿರುವ "ಧರ್ಮದ ವಿಜ್ಞಾನವೂ ತತ್ತ್ವಜಿಜ್ಞಾಸೆಯೂ" (The Science and Philosophy of Religion) ಎಂಬ ಗ್ರಂಥವನ್ನೂ ಆಧಾರವಾಗಿ ತೆಗೆದುಕೊಂಡು ಪರಿವರ್ತನೆಮಾಡಿರುತ್ತದೆ. ಹೀಗಿರುವದರಿಂದ ಈ ಎರಡು ಸಂಸ್ಕರಣಗಳಲ್ಲಿ ಒಂದೊಂದನ್ನೇ ಇಟ್ಟುಕೊಂಡು ಈ ಕನ್ನಡದನುವಾದವನ್ನು ಹೋಲಿಸಿ ನೋಡುವವರಿಗೆ ಸ್ವಲ್ಪ ಅಡಚಣೆಯಾಗಬಹುದೆಂಬುದನ್ನು ಇಲ್ಲಿ ಮೊದಲೇ ಬಿನ್ನವಿಸಿಕೊಂಡಿರುತ್ತೇನೆ.

ಉದ್ಬೋಧನಸಂಸ್ಕರಣದ ಪೀಠಿಕೆಯಲ್ಲಿ ಬರೆದಿರುವದನ್ನು ನೋಡಿದರೆ ಅದೇ ಈ ಉಪನ್ಯಾಸಗಳ ಮೊದಲಿನ ರೂಪವೆಂದು ಹೇಳಬೇಕಾಗುತ್ತದೆ. ಅಲ್ಲಿ ಕೊಟ್ಟಿರುವ ಮೊದಲನೆಯ ಐದು ಅಧ್ಯಾಯಗಳ ವಿಷಯಗಳು ನಮ್ಮ ಅನುವಾದದಲ್ಲಿ ಈಗ ಹೊರಕ್ಕೆ ಬಂದಂತೆ ಆಗಿರುತ್ತದೆ. ಸ್ವಾಮಿಗಳು ಯಾವದೊಂದು ಟಿಪ್ಪಣಿಯೂ ಇಲ್ಲದೆ ನ್ಯೂಯಾರ್ಕ್‌ನಗರಿಯಲ್ಲಿ 1896 ನೆಯ ಇಸವಿಯ ಆದಿಯಲ್ಲಿ ಈ ಏಳು ಉಪನ್ಯಾಸಗಳನ್ನೂ ಮಾಡಿದರೆಂದೂ ಅದನ್ನು ಸಂಕ್ಷಿಪ್ತಲಿಪಿಕಾರರು ಬರೆದುಕೊಂಡಂತೆ ಸಂಪಾದಕರು ಅಮೇರಿಕಕ್ಕೆ ಹೋದಾಗ 1897 ರಲ್ಲಿ ಇವುಗಳನ್ನು ಶೋಧಿಸಿ ಮುದ್ರಣಕ್ಕೆ ಕೊಟ್ಟರೆಂದೂ ಮೇಲೆ ನಾವು ಹೇಳಿರುವ ಉದ್ಬೋಧನಗ್ರಂಥದಿಂದ ತಿಳಿಯಬರುತ್ತದೆ. ಆದ್ದರಿಂದ ಮತ್ತೊಂದು ಸಂಸ್ಕರಣಕ್ಕೆ ಅವಕಾಶವು ದೊರೆತರೆ ಈ ಉಪನ್ಯಾಸಗಳನ್ನು ಆ ಪ್ರಕಟನೆಯ ಕ್ರಮದಲ್ಲಿಯೇ ಪ್ರಕಾಶಪಡಿಸಬೇಕೆಂದೂ ಅಲ್ಲಿರುವ ಇನ್ನೆರಡು ಉಪನ್ಯಾಸಗಳನ್ನೂ ಸೇರಿಸಿಯೇ ಗ್ರಂಥವನ್ನು ಹೊರಕ್ಕೆ ತರಬೇಕೆಂದೂ ಸಂಕಲ್ಪಿಸಿರುತ್ತೇನೆ.

ಈಗಿನ ಅನುವಾದದಲ್ಲಿ ಅಲ್ಲಲ್ಲಿ ಕೊಟ್ಟಿರುವ ಟಿಪ್ಪಣಿಗಳನ್ನು ವಿಮರ್ಶಾತ್ಮಕದೃಷ್ಟಿಯಿಂದ

ಬರೆದಿರುತ್ತದೆ. ಸಾಂಖ್ಯದರ್ಶನಕ್ಕೂ ವೇದಾಂತ ದರ್ಶನಕ್ಕೂ ಇರುವ ಸಂಬಂಧವನ್ನು ಈ ಉಪನ್ಯಾಸಗಳಲ್ಲಿ ಚೆನ್ನಾಗಿ ಮನಗಾಣಬಹುದೆಂಬುದನ್ನು ತೋರಿಸಿಕೊಟ್ಟಿರುವದಲ್ಲದೆ ಮೂಲಕ್ಕಾಗಲಿ ಪ್ರಕೃತಸಂದರ್ಭಕ್ಕಾಗಲಿ ವಿರುದ್ಧವೆಂದೂ ಹೊಂದುಗೆಯಿಲ್ಲದವಾದುವೆಂದೂ ತೋರಬಹುದಾದ ಯಾವದಾದರೂ ವಿಷಯಗಳು ಕಂಡುಬಂದರೆ ಅವುಗಳನ್ನೂ ಈ ಟಿಪ್ಪಣಿಗಳಲ್ಲಿ ಚರ್ಚಿಸಿರುತ್ತದೆ. ಯಾವ ಬಗೆಯ ಪೂರ್ವಸಿದ್ಧತೆಯೂ ಇಲ್ಲದೆ ಸಾಮಾನ್ಯ ಉಪನ್ಯಾಸರೂಪದಲ್ಲಿ ಸ್ವಾಮಿಗಳವರು ಈಗ್ಗೆ ಸುಮಾರು 40 ವರ್ಷಗಳ ಹಿಂದೆಯೇ ಕೆಲವು ಪಾಶ್ಚಾತ್ಯರ ಮುಂದೆ ಇಟ್ಟಿದ್ದ ಈ ವಿಷಯಗಳನ್ನು ಗ್ರಂಥರೂಪಕ್ಕೆ ಇಳಿಸಿದರೂ ಅವುಗಳ ಯೋಗ್ಯತೆಯು ಈಗಲೂ ಎಷ್ಟು ಹೆಚ್ಚಿನದಾಗಿ ತೋರುವದೆಂಬುದನ್ನು ವಾಚಕರು ಇಲ್ಲಿ ಮನಗಾಣಬಹುದಾಗಿರುತ್ತದೆ. ಸಾಂಖ್ಯವೇದಾಂತಾದಿ ಪೂರ್ವದರ್ಶನಗಳಲ್ಲಿ ಕನ್ನಡನಾಡಿನ ಯುವಕರಿಗೆ ಹೆಚ್ಚಿನ ಕುತೂಹಲವುಂಟಾಗುವಂತೆ ಮಾಡುವದಕ್ಕೆ ಈ ಅನುವಾದವು ಸ್ವಲ್ಪಮಟ್ಟಿಗಾದರೂ ಉಪಯುಕ್ತವಾದರೆ ನಾನು ಧನ್ಯನು.

ಬೆಂಗಳೂರು

ಯುವ, ಕಾರ್ತಿಕ ಶುದ್ಧ ಪೂರ್ಣಿಮಾ. ಅನುವಾದಕ.

10–11–1935

# ವೇದಾಂತೋಪನ್ಯಾಸಗಳು

## 9

## ಧರ್ಮಕ್ಕೆ ಏಕತ್ವವೇ ಗುರಿ(ಪೀಠಿಕೆ)

ಈ ನಮ್ಮ ಪ್ರಪಂಚಕ್ಕೆ, ಎಂದರೆ ಇಂದ್ರಿಯಗಳಿಗೂ ಮನೋಬುದ್ಧಿಗಳಿಗೂ ವಿಷಯವಾಗಿರುವ ಪ್ರಪಂಚಕ್ಕೆ, ಎರಡೂ ಕಡೆಗಳಲ್ಲಿ ಅಳತೆಗೆ ಸಿಕ್ಕದಾಗಿಯೂ, ಅರಿವಿಗೆ ವಿಷಯವಲ್ಲದ್ದಾಗಿಯೂ, ಎಂದೆಂದಿಗೂ ಅಜ್ಞಾತವೇ ಆಗಿರುವದಾಗಿಯೂ ಇರುವ ಏನೋ ಒಂದು ಮೇರೆಯಾಗಿರುವದು. ಈ ಇಂದ್ರಿಯಪ್ರಪಂಚದಲ್ಲಿಯೇ ನಾವು ಶೋಧನೆಮಾಡುವದು, ಇದರಲ್ಲಿಯೇ ನಾವು ವಿಚಾರವನ್ನು ಮಾಡುವದು, ಇದರಲ್ಲಿಯೇ ಜ್ಞೇಯವಾದ ವಿಷಯಗಳಿರುವದು; ಲೋಕದಲ್ಲಿ ಧರ್ಮವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಪ್ರಕಾಶವು ಬರುವದು ಇದರಿಂದಲೇ. ಹೀಗಿದ್ದರೂ, ಚೆನ್ನಾಗಿ ನೋಡಿದರೆ, ಧರ್ಮಕ್ಕೆ ವಿಷಯವು ಅತೀಂದ್ರಿಯಲೋಕಕ್ಕೆ ಅದು ಎಲ್ಲಾ ಬಗೆಯ ತರ್ಕವನ್ನೂ ಮೀರಿರುವದು, ಬುದ್ಧಿಯ ಲೋಕದಲ್ಲಿಯೂ ಇರುವದಿಲ್ಲ. ಅದೊಂದು ಬಗೆಯ ದರ್ಶನವು, ದೈವಾನುಗ್ರಹವು, ಅಜ್ಞಾತವಾಗಿಯೂ, ಅಜ್ಞೇಯವಾಗಿಯೂ ಇರುವ ತತ್ತ್ವದಲ್ಲಿ ಧುಮ್ಮಿಕ್ಕಿ ಆ ಎಂದಿಗೂ ಅರಿಯಲಾರದ ತತ್ತ್ವವನ್ನು ಅರಿತದ್ದಕ್ಕಿಂತಲೂ ಹೆಚ್ಚೆನಿಸುವ ಕೌಶಲವು ; ಏಕೆಂದರೆ ಆ ತತ್ತ್ವವು ಎಂದಿಗೂ "ಜ್ಞಾತ" ವೆನಿಸಿಕೊಳ್ಳಲಾರದು. ನನಗೆ ತೋರಿದ್ದರಲ್ಲಿ, ಮನುಷ್ಯಜಾತಿಯು ಹುಟ್ಟಿದಾಗಿನಿಂದಲೂ ಈ ಹುಡುಕೋಣವು ಮನುಷ್ಯಬುದ್ಧಿಯಲ್ಲಿ ಇದ್ದುಕೊಂಡೇ ಇರುವದು ; ಈ ಜಗತ್ತಿನ ಇತಿಹಾಸದಲ್ಲಿ ಯಾವದೊಂದು ಕಾಲದಲ್ಲಿಯಾದರೂ ಮನುಷ್ಯನಿಗೆ ತರ್ಕಶಕ್ತಿಯು ಇದ್ದುಕೊಂಡು, ಈ ಹೆಣಗಾಟವು ಮಾತ್ರ– ಎಂದರೆ ಈ ಎಲ್ಲವನ್ನೂ ಮೀರಿರುವ ತತ್ತ್ವವನ್ನು ಕಂಡುಹಿಡಿಯಬೇಕೆಂಬ ಕುತೂಹಲವು ಮಾತ್ರ– ಇರಲಿಲ್ಲ ಎಂದು ಹೇಳುವದಕ್ಕೆ ಬರುವ ಹಾಗಿಲ್ಲ. ಮನುಷ್ಯನ ಅಂತಃಕರಣವೆಂಬ, ಮನುಷ್ಯನ ಮನಸ್ಸೆಂಬ, ಈ ನಮ್ಮ ಸಣ್ಣ ಪ್ರಪಂಚದಲ್ಲಿ ಆಗಾಗ್ಗೆ ಯೋಚನೆಯು ಹುಟ್ಟುವದೇನೋ ನಮಗೆ ಕಾಣಬರುತ್ತದೆ ; ಆದರೆ ಅದು ಎಲ್ಲಿಂದ ತಲೆದೋರುವದೋ ನಾವರಿಯೆವು ; ಆ ಯೋಚನೆಯು ಕಣ್ಮರೆಯಾಗುವಾಗ ಎಲ್ಲಿಗೆ ಹೋಗುವದೋ ಅದನ್ನೂ ನಾವರಿಯೆವು. ಹೀಗಾಗಿ ಬ್ರಹ್ಮಾಂಡವೂ ಪಿಂಡಾಂಡವೂ ಎರಡೂ ಒಂದೇ ಜಾಡನ್ನು ಹಿಡಿದು ಅದೇ ಮಜಲುಗಳನ್ನು ದಾಟುತ್ತಾ ಇರುವಂತೆಯೂ ಒಂದೇ ಶ್ರುತಿಯಲ್ಲಿ ಹಾಡುತ್ತಿರುವಂತೆಯೂ ತೋರುತ್ತಿದೆ.

ಧರ್ಮಗಳು ಹೊರಗಿನಿಂದ ಬರುವದಿಲ್ಲ, ಒಳಗಿನಿಂದಲೇ ಬರುವವು- ಎಂಬ ಹಿಂದುಗಳ ಕಲ್ಪನೆಯನ್ನು ನಿಮ್ಮಗಳ ಮುಂದಿಡಲು ಪ್ರಯತ್ನಿಸುವೆನು. ನನ್ನ ಅಭಿಪ್ರಾಯದಲ್ಲಿ, ಧರ್ಮವೆಂಬುದು ಮನುಷ್ಯನ ಮನುಷ್ಯತ್ವಕ್ಕೇ ಸೇರಿದ್ದಾಗಿರುವದು ; ಹೀಗಿರುವದರಿಂದ ಮನುಷ್ಯನು ತನ್ನ ಮನಸ್ಸನ್ನೂ ಶರೀರವನ್ನೂ ಬಿಟ್ಟ ಹೊರತು, ಯೋಚಿಸುವದು ವ್ಯವಹಾರಮಾಡುವದು- ಇವುಗಳನ್ನೇ ಕೈಬಿಟ್ಟ ಹೊರತು, ಧರ್ಮವನ್ನು ಬಿಟ್ಟುಬಿಡುವದೆಂಬುದು ಅವನಿಗೆ ಸಾಗುವ ಮಾತಲ್ಲ. ಮನುಷ್ಯನಲ್ಲಿ ವಿಚಾರವು ಎಲ್ಲಿಯವರೆಗೆ ನಡೆಯುತ್ತಿರುವದೋ ಅಲ್ಲಿಯವರೆಗೆ ಈ ಒದ್ದಾಟವು ಇದ್ದೇ ಇರಬೇಕು. ಅಲ್ಲಿಯವರೆಗೂ ಮನುಷ್ಯನು ಒಂದಲ್ಲದಿದ್ದರೆ ಒಂದು ಧರ್ಮವನ್ನು ಅವಲಂಬಿಸಿಯೇ ತೀರಬೇಕು. ಇದರಿಂದಲೇ ಈ ಲೋಕದಲ್ಲಿ ಬಗೆಬಗೆಯ ಧರ್ಮಗಳು ಕಂಡುಬರುತ್ತಿವೆ. ಇವುಗಳನ್ನು ಕುರಿತು ವಿಚಾರ ಮಾಡುವಾಗ ದಿಕ್ಕುತೋಚದಂತೆ ಆಗುವದು ನಿಜ ; ಆದರೆ ನಮ್ಮಲ್ಲಿ ಅನೇಕರು ಭಾವಿಸಿರುವಂತೆ ಇದೆಲ್ಲ ಒಣತರ್ಕವಲ್ಲ. ನೋಡುವದಕ್ಕೆ ಇಷ್ಟೊಂದು ಗಲಿಬಿಲಿಯಾಗಿದ್ದರೂ, ನಿಜವಾಗಿ ಇವುಗಳಿಗೆಲ್ಲ ಹೊಂದಿಗೆ ಇದೆ, ಒಂದಕ್ಕೊಂದು ಹೊಂದದ ಈ ಬೇರೆ ಬೇರೆ ಶಬ್ದಗಳ ನಡುವೆ ಎಲ್ಲಕ್ಕೂ ಹೊಂದುಗೆಯಾಗುವ ಶ್ರುತಿಯನ್ನು ಹಿಡಿದ ರಾಗವೊಂದು ಇರುವದು ; ಅದನ್ನು ಕಿವಿಗೊಟ್ಟು ಕೇಳುವದಕ್ಕೆ ಯಾವನು ಸಿದ್ಧನಾಗಿರುವನೋ ಅವನ ಕಿವಿಗೆ ಈ ರಾಗವು ಬೀಳುವದು.

ಈಗಿನ ಕಾಲದಲ್ಲಿ ಜನರಿಗೆ ಹತ್ತಿಕೊಂಡಿರುವ ಒಂದು ದೊಡ್ಡ ಯೋಚನೆ ಏನೆಂದರೆ, ನಾವು ಅರಿತುಕೊಂಡಿರುವದು ಮತ್ತು ಅರಿತುಕೊಳ್ಳ ಬಹುದಾದದ್ದು- ಇವುಗಳ ಎರಡು ಪಕ್ಕಗಳಲ್ಲಿಯೂ ಅಜ್ಞೇಯವೂ ಅನಂತವಾಗಿರುವ ಅಜ್ಞಾತವೂ ಮೇರೆಯಾಗಿ ಇದ್ದುಕೊಂಡಿವೆ ಎಂದು ಒಪ್ಪಿಕೊಳ್ಳೋಣ ; ಆದರೆ ಆ ಅನಂತವಾದ ಅಜ್ಞಾತಕ್ಕಾಗಿ ಹೆಣಗಾಡಬೇಕಾದದ್ದೇನು? ನಮಗೆ ತಿಳಿದಿರುವದರಲ್ಲಿಯೇ ತೃಪ್ತರಾಗಿ ಏತಕ್ಕೆ ಇರಬಾರದು ? ತಿನ್ನುವದು, ಕುಡಿಯುವದು, ಸ್ವಲ್ಪ ಪರೋಪಕಾರ- ಇಷ್ಟರಲ್ಲಿಯೇ ತೃಪ್ತರಾಗಿರಬಾರದೇಕೆ ? ಈ ಯೋಚನೆಯು ಎಲ್ಲೆಲ್ಲಿಯೂ ಹಬ್ಬಿಕೊಂಡಿದೆ. ದಿಗ್ದಂತಿಗಳಾಗಿರುವ ಘನವಿದ್ವಾಂಸರಿಂದ ಹಿಡಿದು ಎರಡು ಮುದ್ದುಮಾತನಾಡುವ ಮಕ್ಕಳವರೆಗೂ ಇದೇ ಮಾತೇ ; "ಲೋಕೋಪಕಾರ ಮಾಡಿದರಾಯಿತು, ಅದೇ ಧರ್ಮವು ; ಆಚೆಗೆ ಏನಿರುವವೆಂಬ ವಿಚಾರವನ್ನು ಹಚ್ಚಿಕೊಳ್ಳುವದರಿಂದ ಏನೂ ಉಪಯೋಗವಿಲ್ಲ" ಎಂದು ಎಲ್ಲರೂ ಅನ್ನುತ್ತಿದ್ದಾರೆ. ಈ ಮಾತು ಎಲ್ಲೆಲ್ಲಿಯೂ ಹರಡಿಕೊಂಡಿರುವದರಿಂದ ಈಗಾಗಲೇ ಇದು ಹಳೆಯ ಮಾತೆನಿಸಿಕೊಳ್ಳುತ್ತಿದೆ. ಆದರೆ ದೇವರ ದಯದಿಂದ, ನಾವು ಅತೀತವಾದ ತತ್ತ್ವವನ್ನು ಕುರಿತು ವಿಚಾರಮಾಡಲೇಬೇಕಾಗಿರುವದು. ಏಕೆಂದರೆ ಈಗ ಇಲ್ಲಿ ಹೊರತೋರಿಕೊಂಡಿರುವದೆಂಬುದು ತೋರಿಕೊಳ್ಳದೆ ಇರುವ ಆ ತತ್ತ್ವದ ಒಂದು ಅಂಶಮಾತ್ರವಾಗಿದೆ. ಇಂದ್ರಿಯಗೋಚರವಾದ ಪ್ರಪಂಚವೆಂಬುದು ಅದರಲ್ಲಿ ಎಲ್ಲಿಯೋ ಒಂದು ಭಾಗವೆನಿಸಿರುವದು ; ಆ ಅನಂತವಾಗಿರುವ ಅಧ್ಯಾತ್ಮಪ್ರಪಂಚದಲ್ಲಿ ಎಲ್ಲಿಯೋ ಒಂದು ಅಂಶವು ಇಂದ್ರಿಯಗೋಚರವಾದ ಈ ಲೋಕಕ್ಕೆ ಬಂದು ಕಾಣಿಸಿಕೊಂಡಿರುವದು. ಈ ಹೊರಕ್ಕೆ ಬಂದಿರುವ ತುಣುಕನ್ನು, ಈ ಚೂರನ್ನು, ಇದಕ್ಕೆ ಅತೀತವಾಗಿರುವ ತತ್ತ್ವವೇನೆಂಬುದನ್ನು ಮನಗಾಣದೆ, ತಿಳಿದುಕೊಳ್ಳುವದೂ ವಿವರಿಸುವದೂ ಹೇಗಾದೀತು ? ಆಥೆನ್ಸುಪಟ್ಟಣದಲ್ಲಿ 'ಸಾಕ್ರೆಟೀಸ'ನೆಂಬಾತನು

ಉಪನ್ಯಾಸಮಾಡುತ್ತಿದ್ದಾಗ ಗ್ರೀಸುದೇಶಕ್ಕೆ ಪಯಣವಾಗಿ ಬಂದಿದ್ದ ಒಬ್ಬಾನೊಬ್ಬ ಬ್ರಾಹ್ಮಣನು ಅವನ ಬಳಿಗೆ ಬಂದನಂತೆ. ಸಾಕ್ರೆಟೀಸನು ಆ ಬ್ರಾಹ್ಮಣನನ್ನು ಕುರಿತು "ಮನುಷ್ಯರು ಅತ್ಯಂತ ಅವಶ್ಯವಾಗಿ ವಿಚಾರಿಸಿ ಅರಿತುಕೊಳ್ಳಬೇಕಾದದ್ದು ಮನುಷ್ಯನನ್ನೇ" ಎಂದು ಹೇಳಿದನಂತೆ. ಈ ದೇವರೇ, ಈ ನಿತ್ಯಾಜ್ಞಾತವೇ, ಈ ಸ್ವತಂತ್ರತತ್ತ್ವವೇ [1] ಈ ಅನಂತವೇ, ಹೆಸರಿಲ್ಲದ ಈ ತತ್ತ್ವವೇ– ಇದನ್ನು ಯಾವ ಹೆಸರಿನಿಂದ ಬೇಕಾದರೂ ಕರೆಯಿರಿ. ಅಂತೂ ಈ ತತ್ತ್ವವೊಂದೇ– ಜ್ಞಾತವೂ ಜ್ಞೇಯವೂ ಆಗಿರುವ ಈ ವರ್ತಮಾನಪ್ರಪಂಚವನ್ನು ಬಿಚ್ಚಿ ತಿಳಿಸುವ ಆಧಾರವಾಗಿರುತ್ತದೆ. ನಿಮ್ಮೆದುರಿಗೆ ಇರುವ ಅತ್ಯಂತಸ್ಥೂಲವಾಗಿರುವ ಯಾವದಾದರೊಂದು ಪದಾರ್ಥವನ್ನು ತೆಗೆದುಕೊಂಡು ವಿಚಾರಮಾಡಿರಿ; ಅತ್ಯಂತಸ್ಥೂಲವಾಗಿರುವ ಭೌತಿಕ ವಸ್ತುವಿಚಾರದಲ್ಲಿಯೇ ತೊಡಗಿರುವ ವಸ್ತುಶಾಸ್ತ್ರ ಪದಾರ್ಥವಿಜ್ಞಾನಶಾಸ್ತ್ರ ಜ್ಯೋತಿಷಶಾಸ್ತ್ರ ಪ್ರಾಣಿಶಾಸ್ತ್ರ– ಮುಂತಾದ ಯಾವದಾದರೊಂದು ಶಾಸ್ತ್ರವನ್ನು ತೆಗೆದುಕೊಂಡು, ಅದರ ವಿಚಾರದಲ್ಲಿಯೇ ಮುಂದುಮುಂದಕ್ಕೆ ಹೋದರೆ, ಸ್ಥೂಲವಾಗಿದ್ದದ್ದು ಮೆಲ್ಲಮೆಲ್ಲಗೆ ಕರಗುವದಕ್ಕೆ ಮೊದಲಾಗಿ ಹೆಚ್ಚು ಹೆಚ್ಚು ಸೂಕ್ಷ್ಮವಾಗುತ್ತಾ ಹೋಗುವದು ; ಕೊನೆಗೆ ಈ ಜಡವಸ್ತುಗಳನ್ನು ಬಿಟ್ಟು ಅಜಡಕ್ಕೆ ತಟ್ಟನೆ ಹಾರಲೇಬೇಕಾಗಿ ಬರುವದು. ಪ್ರತಿಯೊಂದು ಶಾಸ್ತ್ರದಲ್ಲಿಯೂ ಹೀಗೆಯೇ. ಸ್ಥೂಲವಾಗಿದ್ದದ್ದು ಸೂಕ್ಷ್ಮವಾಗುವದು ; ಭೌತಿಕವಿದ್ಯೆಯು ಅತಿಭೌತಿಕವಾದ ಅಧ್ಯಾತ್ಮವಿದ್ಯೆಯಾಗುವದು.

ಹೀಗೆ ಅತೀಂದ್ರಿಯತತ್ತ್ವವನ್ನು ಮನುಷ್ಯನು ವಿಚಾರಿಸದಿದ್ದರೆ ಆಗುವ ಹಾಗೆಯೇ ಇಲ್ಲ. ಈ ಅತೀಂದ್ರಿಯವನ್ನು ನಾವು ಅರಿಯಲಾರೆವೆಂದಾದರೆ, ಆಗ ಈ ಪ್ರಪಂಚವೆಂಬುದು ಒಂದು ಮರಳುಗಾಡಿನಂತಾಗುವದು, ಮನುಷ್ಯನ ಬಾಳು ವ್ಯರ್ಥವೆನಿಸುವದು. ಇಲ್ಲಿ ಈಗ ಕಾಣುವಷ್ಟು ವಿಷಯಗಳಿಂದ ತೃಪ್ತರಾಗಿರಿ ಎಂಬುದು ಹೇಳುವದಕ್ಕೇನೋ ಸೊಗಸಾಗಿದೆ. ದನಕರುಗಳೂ ನಾಯಿನರಿಗಳೂ–ಅಷ್ಟೇಕೆ, ಎಲ್ಲಾ ಪ್ರಾಣಿಗಳೂ ಅಷ್ಟರಿಂದಲೇ ತೃಪ್ತಿಪಟ್ಟುಕೊಂಡೇ ಇವೆ ; ಇದರಿಂದಲೇ ಅವುಗಳು ಪಶುಗಳೆನಿಸಿಕೊಂಡಿರುವವು. ಆದ್ದರಿಂದ ಅತೀತವಾದದ್ದನ್ನು ಹುಡುಕುವದನ್ನು ಬಿಟ್ಟು ಮನುಷ್ಯನು ಇಂದಿನ ಸುಖದಲ್ಲೇ ತೃಪ್ತನಾಗಿರುವನಾದರೆ ಅವನು ಮತ್ತೆ ಪಶುವರ್ಗಕ್ಕೆ ಸೇರಬೇಕಾದೀತು ! ಅತೀಂದ್ರಿಯವಾದದ್ದು ಯಾವದೆಂದು ವಿಚಾರಿಸುವ ಧರ್ಮಾನುಷ್ಠಾನವೇ ಮನುಷ್ಯನಲ್ಲಿರುವ ಹೆಚ್ಚುಗಾರಿಕೆಯು ; ಅದೇ ಮನುಷ್ಯನಿಗೂ ಉಳಿದ ಪ್ರಾಣಿಗಳಿಗೂ ಇರುವ ಹೆಚ್ಚುಕಡಿಮೆಗೆ ಹೊಣೆಯಾಗಿರುವದು. "ಮನುಷ್ಯನೊಬ್ಬನೇ ಮೇಲಕ್ಕೆ ನೋಡುವ ಪ್ರಾಣಿಯು, ಮಿಕ್ಕ ಪ್ರಾಣಿಗಳೆಲ್ಲವೂ ಸ್ವಭಾವವಾಗಿ ಕೆಳಕ್ಕೇ ಬಾಗಿಕೊಂಡಿರುವವು" ಎಂಬ ನುಡಿಯು ಸಾಧುವಾದದ್ದು. ಈ ಮೇಲಕ್ಕೆ ನೋಡಿ, ಮೇಲುಮೇಲಕ್ಕೆ ಹೋಗಿ, ಪೂರ್ಣನಾಗುವದಕ್ಕೆ ಯತ್ನಿಸುವದೇ ಮುಕ್ತಿಯೆನಿಸಿಕೊಳ್ಳುವದು ; ಮನುಷ್ಯನು ಎಷ್ಟು ಬೇಗನೆ ಮೇಲಕ್ಕೆ ಹೋದರೆ ಅಷ್ಟು ಬೇಗ ಆತನು ಸತ್ಯವೇ ಮುಕ್ತಿಯೆಂಬ ತತ್ತ್ವದ ಮಟ್ಟಕ್ಕೆ ಏರಿದಂತಾಗುವದು. ನಿಮ್ಮ ಜೇಬಿನಲ್ಲಿರುವ ಹಣ, ನೀವು ಹಾಕಿಕೊಂಡಿರುವ ಬಟ್ಟೆ, ನೀವು ವಾಸಮಾಡಿಕೊಂಡಿರುವ ಮನೆ– ಇವುಗಳನ್ನೇನೂ ಮುಕ್ತಿಯು ಅವಲಂಬಿಸಿರುವದಿಲ್ಲ. ನಿಮ್ಮ ಮೆದುಳಿನಲ್ಲಿ ಅಧ್ಯಾತ್ಮವಿಚಾರದ ಸಂಪತ್ತು ಎಷ್ಟಿರುವದೋ ಅದನ್ನು ಅವಲಂಬಿಸಿರುವದು. ಇದರಿಂದ ಮಾನವರ

ಅಭ್ಯುದಯವಾಗುವದು, ಇದೇ ಸಂಪದಭಿವೃದ್ಧಿಗೂ ಜ್ಞಾನಾಭಿವೃದ್ಧಿಗೂ ತೌರುಮನೆ, ಇದೇ ಮನುಷ್ಯರ ಹಿಂದೆ ನಿಂತಿರುವ ಉತ್ತೇಜಕಸಾಮಗ್ರಿಯು, ಮಾನವಜಾತಿಯನ್ನು ಮುಂದಕ್ಕೆ ತಳ್ಳುವ ಉತ್ಸಾಹಕಶಕ್ತಿಯು.

ಧರ್ಮವೆಂಬುದು ಅನ್ನ ಬಟ್ಟೆಗಳ ಮೇಲೆ ನಿಂತಿಲ್ಲ, ಇದಕ್ಕೆ ಮನೆಮಠಗಳ ಹಂಗಿಲ್ಲ. "ಧರ್ಮದಿಂದ ಏನು ಪ್ರಯೋಜನ ? ಇದು ಬಡವರ ಬಡತನವನ್ನು ಹೋಗಲಾಡಿಸೀತೆ ?" ಎಂಬ ಒಂದು ಆಕ್ಷೇಪಣೆಯನ್ನು ಜನರು ಮತ್ತೆ ಮತ್ತೆ ತಂದೊಡ್ಡುತ್ತಿರುತ್ತಾರೆ. ಒಂದು ವೇಳೆ ಅದು ಹೋಗಲಾಡಿಸಲಾರದೆಂದೇ ಇಟ್ಟುಕೊಳ್ಳೋಣ. ಆದ ಮಾತ್ರಕ್ಕೆ ಧರ್ಮದಲ್ಲಿ ಸತ್ಯವೇನೂ ಇಲ್ಲವೆಂದಾಗುವದೇನು? ನೀವು ಯಾವದಾದರೂ ಜ್ಯೋತಿಷಸಿದ್ಧಾಂತವನ್ನು ನಿರೂಪಿಸುವದಕ್ಕೆ ಹೊರಟಾಗ ಒಂದು ಮಗು ಎದ್ದುನಿಂತು "ಇದರಿಂದ ಶುಠಿಪೆಪ್ಪರ್‌ಮೆಂಟು ಸಿಗುವದೆ" ಎಂದು ಕೇಳಿತೆಂದು ಇಟ್ಟುಕೊಳ್ಳಿ. "ಇಲ್ಲ, ಸಿಗಲಾರದು" ಎಂದು ನೀವು ಹೇಳಿದರೆ "ಛೇ, ಹಾಗಾದರೆ ಇದರಿಂದ ಏನೂ ಉಪಯೋಗವಿಲ್ಲ !" ಎಂದು ಮಗು ಹೇಳುವದು. ಮಕ್ಕಳು ತಮ್ಮ ದೃಷ್ಟಿಯಿಂದಲೇ ಪ್ರಪಂಚವನ್ನೆಲ್ಲ ನೋಡುತ್ತವೆ. ಅವಕ್ಕೆ ಪೆಪ್ಪರ್‌ಮೆಂಟು ಕೊಡುವದು ಯಾವದೊ ಅದೊಂದೇ ಪ್ರಯೋಜನಕರವಾದದ್ದು. ಪ್ರಾಪಂಚಿಕರೆಂಬ ಮಕ್ಕಳೂ ಹಾಗೆಯೆ; ಅವರೂ ತಮ್ಮ ದೃಷ್ಟಿಯಿಂದಲೇ ಎಲ್ಲವನ್ನೂ ನೋಡುವದಕ್ಕೆ ಹೋಗುತ್ತಾರೆ. ಮೇಲ್ತರದ ಪದಾರ್ಥಗಳನ್ನು ಕೀಳುದೃಷ್ಟಿಯಿಂದ ಪರೀಕ್ಷಿಸುವದು ಯುಕ್ತವಲ್ಲ. ಪ್ರತಿಯೊಂದು ಪದಾರ್ಥಕ್ಕೂ ಅದರದರ ದೃಷ್ಟಿಯಿಂದಲೇ ಬೆಲೆಕಟ್ಟಬೇಕು. ಅನಂತವಾಗಿರುವ ತತ್ತ್ವಕ್ಕೆ ಅನಂತದ ದೃಷ್ಟಿಯಿಂದಲೇ ಬೆಲೆಕಟ್ಟಬೇಕು. ಧರ್ಮವೆಂಬುದು ಮನುಷ್ಯನ ಜೀವಮಾನವನ್ನೆಲ್ಲಾ ವ್ಯಾಪಿಸಿಕೊಂಡಿರುವದು. ಈಗಿನ ಜೀವನವನ್ನು ಮಾತ್ರವಲ್ಲ; ಹಿಂದಿನ ಈಗಿನ ಮತ್ತು ಮುಂದಿನ ಜೀವನವನ್ನೆಲ್ಲ ಅದು ವ್ಯಾಪಿಸಿಕೊಂಡಿರುವದು. ಆದ್ದರಿಂದ ಅದು ನಿತ್ಯವಾದ ಜೀವನಿಗೂ ನಿತ್ಯನಾದ ಈಶ್ವರನಿಗೂ ಇರುವ ನಿತ್ಯಸಂಬಂಧವು. ಇಂಥದ್ದರ ಬೆಲೆಯನ್ನು ಮೂರು ಗಳಿಗೆಯ ಹೊತ್ತು ಇರುವ ಮನುಷ್ಯನ ಬಾಳುವೆಯ ಮೇಲೆ ಅದರಿಂದುಂಟಾಗಬಹುದಾದ ಪರಿಣಾಮದಿಂದ ಅಳತೆಮಾಡುವದು ನ್ಯಾಯವೆ ? ಎಂದಿಗೂ ಅಲ್ಲ.

ಇವೆಲ್ಲ ನಿಷೇಧಯುಕ್ತಿಯಾಯಿತು. ಈಗ ಒಂದು ಪ್ರಶ್ನೆ: "ಧರ್ಮದಿಂದ ನಿಜವಾಗಿ ಏನಾದರೂ ಇಲ್ಲದ್ದು ಬರುವದೆ ?". ಬರುವದು. ಅದೇನೆಂದರೆ ಅದು ಮನುಷ್ಯನಿಗೆ ಎಂದೆಂದಿಗೂ ಸುಖದಿಂದಿರುವ ಗತಿಯನ್ನು ತಂದುಕೊಡುತ್ತದೆ. ಧರ್ಮವೇ ಮನುಷ್ಯನನ್ನು ಈಗ ಅವನಿರುವ ಸ್ಥಿತಿಗೆ ತಂದಿರುತ್ತದೆ ; ಧರ್ಮವೇ ಈ ಮನುಷ್ಯರೂಪದಿಂದಿರುವ ಪ್ರಾಣಿಯನ್ನು ದೇವತ್ವಕ್ಕೆ ಒಯ್ಯುವದು. ಇದೇ ಧರ್ಮವು ಮಾಡಿಕೊಡುವ ಪ್ರಯೋಜನವು. ಮನುಷ್ಯಸಮಾಜದಿಂದ ಧರ್ಮವನ್ನು ತೆಗೆದುಹಾಕಿಬಿಟ್ಟರೆ ಉಳಿದು–ಕೊಳ್ಳುವದೇನು?– ಮೃಗಗಳ ಗೊಂಡಾರಣ್ಯವೇ ಹೊರತು ಮತ್ತೇನೂ ಇಲ್ಲ. ವಿಷಯಸುಖವೇ ಮನುಷ್ಯನ ಗುರಿಯಲ್ಲ, ಜ್ಞಾನವೇ ಎಲ್ಲರ ಜೀವನಕ್ಕೂ ಗುರಿಯು. ಮೂಕಪ್ರಾಣಿಯು ಇಂದ್ರಿಯಭೋಗದಿಂದ ಪಡುವ ಸುಖಕ್ಕಿಂತ, ಮನುಷ್ಯನಿಗೆ ಬುದ್ಧಿಯಿಂದ ಹೆಚ್ಚು ಸುಖವಾಗುತ್ತಿರುವದು ನಮಗೆ ಗೊತ್ತಿರುವ ಸಂಗತಿ.

ಮನುಷ್ಯನಿಗೆ ವ್ಯವಹಾರವಿಚಾರದಿಂದ ಆಗುವ ಸುಖಕ್ಕಿಂತಲೂ ಅಧ್ಯಾತ್ಮದ ಅನುಷ್ಠಾನದಿಂದ ಇನ್ನೂ ಹೆಚ್ಚಿನ ಆನಂದವಾಗುವದೆಂಬುದೂ ಕಂಡಿರುವ ಮಾತೆ. ಹೀಗಿರುವದರಿಂದ ಈ ಅಧ್ಯಾತ್ಮ ಜ್ಞಾನವೇ ಎಲ್ಲಕ್ಕೂ ಹೆಚ್ಚಿನ ಜಾಣತನವಾಗಿರಬೇಕು. ಈ ಜ್ಞಾನದಿಂದ ಆನಂದವು ದೊರಕುವದು. ಈ ಪ್ರಪಂಚದಲ್ಲಿರುವ ವಸ್ತುಗಳೆಲ್ಲ ಬರಿಯ ನೆಳಲೇ, ಇವೆಲ್ಲ ನಿಜವಾದ ಆ ಜ್ಞಾನಾನಂದದ ಮೂರನೆಯ ಅಥವಾ ನಾಲ್ಕನೆಯ ಮೆಟ್ಟಲಿನ ತೋರಿಕೆಗಳು ಮಾತ್ರವೆ.

ಇನ್ನೊಂದು ಪ್ರಶ್ನೆ: ಕೊನೆಯ ಗತಿ ಏನು ? ಈಗಿನ ಜನರು ಹೇಳುವದೇನೆಂದರೆ, ಮನುಷ್ಯನು ತಡೆಒಡೆಯಿಲ್ಲದೆ ಒಂದೇ ಸಮನೆ ಮುಂದುಮುಂದಕ್ಕೆ ಹೋಗುತ್ತಿರುತ್ತಾನೆ; ಹೀಗೆ ಮುಂದುಮುಂದಕ್ಕೆ ಹೋಗುತ್ತಿರುವದಿಷ್ಟೇ ಹೊರತು ಕೊನೆಗೆ ಮುಟ್ಟಬೇಕಾದ ಪೂರ್ಣತೆಯ ಸ್ಥಿತಿಯೇನೂ ಇರುವದಿಲ್ಲ. ಎಂದೆಂದಿಗೂ ಹತ್ತಿರಹತ್ತಿರಕ್ಕೆ ಹೋಗುತ್ತಿರುವದು, ಯಾವಾಗ್ಗೂ ಕೊನೆಮುಟ್ಟದೆ ಇರುವದು– ಇದೇ ಪುರುಷಾರ್ಥವಂತೆ. ಇದಕ್ಕೇನು ಅರ್ಥವೊ ! ಇದು ಆಶ್ಚರ್ಯಕರವಾಗಿರುವದೇನೋ ನಿಜವೆ ; ಆದರೆ ಸ್ವಲ್ಪ ನೋಡಿದ ಮಾತ್ರದಿಂದ ಈ ಅಭಿಪ್ರಾಯವು ಹಾಸ್ಯಾಸ್ಪದವಾದದ್ದೆಂದು ಗೊತ್ತಾಗುವದು. ಒಂದೇ ಸರಳ ರೇಖೆಯಲ್ಲಿ ನೆಟ್ಟನೆ ಹೋಗುತ್ತಲೇ ಇರುವದೆಂಬುದು ಎಲ್ಲಿಯಾದರೂ ಉಂಟೆ ? ಸರಳರೇಖೆಯನ್ನು ಒಂದೇ ಸಮನೆ ಮುಂದುವರಿಸುತ್ತಲೆ ಹೋದರೆ ಅದು ವೃತ್ತವಾಗಿ ಪರಿಣಮಿಸಿ, ಕೊನೆಗೆ ತಾನು ಹೊರಟ ಸ್ಥಳಕ್ಕೇ ಬಂದು ಸೇರಿಬಿಡುವದು. ಎಲ್ಲಿಂದ ಮೊದಲು ಮಾಡಿದ್ದೀರೋ ಅಲ್ಲಿಯೇ ಕೊನೆಮುಟ್ಟಬೇಕು. ನೀವು ಈಶ್ವರನಿಂದ ಬಂದಿರುವದರಿಂದ ಈಶ್ವರನಲ್ಲಿಯೇ ಹೋಗಿ ಸೇರಬೇಕು. ಹಾಗಾದರೆ ಇನ್ನು ಮಾಡುವದೇನು ಉಳಿಯಿತು ? ಎಂದರೆ ಇದಕ್ಕೆ ತಕ್ಕ ಸಾಧನ. ಯಾವಾಗಲೂ ಇದಕ್ಕೆ ಬೇಕಾದ ಸಾಧನಗಳನ್ನು ಮಾಡುತ್ತಲೇ ಇರಬೇಕು.

ಮತ್ತೂ ಒಂದು ಪ್ರಶ್ನೆ : ನಾವು ಮುಂದುಮುಂದಕ್ಕೆ ಹೋದ ಹೋದ ಹಾಗೆ ಧರ್ಮದಲ್ಲಿ ಹೊಸ ಹೊಸ ತತ್ತ್ವಗಳು ಕಂಡುಬರುವವೇನು ? ಇದಕ್ಕೆ ಹೌದು, ಇಲ್ಲ– ಎಂದು ಎರಡು ಉತ್ತರ. ಒಂದು ದೃಷ್ಟಿಯಿಂದ ನೋಡಿದರೆ ಧರ್ಮದಲ್ಲಿ ಹೊಸದಾಗಿ ಕಂಡುಹಿಡಿಯುವದೆಂಬುದೇ ಏನೂ ಉಳಿದಿರುವದಿಲ್ಲ. ಎಲ್ಲವೂ ಮೊದಲೆ ಗೊತ್ತಾಗಿಯೇಬಿಟ್ಟಿರುತ್ತದೆ. ನಮ್ಮಗಳಲ್ಲಿ ಒಂದೇ ಒಂದು ತತ್ತ್ವವು ಇರುವದೆಂದು ಪ್ರಪಂಚದ ಧರ್ಮಪಂಥಗಳೆಲ್ಲ ಹೇಳಿಕೊಳ್ಳುತ್ತಿರುವವು. ನಾವು ಪರಬ್ರಹ್ಮಸ್ವರೂಪರಾಗಿರುವದರಿಂದ ಇನ್ನು ಇದಕ್ಕಿಂತ ಮುಂದಕ್ಕೆ ಹೋಗುವದೆಂಬ ಮಾತಿಗೆ ಅರ್ಥವಿಲ್ಲ. ಈ ಏಕತ್ವವನ್ನು ಕಂಡುಕೊಳ್ಳುವದೇ ಜ್ಞಾನವೆನಿಸಿಕೊಳ್ಳುವದು. ನಿಮ್ಮಲ್ಲಿ ಕೆಲವರು ಗಂಡಸರೆಂದೂ ಕೆಲವರು ಹೆಂಗಸರೆಂದೂ ಕಾಣಬರುತ್ತಿರುವಿರಷ್ಟೆ. ಇದೇ ಭೇದವೆಂಬುದು. ನಿಮ್ಮನ್ನೆಲ್ಲ ಒಟ್ಟು ಸೇರಿಸಿ ನೀವು ಮಾನವರೆಂದು ಹೇಳಿದರೆ ಆಗ ಅದು ಶಾಸ್ತ್ರೀಯವಾದ ತಿಳಿವಳಿಕೆಯಾಗುವದು. ಉದಾಹರಣೆಗೆ ವಸ್ತುಶಾಸ್ತ್ರವನ್ನು (chemistry) ತೆಗೆದುಕೊಳ್ಳಿ. ವಸ್ತುಶಾಸ್ತ್ರಜ್ಞರು ತಮಗೆ ಗೊತ್ತಿರುವ ವಸ್ತುಗಳನ್ನೆಲ್ಲ ಅವುಗಳ ಮೂಲಧಾತುಗಳಾಗಿ ವಿಂಗಡಿಸಬೇಕೆಂದೂ, ಸಾಧ್ಯವಾದರೆ, ಯಾವ ಒಂದು ಮೂಲಧಾತುವಿನಿಂದ ಇವುಗಳೆಲ್ಲ ಆಗಿವೆಯೋ ಅದನ್ನು ಕಂಡುಹಿಡಿಯ ಬೇಕೆಂದೂ ಪ್ರಯತ್ನಿಸುತ್ತಿದ್ದಾರೆ. ಒಂದೇ ಒಂದು

ಮೂಲಧಾತುವಿನಿಂದ ಈ ಮೂಲಧಾತುಗಳೆಲ್ಲ ಆಗಿರುವವೆಂದು ಯಾವದೋ ಒಂದು ಕಾಲದಲ್ಲಿ ತಿಳಿಯಬರಬಹುದು. ಆ ಮೂಲಧಾತುವನ್ನು ಮುಟ್ಟಿದ ಮೇಲೆ ಇನ್ನು ಅವರಿಗೆ ಮುಂದಕ್ಕೆ ಹೋಗಲು ಅವಕಾಶವಿರುವದಿಲ್ಲ; ಆಗ ವಸ್ತುಶಾಸ್ತ್ರವು ಪರಿಪೂರ್ಣವಾದಂತಾಗುವದು. ಧರ್ಮದ ತತ್ತ್ವವನ್ನು ಕುರಿತ ಶಾಸ್ತ್ರದ ವಿಚಾರವೂ ಹೀಗೆಯೇ. ಈ ಪೂರ್ಣೈಕತ್ವವನ್ನು ನಾವು ಕಂಡುಕೊಂಡರೆ ಈ ಶಾಸ್ತ್ರವು ಇನ್ನುಮೇಲೆ ಮುಂದಕ್ಕೆ ಹೋಗಲಾರದು, ಅದೇ ಕೊನೆ.

ಇನ್ನು ಇಲ್ಲಿ ಕೇಳಬೇಕಾಗಿರುವದೇನೆಂದರೆ, "ಇಂಥ ಏಕತ್ವವನ್ನು ಕಂಡುಹಿಡಿಯುವದು ಸಾಧ್ಯವೆ?" ಭರತಖಂಡದಲ್ಲಿ ಬಹು ಪುರಾತನ ಕಾಲದಿಂದಲೂ ಧರ್ಮ ಮತ್ತು ತತ್ತ್ವಶಾಸ್ತ್ರಗಳನ್ನು ಒಂದು ಕ್ರಮಶಾಸ್ತ್ರವಾಗಿ ಏರ್ಪಡಿಸುವ ಪ್ರಯತ್ನವು ನಡೆದಿರುವದು. ಪಾಶ್ಚಾತ್ಯದೇಶಗಳಲ್ಲಿ ಧರ್ಮ, ತತ್ತ್ವಶಾಸ್ತ್ರ– ಈ ಎರಡೂ ಬೇರೆಬೇರೆ ಎಂದೇ ಎಣಿಸುವ ವಾಡಿಕೆಯಿರುವಂತೆ ಹಿಂದುಗಳಲ್ಲಿ ಇಲ್ಲ. ನಮ್ಮಲ್ಲಿ ಧರ್ಮವೂ ತತ್ತ್ವಶಾಸ್ತ್ರವೂ ಎರಡೂ ಬೇರೆ ಬೇರೆ ದೃಷ್ಟಿಗೆ ತೋರುವ ಒಂದೇ ಶಾಸ್ತ್ರದ ಬೇರೆ ಬೇರೆ ಆಕಾರಗಳು ; ಇವೆರಡಕ್ಕೂ ಯುಕ್ತಿಯ ಆಧಾರವೂ ಶಾಸ್ತ್ರೀಯಾನುಭವದ ಆಧಾರವೂ ಇರಲೇಬೇಕು.

ಸಾಂಖ್ಯಸಿದ್ಧಾಂತವು ಭರತಖಂಡದಲ್ಲಿ, ಅಷ್ಟೇಕೆ, ಪ್ರಪಂಚದಲ್ಲೆಲ್ಲ ಅತ್ಯಂತ ಪ್ರಾಚೀನವಾದ ಸಿದ್ಧಾಂತಗಳಲ್ಲಿ ಒಂದಾಗಿದೆ. ಆ ಸಿದ್ಧಾಂತವನ್ನು ಪ್ರತಿಪಾದಿಸಿರುವ ಮಹಾತ್ಮನಾದ ಕಪಿಲನು ಹಿಂದುಗಳ ಮನಃಶಾಸ್ತ್ರಕ್ಕೆಲ್ಲ ಮೂಲಪ್ರವರ್ತಕರು. ಈಗಲೂ ಇಂಡಿಯಾದಲ್ಲಿ ದರ್ಶನಗಳೆಂದು ಪ್ರಸಿದ್ಧವಾಗಿರುವ ತತ್ತ್ವಶಾಸ್ತ್ರಪ್ರಸ್ಥಾನಗಳಿಗೆಲ್ಲ ಆತನು ಉಪದೇಶಿಸಿದ ಆ ಪ್ರಾಚೀನಸಿದ್ಧಾಂತವೆ ತಳಹದಿಯಾಗಿರುತ್ತದೆ. ಮಿಕ್ಕ ವಿಷಯಗಳಲ್ಲಿ ಆ ಪ್ರಸ್ಥಾನಗಳಿಗೆ ಎಷ್ಟೇ ತಾರತಮ್ಯವಿರಲಿ, ಅವುಗಳೆಲ್ಲ ಆತನ ಮನಃಶಾಸ್ತ್ರಪದ್ಧತಿಯನ್ನೇ ಅನುಸರಿಸುತ್ತವೆ.

ಸಾಂಖ್ಯದ ಯುಕ್ತಿಯಿಂದಲೇ ಹುಟ್ಟಿರುವ ವೇದಾಂತವು ಆ ದರ್ಶನದ ಸಿದ್ಧಾಂತಗಳನ್ನು ಇನ್ನೂ ಮುಂದಕ್ಕೆ ತಂದು ತತ್ತ್ವನಿರ್ಣಯವನ್ನು ಮಾಡಿರುತ್ತದೆ. ಪ್ರಪಂಚದ ವಿಷಯದಲ್ಲಿ ಕಪಿಲನು ಹೇಳಿರುವದನ್ನೇ ಈ ದರ್ಶನದಲ್ಲಿಯೂ ಇಟ್ಟುಕೊಂಡಿರುತ್ತದೆಯಾದರೂ, ವೇದಾಂತಕ್ಕೆ ದ್ವೈತದಲ್ಲಿಯೇ ಪರ್ಯವಸಾನವಾಗುವದು ಸಾಕೆನಿಸಲಿಲ್ಲ. ಭೌತಿಕಶಾಸ್ತ್ರ, ಧರ್ಮ– ಈ ಎರಡಕ್ಕೂ ಗುರಿಯಾಗಿರುವ ತುಟ್ಟತುದಿಯ ಏಕತ್ವವನ್ನು ಮುಟ್ಟುವವರೆಗೂ ಈ ದರ್ಶನದಲ್ಲಿ ಶೋಧನೆಯನ್ನು ಮುಂದುವರಿಸಿರುತ್ತದೆ.

# 10

# ಪ್ರಪಂಚತತ್ತ್ವ

ಎರಡು ಪ್ರಪಂಚಗಳುಂಟು– ಒಂದು ಪಿಂಡಾಂಡ, ಮತ್ತೊಂದು ಬ್ರಹ್ಮಾಂಡವು; ಒಂದು ಒಳಗಿನ (ಅಧ್ಯಾತ್ಮ) ಪ್ರಪಂಚವು, ಇನ್ನೊಂದು ಹೊರಗಿನ (ಆಧಿಭೌತಿಕ) ಪ್ರಪಂಚವು. ಇವೆರಡರಿಂದಲೂ ಅನುಭವದ ಮೂಲಕ ತತ್ತ್ವಗಳು ಗೊತ್ತಾಗುವವು. ಒಳಗಿನ ಅನುಭವದಿಂದ ಕೂಡಿಹಾಕಿರುವ ತತ್ತ್ವಗಳ ರಾಶಿಯೇ ಮನಃಶಾಸ್ತ್ರ, ಅತಿಭೌತಿಕಶಾಸ್ತ್ರ, (metaphysics) ಧರ್ಮ; ಹೊರಗಿನ ಅನುಭವದಿಂದ ಕೂಡಿಹಾಕಿರುವ ತತ್ತ್ವಗಳೇ ಭೌತಿಕಶಾಸ್ತ್ರಗಳು. ಪರಮಾರ್ಥತತ್ತ್ವವೆಂಬುದು ಈ ಎರಡು ಪ್ರಪಂಚದ ಅನುಭವಗಳಿಗೂ ಹೊಂದುಗೆಯಾಗಿರಬೇಕು. ಪಿಂಡಾಂಡವು ಬ್ರಹ್ಮಾಂಡಕ್ಕೆ ಸಾಕ್ಷಿಯಾಗಿರಬೇಕು, ಬ್ರಹ್ಮಾಂಡವು ಪಿಂಡಾಂಡಕ್ಕೆ ಸಾಕ್ಷಿಯಾಗಿರಬೇಕು; ಭೌತಿಕತತ್ತ್ವಕ್ಕೆ ಅನುಗುಣವಾದ ಅನುಭವವು ಒಳಗಿನ ಪ್ರಪಂಚದಲ್ಲಿರಬೇಕು, ಒಳಗಿನ ಪ್ರಪಂಚಕ್ಕೆ ಹೊರಗೆ ಅನುವಾದವಿರಬೇಕು. ಹೀಗಿದ್ದರೂ ಈ ತತ್ತ್ವಗಳಲ್ಲಿ ಎಷ್ಟೋ ಪರಸ್ಪರ ವಿರುದ್ಧವಾಗಿರುವವೆಂದು ಕಂಡುಬರುತ್ತದೆ. ಪ್ರಪಂಚದ ಇತಿಹಾಸದ ಒಂದು ಕಾಲದಲ್ಲಿ ಒಳಗಿನ ತತ್ತ್ವಗಳು* ದೋಡಿಸುವದಕ್ಕೆ ಮೊದಲುಮಾಡುತ್ತವೆ. ಈಗಿನ ಕಾಲದಲ್ಲಿ ಹೊರಗಿನ ತತ್ತ್ವಗಳನ್ನು ಹಿಡಿದಿರುವ ಭೌತಿಕವಾದಿಗಳದೇ ಮೇಲುಗೈಯಾಗಿರುತ್ತದೆ, ಆದ್ದರಿಂದ ಅವರು ಮನಃಶಾಸ್ತ್ರಜ್ಞರೂ ಅತಿಭೌತಿಕಶಾಸ್ತ್ರಜ್ಞರೂ ಹೇಳುವ ಎಷ್ಟೋ ತತ್ತ್ವಗಳನ್ನು ಹತ್ತಬಡಿದಿರುತ್ತಾರೆ. ಈ ವಿಷಯದಲ್ಲಿ ನನಗೆ ತಿಳಿದಮಟ್ಟಿಗೆ ತೋರುವದೇನೆಂದರೆ, ಮನಃಶಾಸ್ತ್ರಕ್ಕೆ ನಿಜವಾಗಿ ಬೇಕಾಗಿರುವ ಪ್ರಧಾನಭಾಗಗಳು ಈಗಿನ ಭೌತಿಕವಿಜ್ಞಾನದ ಪ್ರಧಾನಭಾಗಗಳಿಗೆ ಪೂರ್ಣವಾಗಿಯೂ ಹೊಂದಿಕೊಂಡೇ ಇರುವವು.

ಯಾವನೊಬ್ಬನೂ ಎಲ್ಲಾ ವಿಷಯದಲ್ಲಿಯೂ ಚತುರನಾಗಿರಲಾರನು. ಯಾವದೊಂದು ಕುಲದವರೂ ಯಾವದೊಂದು ಜನಾಂಗದವರೂ ಜ್ಞಾನದ ಸರ್ವಶಾಖೆಗಳಲ್ಲಿಯೂ ಸಮಬಲವಾದ ತಿಳಿವಳಿಕೆಯುಂಟಾಗಿರುವ ಸಂಭವವಿಲ್ಲ. ಈಗಿನ ಯೂರೋಪು ಜನಾಂಗದವರು ಹೊರಗಿನ ಭೌತಿಕವಿಜ್ಞಾನದಲ್ಲಿ ಮಹಾನಿಪುಣರೆನಿಸಿಕೊಂಡಿದಾರೆ, ಆದರೆ ಮನುಷ್ಯನ ಅಧ್ಯಾತ್ಮಸ್ವರೂಪದ ವಿಚಾರದಲ್ಲಿ ಅವರು ಅಷ್ಟು ನಿಪುಣರಾಗಿರುವದಿಲ್ಲ. ಇದಕ್ಕೆ ಪ್ರತಿಯಾಗಿ ಪೂರ್ವದೇಶದ ಜನರು ಹೊರಗಿನ ಭೌತಿಕಪ್ರಪಂಚದ ಶೋಧದಲ್ಲಿ ಅಷ್ಟು ನಿಪುಣರೆನಿಸಿಕೊಂಡಿರುವದೇ ಇಲ್ಲ, ಆದರೆ ಅವರು ಒಳಗಿನ ಪ್ರಪಂಚದ ಶೋಧದಲ್ಲಿ ಮಹಾನಿಪುಣರಾಗಿರುತ್ತಾರೆ. ಆದ್ದರಿಂದಲೇ ಪೂರ್ವದೇಶಗಳ ಪ್ರಕೃತಿಶಾಸ್ತ್ರವೇ ಮುಂತಾದ ಭೌತಿಕಶಾಸ್ತ್ರಗಳು ಪಶ್ಚಿಮದೇಶಗಳ ಶಾಸ್ತ್ರಗಳಿಗೆ ಅನುಗುಣವಾಗಿರುವದಿಲ್ಲ ; ಪಶ್ಚಿಮದೇಶದ ಮನಃಶಾಸ್ತ್ರವು ಪೂರ್ವದೇಶದ ಮನಃಶಾಸ್ತ್ರಕ್ಕೆ ಅನುಗುಣವಾಗಿಯೂ ಇರುವದಿಲ್ಲವೆಂದು ಕಂಡುಬರುತ್ತಿದೆ. ಪೂರ್ವದೇಶದ ಭೌತಿಕಜ್ಞರನ್ನು ಪಶ್ಚಿಮದೇಶದವರು ಹಿಂದಕ್ಕೆ ತಳ್ಳಿಬಿಟ್ಟಿರುತ್ತಾರೆ. ಹೀಗಿದ್ದರೂ ಇಬ್ಬರೂ ತತ್ತ್ವವನ್ನೇ ಆಧಾರಮಾಡಿಕೊಂಡಿರುವೆವೆಂದು ಹೇಳಿಕೊಳ್ಳುತ್ತಿದಾರೆ. ಆದರೆ ನಾವು ಮೊದಲೇ ಹೇಳಿರುವಂತೆ

ಯಾವ ಜ್ಞಾನಶಾಖೆಯಲ್ಲಿಯೇ ಆಗಲಿ ನಿಜವಾದ ತತ್ತ್ವವೆಂಬುದು ತನಗೆ ತಾನೆ ಎಂದಿಗೂ ವಿರುದ್ಧವಾಗಿರುವದಿಲ್ಲ. ಒಳಗಿನ ತತ್ತ್ವಗಳು ಹೊರಗಿನ ತತ್ತ್ವಗಳಿಗೆ ಹೊಂದಿಕೆಯಾಗಿಯೇ ಇರಬೇಕು.

ಈಗಿನ ಜ್ಯೋತಿಷ್ಕರಲ್ಲಿ ಮತ್ತು ಭೌತಿಕಜ್ಞರಲ್ಲಿ ಪ್ರಪಂಚದ ವಿಷಯದಲ್ಲಿ ಉಂಟಾಗಿರುವ ಕಲ್ಪನೆಗಳು ನಮಗೆ ತಿಳಿದೇ ಇವೆ ; ಅವು ಯೂರೋಪಿನ ಈಶ್ವರ ವಿದ್ಯೆಯ (Theology) ಸಿದ್ಧಾಂತಗಳನ್ನು ತಲೆಕೆಳಗುಮಾಡುತ್ತಿವೆಯೆಂಬುದೂ ಈ ಭೌತಿಕಶೋಧನಗಳು ಹೊಸಹೊಸದಾಗಿ ನಡೆದಹಾಗೆಲ್ಲ ಈ ವಿದ್ಯೆಯು ಅದರ ದುರ್ಗದೊಳಕ್ಕೆ ಸಿಡಿಮದ್ದನ್ನೆಸೆದಂತೆ ಪರಿಣಾಮವನ್ನುಂಟು – ಮಾಡುತ್ತಿದೆಯೆಂಬುದೂ ನಮಗೆ ತಿಳಿದೇ ಇದೆ. ಈಶ್ವರವಾದಿಗಳು ಯಾವಾಗಿನಿಂದಲೂ ಈ ಶೋಧಗಳನ್ನು ಅಡಗಿಸುವದಕ್ಕೆ ಪ್ರಯತ್ನ –ಪಟ್ಟಿರುತ್ತಾರೆಂಬುದೂ ನಮಗೆ ತಿಳಿದೇ ಇರುತ್ತದೆ.

ಈಗ ಪೂರ್ವದೇಶದವರು ಪ್ರಪಂಚದ ಉತ್ಪತ್ತಿಯನ್ನೂ ಮತ್ತು ಅದಕ್ಕೆ ಸಂಬಂಧಪಟ್ಟ ಮಿಕ್ಕ ವಿಷಯಗಳನ್ನೂ ಕುರಿತು ಯಾವ ಯಾವ ಮನಃಶಾಸ್ತ್ರೀಯ ಅಭಿಪ್ರಾಯಗಳನ್ನು ಪಟ್ಟಿರುತ್ತಾರೆಂಬುದನ್ನು ವಿವರಿಸಬೇಕೆಂದಿರುವೆನು. ಈ ಅಭಿಪ್ರಾಯಗಳು ನಮಗೆಲ್ಲ ಅತ್ಯಂತ ಆಶ್ಚರ್ಯವಾಗುವಷ್ಟು ಮಟ್ಟಿಗೆ ಆಧುನಿಕ ವಿಜ್ಞಾನಶಾಸ್ತ್ರದ ಅತ್ಯಂತ ಅರ್ವಾಚೀನಶೋಧಗಳಿಗೆ ಎಷ್ಟು ಅನುರೂಪ –ವಾಗಿರುವವೆಂಬುದು, ಇದರಿಂದ ನಿಮಗೆ ತಿಳಿಯಬರುವದು : ಎಲ್ಲಿಯಾದರೂ ಈ ಎರಡಕ್ಕೂ ಹೊಂದುಗೆಯಿಲ್ಲದೆ ಇದ್ದರೆ, ಆಧುನಿಕವಿಜ್ಞಾನದಲ್ಲಿ ಕೊರತೆಯಿರುವದೇ ಹೊರತು ಆ ಅಭಿಪ್ರಾಯಗಳಲ್ಲಿಲ್ಲವೆಂಬುದೂ ತಿಳಿಯಬರುವದು.

ನಾವೆಲ್ಲರೂ ಇಂಗ್ಲಿಷಿನಲ್ಲಿ 'ನೇಚರ್' (Nature) ಎಂಬ ಮಾತನ್ನು ಉಪಯೋಗಿಸುತ್ತೇವಷ್ಟೆ. ಪುರಾತನರಾದ ಸಾಂಖ್ಯರು ಅದಕ್ಕೆ ಎರಡು ಹೆಸರುಗಳನ್ನಿಟ್ಟಿದ್ದರು. ಪ್ರಕೃತಿಯೆಂಬುದು ಒಂದು ಹೆಸರು. ಇದು ಸ್ವಲ್ಪ ಹೆಚ್ಚು ಕಡಿಮೆಯಾಗಿ 'ನೇಚರ್' ಎಂಬ ಮಾತಿನ ಅರ್ಥವುಳ್ಳದ್ದೇ ಆಗಿರುವದು. **ಅವ್ಯಕ್ತ** ವೆಂಬ ಇನ್ನೊಂದು ಹೆಸರು ಇದಕ್ಕಿಂತಲೂ ಹೆಚ್ಚು ಶಾಸ್ತ್ರೀಯವಾದದ್ದು. ಈ ಅವ್ಯಕ್ತದಿಂದ ಪರಮಾಣುಗಳು, ಅಣುಗಳು, ಶಕ್ತಿಗಳು, ಮನಸ್ಸು, ಚಿತ್ತ, ಬುದ್ಧಿ– ಎಲ್ಲರೂ ಉಂಟಾಗುವವೆಂದು ಅವರು ಹೇಳುತ್ತಿದ್ದರು. ಇಂಡಿಯದ ಯುಗಗಳ ಹಿಂದೆಯೇ ಹೇಳಿಬಿಟ್ಟಿದ್ದರೆಂಬುದನ್ನು ನೋಡಿದರೆ ಅತ್ಯಾಶ್ಚರ್ಯ–ವಾಗುತ್ತದೆ. ಆಧುನಿಕ ಭೌತಿಕವಾದಿಗಳು ಮನಸ್ಸೆಂಬುದೂ ಶರೀರದಂತೆ ಪ್ರಕೃತಿಯ ಕಾರ್ಯವೇ ಎಂದು ತೋರಿಸುವದಕ್ಕೆ ಪ್ರಯತ್ನಮಾಡುತ್ತಲಿರುವರಲ್ಲದೆ ಮತ್ತೇನು? ಚಿತ್ತವೂ ಇದರಂತೆಯೇ ಪ್ರಕೃತಿಕಾರ್ಯವು, ಬುದ್ಧಿಯೂ ಅಂಥದ್ದೇ ಎಂಬುದು ನಮಗೆ ಇಷ್ಟರಲ್ಲಿಯೇ ತಿಳಿಯಬರುವದು. ಇವೆಲ್ಲವೂ ಅವ್ಯಕ್ತವೆಂಬ ಪ್ರಕೃತಿಯಿಂದಲೇ ಉಂಟಾಗಿರುತ್ತವೆ.

ಇದು ಮೂರು ಶಕ್ತಿಗಳ ಸಾಮ್ಯಾವಸ್ಥೆಯೆಂದು ಹೇಳುತ್ತಾರೆ. ಇವುಗಳಲ್ಲಿ ಒಂದಕ್ಕೆ ಸತ್ತ್ವವೆಂದೂ, ಮತ್ತೊಂದಕ್ಕೆ ರಜಸ್ಸೆಂದೂ, ಇನ್ನೊಂದಕ್ಕೆ ತಮಸ್ಸೆಂದೂ ಹೆಸರು. ಇವುಗಳಲ್ಲಿ ತೀರ ಕೆಳಗಿನ ಅಂತಸ್ತಿನ ಶಕ್ತಿಯಾದ ತಮಸ್ಸೆಂಬುದು ಆಕರ್ಷಣಶಕ್ತಿಯು (attraction); ಇದಕ್ಕಿಂದ

ಹೆಚ್ಚಿನದಾದ ರಜಸ್ಸೆಂಬುದು ವಿಕರ್ಷಣಶಕ್ತಿಯು (repulsion); ಎಲ್ಲಕ್ಕೂ ಹೆಚ್ಚಿನದಾದ ಸತ್ತ್ವವು ಇವೆರಡರ ಸಮತ್ವವು* ಹೀಗಿರುವದರಿಂದ ಈ ಆಕರ್ಷಣವಿಕರ್ಷಣ ಶಕ್ತಿಗಳೆರಡನ್ನೂ ಸತ್ತ್ವದಿಂದ ಹಿಡಿತದಲ್ಲಿಟ್ಟುಕೊಂಡಾಗ ಸೃಷ್ಟಿಯಾಗುವದಿಲ್ಲ, ಪ್ರಪಂಚದಲ್ಲಿ ಚಲನೆಯೆಂಬುದೇ ಆಗುವದಿಲ್ಲ. ಈ ಸಾಮ್ಯವು ತಪ್ಪಿತೋ, ಇಲ್ಲವೋ, ಇವುಗಳ ಸಮಪ್ರಾಧಾನ್ಯಕ್ಕೆ ಅಡ್ಡಿಯಾಗಿ ಇವುಗಳಲ್ಲೊಂದು ಮತ್ತೊಂದಕ್ಕಿಂತ ಬಲವಾಗಿ ಚಲನೆಯುಂಟಾಗುತ್ತದೆ, ಸೃಷ್ಟಿಯು ಮೊದಲಾಗುತ್ತದೆ. ಹೀಗೆ ಕಲ್ಪಕಲ್ಪಕ್ಕೂ ಮತ್ತೆಮತ್ತೆ ಆಗುತ್ತಲೇ ಇರುವದು, ಎಂದರೆ ಒಂದಾನೊಂದು ಕಾಲದಲ್ಲಿ ಸಮಪ್ರಾಧಾನ್ಯವು ತಪ್ಪಿ ಈ ಶಕ್ತಿಗಳು ಒಂದರೊಡನೊಂದು ಸಂಯುಕ್ತವಾಗಿ ಪುನಃ ಸಂಯುಕ್ತವಾಗುತ್ತಾ ಪ್ರಪಂಚವು ಹೊರಕ್ಕೆ ಬೀಳುವದು. ಆದರೆ ಪ್ರತಿಯೊಂದೂ ಮೊದಲಿನ ಸಾಮ್ಯಾವಸ್ಥೆಯನ್ನು ಹೊಂದುವ ಕಡೆಗೇ ಹೋಗುವ ಸ್ವಭಾವವುಳ್ಳದ್ದಾಗಿರುತ್ತವೆ ; ಕೊನೆಗೆ ಹೊರತೋರಿಕೊಂಡಿರುವದೆಲ್ಲ ನಾಶವಾಗುವ ಕಾಲವೊಂದು ಒದಗುತ್ತದೆ. ಸ್ವಲ್ಪ ಕಾಲವಾದ ಬಳಿಕ ಮತ್ತೆ ಎಲ್ಲವೂ ಅದಿರಾಡುವದಕ್ಕೆ ಮೊದಲಾಗಿ ಹೊರಬೀಳುವದು, ಮತ್ತೆ ಅಲೆಗಳಂತೆ ಮೆಲ್ಲಗೆ ಹಿಂದಕ್ಕೆ ಸರಿದುಕೊಳ್ಳುವದು. ಪ್ರಪಂಚದಲ್ಲಿರುವ ಚಲನವನ್ನೆಲ್ಲ, ಈ ವಿಶ್ವದಲ್ಲಿರುವದನ್ನೆಲ್ಲ ಕ್ರಮಕ್ರಮವಾಗಿ ಎದ್ದುಬಿದ್ದು ಮಾಡುತ್ತಿರುವ ಅಲೆಗಳಿಗೆ ಹೋಲಿಸಬಹುದಾಗಿರುತ್ತದೆ.

ಈ ತತ್ತ್ವವಿಚಾರದಲ್ಲಿ ಕೆಲವರು ಇಡಿಯ ವಿಶ್ವವೇ ಹೀಗೆ ಕೆಲವು ಕಾಲ ಸುಮ್ಮಗಿರುವದೆನ್ನುತ್ತಾರೆ; ಇನ್ನು ಕೆಲವರು ಈ ಶಾಂತವಾಗುವಿಕೆಯು ಕೆಲ ಕೆಲವು ವ್ಯೂಹಗಳಿಗೆ ಮಾತ್ರ ಸೇರಿದ್ದೆನ್ನುವರು, ಎಂದರೆ ಈ ನಮ್ಮ ಸೌರವ್ಯೂಹವು ಪ್ರಲಯವಾಗಿ ಅವ್ಯಕ್ತರೂಪನ್ನು ಧರಿಸುತ್ತಿರುವಲ್ಲಿ ಬೇರೆಯ ಅನೇಕ ಕೋಟಿ☞ ವ್ಯೂಹಗಳು ಇನ್ನೊಂದು ಕ್ರಮವನ್ನನುಸರಿಸಿ ಹೊರತೋರಿಕೊಳ್ಳುವವೆಂದು ಅಭಿಪ್ರಾಯಪಡುವರು. ಎರಡನೆಯ ಅಭಿಪ್ರಾಯವೇ, ✝ಎಂದರೆ, ಈ ಪ್ರಲಯವೆಂಬುದು ಇಡಿಯ ವಿಶ್ವಕ್ಕೇ ಸೇರಿದ್ದಲ್ಲವೆಂದೂ ಇದರ ಬೇರೆಬೇರೆ ಕಡೆಗಳಲ್ಲಿ ಬೇರೆಬೇರೆ ಬಗೆಯ ವ್ಯಾಪಾರಗಳು ನಡೆಯುತ್ತಲೇ ಇರುವವೆಂದೂ ಹೇಳುವ ಮತವೇ, ಸರಿಯೆಂದು ನನಗೆ ತೋರುವದು. ಹೇಗಾದರೂ ತತ್ತ್ವವೇನೋ ಒಂದೇ ; ನಮಗೆ ಕಾಣಬರುವದೆಲ್ಲ ಎಂದರೆ ಒಟ್ಟು ಪ್ರಕೃತಿಯೇ– ಅನುಕ್ರಮವಾಗಿ ಏಳುತ್ತಲೂ ಬೀಳುತ್ತಲೂ ಮುಂದುವರಿಯುತ್ತಿರುವದು. ಬೀಳುವ ಸ್ಥಿತಿಯು, ಎದರೆ ಸಮತ್ವವನ್ನು, ಸಂಪೂರ್ಣ ಸಾಮ್ಯಸ್ಥಿತಿಯನ್ನು ಹೊಂದುವದನ್ನು, 'ಪ್ರಲಯ', 'ಕಲ್ಪಾಂತ',

---

* ಇಲ್ಲಿರುವ ಸತ್ತ್ವಾದಿಗುಣಗಳ ವರ್ಣನೆಯನ್ನು ಭಗವದ್ಗೀತೆಯಲ್ಲಿರುವ ವರ್ಣನೆಗೆ ಹೋಲಿಸಿ ನೋಡಿರಿ.

☞ ಅವಾಂತರಪ್ರಲಯ, ಮಹಾಪ್ರಲಯ– ಎಂಬ ಭೇದವನ್ನನುಸರಿಸಿ ಸ್ವಾಮಿಗಳು ಈ ಮಾತನ್ನಾಡಿರಬೇಕೆಂದು ತೋರುವದು.

✝ ಈ ಜಗತ್ತೆಲ್ಲ ಮತ್ತೆ ಮತ್ತೆ ಮೊದಲಿನಂತೆ ಸೃಷ್ಟಿಯಾಗುವದೆಂದು ಹೇಳುವ ಪುರಾಣವಚನಗಳು ಬೇಕಾದಷ್ಟಿವೆ ; ಆತ್ಮನೊಬ್ಬನೇ ಇದ್ದು ಮಹಾಭೂತಗಳನ್ನೂ ಜಗತ್ತನ್ನೂ ಸೃಷ್ಟಿಮಾಡುವನೆಂದು ಹೇಳುವ ಶ್ರುತಿವಚನಗಳೂ ಇವೆ. ಆದರೂ ಅವಾಂತರಪ್ರಲಯ ವಾದವೇ ಸರಿಯೆಂದು ಸ್ವಾಮಿಯವರು ಏತಕ್ಕೆ ಹೇಳಿರುವರೋ ತಿಳಿಯದು.

ಎನ್ನುತ್ತಾರೆ. ಭರತಖಂಡದ ಈಶ್ವರವಾದಿಗಳು ಈ ವಿಶ್ವದ ಸೃಷ್ಟಿಯೂ ಪ್ರಲಯವೂ ಈಶ್ವರನ ನಿಶ್ವಾಸೋಚ್ಛ್ವಾಸಗಳಂತಿರುವವೆಂದು ಹೇಳುತ್ತಾರೆ ; ಈಶ್ವರನು ಈ ವಿಶ್ವವನ್ನು ನಿಶ್ವಾಸದಿಂದ ಹೊರಗೆಡುವುತ್ತಾನೆ, ಮತ್ತೆ ಅದು ಅವನಲ್ಲಿಯೇ ಅಡಗುತ್ತದೆ. ವಿಶ್ವವು ಲಯವಾಗುವಾಗ ಅದೇನಾಗುವದು ? ಅದು ಸೂಕ್ಷ್ಮಾವಸ್ಥೆಯಲ್ಲಿರುವದು, ಸಾಂಖ್ಯರು ಹೇಳುವ ಕಾರಣಾವಸ್ಥೆಯಲ್ಲಿದ್ದುಕೊಂಡಿರುವದು. ಅದರಲ್ಲಿ ದೇಶಕಾಲನಿಮಿತ್ತಗಳು ಹೋಗಿಬಿಡುವದಿಲ್ಲ; ಅವು ಅದರಲ್ಲದ್ದೇ ಇರುವವು, ಆದರೆ ಅವು ಬಹು ಸೂಕ್ಷ್ಮವಾದ ಅವ್ಯಕ್ತರೂಪವನ್ನು ಹೊಂದಿರುತ್ತವೆ. ಅಷ್ಟೆ. ಈ ಇಡಿಯ ವಿಶ್ವವೇ ಸಂಕುಚಿತವಾಗಿ ನಾವು ಒಬ್ಬೊಬ್ಬರೂ ಒಂದು ಅಣುವಾಗುತ್ತೇವೆಂದು ಇಟ್ಟುಕೊಳ್ಳಿ; ಆಗ ನಮಗೆ ಆದ ಮಾರ್ಪಾಟು ಮನಸ್ಸಿಗೆ ಹತ್ತಲೇ ಆರದು, ಏಕೆಂದರೆ ಆಗ ನಮಗೆ ಸಂಬಂಧಪಟ್ಟಿರುವ ಪ್ರತಿಯೊಂದೂ ನಮ್ಮ ಜೊತೆಯಲ್ಲಿಯೇ ಸಂಕುಚಿತವಾಗುತ್ತಿರುವದು. ಸರ್ವವೂ ಒಳಕ್ಕೆ ಸರಿದುಕೊಂಡು ಮತ್ತೆ ಹೊರಕ್ಕೆ ಬೀಳುತ್ತದೆ, ಕಾರಣವು ಕಾರ್ಯವನ್ನು ಹೊರಗೆಡವುತ್ತದೆ. ಹೀಗೆಯೇ ನಡೆಯುತ್ತಿರುವದು.

ಈಗಿನ ಕಾಲದಲ್ಲಿ ನಾವು ಸ್ಥೂಲವಸ್ತು 'ಮ್ಯಾಟರ್' (matter) ಎಂದು ಕರೆಯುತ್ತಿರುವದನ್ನು ಪುರಾತನ ಮನಃಶಾಸ್ತ್ರಜ್ಞರು **ಭೂತಗಳು** ಎಂದು ಕರೆಯುತ್ತಿದ್ದರು. ಅವರ ಮತದಲ್ಲಿ ಒಂದು ಭೂತವು ನಿತ್ಯವಾಗಿರುವದು, ಮಿಕ್ಕ ಭೂತವೆಲ್ಲವೂ ಇದರಿಂದ ಉಂಟಾಗಿರುವದು. ಇದಕ್ಕೆ **ಆಕಾಶ**ವೆಂದು ಹೆಸರು. * ಇದು ಈಗಿನವರು 'ಈಥರ್' (ether) ಎಂದು ಕರೆಯುವ ವಸ್ತುವಿಗೆ ಸ್ವಲ್ಪ ಮಟ್ಟಿಗೆ ಸರಿಹೋಲುವದು, ಆದರೆ ಸಂಪೂರ್ಣವಾಗಿ ಇವೆರಡೂ ಒಂದೇ ಅಲ್ಲ. ಈ ಭೂತದೊಂದಿಗೆ ಪ್ರಾಣನೆಂಬ ಮೂಲಶಕ್ತಿಯೂ ಇರುವದು. ಪ್ರಾಣವೂ ಆಕಾಶವೂ ಸಂಯೋಗವಾಗುತ್ತಲೂ ಪುನಃ ಸಂಯೋಗವಾಗುತ್ತಲೂ ಹೋಗಿ ಅವುಗಳಿಂದ ಮಿಕ್ಕ ಭೂತಗಳು ಆಗಿರುತ್ತವೆ. ಕೊನೆಗೆ ಕಲ್ಪದ ಅವಸಾನವಾಗುವಾಗ ಪ್ರತಿಯೊಂದೂ ಕೆಳಕ್ಕಿಳಿದು ಆಕಾಶಪ್ರಾಣಗಳಲ್ಲಿ ಲಯವಾಗಿಬಿಡುತ್ತದೆ. ಅತ್ಯಂತ ಪುರಾತನವಾಗಿರುವ ಧರ್ಮಗ್ರಂಥವಾದ **ಋಗ್ವೇದ** ✝ದಲ್ಲಿ ಸೃಷ್ಟಿಯನ್ನು ವರ್ಣಿಸುವ ಸುಂದರವಾದ ಒಂದಾನೊಂದು ಗ್ರಂಥಭಾಗವುಂಟು. ಅದು ಅತ್ಯಂತ ಹೃದಯಂಗಮವಾದ ಕಾವ್ಯದಂತಿರುವದು: "ಸತ್ತಾಗಲಿ ಅಸತ್ತಾಗಲಿ ಇಲ್ಲದಿದ್ದಾಗ, ಕತ್ತಲೆಯ ಮೇಲೆ ಕತ್ತಲೆಯು ಉರುಳಾಡುತ್ತಿದ್ದಾಗ, ಏನಿದ್ದಿತು?" ಇದಕ್ಕೆ ಉತ್ತರವೇನೆಂದರೆ "ಅದು ಅಲುಗಾಡದೆ ಇದ್ದುಕೊಂಡಿತ್ತು". ಆಗ ಈ ಪ್ರಾಣವಿತ್ತು, ಆದರೆ ಅದರಲ್ಲಿ ಚಲನವಿರಲಿಲ್ಲ; **'ಆನೀದವಾತಮ್'** ಎಂದರೆ 'ಅಲುಗಾಡದೆ ಇದ್ದುಕೊಂಡಿತ್ತು' ಎಂದರ್ಥ. ಅಲುಗಾಟವು ಆಗ ನಿಂತುಹೋಗಿತ್ತು; ಆಮೇಲೆ ಎಷ್ಟೋ ಕಾಲದ ಮೇಲೆ ಕಲ್ಪವು ಪ್ರಾರಂಭವಾಗುತ್ತಲೂ 'ಆನೀದವಾತಮ್'? ಆಗಿದ್ದದ್ದು (ಅಲುಗಾಡದೆ ಇದ್ದ ಪರಮಾಣುವು) ಅಲುಗಾಡುವದಕ್ಕೆ ಮೊದಲಾಗುವದು. ಪ್ರಾಣವು ಆಕಾಶಕ್ಕೆ ಮೇಲಿಂದ ಮೇಲೆ ಪೆಟ್ಟನ್ನು ಕೊಡುವದಕ್ಕಾರಂಭಿಸುವದು. ಪರಮಾಣುಗಳು

---

* ಆಕಾಶವು ನಿತ್ಯವೆಂಬುದನ್ನು ವೇದಾಂತಿಗಳು ಒಪ್ಪುವದಿಲ್ಲ.

✝ ಋಗ್ವೇದ ಮಂಡಲ 10, ಸೂಕ್ತ 129.

ಘನೀಭೂತವಾಗುವವು; ಅವು ಘನೀಭೂತವಾದಂತೆ ಬೇರೆಬೇರೆಯ ಭೂತಗಳು ಉಂಟಾಗುವವು.

ಈ ವಿಚಾರಗಳನ್ನು ವಿಚಿತ್ರರೀತಿಯಲ್ಲಿ ಭಾಷಾಂತರೀಕರಿಸುತ್ತಿರುವದೇ ವಾಡಿಕೆಯಾಗಿರುತ್ತದೆ. ಜನರು ಪೂರ್ವದ ತತ್ತ್ವಶಾಸ್ತ್ರಜ್ಞರನ್ನಾಗಲಿ ಭಾಷ್ಯಕಾರರನ್ನಾಗಲಿ ಆಶ್ರಯಿಸುವದಿಲ್ಲ; ಇಂಥ ವಿಚಾರಗಳನ್ನು ತಾವೇ ತಿಳಿದುಕೊಳ್ಳುವಂಥ ಬುದ್ಧಿಶಕ್ತಿಯೂ ಅವರಿಗಿರುವದಿಲ್ಲ. ಸಂಸ್ಕೃತ–ವರ್ಣಮಾಲೆಯಲ್ಲಿ ಮೂರು ಅಕ್ಷರಗಳನ್ನು ಓದಿರುವ ಅವಿವೇಕಿಯು ಕೂಡ ಒಂದು ಇಡಿಯ ಗ್ರಂಥವನ್ನೇ ತರ್ಜುಮೆಮಾಡಿಬಿಡುತ್ತಾನೆ. ಭೂತಗಳನ್ನು ವಾಯು, ಬೆಂಕಿ ಎಂದು ಮುಂತಾಗಿ ಭಾಷಾಂತರೀಕರಿಸಿಬಿಟ್ಟಿರುತ್ತಾರೆ. ವ್ಯಾಖ್ಯಾನಗಳನ್ನು ನೋಡಿದ್ದರೆ ಭೂತವೆಂಬುದು ವಾಯುವೇ ಮುಂತಾದದ್ದೇನೂ ಅಲ್ಲವೆಂದು ತಾನೇ ಕಂಡುಬರುತ್ತಿತ್ತು. ಪ್ರಾಣವು ಮೇಲಿಂದಮೇಲೆ ಪೆಟ್ಟು ಕೊಟ್ಟದ್ದರ ಫಲವಾಗಿ ಆಕಾಶವು ವಾಯುವನ್ನು ಎಂದರೆ ಕಂಪನಗಳನ್ನು ಉಳ್ಳದ್ದಾಗುತ್ತದೆ. ಈ ವಾಯು ಮತ್ತೆ ಅಲುಗಾಡುತ್ತಾ, ಅಲುಗಾಟಗಳು ಹೆಚ್ಚು ಹೆಚ್ಚು ವೇಗವಾಗಿ ಘರ್ಷಣದಿಂದ ತೇಜಸ್ಸೆಂಬ ಔಷ್ಣ್ಯವನ್ನುಂಟಾಗುವದು. ಈ ಔಷ್ಣ್ಯದಿಂದ ದ್ರವತ್ವವುಂಟಾಗುತ್ತದೆ, ಇದಕ್ಕೆ ಆಪಃ– ಎಂದು ಹೆಸರು. ಆಮೇಲ ಈ ದ್ರವವು ಘನವಾಗುತ್ತದೆ. ಹೀಗೆ ಆಕಾಶವಾಯುಗಳಾಗುತ್ತಲೂ, ತೇಜಸ್ಸುಂಟಾಯಿತು, ಆಮೇಲೆ ದ್ರವವಾದ ಆಪಃ ಆಗಿ ಗಟ್ಟಿಯಾಗಿ ಸ್ಥೂಲವಾಗಿರುವ ಪೃಥ್ವಿಯಾಗುತ್ತದೆ ಮತ್ತು ಇದರಂತೆಯೇ ಹಿಂದುಹಿಂದಕ್ಕೆ ಇವು ಸರಿದುಕೊಳ್ಳುತ್ತವೆ ಎಂದು ಘನವಸ್ತುವು ದ್ರವವಾಗಿ ಆಮೇಲೆ ಎಲ್ಲವೂ ತೇಜೋರಾಶಿಯಾಗಿ ಅದೆಲ್ಲವೂ ಕಂಪಿಸುತ್ತಿರುವ ವಾಯುವಾಗಿ ಈ ವಾಯುವಿನ ಕಂಪನವೂ ನಿಂತುಹೋಗಲು ಈ ಕಲ್ಪವು ಅವಸಾನವಾಗುತ್ತದೆ. ಮತ್ತೂ ಸೃಷ್ಟಿಯಾಗಿ ಮತ್ತೊಮ್ಮೆ ಪ್ರಲಯವಾಗಿ ಆಕಾಶವಾಗುತ್ತದೆ.

ಆಕಾಶದ ಸಹಾಯವಿಲ್ಲದೆ ಪ್ರಾಣವೊಂದೇ ಕೆಲಸಮಾಡಲಾರದು. ಚಲನೆಯ, ಕಂಪನದ ಅಥವಾ ಆಲೋಚನೆಯ ರೂಪದಲ್ಲಿ ನಮಗೆ ತಿಳಿದುಬರುವದೆಲ್ಲ ಪ್ರಾಣದ ರೂಪಾಂತರವೇ; ಭೂತವಸ್ತುವಿನ ರೂಪದಲ್ಲಿ ಕಂಡುಬರುವದೆಲ್ಲ, ರೂಪವೇ ಆಗಲಿ ಪ್ರತಿಘಾತದ ರೂಪವೇ ಆಗಲಿ– ಅದೆಲ್ಲ, ಆಕಾಶದ ರೂಪಾಂತರವೇ. ಪ್ರಾಣವು ತಾನೊಂದೇ ಬದುಕಿರಲಾರದು, ಯಾವದಾದರೊಂದು ದ್ವಾರವಸ್ತುವಿಲ್ಲದೆ ಕೆಲಸವನ್ನೂ ಮಾಡಲಾರದು. ಅದು ಬರಿಯ ಪ್ರಾಣವಾಗಿರುವಾಗ ಅದು ಆಕಾಶದಲ್ಲಿಯೇ ಇದ್ದುಕೊಂಡಿರುವದು. ಅದು ಆಕರ್ಷಣಶಕ್ತಿ, ಕೇಂದ್ರೋತ್ಸಾರಿಶಕ್ತಿ– ಮುಂತಾದ ಯಾವದಾದರೊಂದು ಪ್ರಕೃತಿಯ ಶಕ್ತಿಯ ರೂಪವನ್ನು ಕೈಕೊಂಡಿರುವಾಗ ಅದಕ್ಕೆ ಭೂತವಸ್ತುವು ಬೇಕಾಗುವದು. ವಸ್ತುವಿಲ್ಲದೆ ಶಕ್ತಿಯನ್ನಾಗಲಿ ಶಕ್ತಿಯಿಲ್ಲದ ವಸ್ತುವನ್ನಾಗಲಿ ಎಂದೂ ಕಂಡದ್ದೇ ಇಲ್ಲ. ಶಕ್ತಿಯೊಂದೂ ವಸ್ತುವೆಂದೂ ನಾವು ಕರೆಯುತ್ತಿರುವ ಪದಾರ್ಥಗಳು ಸೂಕ್ಷ್ಮಸ್ಥಿತಿಯಲ್ಲಿ ಪ್ರಾಣವೆಂದೂ ಆಕಾಶವೆಂದೂ ಎನ್ನಿಸಿಕೊಳ್ಳುವ ಪದಾರ್ಥಗಳ ಸ್ಥೂಲಾಕಾರಗಳೇ ಹೊರತು ಬೇರೆಯಲ್ಲ. ಈ ಪ್ರಾಣವನ್ನು ಇಂಗ್ಲೀಷಿನಲ್ಲಿ "ಲೈಫ್" (Life) ವೈಟಲ್ ಫೋರ್ಸ್ (Vital force) ಎಂತ ಕರೆಯಬಹುದು ; ಆದರೆ ಈ ಶಬ್ದವನ್ನು ಕೇವಲ ಮನುಷ್ಯನ ಪ್ರಾಣಕ್ಕೆ ಮಾತ್ರ ನಿಲ್ಲಿಸಬಾರದು, ಇದನ್ನು ಆತ್ಮನೆಂದೂ ಭಾವಿಸಬಾರದು. ಅಂತೂ ಈ ಸೃಷ್ಟಿಯೆಂಬುದು ಪ್ರಾಣಾಕಾಶಗಳ

ಸಂಯೋಗದಿಂದಾಗಿರುವದು. *ಇದಕ್ಕೆ ಮೊದಲಿಲ್ಲ ಕೊನೆಯೂ ಇಲ್ಲ; ಇದು ಒಂದೇ ಸಮನೆ ನಡೆಯುತ್ತಲೇ ಇರುವದು.

ಈ ಪ್ರಾಚೀನಮನಶ್ಶಾಸ್ತ್ರಜ್ಞರ ಮತ್ತೊಂದು ಅಭಿಪ್ರಾಯವನ್ನು ಈಗ ವಿಚಾರಿಸೋಣ. ಸ್ಥೂಲವಸ್ತುಗಳೆಲ್ಲ ಸೂಕ್ಷ್ಮವಸ್ತುಗಳಿಂದಾಗಿವೆಯೆಂಬುದೇ ಆ ಅಭಿಪ್ರಾಯ. ಯಾವಯಾವದು ಸ್ಥೂಲರೂಪದಲ್ಲಿರುವದೋ ಅದರಲ್ಲೆಲ್ಲ ತನ್ಮಾತ್ರೆ (ಸೂಕ್ಷ್ಮಾಣು)ಗಳೆಂಬ ಸೂಕ್ಷ್ಮಪದಾರ್ಥಗಳಿರುವವು. ಯಾವದಾದರೂ ಒಂದು ಹೂವಿನ ವಾಸನೆ ಬರುತ್ತದೆಯೆಂದಿಟ್ಟುಕೊಳ್ಳೋಣ. ಆಗ ನಮ್ಮ ಮೂಗಿಗೂ ಯಾವದೋ ಒಂದು ಪದಾರ್ಥಕ್ಕೂ ಸಂಬಂಧವಾಗಿರಬೇಕು. ಹೂವೇನೋ ಎದುರಿಗಿರುತ್ತದೆ, ಆದರೆ ಅದು ನಮ್ಮ ಕಡೆಗೆ ಬರುತ್ತಿರುವಂತೆ ಕಾಣಿಸುತ್ತಿರುವದಿಲ್ಲ. ಹೂವಿನಿಂದ ಬಂದು ನಮ್ಮ ಮೂಗಿಗೆ ಬಡಿಯುವದೇ ತನ್ಮಾತ್ರೆಯು, ಎಂದರೆ ಆ ಹೂವಿನ ಸೂಕ್ಷ್ಮಾಣುಗಳು. ಇದರಂತೆಯೇ ಬಿಸಿ, ಬೆಳಕು ಮುಂತಾದವುಗಳ ವಿಷಯದಲ್ಲಿಯೂ ಊಹಿಸಿ ತಿಳಿದುಕೊಳ್ಳಬೇಕು. ಈ ತನ್ಮಾತ್ರೆಗಳು ಮತ್ತೂ ಸೂಕ್ಷ್ಮವಾದ ಪರಮಾಣುಗಳಾಗಿ ವಿಭಾಗವಾಗಿರುವವು. ಬೇರೆಬೇರೆ ದರ್ಶನಕಾರರು ಈ ವಿಷಯದಲ್ಲಿ ಬೇರೆಬೇರೆ ಕಲ್ಪನೆಗಳನ್ನು ಇಟ್ಟುಕೊಂಡಿರುತ್ತಾರೆ ; ಇವುಗಳೆಲ್ಲ ಕಲ್ಪನೆಗಳೇ ಎಂಬುದು ಗೊತ್ತೇ ಇದೆ. ಸ್ಥೂಲವಾಗಿರುವದೆಲ್ಲ ಅತ್ಯಂತ ಸೂಕ್ಷ್ಮವಾಗಿರುವ ಭಾಗಗಳಿಂದ ಆಗಿರುವದೆಂದು ತಿಳಿದುಕೊಂಡರೆ ಸದ್ಯಕ್ಕೆ ಸಾಕಾಗಿರುತ್ತದೆ. ನಾವು ಹೊರಗೆ ಅನುಭವಿಸುವದೇ ಸ್ಥೂಲಭೂತಗಳು ; ಮೂಗು, ಕಣ್ಣು, ಕಿವಿ– ಇವುಗಳನ್ನು ಮುಟ್ಟುವದೇ ಸೂಕ್ಷ್ಮಭೂತಗಳು. ✝ಆಕಾಶದ ಅಲೆಗಳು ನನ್ನ ಕಣ್ಣುಗಳಿಗೆ ಬಡಿಯುತ್ತವೆ ; ಅವುಗಳನ್ನು ನೋಡುವದಾಗುವದಿಲ್ಲ, ಆದರೂ ಬೆಳಕು ಕಾಣಿಸಬೇಕಾದರೆ ಅವು ಕಣ್ಣಿಗೆ ತಗಲಿಯೇತೀರಬೇಕೆಂಬುದು ನಮಗೆ ಗೊತ್ತಾಗಿರುವದು.

ಇಗೋ ಇಲ್ಲಿ ಕಣ್ಣುಗಳಿವೆ, ಆದರೆ ಈ ಕಣ್ಣುಗಳೇ ನೋಡುವದಿಲ್ಲ. ಮೆದುಳಿನಲ್ಲಿರುವ ಇಂದ್ರಿಯಸ್ಥಾನವನ್ನು ತೆಗೆದುಹಾಕಿಬಿಟ್ಟರೆ, ಆಗಲೂ ಕಣ್ಣುಗಳು ಅಲ್ಲಿಯೇ ಇರುತ್ತವೆ. ಹೊರಗಿನ ಪ್ರಪಂಚದ ಚಿತ್ರವೂ ಕಣ್ಣಿನ ಪರೆಗನ್ನಡಿಯ ಮೇಲೆ ಬಿದ್ದೇ ಇರುತ್ತದೆ ; ಆದರೂ ಕಣ್ಣು ಕಾಣಿಸುವದಿಲ್ಲ. ಆದ್ದರಿಂದ ಕಣ್ಣೆಂಬುದು ಸಹಕಾರಿಯಾದ ಸಾಧನಸಾಮಗ್ರಿಯೇ (ಗೋಳಕವೇ) ಹೊರತು ದೃಷ್ಟಿಯ ಕರಣವಲ್ಲವೆಂದಾಯಿತು. ಇದರಂತೆ ಮೂಗೆಂಬುದೂ ಒಂದು ಗೋಳಕವು, ಅದಕ್ಕೆ ಆಧಾರವಾಗಿ ಮತ್ತೊಂದು ಕರಣವಿರುತ್ತದೆ. ಕಣ್ಣು ಮುಂತಾದವು ಹೊರಗಿನ ಸಾಧನಗಳು (ಬರಿಯ

---

* ಇಲ್ಲಿ ಸ್ವಾಮಿಗಳವರು ಮಾಡಿರುವ ಸೃಷ್ಟಿಯ ಪ್ರಕ್ರಿಯೆಯ ರಚನೆಗೆ ಆಧಾರವೇನೆಂಬುದು ತಿಳಿಯಲಿಲ್ಲ. ರಾಜಯೋಗದಲ್ಲಿಯೂ ಇದೇ ಬಗೆಯ ವರ್ಣನೆಯಿದೆ.

✝ ತನ್ಮಾತ್ರೆಗಳು ಅಥವಾ ಸೂಕ್ಷ್ಮಭೂತಗಳು ಸ್ಥೂಲಭೂತಗಳಿಗೆ ಕಾರಣವೆಂಬುದು ಸಾಂಖ್ಯಪ್ರಕ್ರಿಯೆ: ಶಬ್ದತನ್ಮಾತ್ರೆಯಿಂದ ಆಕಾಶವುಂಟಾಗುತ್ತದೆ, ಸ್ಪರ್ಶತನ್ಮಾತ್ರೆಯಿಂದ ವಾಯು– ಇತ್ಯಾದಿ. ನಿಜವಾಗಿ ಸೂಕ್ಷ್ಮಭೂತಗಳು ಇಂದ್ರಿಯಗೋಚರವೂ ಅಲ್ಲ. ಸಾಂಖ್ಯಕಾರಿಕೆಗೆ ಗೌಡಪಾದರವರು ಬರೆದಿರುವ ವ್ಯಾಖ್ಯಾನವನ್ನು ನೋಡಿ.

ಗೋಳಕಗಳು); ಅವುಗಳಲ್ಲಿರುವ ಕರಣಗಳೇ ನಿಜವಾಗಿ ಆಯಾ ಪ್ರತ್ಯಕ್ಷಜ್ಞಾನವುಂಟಾಗುವ ಸ್ಥಾನಗಳು, ಸಂಸ್ಕೃತದಲ್ಲಿ ಈ ಕರಣಗಳನ್ನು ಇಂದ್ರಿಯಗಳು ಎನ್ನುತ್ತಾರೆ.

ವಿಷಯಪ್ರತ್ಯಕ್ಷವಾಗಬೇಕಾದರೆ ಮನಸ್ಸಿಗೂ ಇಂದ್ರಿಯಕ್ಕೂ ಸಂಯೋಗವಾಗ– ಬೇಕು. ನಾವು ಯಾವದಾದರೊಂದು ವಿಷಯದ ಆಲೋಚನೆಯಲ್ಲಿ ಮುಳುಗಿರುವಾಗ ಗಡಿಯಾರವು ಘಂಟೆಹೊಡೆದರೂ ನಮಗೆ ಕೇಳಿಸುವದಿಲ್ಲವಲ್ಲವೆ, ಇದೇಕೆ? ಆಗ ಕಿವಿಯೂ ಇತ್ತು, ಅದರ ಮೂಲಕ ಶಬ್ದವು ಮೆದುಳಿಗೂ ಹೋಯಿತು. ಆದರೂ ಅದು ಕೇಳಬರಲಿಲ್ಲ. ಕಾರಣವೇನೆಂದರೆ ಮನಸ್ಸಿಗೂ ಶ್ರೋತ್ರೇಂದ್ರಿಯಕ್ಕೂ ಆಗ ಸಂಯೋಗವಾಗಲಿಲ್ಲ.

ಈ ಒಂದೊಂದು ಹೊರಗಿನ ಸಾಧನಕ್ಕೂ ಒಂದೊಂದು ಬೇರೆಬೇರೆ ಇಂದ್ರಿಯವಿರುವದು. ಒಂದೇ ಇಂದ್ರಿಯವು ಇವುಗಳೆಲ್ಲದರಲ್ಲಿಯೂ ಇದ್ದರೆ ಅದಕ್ಕೂ ಮನಸ್ಸಿಗೂ ಸಂಯೋಗವಾದಾಗ ಎಲ್ಲಾ ಗೋಳಕಗಳೂ ತಮ್ಮ ತಮ್ಮ ಕೆಲಸವನ್ನು ಮಾಡಬೇಕಾಗಿದ್ದಿತು. ಆದರೆ ಹಾಗಿಲ್ಲ. ಇದಕ್ಕೆ ಮೇಲೆ ಹೇಳಿದ ಗಡಿಯಾರದ ದೃಷ್ಟಾಂತವೇ ಸಾಕ್ಷಿ. ಗೋಳಕಗಳಿಗೆಲ್ಲ ಒಂದೇ ಇಂದ್ರಿಯವಿದ್ದಿದ್ದರೆ ಮನಸ್ಸಿಗೆ ಏಕಕಾಲದಲ್ಲಿ ನೋಡುವದು, ಕೇಳುವದು, ಮೂಸುವದು– ಇದೆಲ್ಲವನ್ನೂ ಮಾಡುವದಕ್ಕೆ ಸಾಧ್ಯವಾಗಬಹುದಾಗಿದ್ದಿತು; ಈ ಕಾರ್ಯಗಳೆಲ್ಲವನ್ನೂ ಏಕಕಾಲದಲ್ಲಿ ಮಾಡದೆ ಇರುವದು ಅದಕ್ಕೆ ಅಸಾಧ್ಯವಾಗಿಬಿಡುತ್ತಿತ್ತು. ಆದ್ದರಿಂದ ಒಂದೊಂದು ಗೋಳಕಕ್ಕೂ ಒಂದೊಂದು ಬೇರೆಬೇರೆ ಇಂದ್ರಿಯವು ಇರಬೇಕೆಂಬುದು ಅಗತ್ಯವಾಯಿತು. ಇದಕ್ಕೆ ಆಧುನಿಕಮನಃಶಾಸ್ತ್ರದ ಬೆಂಬಲವೂ ಇರುತ್ತದೆ. ಏಕಕಾಲಕ್ಕೇ ನಾವು ನೋಡುತ್ತಲೂ ಕೇಳುತ್ತಲೂ ಇರಬಹುದೆಂಬುದೇನೋ ನಿಜ, ಆದರೆ ಮನಸ್ಸು ಎರಡು ಇಂದ್ರಿಯಗಳಿಗೂ ಸ್ವಲ್ಪಸ್ವಲ್ಪ ಸಂಯುಕ್ತವಾಗಿರುವದೇ ಇದಕ್ಕೆ ಕಾರಣ.

ಇಂದ್ರಿಯಗಳು ಏತರಿಂದ ಆಗಿರುತ್ತವೆ ? ಕಣ್ಣು, ಮೂಗು, ಕಿವಿ– ಈ ಗೋಳಕಗಳೂ ಸ್ಥೂಲಭೂತಗಳಿಂದ ಆಗಿರುತ್ತವೆಯೆಂಬುದು ಗೊತ್ತೇ ಇದೆ. ಇಂದ್ರಿಯಗಳೂ ಭೂತಗಳಿಂದಲೇ ಆಗಿರುತ್ತದೆ. ಈ ಶರೀರವು ಸ್ಥೂಲಭೂತಗಳಿಂದಾಗಿದ್ದು, ಪ್ರಾಣವನ್ನು ಸ್ಥೂಲಶಕ್ತಿಗಳಾಗಿ ಏರ್ಪಡಿಸುತ್ತಿರುವಂತೆ ಇಂದ್ರಿಯಗಳು ಆಕಾಶ, ವಾಯು, ತೇಜಸ್ಸು– ಮುಂತಾದ ಸೂಕ್ಷ್ಮಭೂತ–ಗಳಿಂದಾಗಿರುತ್ತವೆ, ಅವು ಪ್ರಾಣವನ್ನು ಜ್ಞಾನಕ್ಕೆ ಬೇಕಾದ ಸೂಕ್ಷ್ಮಶಕ್ತಿಗಳಾಗಿ ಏರ್ಪಡಿಸುತ್ತವೆ. ಇಂದ್ರಿಯಗಳು, ಪ್ರಾಣವ್ಯಾಪಾರಗಳು, ಮನಸ್ಸು, ಬುದ್ಧಿ– ಇವುಗಳೆಲ್ಲವೂ ಮನುಷ್ಯನ **ಲಿಂಗಶರೀರ** ಅಥವಾ **ಸೂಕ್ಷ್ಮಶರೀರ**ವಾಗಿರುವವು. ಲಿಂಗಶರೀರಕ್ಕೆ ನಿಜವಾದ ಆಕಾರವಿದೆ, ಏಕೆಂದರೆ ಭೌತಿಕವಸ್ತುವಿಗೆ ಆಕಾರವಿರಲೇಬೇಕು.

ಇಂದ್ರಿಯಗಳ ಹಿಂದೆ ಮನಸ್ಸಿರುತ್ತದೆ. ಮನಸ್ಸೆಂಬುದು ವೃತ್ತಿಸಹಿತವಾದ ಚಿತ್ತವು, ಎಂದರೆ ಚಲನಾತ್ಮಕವಾಗಿ ನಿಲುಗಡೆಗೆ ಬರದೆ ಇರುವ **ಚಿತ್ತ**ವು. ಕೆರೆಯೊಳಕ್ಕೆ ಒಂದು ಕಲ್ಲನ್ನು ಎಸೆದರೆ ಮೊದಲು ಚಲನೆಯಾಗುವದು. ಆಮೇಲೆ ಪ್ರತಿಕ್ರಿಯೆಯುಂಟಾಗುವದು. ಸ್ವಲ್ಪ ಹೊತ್ತು ನೀರು ಅಲುಗಾಡುತ್ತದೆ, ಆಮೇಲೆ ಅದು ಕಲ್ಲಿನ ಮೇಲೆ ಪ್ರತಿಕ್ರಿಯೆಯನ್ನುಂಟುಮಾಡುತ್ತದೆ. ಇದರಂತೆಯೇ

ಚಿತ್ತಕ್ಕೆ ಯಾವದಾದರೊಂದು ವಿಕಲ್ಪವು ತಗಲಿದ ಕೂಡಲೆ ಅದು ಮೊದಲು ಒಂದಿಷ್ಟು ಅಲುಗಾಡುತ್ತದೆ. ಇದೇ **ಮನಸ್ಸೆ**ನಿಸುವದು. ಮನಸ್ಸು ಈ ವಿಕಲ್ಪವನ್ನು ಮುಂದೆ ಸಾಗಿಸಿ ನಿಶ್ಚಯುವಮಾಡುವ ವೃತ್ತಿಂಬಾದ **ಬುದ್ಧಿ**ಗೆ ಅದನ್ನು ಒಪ್ಪಿಸುತ್ತದೆ, ಆಗ ಅದು ಪ್ರತಿಕ್ರಿಯೆಯನ್ನುಂಟುಮಾಡುತ್ತದೆ. ಬುದ್ಧಿಯ ಹಿಂದೆ **ಅಹಂಕಾರ**ವು, 'ನಾನು' ಎಂಬ ಅಭಿಮಾನಾತ್ಮಕವೃತ್ತಿಯು ಇರುತ್ತದೆ. ಅಹಂಕಾರದ ಹಿಂದೆ **ಮಹತ್ತು*** ಎಂಬ ಪ್ರಕೃತಿಯ ಪರಮೋತ್ಕೃಷ್ಟರೂಪವಿರುತ್ತದೆ. ಇವುಗಳಲ್ಲಿ ಪ್ರತಿಯೊಂದೂ ತನ್ನತನ್ನ ಮುಂದಿನ ತತ್ತ್ವದ ಕಾರ್ಯವಾಗಿರುತ್ತದೆ. ಕೆರೆಯಲ್ಲಿ ಬರುವ ಒಂದೊಂದು ಪೆಟ್ಟೂ ಹೊರಗಿನಿಂದ ಬರುತ್ತದೆ ; ಆದರೆ ಮನಸ್ಸಿನ ವಿಷಯದಲ್ಲಿ ಮಾತ್ರ ಹಾಗಲ್ಲ, ಈ ಪೆಟ್ಟು ಹೊರಗಿನಿಂದಲೂ ಬರಬಹುದು, ಒಳಗಿನಿಂದಲೂ ಬರಬಹುದು. ಈ ಮಹತ್ತಿನ ಹಿಂದೆ ಮನುಷ್ಯನು ಆತ್ಮನು, **ಪುರುಷನು** ಇರುತ್ತಾನೆ. ಇವನು ಶುದ್ಧನೂ ಪರಿಪೂರ್ಣನೂ ಆಗಿರುತ್ತಾನೆ ; ಇವನೇ ದ್ರಷ್ಟೃ, ಇವನಿಗಾಗಿಯೇ ಈ ವಿಕಾರಗಳೆಲ್ಲ ಆಗುತ್ತಿರುವವು.

ಪುರುಷನು ಈ ವಿಕಾರಗಳನ್ನೆಲ್ಲ ನೋಡುತ್ತಿರುವನು. ಅವನು ಎಂದಿಗೂ ಅಶುದ್ಧನಾಗುವದೇ ಇಲ್ಲ ; ವೇದಾಂತಿಗಳು **ಅಧ್ಯಾಸ**ವೆಂದು ಕರೆಯುತ್ತಿರುವ ಮಾರುಹೊಳಪಿನಿಂದ ಅವನು ಅಶುದ್ಧನಾಗಿರುವಂತೆ ತೋರುತ್ತಾನೆ. ಒಂದು ಕೆಂಪುಹೂವನ್ನೋ ನೀಲಿಯ ಹೂವನ್ನೋ ಹತ್ತಿರ ತಂದಿಟ್ಟರೆ ಒಂದು ಸ್ಫಟಿಕವು ಹೇಗೆ ತೋರುವದೋ ಅದರಂತೆಯೇ ಇಲ್ಲಿಯೂ ತಿಳಿಯಬೇಕು. ಹೂವಿನ ಬಣ್ಣವು ಸ್ಫಟಿಕದಲ್ಲಿ ಮಾರುಹೊಳೆಯುವದಾದರೂ ಸ್ಫಟಿಕವು ಶುದ್ಧವಾಗಿಯೇ ಇರುತ್ತದೆಯಲ್ಲವೆ ? ಇಂಥ ಪುರುಷರು ಅನೇಕರಿರುವರೆಂದೂ ಪ್ರತಿಯೊಬ್ಬ ಪುರುಷನೂ ಶುದ್ಧನೂ ಪರಿಪೂರ್ಣನೂ ಆಗಿರುವನೆಂದೂ ನಾವು ಇಲ್ಲಿ ಇಟ್ಟುಕೊಳ್ಳೋಣ. ಬಗೆಬಗೆಯ ಸ್ಥೂಲವಾದ ಮತ್ತು ಸೂಕ್ಷ್ಮವಾದ ಭೌತಿಕತತ್ತ್ವಗಳ ಸಂಬಂಧದಿಂದ ಪುರುಷನು ಬಹು ಬಣ್ಣಗಳಿಂದೊಡಗೂಡಿರುವಂತೆ ಆಗಿರುತ್ತದೆ.

ಪ್ರಕೃತಿಯು ಇದೆಲ್ಲವನ್ನೂ ಏಕೆ ಮಾಡುತ್ತಿರುವದು ? ಪುರುಷವಿಕಾಸಕ್ಕಾಗಿಯೇ ಪ್ರಕೃತಿಯು ಈ ಮಾರ್ಪಾಡುಗಳನ್ನೆಲ್ಲ ಹೊಂದುತ್ತಿರುವದು. ಈ ಸೃಷ್ಟಿಯೆಲ್ಲ ಆಗಿರುವದು ಪುರುಷನಿಗಾಗಿ, ಪುರುಷನು ಮುಕ್ತನಾಗಲೆಂದು. ಪ್ರಪಂಚವೆಂದು ನಾವು ಕರೆಯುತ್ತಿರುವ ಈ ಅದ್ಭುತವಾದ ಗ್ರಂಥವನ್ನು ಮನುಷ್ಯನ ಮುಂದೆ ತೆರೆದಿಟ್ಟಿರುವದೇಕೆಂದರೆ, ಅವನು ಅದನ್ನು ಓದಿ ತಾನು ಸರ್ವಜ್ಞನೂ ಸರ್ವಶಕ್ತನೂ ಆಗಿರುವೆನೆಂದು ಕಂಡುಕೊಳ್ಳಲೆಂಬುದಕ್ಕಾಗಿ.

ಇಲ್ಲಿ ನಿಮಗೆ ನಾನು ಒಂದು ವಿಷಯವನ್ನು ತಿಳಿಯಹೇಳಬೇಕಾಗಿರುತ್ತದೆ ; ನಮ್ಮಲ್ಲಿ ಉತ್ತಮಮನಃಶಾಸ್ತ್ರಜ್ಞರಾಗಿರುವವರಲ್ಲಿ ಕೆಲವರು ನೀವು ನಂಬುವ ಅರ್ಥದಲ್ಲಿ ಈಶ್ವರನ ಅಸ್ತಿತ್ವವನ್ನು

---

*ಇಲ್ಲಿ ಹೇಳಿರುವ ವಿವರಣೆಯು ಸಾಂಖ್ಯರ ಪ್ರಕ್ರಿಯೆಗೆ ಎಷ್ಟರಮಟ್ಟಿಗೆ ಹೊಂದುಗಡೆಯಾಗಿರುವದೆಂಬುದನ್ನು ತಿಳಿಯಲಪೇಕ್ಷಿಸುವವರು 'ತತ್ತ್ವಸಮಾಸ' ವೆಂಬ ಗ್ರಂಥವನ್ನು ಓದಬೇಕು.

ನಂಬುವದಿಲ್ಲ. ನಮ್ಮ ಮನಃಶಾಸ್ತ್ರಸಂಪ್ರದಾಯ ಪ್ರವರ್ತಕನಾದ **ಕಪಿಲ**ನು ಈಶ್ವರನ ಅಸ್ತಿತ್ವವನ್ನು ಖಂಡಿಸಿರುತ್ತಾನೆ. ಆತನ ಅಭಿಪ್ರಾಯದಲ್ಲಿ ಸಗುಣೇಶ್ವರನ ಅವಶ್ಯಕತೆಯೇ ಇಲ್ಲದೆ ಪ್ರಕೃತಿಯೊಂದೇ ಸೃಷ್ಟಿಯನ್ನೆಲ್ಲ ವಿಸ್ತಾರಗೊಳಿಸಬಹುದಾಗಿರುತ್ತದೆ. ಉದ್ದೇಶವಾದ (Design Theory)* ಎನ್ನುತ್ತಾರಲ್ಲ, ಅದನ್ನು ಖಂಡಿಸಿರುತ್ತಾನೆ; ಇದಕ್ಕಿಂತ ಹುಡುಗಾಟಿಕೆಯ ಕಲ್ಪನೆಯನ್ನು ಯಾರೂ ಇದುವರೆಗೆ ಮುಂದಕ್ಕೆ ಹಿಡಿದೇ ಇಲ್ಲವೆಂದು ಆತನ ಅಭಿಪ್ರಾಯ. ಹೀಗಿದ್ದರೂ ಆತನು ಮತ್ತೊಂದು ವಿಲಕ್ಷಣ ರೀತಿಯ ಈಶ್ವರನನ್ನು ಒಪ್ಪಿರುತ್ತಾನೆ. ಅವನು ಹೇಳಿರುವದೇನೆಂದರೆ ನಾವೆಲ್ಲರೂ ಮುಕ್ತರಾಗಬೇಕೆಂದು ಪ್ರಯತ್ನಮಾಡುತ್ತಿದ್ದೇವಷ್ಟೆ ; ನಾವು ಮುಕ್ತರಾದಮೇಲೆ **ಪ್ರಕೃತಿಲಯ**ವನ್ನು ಹೊಂದಬಹುದು, ಮತ್ತು ಮುಂದಿನ ಕಲ್ಪಾದಿಯಲ್ಲಿ ಹೊರಕ್ಕೆ ಬಂದು ಪ್ರಪಂಚದ ಈಶ್ವರನಾಗಲೂಬಹುದು. ಆಗ ನಾವು ಸರ್ವಜ್ಞರೂ ಸರ್ವಶಕ್ತರೂ ಆಗಿರುತ್ತೇವೆ. ಆ ಅರ್ಥದಲ್ಲಿ ನಾವು ಈಶ್ವರರೆನ್ನಬಹುದು. ನೀವೂ, ನಾನೂ, ಅತ್ಯಂತ ಕೀಳುಪ್ರಾಣಿಗಳು ಕೂಡ ಬೇರೆಬೇರೆ ಕಲ್ಪಗಳಲ್ಲಿ ದೇವರಾಗಬಹುದು. ಇಥ "ದೇವರು ಆಯಾ ಕಲ್ಪಕ್ಕೆ ಮಾತ್ರವೇ ಇರುವನು ; ಶಾಶ್ವತನಾಗಿರುವ ಈಶ್ವರನು, ಎಂದರೆ ಎಂದೆಂದಿಗೂ ಸರ್ವಶಕ್ತನಾಗಿ ಪ್ರಪಂಚವನ್ನು ಕಾಪಾಡುವಾತನೆಂಬುದು ಒಪ್ಪತಕ್ಕದ್ದಲ್ಲ. ಇಂಥವನೊಬ್ಬನಿದ್ದರೆ ಒಂದು ಕಷ್ಟ ಬರುತ್ತದೆ: ಅವನು ಬದ್ಧಾತ್ಮನಾಗಿರಬೇಕು, ಇಲ್ಲ ಮುಕ್ತಾತ್ಮನಾಗಿರಬೇಕು. ಸಂಪೂರ್ಣಮುಕ್ತನಾದ ಈಶ್ವರನು ಸೃಷ್ಟಿಮಾಡಲಾರನು, ಏಕೆಂದರೆ ಅವನಿಗೆ ಸೃಷ್ಟಿಮಾಡುವ ಅವಶ್ಯಕತೆಯೇ ಇರುವದಿಲ್ಲ. ಬದ್ಧನಾಗಿದ್ದರೆ ಅವನು ಸೃಷ್ಟಿಮಾಡುವನೆಂಬುದು ಸರಿಯಲ್ಲ, ಏಕೆಂದರೆ ಆ ಶಕ್ತಿಯೇ ಅವನಿಗೆ ಇರುವದಿಲ್ಲ ; ಸೃಷ್ಟಿಮಾಡುವದು ಅವನ ಕೈಯಲ್ಲಿ ಹರಿಯುವ ಹಾಗೇ ಇರುವದಿಲ್ಲ. ಹೀಗೆ ಈ ಎರಡರಲ್ಲಿ ,ಯಾವ ಕಲ್ಪವನ್ನು ತೆಗೆದುಕೊಂಡರೂ ಸರ್ವಜ್ಞನೂ, ಸರ್ವಶಕ್ತನೂ ಆದ ಶಾಶ್ವತೇಶ್ವರನೊಬ್ಬನಿದಾನೆಂಬುದು ಸಿದ್ಧಿಸುವದಿಲ್ಲ. ಆದ್ದರಿಂದ ಶಾಸ್ತ್ರದಲ್ಲಿ ಎಲ್ಲೆಲ್ಲಿ ಈಶ್ವರನೆಂಬ ಮಾತು ಬಂದಿರುವದೋ ಅಲ್ಲೆಲ್ಲ ಮುಕ್ತಿಯನ್ನು ಹೊಂದಿದ ಪರಿಪೂರ್ಣರಾದ ಆತ್ಮರೇ ಆ ಶಾಸ್ತ್ರಕ್ಕೆ ತಾತ್ಪರ್ಯ ಎಂದು ಕಪಿಲನ ಮತವು.

ಕಪಿಲನು ಆತ್ಮರುಗಳ ಏಕತ್ವವನ್ನು ಒಪ್ಪುವದಿಲ್ಲ. ಆತನು ಮಾಡಿರುವ ವಿಚಾರಕ್ರಮವು ಎಲ್ಲಿಯವರೆಗೆ ಹೋಗಿದೆಯೋ ಅಲ್ಲಿಯವರೆಗೂ ಅತ್ಯದ್ಭುತ– ವಾಗಿರುತ್ತದೆ. ಅವನು ಭರತಖಂಡದ ದರ್ಶನಕಾರರಿಗೆಲ್ಲ ಮೂಲಪುರುಷನು. ಬೌದ್ಧಮತವೂ ಮಿಕ್ಕ ದರ್ಶನಗಳೂ ಆತನ ದರ್ಶನದ ಆಧಾರದಿಂದಲೇ ಹುಟ್ಟಿರುತ್ತವೆ.

ಕಪಿಲನ ಪ್ರಕ್ರಿಯೆಯ ಪ್ರಕಾರ ಎಲ್ಲಾ ಜೀವರೂ ತಮ್ಮ ಸ್ವಾತಂತ್ರ್ಯವನ್ನೂ ಅವರ ಸ್ವಭಾವಸಿದ್ಧವಾದ ಹಕ್ಕುಗಳನ್ನೂ ಅಂದರೆ ಸರ್ವಶಕ್ತಿತ್ವವನ್ನೂ ಸರ್ವಜ್ಞತ್ವವನ್ನೂ ಮತ್ತೆ ಪಡೆದುಕೊಳ್ಳಬಹುದಾಗಿರುತ್ತದೆ.

---

*ಸಾಂಖ್ಯಸೂತ್ರ 1–92, 93, 94, 95ರಲ್ಲಿ ಈಶ್ವರವಾದವನ್ನು ಖಂಡಿಸಿದೆ. ಇಂಥಿಂಥ ರಚನೆಯಿದ್ದರೆ ಇಂಥ ಪ್ರಯೋಜನವಾಗುವದು ಎಂಬ ಉದ್ದೇಶದಿಂದಲೋ ಎಂಬಂತೆ ಜಗತ್ತಿನ ರಚನೆಯಾಗಿರುತ್ತವೆ, ಆದ್ದರಿಂದ ಸರ್ವಜ್ಞನಾದ ಒಬ್ಬ ಈಶ್ವರನು ಇದಕ್ಕೆ ಕರ್ತನಾಗಿದ್ದಿರಬೇಕು ಎಂಬುದು 'ಉದ್ದೇಶವಾದವು.' ಸಾಂಖ್ಯಸೂತ್ರಗಳು ನೇರಾಗಿ ಈ ವಾದವನ್ನು ಖಂಡಿಸದಿದ್ದರೂ ಆ ಖಂಡನೆಯಲ್ಲಿ ಇದು ಅಡಗಿದೆ.

ಆದರೆ ಇಲ್ಲಿ ಒಂದು ಪ್ರಶ್ನೆಯೇಳುತ್ತದೆ : ಈ ಬಂಧವು ಏತರಿಂದ ಉಂಟಾಯಿತು? ಕಪಿಲನು ಬಂಧವು ಅನಾದಿಯೆನ್ನುತ್ತಾನೆ. ಆದರೆ ಅದು ಆದಿಯಿಲ್ಲದ್ದಾದರೆ ಅದಕ್ಕೆ ಅಂತವೂ ಇಲ್ಲವಾಗಬೇಕು, ಆಗ ನಮಗೆ ಮುಕ್ತಿಯೇ ಇಲ್ಲವೆಂದಾಗುವದಲ್ಲ ! ಎಂದರೆ ಇದಕ್ಕೆ ಆತನ ಉತ್ತರವೇನೆಂದರೆ ಬಂಧವು ಅನಾದಿಯಾದರೂ ಆತ್ಮನಂತೆ ಅದು ಒಂದೇ ಸ್ವಭಾವವಾಗಿರುವದಲ್ಲ. ಎಂದರೆ, ಬಂಧಕ್ಕೆ ಕಾರಣವಾಗಿರುವ ಪ್ರಕೃತಿಗೆ ಆದಿಯೂ ಇಲ್ಲ, ಅಂತವೂ ಇಲ್ಲ ; ಆದರೂ ಪುರುಷನು ಅನಾದ್ಯನಂತನೆಂಬರ್ಥದಲ್ಲಿ ಅದು ಅನಾದ್ಯನಂತವಲ್ಲ, ಏಕೆಂದರೆ ಪ್ರಕೃತಿಗೆ ಒಂದು ಗೊತ್ತಾದ ವ್ಯಕ್ತಿತ್ವವಿರುವದಿಲ್ಲ. ಅದು ಕ್ಷಣಕ್ಷಣಕ್ಕೂ ಹೊಸದಾಗಿ ನೀರನ್ನು ಸೇರಿಸಿಕೊಳ್ಳುತ್ತಿರುವ ಪ್ರವಾಹದಂತೆ* ಇರುತ್ತದೆ. ಈ ನೀರೆಲ್ಲ ಸೇರಿದರೆ ನದಿಯೆನಿಸುತ್ತದೆಯೇ ಹೊರತು ನದಿಯೆಂಬುದೇನೂ ಒಂದು ಗೊತ್ತಾದ ವಸ್ತುವಲ್ಲ. ಪ್ರಕೃತಿಯಲ್ಲಿರುವ ಒಂದೊಂದು ವಸ್ತುವೂ ಮಾರ್ಪಡುತ್ತಲೇ ಇರುತ್ತದೆ, ಆದರೆ ಪುರುಷನು ಮಾರ್ಪಡುವದೇ ಇಲ್ಲ. ಹೀಗೆ ಪ್ರಕೃತಿಯು ಮಾರ್ಪಡುತ್ತಲೇ ಇರುವದರಿಂದ ಪುರುಷನು ಬಂಧದಿಂದ ಪಾರಾಗಬಹುದಾಗಿರುತ್ತದೆ.

ಜಗತ್ತಿನ ಒಂದಂಶದ ರಚನಾಕ್ರಮದಲ್ಲಿಯೇ ಇಡಿಯ ಜಗತ್ತು ರಚನೆ- ಯಾಗಿರುತ್ತದೆ. ಆದ್ದರಿಂದ ನನಗೆ ಒಂದು ಮನಸ್ಸಿರುವಂತೆಯೇ ಬ್ರಹ್ಮಾಂಡಕ್ಕೂ ಒಂದು ಸಮಷ್ಟಿ ಮನಸ್ಸಿರುತ್ತದೆ. ಪಿಂಡಾಂಡದಂತೆಯೇ ಬ್ರಹ್ಮಾಂಡವೂ ಆಗಿರುತ್ತದೆ. ಅಲ್ಲಿಯೂ ಒಂದು ಸಮಷ್ಟಿಸ್ಥೂಲಶರೀರವಿರುತ್ತದೆ; ಅದರ ಹಿಂದೆ ಒಂದು ಸಮಷ್ಟಿ ಸೂಕ್ಷ್ಮಶರೀರವಿರುತ್ತದೆ ; ಅದರ ಹಿಂದೆ ಸಮಷ್ಟಿಮನಸ್ಸಿರುತ್ತದೆ, ಅದರ ಹಿಂದೆ ಸಮಷ್ಟ್ಯಹಂಕಾರವಿರುತ್ತದೆ, ಅದಕ್ಕೆ ಹಿಂದೆ ಮಹತ್ತಿರುತ್ತದೆ. ಇದೆಲ್ಲ ಪ್ರಕೃತಿಯೇ, ಪ್ರಕೃತಿಯ ರೂಪಾಂತರವೇ ; ಯಾವದೊಂದೂ ಅದಕ್ಕೆ ಹೊರಚ್ಚಲ್ಲ.

ನಮ್ಮ ಸ್ಥೂಲಶರೀರಗಳು ನಮ್ಮ ತಂದೆತಾಯಿಗಳಿಂದ ನಮಗೆ ಉಂಟಾಗುತ್ತವೆ, ನಮ್ಮ ತಿಳಿವಳಿಕೆಯೂ ಅವರಿಂದಲೇ ನಮಗೆ ಬರುತ್ತವೆ. ಕೇವಲ ಆನುವಂಶಿಕವಾದ (heredity)ದಲ್ಲಿ ನಮ್ಮ ಶರೀರವು ಹೇಗೆ ತಂದೆತಾಯಿಗಳ ಶರೀರದ ಅಂಶವಾಗಿರುವದೋ ಅದರಂತೆ ನಮ್ಮ ತಿಳಿವಳಿಕೆಯೂ ಅಹಂಕಾರವೂ ತಂದೆತಾಯಿಗಳ ತಿಳಿವಳಿಕೆಯ ಮತ್ತು ಅಹಂಕಾರದ ಅಂಶವಾಗಿರುತ್ತದೆ. ನಮ್ಮ ತಂದೆತಾಯಿಗಳಿಂದ ನಮಗೆ ಬಂದಿರುವ ಈ ಭಾಗಕ್ಕೆ ಒಟ್ಟು ತಿಳಿವಳಿಕೆಯಲ್ಲಿ ಒಂದು ಭಾಗವನ್ನು ಸೇರಿಸಿಕೊಳ್ಳಬಹುದು. ಹೊರಗೆ ಬೇಕಾದಷ್ಟು ತಿಳಿವಳಿಕೆಯಿರುತ್ತದೆ, ಅದರಿಂದ ನಮಗೆ ಬೇಕಾದಷ್ಟನ್ನು ನಾವು ತೆಗೆದುಕೊಳ್ಳ ಬಹುದಾಗಿರುತ್ತದೆ. ಪ್ರಪಂಚದಲ್ಲಿ ಬುದ್ಧಿಯ ಅನಂತವಾದ ಕೋಷ್ಠಾಗಾರ ವೊಂದಿರುವದು, ಮಾನಸಶಕ್ತಿಯ ಒಂದು ಅನಂತವಾದ ಕೋಷ್ಠಾಗಾರವಿರುವದು. ಅದರಿಂದ ನಮಗೆ ಬೇಕಾದಷ್ಟನ್ನು ನಾವು ತೆಗೆದುಕೊಳ್ಳುತ್ತಿರುವೆವು. ಆದರೆ ಬೀಜವು ಮಾತ್ರ ನಮಗೆ ತಂದೆತಾಯಿಗಳಿಂದಲೇ ಬರುತ್ತದೆ. ಈ

---

*ಪ್ರಕೃತಿಯು ಅಖಂಡಾನಾದಿಯಲ್ಲ, ಪ್ರವಾಹರೂಪವಾಗಿ ಅನಾದಿಯಾಗಿರುವದು- ಎಂಬ ಸಾಂಖ್ಯಸೂತ್ರ 6-13 ರ ಭಾವಾರ್ಥವಿದು.

ನಮ್ಮ ಸಾಂಖ್ಯವಾದದಲ್ಲಿ ಆನುವಂಶಿಕವಾದವೂ ಸೇರಿರುತ್ತದೆ, ಜನ್ಮಾಂತರವಾದವೂ ಸೇರಿರುತ್ತದೆ. ಹೊಸದಾಗಿ ಜನ್ಮವನ್ನು ಪಡೆಯುವ ಜೀವನು ಆನುವಂಶಿಕ ನಿಯಮದಂತೆ ತಂದೆತಾಯಿಗಳಿಂದ ಬೇಕಾದ ವಸ್ತುವನ್ನು ಪಡೆದುಕೊಂಡು ತನಗೆ ಬೇಕಾದ ಶರೀರವನ್ನು ಮಾಡಿಕೊಳ್ಳುತ್ತಾನೆ– ಎಂಬುದೇ ಈ ವಾದದ ಉಪದೇಶವು.

ಯೂರೋಪಿನ ಕೆಲವರು ತತ್ತ್ವಶಾಸ್ತ್ರಜ್ಞರು * 'ಈ ಪ್ರಪಂಚವು ಇರಬೇಕಾದರೆ ನನ್ನ ಸತ್ತೆಯಿಂದಲೇ, ನಾನು ಇಲ್ಲದೆ ಇದ್ದರೆ ಪ್ರಪಂಚವೇ ಇರುವದಿಲ್ಲ' ಎಂದು ಹೇಳಿರುತ್ತಾರೆ. ಇದನ್ನೇ ಕೆಲವು ವೇಳೆಗಳಲ್ಲಿ ಹೀಗೆ ಪ್ರತಿಪಾದಿಸುತ್ತಾರೆ : ಈ ಪ್ರಪಂಚದಲ್ಲಿರುವ ಜನರೆಲ್ಲರೂ ಸತ್ತುಹೋದರೆ, ಮತ್ತು ಆಮೇಲೆ ನೋಡುವದಕ್ಕಾಗಲಿ ತಿಳಿಯುವದಕ್ಕಾಗಲಿ ಶಕ್ತಿಯಿರುವ ಮನುಷ್ಯರೂ ಪ್ರಾಣಿಗಳೂ ಇಲ್ಲದೆಹೋದರೆ, ಈ ದೃಶ್ಯಗಳೆಲ್ಲವೂ ಇಲ್ಲವಾಗಿಬಿಡುತ್ತವೆ. ಹೀಗೆ ಹೇಳುವ ಯೂರೋಪಿನ ತತ್ತ್ವವಾದಿಗಳಿಗೆ ಇದರ ಶಾಸ್ತ್ರೀಯರಹಸ್ಯವೇನೆಂಬುದು ತಿಳಿಯದು, ಅವರಿಗೆ ತತ್ತ್ವವೇನೋ ತಿಳಿದಿರುತ್ತದೆ. ಆಧುನಿಕತತ್ತ್ವಶಾಸ್ತ್ರಕ್ಕೆ ಈ ಪರಮಾರ್ಥದ ಎಲ್ಲಿಯೋ ಒಂದು ಝಳುಕು ಮಾತ್ರ ಹೊಳೆದಿರುತ್ತದೆ. ಸಾಂಖ್ಯದ ದೃಷ್ಟಿಯಿಂದ ನೋಡಿದರೆ ಇದು ಸುಲಭವಾಗಿ ಮನಸ್ಸಿಗೆ ಹಿಡಿಯುತ್ತದೆ. ಸಾಂಖ್ಯದ ಪ್ರತಿಪಾದನೆಯೇನೆಂದರೆ, ಯಾವದೇ ಆಗಲಿ, ನಮ್ಮ ಮನಸ್ಸಿನ ಒಂದು ಭಾಗವು ಸೇರಿದ್ದಲ್ಲದೆ ಇರುವಿಕೆಯನ್ನೇ ಹೊಂದಲಾರದು. ಈ ಮೇಜು ಹೇಗಿದೆಯೋ ಅದು ನನಗೆ ತಿಳಿಯದು. ಅದರಿಂದ ಕಣ್ಣುಗಳಿಗೆ ಒಂದಾನೊಂದು ವಿಕಲ್ಪವು ಬಂದು ಸೇರುವದು, ಅಲ್ಲಿಂದ ಅದು ಚಕ್ಷುರಿಂದ್ರಿಯಕ್ಕೆ ಬರುವದು, ಆಮೇಲೆ ಅಂತಃಕರಣಕ್ಕೆ ಬಂದು ಅಲ್ಲಿ ಒಂದು ಪ್ರತಿಕ್ರಿಯೆಯಾಗುತ್ತದೆ. ಈ ಪ್ರತಿಕ್ರಿಯೆಯನ್ನೇ ನಾನು 'ಮೇಜು' ಎಂದು ಕರೆಯುತ್ತಿರುವದು. ಕೆರೆಯೊಳಕ್ಕೆ ಒಂದು ಕಲ್ಲನ್ನು ಎಸೆಯುವಂತೆಯೇ ಇದು. ಕೆರೆಯು ಕಲ್ಲಿನ ಕಡೆಗೆ ಒಂದು ಅಲೆಯನ್ನು ಕಳುಹಿಸುತ್ತದೆ. ಈ ಅಲೆಯನ್ನೇ ನಾವು ತಿಳಿದುಕೊಳ್ಳುತ್ತಿರುವದು. ಹೊರಗೆ ಏನಿದೆಯೋ ಯಾರಿಗೂ ತಿಳಿಯದು ಅದನ್ನು ತಿಳಿಯಬೇಕೆಂದು ನಾನು ಪ್ರಯತ್ನಿಸಿದರೆ ಅದು ನಾನು ಒದಗಿಸುವ ವಸ್ತುವಾಗಬೇಕು. ನನ್ನ ಅಂತಃಕರಣದಿಂದಲೇ ನಾನು ಕಣ್ಣಿಗೆ ವಿಷಯವನ್ನು ಒದಗಿಸಿಕೊಟ್ಟಿರುತ್ತೇನೆ. ಹೊರಗೆ ಏನೋ ಒಂದು ಇದೆ, ಅದು ನಿಮಿತ್ತಮಾತ್ರ, ಸೂಚನೆ ಮಾತ್ರ ; ಆ ಸೂಚನೆಯ ಮೇಲೆ ನನ್ನ ಮನಸ್ಸನ್ನು ಹಾಕಿದರೆ ಅದು ನಾನು ಕಾಣುತ್ತಿರುವ ರೂಪನ್ನು ಆಗುತ್ತದೆ. ನಾವೆಲ್ಲರೂ ಒಂದೇ ಪದಾರ್ಥವನ್ನು ನೋಡುವೆವೆನ್ನುವದು ಹೇಗೆ ?– ಎಂದರೆ ನಮಗೆಲ್ಲ ಸಮಷ್ಟಿ ಮನಸ್ಸಿನ ಒಂದೇ ಬಗೆಯ ಅಂಗಗಳು ಇರುತ್ತವೆ. ಒಂದೇ ಬಗೆಯ ಮನಸ್ಸಿರುವವರಿಗೆ ಒಂದೇ ಬಗೆಯ ಪದಾರ್ಥಗಳು ಕಾಣಿಸುತ್ತವೆ, ಇಲ್ಲದವರಿಗೆ ಕಾಣಿಸುವದಿಲ್ಲ.

---

*ಈ ಪ್ರಘಟ್ಟದ ಸ್ಥಾನವು ಉದ್ಬೋಧನಕಾರ್ಯಾಲಯದ ಸಂಸ್ಕರಣದಲ್ಲಿ ಬೇರೊಂದು ಕಡೆಯಿದೆ.

# 11

# ಪ್ರಕೃತಿ ಪುರುಷ ವಿವೇಕ

ಸಾಂಖ್ಯರು ಪ್ರಕೃತಿಯನ್ನು ಅವ್ಯಾಕೃತವೆನ್ನುತ್ತಾರೆ ; ತನ್ನಲ್ಲಿರುವ ಗುಣಗಳ ಸಾಮ್ಯಾವಸ್ಥೆಯೇ ಪ್ರಕೃತಿಯು, ಎಂದು ಅವರು ಅದರ ಲಕ್ಷಣವನ್ನು ಹೇಳಿರುತ್ತಾರೆ. ಈ ಅತ್ಯಂತ ಸಾಮ್ಯಾವಸ್ಥೆಯಲ್ಲಿ ಯಾವದೊಂದು ಬಗೆಯ ಚಲನವೂ ಇರಲಾರದೆಂದು ತಾನೇ ಸಿದ್ಧವಾಗುತ್ತದೆ. ಹೊರಗೆ ವ್ಯಕ್ತವಾಗುವದಕ್ಕಿಂತ ಮುನ್ನಿನ ಪ್ರಧಾನಾವಸ್ಥೆಯಲ್ಲಿ ಯಾವದೊಂದು ಬಗೆಯ ಚಲನವೂ ಇರಲಿಲ್ಲ; ಆಗ ಈ ಪ್ರಕೃತಿಯು ನಾಶರಹಿತವಾಗಿತ್ತು, ಏಕೆಂದರೆ ನಾಶವು ಅಥವಾ ಅವಯವ ವಿಶ್ಲೇಷವು ಚಲನೆಯಿಂದಲೇ, ವಿಕಾರದಿಂದಲೇ, ಉಂಟಾಗುತ್ತದೆ.

ಇದಲ್ಲದೆ ಸಾಂಖ್ಯರ ಮತದಲ್ಲಿ ಪರಮಾಣುಗಳು* ಮೂಲಸ್ಥಿತಿಯಲ್ಲ. ಈ ಪ್ರಪಂಚವು ಪರಮಾಣುಗಳಿಂದಾಗಿರುವದಿಲ್ಲ. ಅವುಗಳನ್ನು ಎರಡನೆಯ ಅಥವಾ ಮೂರನೆಯ ಸ್ಥಿತಿಯೆಂದು ಬೇಕಾದರೆ ಕರೆಯಬಹುದು. ಪರಮ ಮೂಲಪ್ರಕೃತಿಯು ಪರಮಾಣುಗಳ ರೂಪವನ್ನು ತೆಗೆದುಕೊಂಡಿರಬಹುದು. ಅವು ಸ್ಥೂಲಸ್ಥೂಲವಾಗುತ್ತಾ ಬಂದಿರಲೂಬಹುದು. ಈಗಿನವರ ಶೋಧನೆಯನ್ನು ನೋಡಿದರೆ ಇದೇ ನಿರ್ಣಯಕ್ಕೇ ಅದು ಬೆಂಬಲವನ್ನು ಕೊಡುವಂತೆ ಕಾಣುತ್ತಿದೆ. ಉದಾಹರಣೆಗೆ ಈಗಿನ ಆಕಾಶವಾದದಲ್ಲಿ† (theory of ether), ಆಕಾಶವು ಪರಮಾಣುರೂಪವಾಗಿದೆಯೆಂದು ಹೇಳಿದರೆ ಯಾವ ತೀರ್ಮಾನಕ್ಕೂ ಬಂದಂತೆ ಆಗುವದಿಲ್ಲ. ಹೇಗೆಂದರೆ, ಗಾಳಿಯು ಪರಮಾಣುಗಳಿಂದಾಗಿದೆಯೆಂದು ಇಟ್ಟುಕೊಳ್ಳಿ; ಆಕಾಶವು ಎಲ್ಲೆಲ್ಲಿಯೂ ಇರುವದೆಂದೂ ಸರ್ವವ್ಯಾಪಕವಾಗಿದೆ ಯೆಂದೂ ಸರ್ವಗತವಾಗಿರುವದೆಂದೂ ಪ್ರಸಿದ್ಧವಾಗಿರುವದರಿಂದ ಈ ಪರಮಾಣುಗಳು ಆಕಾಶದಲ್ಲಿ ತೇಲಾಡುತ್ತಿವೆಯೆಂದು ಹೇಳಿದಂತೆ ಆಗುತ್ತದೆ. ಈ ಆಕಾಶವೂ ಪರಮಾಣುಮಯವಾಗಿದ್ದರೆ ಈ ಆಕಾಶದ ಎರಡೆರಡು ಪರಮಾಣುಗಳ ನಡುವೆ ಇನ್ನೂ ಅವಕಾಶವಿರುವದೆಂದಾಗುವದರಿಂದ ಈ ಅವಕಾಶಗಳನ್ನು ವ್ಯಾಪಿಸಿಕೊಂಡಿರುವದು ಯಾವದು ?– ಎಂಬ ಪ್ರಶ್ನೆ ಹುಟ್ಟುತ್ತದೆ. ಇದಕ್ಕಿಂತಲೂ ಸೂಕ್ಷ್ಮವಾದ ಮತ್ತೊಂದು ಆಕಾಶವಿರುವದೆಂದೂ ಅದು ಇದರ ಭಾಗಗಳನ್ನು ವ್ಯಾಪಿಸಿಕೊಂಡಿರುವದೆಂದೂ ಕಲ್ಪಿಸಿದರೆ ಆ ಅವಕಾಶದ ಪರಮಾಣುಗಳ ನಡುವೆಯೂ ಇದೇ ರೀತಿಯಲ್ಲಿ ಅವಕಾಶಗಳಿವೆಯೆಂದಾಗುವ–

---

*ವೈಶೇಷಿಕರು ಪರಮಾಣುಗಳಿಂದಲೇ ಪ್ರಪಂಚವು ಆಗಿರುವದೆಂದು ಹೇಳುತ್ತಿದ್ದರು.

*ಈಗಿನ ಭೌತಿಕವಿಜ್ಞಾನವು ಆಕಾಶವಾದವನ್ನು ಕೂಡ ಮೀರುತ್ತಾ ಹೋಗಿರುವದೆಂಬುದನ್ನು ಜೇಮ್ಸ್‌ಜೀನ್ಸ್ (James Jean) ರವರ The Mysterious Universe (ಗಹನವಿಶ್ವ) ಎಂಬುದೇ ಮುಂತಾದ ಗ್ರಂಥಗಳಿಂದ ತಿಳಿಯಬಹುದು. ಆಗಲಂತೂ ಪರಮಾಣುವಾದಕ್ಕೆ ಎಡೆಯೇ ಇರುವದಿಲ್ಲ.

ದರಿಂದ ಅವುಗಳನ್ನು ವ್ಯಾಪಿಸುವದಕ್ಕೆ ಮತ್ತೊಂದು ತತ್ತ್ವವನ್ನು ಒಪ್ಪಬೇಕಾಗುವದು, ಆಗ ವಿಚಾರಕ್ಕೆ ಎಲ್ಲೆಲ್ಲೂ ನಿಲುಗಡೆಯಿಲ್ಲವೆಂಬ **ಅನವಸ್ಥಾದೋಷವು** ಬರುತ್ತದೆ- ಎಂದು ಸಾಂಖ್ಯರು ಹೇಳುತ್ತಾರೆ. ಆದ್ದರಿಂದ ಈ ಪರಮಾಣುವಾದವು ಕಡೆಯ ಸಿದ್ಧಾಂತವಾಗಲಾರದು.

ಸಾಂಖ್ಯಸಿದ್ಧಾಂತವೇನೆಂದರೆ ಈ ಪ್ರಕೃತಿಯು ಸರ್ವಗತವಾಗಿರುತ್ತದೆ. ಈ ಸರ್ವಗತವಾದ ಭೌತಿಕಮೂಲರಾಶಿಯಲ್ಲಿ ಲೋಕದಲ್ಲಿರುವದೆಲ್ಲಕ್ಕೂ ಕಾರಣಗಳಿರುತ್ತವೆ. ಕಾರಣವೆಂದರೇನು? ಹೊರತೋರಿಕೊಳ್ಳುವ ಸ್ಥಿತಿಯ ಸೂಕ್ಷ್ಮಸ್ಥಿತಿಯು, ಸಂಕ್ಷಿಪ್ತಸ್ಥಿತಿಯು; ವ್ಯಕ್ತವಾದದ್ದು ಸಣ್ಣಸಣ್ಣದಾಗುತ್ತ- ಹೋಗುತ್ತದೆಯಲ್ಲ, ಆ ಸ್ಥಿತಿಯು. ನಾಶವಾಗುವದೆಂದರೇನು? ಕಾರಣಸ್ಥಿತಿಗೆ ತಿರುಗಿಹೋಗುವದು. ಮಡಕೆಗೆ ಒಂದು ಏಟುಕೊಟ್ಟರೆ ಅದು ನಾಶವಾಗುತ್ತದೆ, ಅಂದರೆ ಕಾರಣಗಳು ತಮ್ಮ ತಮ್ಮ ಸ್ಥಿತಿಗೆ ಹೋಗಿಬಿಡುತ್ತವೆ ; ಮಡಕೆಯು ಯಾವ ವಸ್ತುಗಳಿಂದ ಆಗಿದ್ದಿತೋ ಆ ಮೂಲಸ್ಥಿತಿಗೆ ಹೋಗಿಬಿಡುತ್ತವೆಯೆಂದರ್ಥ. ನಾಶವಾಗುವದೆಂಬುದಕ್ಕೆ ಈವೊಂದರ್ಥವಲ್ಲದೆ, ತಾನೇ ಇಲ್ಲವಾಗುವದು- ಎಂಬ ಭಾವನೆಯು ಉಪಹಾಸ್ಯವಾಗಿರುವದೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಈಗಿನ ಭೌತಿಕವಿಜ್ಞಾನದಂತೆ ನೋಡಿದರೆ ನಾಶವೆಂದರೆ ಕಪಿಲನು ಎಷ್ಟೋ ಪ್ರಾಚೀನಕಾಲದಲ್ಲಿ ಹೇಳಿರುವಂತೆ ಕಾರಣಸ್ಥಿತಿಗೆ ಹೋಗುವದೇ ಹೊರತು ಮತ್ತೇನೂ ಅಲ್ಲವೆಂದು ಸ್ಥಿರಮಾಡಿಕೊಡಬಹುದಾಗಿರುತ್ತದೆ. ನಾಶವಾಗುವದೆಂದರೆ ಸೂಕ್ಷ್ಮಸ್ಥಿತಿಯನ್ನು ಹೊಂದುವದೇ ಹೊರತು ಮತ್ತೇನೂ ಅಲ್ಲ. ಭೂತವಸ್ತುವಿಗೆ ನಾಶವಿಲ್ಲವೆಂಬುದನ್ನು ಶೋಧನಾಲಯ (laboratory) ದಲ್ಲಿ ಹೇಗೆ ಸಿದ್ಧಪಡಿಸುವರೆಂಬುದು ನಿಮಗೆ ತಿಳಿದೇ ಇದೆ. ಈಗಿನ ನಮ್ಮ ವಿಜ್ಞಾನದ ಸ್ಥಿತಿಯಲ್ಲಿ ಯಾವನಾದರೂ ಎದ್ದು ನಿಂತು ಭೌತಿಕವಸ್ತುವಾಗಲಿ ಆತ್ಮನಾಗಲಿ ನಾಶವಾಗುವವೆಂದು ಹೇಳಿದರೆ ಅವನು ನಗೆಗೀಡಾಗುವನು ; ಯಾವ ಶಿಕ್ಷಣವೂ ಇಲ್ಲದ ಅವಿವೇಕಿಗಳು ಮಾತ್ರ ಇಂಥ ಮಾತನ್ನು ಆಡಬಹುದು. ಆ ಪ್ರಾಚೀನತತ್ತ್ವಶಾಸ್ತ್ರಜ್ಞರು ಹೇಳಿದ್ದೂ ಈಗಿನ ತಿಳಿವಳಿಕೆಯೂ ಹೊಂದುಗಡೆ- ಯಾಗಿರುವದು ಆಶ್ಚರ್ಯವೇ ಸರಿ. ಇದು ಹಾಗೆಯೇ ಆಗತಕ್ಕದ್ದು ಯುಕ್ತವು. ಅದೇ ಸಿದ್ಧಾಂತವೆಂಬುದಕ್ಕೆ ಇದೊಂದು ಪ್ರಮಾಣವಾಗಿರುತ್ತವೆ. ಹಿಂದಿನವರು ಮನಸ್ಸನ್ನು ಆಧಾರವಾಗಿಟ್ಟುಕೊಂಡು ವಿಚಾರಮಾಡಿದರು, ಪ್ರಪಂಚದ ಮಾನಸಿಕಭಾಗವನ್ನು ಪರೀಕ್ಷಿಸಿ ನೋಡಿ ಕೆಲವು ತೀರ್ಮಾನಗಳನ್ನು ಮಾಡಿದರು; ಈಗಿನವರು ಭೌತಿಕಭಾಗವನ್ನು ಪರೀಕ್ಷಿಸಿ ನೋಡಿ ಅದೇ ತೀರ್ಪಿಗೆ ಬಂದಿರುತ್ತಾರೆ. ಈ ಎರಡು ಪ್ರಕ್ರಿಯೆಗಳೂ ಒಂದೇ ನೆಲೆಯನ್ನು ಬಂದು ಮುಟ್ಟಿರುತ್ತವೆ.

ಈ ಪ್ರಕೃತಿಯು ಪ್ರಪಂಚದಲ್ಲಿ ತೋರಿಕೊಳ್ಳುವ ಪ್ರಥಮ ವಿಕೃತರೂಪಕ್ಕೆ 'ಮಹತ್ತು' ಎಂಬ ಹೆಸರನ್ನು ಸಾಂಖ್ಯರು ಕೊಟ್ಟಿರುತ್ತಾರೆಂಬುದನ್ನು ನೆನಪಿನಲ್ಲಿಡ- ಬೇಕು. ಅಕ್ಷರಾರ್ಥದ ಕಡೆಗೆ ನೋಡಿದರೆ 'ಸಮಷ್ಟಿಬುದ್ಧಿಯು' 'ದೊಡ್ಡ ತತ್ತ್ವವು' ಎಂದು ಅದನ್ನು ನಾವು ಕರೆಯಬಹುದಾಗಿರುತ್ತದೆ. ಪ್ರಕೃತಿಯ ಮೊದಲನೆಯ ವಿಕಾರವೇ ಈ ಮಹತ್ತೆಂಬ ಬುದ್ಧಿಯು. ಇದನ್ನು ಆತ್ಮವಿಜ್ಞಾನ, ತನ್ನರಿವು (self-consciousness) -ಎಂದು ಭಾಷಾಂತರಿಸುವದು ನನ್ನ ಮನಸ್ಸಿಗೆ ಒಪ್ಪುವದಿಲ್ಲ, ಏಕೆಂದರೆ ಅದು ಸರಿಯಾಗುವದಿಲ್ಲ. ಅರಿವೆಂಬುದು ಈ ಸಮಷ್ಟಿಬುದ್ಧಿಯ ಒಂದಂಶಮಾತ್ರವಾಗಿರುತ್ತದೆ. ಈ ಮಹತ್ತು ಅಧೋವಿಜ್ಞಾನ, ವಿಜ್ಞಾನ, ಅತಿವಿಜ್ಞಾನ- *ಇವೆಲ್ಲಕ್ಕೂ ಆಧಾರವಾ:

ವ್ಯಾಪಿಸಿಕೊಂಡಿರುತ್ತದೆ ; ಆದ್ದರಿಂದ ಈ ಮಹತ್ತನ್ನು ವಿಜ್ಞಾನದ ಯಾವದಾದರೊಂದು ಸ್ಥಿತಿಯೆಂದು ಹೇಳುವದು ಅವ್ಯಾಪಕವಾಗುತ್ತದೆ. ಉದಾಹರಣೆಗೆ ಈ ಬಾಹ್ಯ ಪ್ರಪಂಚದಲ್ಲಿ ಕೆಲವು ಮಾರ್ಪಾಡುಗಳು ನಿಮ್ಮ ಕಣ್ಣೆದುರಿಗೆ ಆಗುತ್ತಿರುತ್ತವೆ, ಅವುಗಳನ್ನು ನೀವು ಕಾಣಲೂಬಹುದು, ತಿಳಿದುಕೊಳ್ಳಲೂಬಹುದು; ಆದರೆ ಮತ್ತೆ ಕೆಲವು ಮಾರ್ಪಾಡುಗಳು ತೀರ ಸೂಕ್ಷ್ಮವಾಗಿರುವದರಿಂದ ಮಾನವಪ್ರತ್ಯಕ್ಷಕ್ಕೇ ಅವು ಗೋಚರವಾಗುವಂತಿರುವದಿಲ್ಲ. ಆದರೂ ಅವೂ ಅದೇ ಕಾರಣದಿಂದಾಗುತ್ತಿರುತ್ತವೆ, ಅದೇ ಮಹತ್ತೇ ಈ ಮಾರ್ಪಾಡುಗಳನ್ನುಂಟುಮಾಡುತ್ತಿರುತ್ತದೆ.

ಮಹತ್ತಿನಿಂದ **ಸಮಷ್ಟ್ಯಹಂಕಾರ**ವು ಉಂಟಾಗುತ್ತದೆ. ಇವೆರಡೂ ದ್ರವ್ಯಾತ್ಮಕ- ವಾಗಿಯೇ ಇರುತ್ತವೆ. ಭೌತಿಕವಸ್ತು, ಮನಸ್ಸು-ಇವೆರಡಕ್ಕೂ ಪರಿಮಾಣದಲ್ಲಿ ತಾರತಮ್ಯವಿರುವದೇ ಹೊರತು ಸ್ವರೂಪದಲ್ಲಿ ಯಾವ ತಾರತಮ್ಯವೂ ಇಲ್ಲ. ಸ್ಥೂಲರೂಪದಲ್ಲಿರಲಿ ಸೂಕ್ಷ್ಮರೂಪದಲ್ಲಿರಲಿ, ದ್ರವ್ಯವು ಒಂದೇ; ಒಂದು ಮತ್ತೊಂದಾಗುತ್ತಲಿರುತ್ತದೆ. ಈಗಿನ ಶರೀರವಿಜ್ಞಾನದ ಶೋಧನೆಗೂ ಇದು ಹೊಂದುಗೆಯಾಗಿದೆ. ಮನಸ್ಸು ಮೆದುಳಿಗಿಂತ ಬೇರೆಯಲ್ಲವೆಂಬುದನ್ನು ✝ ಒಪ್ಪಿದರೆ ಜಗಳವೂ ಹೆಣಗಾಟವೂ ತಪ್ಪಿಹೋಗುತ್ತವೆ.

ಈ ಅಹಂಕಾರವೂ ಎರಡು ರೂಪಗಳಲ್ಲಿ ಪರಿಣಾಮವಾಗುತ್ತದೆ. ಒಂದು ರೂಪದಲ್ಲಿ ಅದು **ಇಂದ್ರಿಯ**ಗಳಾಗುತ್ತದೆ. ಇಂದ್ರಿಯಗಳು ಜ್ಞಾನೇಂದ್ರಿಯಗಳೆಂದೂ ಕರ್ಮೇಂದ್ರಿಯಗಳೆಂದೂ ಎರಡು ಬಗೆ. ಇಂದ್ರಿಯಗಳೆಂದರೆ ಕಣ್ಣು ಕಿವಿಗಳಲ್ಲ, ಅವುಗಳಿಗೂ ಆಧಾರವಾಗಿರುವ ಮೆದುಳಿನ ಸ್ಥಾನಗಳು; 'ನರಮಂಡಲ ಸ್ಥಾನಗಳು' ಎನ್ನುತ್ತಾರಲ್ಲ, ಅವು. ಈ ಅಹಂಕಾರವೆಂಬ ದ್ರವ್ಯವು ಪರಿಣಾಮವಾಗಿ ಅದರಿಂದ ಈ ಸ್ಥಾನಗಳು ಏರ್ಪಡುತ್ತವೆ. ಅದೇ ದ್ರವ್ಯದಿಂದ ಮತ್ತೊಂದು ರೂಪದಲ್ಲಿ **ತನ್ಮಾತ್ರೆ**ಗಳು, ನಮ್ಮ ಪ್ರತ್ಯಕ್ಷದ ಸಾಮಗ್ರಿಗಳಾದ ಇಂದ್ರಿಯಗಳಿಗೆ ತಗಲಿ ಜ್ಞಾನವನ್ನುಂಟುಮಾಡುವ ಸೂಕ್ಷ್ಮವಾದ ಭೂತಾಣುಗಳು, ಉಂಟಾಗುತ್ತವೆ. ಅವುಗಳನ್ನು ಕಾಣುವದಕ್ಕೆ ಆಗುವದಿಲ್ಲ, ಆದರೆ ಅವು ಇಲ್ಲಿವೆ ಎಂದು ಅರಿತುಕೊಳ್ಳುವದಕ್ಕೆ ಮಾತ್ರ ಆಗುತ್ತದೆ.

ಈ ತನ್ಮಾತ್ರೆಗಳಿಂದ **ಭೂತ**ಗಳಾಗುತ್ತವೆ. ಪೃಥ್ವಿ, ಅಪ್ಪು- ಮುಂತಾದವುಗಳೂ ಮತ್ತು ನಾವು ನೋಡುವ ಅನುಭವಿಸುವ ಎಲ್ಲಾ ಪದಾರ್ಥಗಳೂ ಉಂಟಾಗುತ್ತವೆ.

ಇದನ್ನು ನಿಮಗೆ ಚೆನ್ನಾಗಿ ಮನದಟ್ಟುಮಾಡಿಕೊಡಬೇಕೆಂಬುದು ನನ್ನ ಅಭಿಲಾಷೆ. ಇದನ್ನು

---

*ಪ್ರಾಣಿಗಳಲ್ಲಿರುವ ಅರಿವು ಮನುಷ್ಯನ ಅರಿವಿಗಿಂತ ನಾನು, ನೀನು- ಎಂಬ ವಿಭಾಗವುಳ್ಳದ್ದಲ್ಲ, ಪ್ರತ್ಯಯಾತ್ಮಕವೂ ಅಲ್ಲ : ಆದ್ದರಿಂದ ಅದನ್ನು ಅಧೋವಿಜ್ಞಾನ (Sub-consciousne) ಎಂದು ಕರೆಯುವರು. ಯೋಗಿಗಳಲ್ಲಿ ನಮಗಿರುವದಕ್ಕಿಂತ ಹೆಚ್ಚಿನಂತಸ್ತಿನ ಒಂದು ಅರಿವು ಇದೆಯೆಂದೂ ಅದು ತ್ರಿಕಾಲದ ವಸ್ತುಗಳನ್ನೂ ಅರಿಯಬಲ್ಲುದೆಂದೂ ಹೇಳುವರು. ಅದೇ ಅತಿವಿಜ್ಞಾನ (Super-consciousne).

✝'ಮನಸ್ಸು, ಮೆದುಳು- ಎರಡೂ ಭೌತಿಕವೇ : ಮನಸ್ಸು ಸೂಕ್ಷ್ಮ, ಮೆದುಳು ಸ್ಥೂಲ- ಇವಿಷ್ಟೇ ಎರಡಕ್ಕೂ ತಾರತಮ್ಯವೆಂದು ಭಾವ. 'ಅನ್ನಮಯಂ ಹಿ ಸೋಮ್ಯ ಮನಃ' ಎಂದು ಮುಂತಾಗಿರುವ ಉಪನಿಷದ್ವಾಕ್ಯವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು.

ತಿಳಿದುಕೊಳ್ಳುವದು ಬಲುಕಷ್ಟವು; ಏಕೆಂದರೆ ಪಶ್ಚಿಮ ದೇಶಗಳಲ್ಲಿ ಮನಸ್ಸು, ಭೌತಿಕವಸ್ತು– ಇವುಗಳ ವಿಷಯಕ್ಕೆ ಬಹು ವಿಚಿತ್ರವಾದ ಭಾವನೆಗಳಿರುತ್ತವೆ. ಈ ವಾಸನೆಗಳನ್ನು ಮನಸ್ಸಿನಿಂದಾಚೆಗೆ ಕಳುಹಿಸುವದೂ ಬಲುಕಷ್ಟ. ಚಿಕ್ಕಂದಿನಲ್ಲಿಯೇ ಪಾಶ್ಚಾತ್ಯತತ್ತ್ವವಿಜ್ಞಾನದ ಶಿಕ್ಷಣವಾಗಿಬಿಟ್ಟಿದ್ದರಿಂದ ನನಗೂ ಇದನ್ನು ತಿಳಿದುಕೊಳ್ಳುವದು ಎಷ್ಟೋ ಕಷ್ಟವಾಯಿತು.

ಇವೆಲ್ಲವೂ ಬ್ರಹ್ಮಾಂಡದ ತತ್ತ್ವಗಳು. ಇಗೊ, ಎಲ್ಲೆಲ್ಲಿಯೂ ವ್ಯಾಪ್ತವಾಗಿ, ಪರಿಚ್ಛಿತ್ತಿಯಿಲ್ಲದೆ, ಒಂದೇ ಒಂದು ವಸ್ತುವಾಗಿ ಅವ್ಯಾಕೃತವಾಗಿ ಈ ಭೌತಿಕ– ರಾಶಿಯಿದೆಯೆಂಬುದನ್ನು ಮೊದಲು ಮನಸ್ಸಿಗೆ ತಂದುಕೊಳ್ಳಿರಿ. ಇದೇ ಎಲ್ಲಕ್ಕೂ ಪೂರ್ವದ ಸ್ಥಿತಿಯು. ಹಾಲು ಮೊಸರಾಗುವಂತೆ ಇದು ಮಾರ್ಪಡುವದಕ್ಕೆ ಮೊದಲಾಗುತ್ತದೆ. ಇದರಿಂದಾಗುವ ಮೊಟ್ಟಮೊದಲನೆಯ ವಿಕಾರವೇ ಮಹತ್ತು. ಈ ಮಹತ್ತೆಂಬ ಪದಾರ್ಥವು ಇನ್ನೂ ಸ್ಥೂಲವಾಗಿ ಅಹಂಕಾರವೆಂಬ ಪದಾರ್ಥವಾಗುತ್ತದೆ. ಈಗ ಮೂರನೆಯ ವಿಕಾರವೇನೆಂದರೆ ಸಮಷ್ಟಿಯ ಇಂದ್ರಿಯಗಳು, ಸಮಷ್ಟಿಯ ತನ್ಮಾತ್ರೆಗಳು; ಈ ತನ್ಮಾತ್ರೆಗಳನ್ನು ಕಣ್ಣು, ಮೂಗು, ಕಿವಿಗಳಿಂದ ನಾವು ನೋಡಿ ಮೂಸಿ ಕೇಳಿ ಅರಿಯುವೆವು. ಇವುಗಳು ಒಂದಕ್ಕೊಂದು ಸೇರಿ ಈ ಸ್ಥೂಲಪ್ರಪಂಚವಾಗಿರುತ್ತದೆ.

ಸಾಂಖ್ಯರ ಮತದಲ್ಲಿ ಇದು ಬ್ರಹ್ಮಾಂಡದ ಕ್ರಮವು. ಯಾವದು ಬ್ರಹ್ಮಾಂಡ– ದಲ್ಲಿರುವದೋ ಅದು ಪಿಂಡಾಂಡದಲ್ಲಿಯೂ ಇರಬೇಕು. ಹೇಗೆಂದರೆ ಒಬ್ಬಾನೊಬ್ಬ ಮನುಷ್ಯವ್ಯಕ್ತಿಯನ್ನು ತೆಗೆದುಕೊಳ್ಳಿ. ಅವನಲ್ಲಿ ಮೊದಲು ಈ ಅವ್ಯಾಕೃತಪ್ರಕೃತಿಯ ಒಂದು ಅಂಶವಿರುತ್ತದೆ. ಅವನಲ್ಲಿರುವ ಆ ಜಡಪ್ರಕೃತಿಯು ಈ ಮಹತ್ತಾಗುತ್ತದೆ, ಸಮಷ್ಟಿಮಹತ್ತಿನ ಒಂದಂಶವಾದ ಬುದ್ಧಿಯಾಗುತ್ತದೆ; ಈ ಅವನಲ್ಲಿರು ಮಹದಂಶವು ಅಹಂಕಾರವಾಗಿ ಮಾರ್ಪಡುತ್ತದೆ. ಆಮೇಲೆ ಇಂದ್ರಿಯಗಳಾಗಿಯೂ ಒಂದಕ್ಕೊಂದು ಸೇರಿ ಶರೀರವಾಗಿ ಪರಿಣಮಿಸುವ ತನ್ಮಾತ್ರೆಗಳಾಗಿಯೂ ಪರಿಣಮಿಸುತ್ತದೆ.

ಇದನ್ನು ನೀವು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಏಕೆಂದರೆ ಸಾಂಖ್ಯಕ್ಕೆ ಇದೇ ಮೊದಲನೆಯ ಮೆಟ್ಟಿಲು. ಇದನ್ನು ನೀವು ತಿಳಿದುಕೊಳ್ಳಬೇಕಾದದ್ದು ಅತ್ಯಂತ ಅವಶ್ಯಕವಾಗಿರುತ್ತದೆ, ಏಕೆಂದರೆ ಈ ಇಡಿಯ ಪ್ರಪಂಚದ ತತ್ತ್ವಜ್ಞಾನಕ್ಕೇ ಇದು ಆಧಾರವಾಗಿರುತ್ತದೆ. ಕಪಿಲನಿಗೆ ಋಣಿಯಾಗದ ಸಿದ್ಧಾಂತವೇ ಲೋಕದಲ್ಲಿರುವ– ದಿಲ್ಲ. **ಪಿಥಾಗೊರಸ್** ಎಂಬಾತನು ಭರತಖಂಡಕ್ಕೆ ಬಂದು ಈ ದರ್ಶನವನ್ನು ಕಲಿತುಕೊಂಡು ಹೋಗಲು ಅದು ಗ್ರೀಕರ ತತ್ತ್ವವಿಚಾರಕ್ಕೆ ಭೂಮಿಕೆಯಾಯಿತು. ಆಮೇಲೆ ಅಲೆಗ್ಝಾಂಡ್ರಿಯನರ ಸಿದ್ಧಾಂತಕ್ಕೂ ಇನ್ನೂ ಆಮೇಲೆ ರಹಸ್ಯಜ್ಞಾನವಾದಿಗಳ ಸಿದ್ಧಾಂತಕ್ಕೂ (Gnostic) ಕಾರಣವಾಯಿತು. ಇದು ಎರಡು ಕವಲಾಗಿ ಒಡೆದುಕೊಂಡಿತು, ಒಂದು ಕವಲು ಯೂರೋಪಿನ ಅಲೆಗ್ಝಾಂಡ್ರಿಯಕ್ಕೆ ಹೋಯಿತು, ಮತ್ತೊಂದು ಭರತಖಂಡದಲ್ಲಿಯೇ ಉಳಿದುಕೊಳ್ಳಲು ಅದರಿಂದ ವ್ಯಾಸರ ದರ್ಶನವು ಹೊರಕ್ಕೆ ಬಂದಿತು. ಕಪಿಲನ ಸಾಂಖ್ಯದರ್ಶನವೇ ಪ್ರಪಂಚದಲ್ಲಿ ತಲೆದೋರಿದ ಮೊಟ್ಟಮೊದಲನೆಯ ತರ್ಕಪ್ರಧಾನಸಿದ್ಧಾಂತವು. ಭೂಲೋಕದಲ್ಲಿರುವ ಪ್ರತಿಯೊಬ್ಬ ದರ್ಶನಕಾರನೂ ಕಪಿಲನಿಗೆ ಗೌರವವನ್ನು ತೋರಿಸಬೇಕು. ಹೀಗೆ ತತ್ತ್ವವಿಚಾರಕ್ಕೇ ಸಂಪ್ರದಾಯ ಪ್ರವರ್ತಕನಾದ ಕಪಿಲನ ಉಪದೇಶವನ್ನು ನಾವು ಕಿವಿಗೊಟ್ಟು ಕೇಳಲೇಬೇಕು– ಎಂಬುದನ್ನು ನಿಮಗೆ ಮನಗಾಣಿಸಬೇಕೆಂಬುದು ನನ್ನ ಅಭಿಲಾಷೆ. ತತ್ತ್ವ– ವಿಚಾರಕರಲ್ಲೆಲ್ಲ

ಪ್ರಾಚೀನತಮನೆಂದೆನಿಸರುವ ಈ ಮಹಾಪುರುಷನ ಹೆಸರು ಶ್ರುತಿಯಲ್ಲಿ ಕೂಡ ಕಂಡುಬರುತ್ತದೆ. ಆತನ ಜ್ಞಾನಶಕ್ತಿಯು ಎಂಥ ಅದ್ಭುತವಾದದ್ದು! ಯೋಗಿಗಳಿಗೆ ಅದ್ಭುತಸಿದ್ಧಿಗಳುಂಟಾಗುವವೆಂಬುದಕ್ಕೆ ಪ್ರಮಾಣವೇನಾದರೂ ಬೇಕಿದ್ದರೆ ಇಂಥವರೇ ಅದಕ್ಕೆ ಪ್ರಮಾಣವೆನ್ನಬೇಕು. ಅವರಲ್ಲಿ ಸೂಕ್ಷ್ಮದರ್ಶಕಯಂತ್ರವಾಗಲಿ ದೂರದರ್ಶಕಯಂತ್ರವಾಗಲಿ ಇರಲಿಲ್ಲ; ಆದರೂ ಅವರ ವಿಜ್ಞಾನಶಕ್ತಿಯು ಎಷ್ಟು ಸೂಕ್ಷ್ಮವಾಗಿದ್ದಿತು, ಅವರು ಮಾಡಿದ ತತ್ತ್ವ– ವಿಭಜನೆಯು ಎಷ್ಟು ಪರಿಪೂರ್ಣವಾಗಿಯೂ ಆಶ್ಚರ್ಯಕರವಾಗಿಯೂ ಇದ್ದಿತು!

ಷೋಪನ್ಹ್ಯಾವರನ (Schopenhauer) ಮತಕ್ಕೂ ಭರತಖಂಡದ ಸಿದ್ಧಾಂತಕ್ಕೂ ಇರುವ ತಾರತಮ್ಯವನ್ನು ಇಲ್ಲಿ ನಿಮಗೆ ತಿಳಿಸುವೆನು. ಷೋಪನ್ಹ್ಯಾವರನು ಹೇಳುವದೇನೆಂದರೆ ಇಚ್ಛೆಯು ಅಥವಾ ಸಂಕಲ್ಪವು ಎಲ್ಲಕ್ಕೂ ಕಾರಣವಾಗಿರುತ್ತದೆ; ಇರಬೇಕೆಂಬ ಸಂಕಲ್ಪವೇ ನಾವು ಹೊರತೋರಿಕೊಳ್ಳುವದಕ್ಕೆ ಕಾರಣವೆಂಬುದು ಆತನ ಮತವು. ಇದನ್ನು ನಾವು ಒಪ್ಪುವದಿಲ್ಲ. ಸಂಕಲ್ಪಕ್ಕೂ ಚಾಲಕನರಗಳಿಗೂ ತಾದಾತ್ಮ್ಯವಿದೆ. ಯಾವದಾದರೊಂದು ವಸ್ತುವನ್ನು ಕಂಡಾಗ ಸಂಕಲ್ಪವೇನೂ ಇರುವದಿಲ್ಲ; ಅದರಿಂದಾದ ವೇದನೆಗಳು ಮೆದುಳಿಗೆ ಬಂದು ಮುಟ್ಟಿದ ಮೇಲೆ ಪ್ರತಿಕ್ರಿಯೆಯುಂಟಾಗಿ 'ಇದನ್ನು ಮಾಡು' ಅಥವಾ 'ಮಾಡಬೇಡ' ಎನ್ನುವದು. ಅಹಂದ್ರವ್ಯದ ಈ ಸ್ಥಿತಿಗೇ ಸಂಕಲ್ಪವೆಂದು ಹೆಸರು. ಸಂಕಲ್ಪದಲ್ಲಿ ಮತ್ತೊಂದರ ಪ್ರಕ್ರಿಯೆಯಿಲ್ಲದ ಒಂದಂಶವೂ ಇರುವದಿಲ್ಲ. ಅದಕ್ಕಿಂತಲೂ ಆಚೆಗೆ ಎಷ್ಟೋ ತತ್ತ್ವಗಳಿವೆ. ಅದು ಅಹಂಕಾರದಿಂದ ಆಗಿರುವ ಒಂದಾನೊಂದು ವಿಕಾರವೇ ಹೊರತು ಮತ್ತೆ ಬೇರಲ್ಲ; ಈ ಅಹಂಕಾರವು ಇನ್ನೂ ಹೆಚ್ಚಿನ ತತ್ತ್ವವಾದ ಮಹತ್ತಿನ ಕಾರ್ಯವಾಗಿರುತ್ತದೆ, ಆ ಮಹತ್ತು ಅವ್ಯಾಕೃತಪ್ರಕೃತಿಯ ಕಾರ್ಯವಾಗಿರುತ್ತದೆ. (ನಮಗೆ ಕಾಣುವದೆಲ್ಲ ಸಂಕಲ್ಪಮಾತ್ರವೆನ್ನುವದು ಬೌದ್ಧರ ಮತವು. ಮನಃಶಾಸ್ತ್ರದಂತೆ ನೋಡಿದರೆ ಇದು ಪೂರ ತಪ್ಪೇ ಆಗಿರುವದು; ಏಕೆಂದರೆ ಸಂಕಲ್ಪಕ್ಕೂ ಚಾಲಕನಾಡಿಗಳಿಗೂ ಗಂಟು. ಈ ಚಾಲಕನಾಡಿಗಳನ್ನು ತೆಗೆದುಹಾಕಿದರೆ ಮನುಷ್ಯನಿಗೆ ಯಾವ ಬಗೆಯ ಸಂಕಲ್ಪವೂ ಇರುವದೇ ಇಲ್ಲ. ತಿರ್ಯಕ್ಪ್ರಾಣಿಗಳ ವಿಷಯದಲ್ಲಿ ಮಾಡಿದ ಸುದೀರ್ಘಕಾಲದ ಶೋಧನ– ಮಾಲೆಯಿಂದ ಈ ವಿಷಯವನ್ನು ಕಂಡುಹಿಡಿದಿರುವರೆಂಬುದು ನಿಮಗೆ ಗೊತ್ತೇ ಇರಬೇಕು.)*

---

*ಈ ಭಾಗವು ಉದ್ಬೋಧನಸಂಸ್ಕರಣದಲ್ಲಿ ಕಂಡುಬರುವದಿಲ್ಲ. ಬೌದ್ಧರು ಸಂಕಲ್ಪವೇ ಸರ್ವವೂ ಎಂದು ಹೇಳದಿದ್ದರೂ ವಿಜ್ಞಾನವೇ ವಿಷಯಾಕಾರವಾಗಿದೆಯೆಂದು ಹೇಳುವದು ನಿಜ. ಅವರು ಹೇಳುವ ವಿಜ್ಞಾನದಲ್ಲಿ ನಮ್ಮ ಅಂತಃಕರಣದ ವೃತ್ತಿಗಳಾದ ಮನೋಬುದ್ಧ್ಯಹಂಕಾರಗಳು ಅಡಕವಾಗಿರುತ್ತವೆ. ಚಾಲಕನಾಡಿಗಳನ್ನು (ಅಥವಾ ಕ್ರಿಯಾವಾಹಿನಿಗಳೆಂಬ ನರಗಳನ್ನು (motor nerve) ಕತ್ತರಿಸಿ ಹಾಕಿದರೆ ಯಾವ ಸಂಕಲ್ಪಶಕ್ತಿಯೂ ನಡೆಯುವದಿಲ್ಲವೆಂಬುದು ನಿಜವಾದರೂ ಇಷ್ಟರಿಂದಲೇ ಬೌದ್ಧಮತದ ಖಂಡನೆಯಾಗುವದಿಲ್ಲ; ಏಕೆಂದರೆ ಭರತಖಂಡದಲ್ಲಿರುವ ದರ್ಶನಗಳಲ್ಲೆಲ್ಲ ಆಧ್ಯಾತ್ಮಿಕದೃಷ್ಟಿಯನ್ನು ತೆಗೆದುಕೊಂಡಿರುತ್ತದೆಯೇ ಹೊರತು ಆಧಿಭೌತಿಕದೃಷ್ಟಿಯನ್ನು ತೆಗೆದುಕೊಂಡಿಲ್ಲ. ನರಗಳು ವಿಜ್ಞಾನವು ತೋರಿಕೊಳ್ಳುವ ಉಪಾಧಿಗಳಾಗಬಹುದು : ಆದರೆ ಎಲ್ಲವೂ ವಿಜ್ಞಾನವೆಂಬ ವಾದಿಯು ಈ ನರಗಳನ್ನೂ ವಿಜ್ಞಾನದಲ್ಲಿ ಅಡಕಮಾಡದಿರುವನೆ ? ಇಲ್ಲ. ವಿಜ್ಞಾನವು ಅಹಂಕಾರದ ರೂಪಾಂತರವೆಂದೂ ಅಹಂಕಾರಕ್ಕೆ ಮುಂದೆ ಮಹದವ್ಯಕ್ತಗಳೆಂಬ ಮತ್ತೆರಡು ಸೂಕ್ಷ್ಮ ತತ್ತ್ವಗಳಿರುವವೆಂದೂ ಸಾಂಖ್ಯರು ಹೇಳುವದನ್ನು ವಿಜ್ಞಾನವಾದಿಗಳು ಒಪ್ಪಿಲ್ಲವಾದಕಾರಣ ಷೋಪನಹ್ಯಾವರನ ಮತವನ್ನು ವಿಜ್ಞಾನವಾದವೆನ್ನಬಹುದೇ ಹೊರತು ಭರತಖಂಡದ ಆಸ್ತಿಕದರ್ಶನಗಳಲ್ಲಿ ಸೇರಿಸುವದಕ್ಕಾಗುವದಿಲ್ಲವೆಂಬುದಿಷ್ಟೇ ಇಲ್ಲಿ ಪ್ರಕೃತ.

ಮನುಷ್ಯನಲ್ಲಿರುವ ಈ ಮಹತ್ತೆಂಬ ಬುದ್ಧಿಯ ಸ್ವರೂಪವನ್ನು ತಿಳಿದು- ಕೊಳ್ಳುವದು ಬಹುಮುಖ್ಯವು. ಈ ಮಹತ್ತೇ ಅಹಂಕಾರವಾಗಿರುತ್ತದೆ. ಈ ಮಹತ್ತೇ ಶರೀರವೆಂಬ ಕಾರ್ಯವಾಗುವದಕ್ಕೆ ಬೇಕಾಗುವ ಮಾರ್ಪಾಡುಗಳಿಗೆಲ್ಲ ಕಾರಣವಾಗಿರುತ್ತದೆ. ಅಧೋವಿಜ್ಞಾನ, ವಿಜ್ಞಾನ, ಅತಿವಿಜ್ಞಾನ- ಇವೆಲ್ಲವನ್ನೂ ಅದು ವ್ಯಾಪಿಸಿಕೊಂಡಿರುತ್ತದೆ. ಈ ಮೂರು ಅವಸ್ಥೆಗಳು ಯಾವವು ? ಅಧೋವಿಜ್ಞಾನಾವಸ್ಥೆಯೆಂಬುದು ತಿರ್ಯಕ್ಪ್ರಾಣಿಗಳಲ್ಲಿ ಕಂಡುಬರುತ್ತದೆ. ಅದಕ್ಕೆ ಸ್ವಭಾವವಿಜ್ಞಾನ (instinct) ವೆಂದೂ ಹೆಸರು. ಇದು ಸ್ವಲ್ಪ ಹೆಚ್ಚು ಕಡಿಮೆ ನಿರ್ದುಷ್ಟವಾಗಿರುವದೆಂದು ಹೇಳಬಹುದು, ಆದರೆ ಬಹಳ ಪರಿಚ್ಛಿನ್ನವಾಗಿರುತ್ತದೆ. ಈ ಸ್ವಭಾವವೆಂಬುದು ತಪ್ಪುಮಾಡಿದ್ದು ತೀರ ಕಡಿಮೆ. 'ಇದು ವಿಷದ ಸೊಪ್ಪು, ಇದು ತಿನ್ನುವ ಸೊಪ್ಪು'- ಎಂಬುದು ಪಶುಪ್ರಾಣಿಗಳಿಗೆ ಸ್ವಭಾವದಿಂದಲೇ ಗೊತ್ತಾಗಿಬಿಡುತ್ತದೆ. ಆದರೆ ಈ ಸ್ವಭಾವವು ತೀರ ಪರಿಚ್ಛಿನ್ನವಾಗಿರುತ್ತದೆ ; ಯಾವದಾದರೂ ಹೊಸ ವಿಚಾರವು ಬಂತೆಂದರೆ ಅದು ಕುರುಡಾಗಿಬಿಡುತ್ತದೆ. ಇದು ಯಂತ್ರದಂತೆ ಕೆಲಸಮಾಡುತ್ತಿರುತ್ತದೆ. ಇದಕ್ಕಿಂತ ಮೇಲಿನದು ವಿಜ್ಞಾನದ ಅವಸ್ಥೆ. ಈ ಜ್ಞಾನವು ಎಷ್ಟೋ ಸಲ ತಪ್ಪುವದುಂಟು. ಇದು ನಿಧಾನವಾಗಿ ಕೆಲಸಮಾಡುವದಾದರೂ ಇದರ ಕ್ಷೇತ್ರವು ಹೆಚ್ಚು ವಿಸ್ತಾರವಾಗಿರುತ್ತದೆ. ಇದಕ್ಕೆ ಬುದ್ಧಿಯೆಂದು ಹೆಸರು. ಇದು ಸ್ವಭಾವಕ್ಕಿಂತ ಹೆಚ್ಚು ಕ್ಷೇತ್ರವುಳ್ಳದ್ದಾಗಿರುತ್ತದೆ, ಆದರೆ ಸ್ವಭಾವಕ್ಕಿಂತಲೂ ಈ ಬುದ್ಧಿಶಕ್ತಿಗೆ ತಪ್ಪುಮಾಡುವ ಅಪಾಯಗಳೂ ಹೆಚ್ಚಾಗಿರುತ್ತವೆ. ಅದು ಸ್ವಭಾವಕ್ಕಿಂತ ವಿಸ್ತೃತವಾಗಿರುತ್ತದೆಯೆಂಬುದು ನಿಜ ; ಆದರೆ ಸ್ವಭಾವವು ಬುದ್ಧಿಗಿಂತಲೂ ಹೆಚ್ಚು ನಿಶ್ಚಿತವಾಗಿರುತ್ತದೆ, ಸ್ವಭಾವಕ್ಕಿಂತಲೂ ಬುದ್ಧಿಯಲ್ಲಿ ತಪ್ಪುಗಳುಂಟಾಗುವ ಸಂಭವವು ಹೆಚ್ಚು. ಇದಕ್ಕಿಂತಲೂ ಮೇಲಿನದಾದ ಮನಸ್ಸಿನ ಅವಸ್ಥೆಯೊಂದಿದೆ. ಅದಕ್ಕೆ ಅತಿಸಂವೇದನೆ (super-consciousness) ಎಂದು ಹೆಸರು. ಅದು ಯೋಗಿಗಳಿಗೆ ಎಂದರೆ ಇದನ್ನು ಬೆಳೆಸಿಕೊಂಡಿರುವವರಲ್ಲಿ ಮಾತ್ರ ಇರುತ್ತದೆ. ಇದರಲ್ಲಿ ಯಾವದೊಂದು ದೋಷವೂ ಇರುವದಿಲ್ಲ. ಬುದ್ಧಿಗಿಂತಲೂ ಇದರ ಕ್ಷೇತ್ರವು ವಿಸ್ತಾರವಾಗಿರುವದು. ಇದೇ ಅತ್ಯಂತ ಮೇಲಿನ ಸ್ಥಿತಿಯು. * ಆದ್ದರಿಂದ ಈ ಮಹತ್ತೆಂಬುದೇ ಇದಲ್ಲಿ ಕಾಣಬರುವದಕ್ಕೆಲ್ಲ ನಿಜವಾದ ಕಾರಣವೆಂಬುದನ್ನೂ, ಅದು ಬಗೆಬಗೆಯ ರೂಪಗಳಿಂದ ಕಾಣಿಸಿ- ಕೊಳ್ಳುತ್ತಿರುವದೆಂಬುದನ್ನೂ, ಅಧೋವಿಜ್ಞಾನ, ಅತಿವಿಜ್ಞಾನ- ಎಂಬ ಅರಿವಿನ ಮೂರು ಸ್ಥಿತಿಗಳನ್ನೂ ವ್ಯಾಪಿಸಿಕೊಂಡಿರುವದೆಂಬುದನ್ನೂ ನಾವು ನೆನಪಿಡಬೇಕು.

ಈಗ ಒಂದು ಸೂಕ್ಷ್ಮವಿಚಾರದ ಪ್ರಶ್ನೆಯು ಮುಂದಕ್ಕೆ ಬರುತ್ತದೆ. ಇದನ್ನು ಜನರು

---

*ವ್ಯವಹಾರದೃಷ್ಟಿಯಿಂದ ನೋಡಿದರೆ ಸಮಾಹಿತಮನಸ್ಸಿನ ಸ್ಥಿತಿಯು ಅತ್ಯಂತ ಪರಿಶುದ್ಧವಾಗಿರುವದು. ಆದ್ದರಿಂದ ಅದಕ್ಕೆ ಗೋಚರವಾಗದ ವಿಷಯಗಳೇ ಇಲ್ಲವೆನ್ನಬೇಕು. ಸಮಾಧಿಯ ಅರಿವನ್ನೇ 'ಅತಿಸಂವೇದನೆ', 'ಅತಿವಿಜ್ಞಾನ'- ಎಂದು ಕರೆಯುವರು. ಆದರೆ ಪರಮಾರ್ಥದೃಷ್ಟಿಯಿಂದ ನೋಡಿದರೆ ಮನಸ್ಸಿನಲ್ಲಿ ತೋರುವ ಅರಿವೆಂಬುದು ನಿಜವಾಗಿ ಅದಕ್ಕೂ ಸಾಕ್ಷಿಯಾಗಿರುವ ಆತ್ಮಚೈತನ್ಯವೇ ಆಗಿರುತ್ತದೆ. ಅಧೋವಿಜ್ಞಾನವೇ ಮುಂತಾದ ಅವಸ್ಥೆಗಳನ್ನು ಪಡೆಯುವಂತೆ ಉಪಾಧಿಯಿಂದ ತೋರಿಕೊಳ್ಳುವದೂ ಈ ಚೈತನ್ಯವೇ. ಪ್ರಕೃತಿಯಲ್ಲಿ ತೋರುವ ವಿಜ್ಞಾನವನ್ನು ಕುರಿತೇ ಇಲ್ಲಿ ಸ್ವಾಮಿಗಳವರು ಈ ಮಾತನ್ನು ಹೇಳಿರುತ್ತಾರೆಂಬುದನ್ನು ಮರೆಯಬಾರದು.

ಯಾವಾಗಲೂ ಕೇಳುತ್ತಲೇ ಇರುತ್ತಾರೆ. ಪರಿಪೂರ್ಣನಾದ ಈಶ್ವರನು ಈ ಜಗತ್ತನ್ನು ಸೃಷ್ಟಿಸಿದನಾದರೆ ಅದರಲ್ಲಿ ನ್ಯೂನತೆಯಿರುವದೇಕೆ ?* ಸರಿಯಾಗಿ ನೋಡಿದರೆ ಈ ಪ್ರಶ್ನೆಯೇ ಹುಟ್ಟುವಹಾಗಿಲ್ಲ. ✝ಏಕೆಂದರೆ ನಾವು ಜಗತ್ತು ಎಂದು ಕರೆಯುತ್ತಿರುವದು ನಾವು ನೋಡುತ್ತಿರುವ ಜಗತ್ತು, ಎಂದರೆ ಈ ವಿಜ್ಞಾನದ ಅಥವಾ ವಿಚಾರದ ಸಣ್ಣ ಭೂಮಿಕೆಮಾತ್ರವಾಗಿರುತ್ತದೆ ; ಅದರಿಂದಾಚೆಗಿರುವದು ನಮಗೆ ಗೋಚರವಾಗುವದೇ ಇಲ್ಲ. ಯಾವದಾದರೊಂದರ ಒಟ್ಟುರಾಶಿಯಲ್ಲಿ ಒಂದಂಶವನ್ನು ಮಾತ್ರ ತೆಗೆದುಕೊಂಡರೆ ಅದು ಅಪರಿಪೂರ್ಣವಾಗಿ ತೋರುವದು ಸಹಜವಾಗಿರುತ್ತದೆ. ಜಗತ್ತು ಅಪರಿಪೂರ್ಣವಾಗಿರುವದೇಕೆಂದರೆ ನಾವೇ ಅದನ್ನು ಅಪರಿಪೂರ್ಣವಾಗಿ ಮಾಡಿಕೊಂಡಿರುತ್ತೇವೆ. ಅದು ಹೇಗೆಂದರೆ- ವಿಚಾರವೆಂದರೇನು? ತಿಳಿವಳಿಕೆಯೆಂದರೇನು ? ಇದನ್ನು ವಿಚಾರ ಮಾಡೋಣ. ತಿಳಿವಳಿಕೆಯೆಂದರೆ ಸಾದೃಶ್ಯವನ್ನು ಕಂಡುಕೊಳ್ಳುವದು. ಬೀದಿಗೆ ಹೋಗಿ ಒಬ್ಬ ಮನುಷ್ಯನನ್ನು ಕಂಡರೆ 'ಇವನೊಬ್ಬ ಮನುಷ್ಯನು' ಎಂದು ತಿಳಿದುಕೊಳ್ಳುವಿರಷ್ಟೆ. ಇಲ್ಲಿ ಮೊದಲೇ ನೀವು ಅನೇಕ ಮನುಷ್ಯರನ್ನು ಕಂಡಿದ್ದಿರಿ. ಒಬ್ಬೊಬ್ಬ ಮನುಷ್ಯನನ್ನು ಕಂಡದ್ದರಿಂದ ನಿಮ್ಮ ಮನಸ್ಸಿನಲ್ಲಿ ಒಂದೊಂದು ಸಂಸ್ಕಾರವುಂಟಾಗಿರುತ್ತದೆ. ಈಗ ಈ ಮನುಷ್ಯನನ್ನು ಕಾಣಲು ನಿಮ್ಮಲ್ಲಿ ರಾಶಿಯಾಗಿರುವ ಸಂಸ್ಕಾರಗಳನ್ನು ನೋಡಿ ಅಲ್ಲಿ ಮನುಷ್ಯರ ಚಿತ್ರಗಳು ಬೇಕಾದಷ್ಟಿರುವವೆಂಬುದನ್ನು ಕಂಡುಕೊಂಡು ಈ ಹೊಸ ಚಿತ್ರವನ್ನೂ ಅವುಗಳ ಜೊತೆಯಲ್ಲಿ ಸೇರಿಸಿಕೊಳ್ಳುವಿರಿ. ಆಗ ನಿಮಗೆ ಸಮಾಧಾನವಾಗುತ್ತದೆ. ಹೀಗೆ ಯಾವದಾದರೊಂದು ಹೊಸ ಸಂಸ್ಕಾರವುಂಟಾಗುವಾಗ ಅದರಂತಿರುವ ಸಂಸ್ಕಾರಗಳು ಚಿತ್ತದಲ್ಲಿದ್ದರೆ ನಿಮಗೆ ಸಮಾಧಾನವಾಗುತ್ತದೆ. ಹೀಗೆ ಸಾದೃಶ್ಯಸಂಬಂಧವನ್ನು ಕಂಡುಕೊಳ್ಳುವದಕ್ಕೇ ತಿಳಿವಳಿಕೆಯೆಂದು ಹೆಸರು. ಆದ್ದರಿಂದ ತಿಳಿವಳಿಕೆಯೆಂದರೆ ಯಾವದಾದ-ರೊಂದನುಭವವನ್ನು ಆಗಲೆ ನಮ್ಮಲ್ಲಿರುವ ಅನುಭವರಾಶಿಯ ಖಾನಿಗೆ ಹಾಕುವದೆಂದರ್ಥ ; ಮೊದಲೇ ಅನುಭವರಾಶಿಯೊಂದು ನಮ್ಮಲ್ಲಿದ್ದ ಹೊರತು ಯಾವದೊಂದು ತಿಳಿವಳಿಕೆಯೂ ಉಂಟಾಗಲಾರದು- ಎಂಬುದಕ್ಕೆ ಇರುವ ಮುಖ್ಯಪ್ರಮಾಣಗಳಲ್ಲಿ ಇದೂ ಒಂದಾಗಿರುತ್ತದೆ. ನಿಮ್ಮಲ್ಲಿ ಯಾವ ಅನುಭವವೂ ಇಲ್ಲದೆ ಇದ್ದರೆ, ಯೂರೋಪಿನ ಕೆಲವು ತತ್ತ್ವಶಾಸ್ತ್ರಜ್ಞರು ಭಾವಿಸಿರುವಂತೆ ಮೊಟ್ಟಮೊದಲು ನಿಮ್ಮ ಚಿತ್ತವೆಂಬುದು 'ಪರಿಶುದ್ಧಫಲಕ'☞ (tabula rasa) ವಾಗಿರುವದಾದರೆ, ನಿಮಗೆ ಯಾವ ತಿಳಿವಳಿಕೆಯೂ ಉಂಟಾಗಲೇ ಆರದು;

---

* ನಿಜವಾಗಿ ನೋಡಿದರೆ ಜಗತ್ತನ್ನು ಸೃಷ್ಟಿಸಿರುವ ಶಾಶ್ವತನಾದ ಈಶ್ವರನೇ ಸಾಂಖ್ಯದರ್ಶನದಲ್ಲಿರುವದಿಲ್ಲ ; ಆದರೂ ವೇದಾಂತಿಗಳು ಇದಕ್ಕೆ ಉತ್ತರವನ್ನು ಹೇಳಲೇಬೇಕಾಗಿರುವದು.

✝ ಈ ವಾಕ್ಯವನ್ನು ಮೂಲದಲ್ಲಿ ಆಮೇಲೆ ಕೊಟ್ಟಿದ್ದರೂ ಅರ್ಥಕ್ಕೆ ಅನುಸಾರವಾಗಿ ಅದು ಇಲ್ಲಿಯೇ ಇರಬೇಕೆಂಬುದು ಸ್ಪಷ್ಟವಾಗಿದೆ.

☞ ಹೊಸದಾಗಿ ಹುಟ್ಟಿದ ಮಗುವಿನ ಚಿತ್ತದಲ್ಲಿ ನೈಸರ್ಗಿಕಭಾವನೆಗಳು (innate idea) ಇರುವದೇ ಇಲ್ಲ, ಅದು ಹೊಸ ಹಲಗೆಯಂತೆ ಪರಿಶುದ್ಧವಾಗಿರುತ್ತದೆ ; ಆಮೇಲೆಯೇ ಹೊರಗಿನ ವಿಷಯಾನುಭವಗಳಿಂದ ಅದರಲ್ಲಿ ಸಂಸ್ಕಾರಗಳು ಲಿಖಿತವಾಗುತ್ತವೆ- ಎಂದು ಲಾಕ್ (Locke) ಎಂಬ ತತ್ತ್ವಜ್ಞನು ಹೇಳುತ್ತಿದ್ದನು.

ಏಕೆಂದರೆ ತಿಳಿಯುವದೆಂದರೇ ಚಿತ್ತದಲ್ಲಿ ಮೊದಲೇ ಇರುವ ಸಂಸ್ಕಾರಗಳ ಸಾದೃಶ್ಯದಿಂದ ಹೊಸದನ್ನು ಗುರುತಿಸುವದೆಂದರ್ಥ. ಹೊಸದೊಂದು ಸಂಸ್ಕಾರವಾದರೆ ಅದನ್ನು ಹೋಲಿಸಿ ನೋಡುವದಕ್ಕೆ ಮೊದಲೇ ಒಂದು ಸಂಸ್ಕಾರರಾಶಿಯು ಸಿದ್ಧವಾಗಿದ್ದೇ ಇರಬೇಕು. ಇಂಥ ಅನುಭವರಾಶಿಯಿಲ್ಲದ ಒಂದು ಮಗು ಈ ಲೋಕದಲ್ಲಿ ಹುಟ್ಟಿತೆಂದು ಇಟ್ಟುಕೊಳ್ಳಿ.; ಆಗ ಅದಕ್ಕೆ ಯಾವ ತಿಳಿವಳಿಕೆಯನ್ನೂ ಸಂಪಾದಿಸುವದಕ್ಕೇ ಆಗಲಾರದು. ಆದ್ದರಿಂದ ಅದು ಇಂಥ ರಾಶಿಯನ್ನು ಸಂಪಾದಿಸಿಕೊಳ್ಳುವದಕ್ಕೆ ತಕ್ಕ ಒಂದಾನೊಂದು ಸ್ಥಿತಿಯಲ್ಲಿ ಮೊದಲು ಇದ್ದಿರಬೇಕೆಂದಾಯಿತು. ಆದ್ದರಿಂದಲೇ ತಿಳಿವಳಿಕೆಯು ಬರುತ್ತಬರುತ್ತಾ ಬೆಳೆಯುತ್ತದೆ. ಈ ವಾದದಿಂದ ತಪ್ಪಿಸಿಕೊಳ್ಳುವದಕ್ಕೆ ಮಾರ್ಗವೇನಾದರೂ ಇದ್ದರೆ ತಿಳಿಸಿರಿ ; ಇಲ್ಲ, ಇದು ಗಣಿತಶಾಸ್ತ್ರವಿಷಯದಂತೆ ನಿಶ್ಚಿತವಾಗಿರುತ್ತದೆ. ಪಶ್ಚಿಮದೇಶದ ತತ್ತ್ವಜ್ಞರಲ್ಲಿ ಕೆಲವರು *ಕೂಡ ಹಿಂದಿನ ಅನುಭವವಿಲ್ಲದೆ ಯಾವ ತಿಳಿವಳಿಕೆಯೂ ಉಂಟಾಗಲಾರದೆಂಬುದನ್ನು ಒಪ್ಪಿರುತ್ತಾರೆ. ಮಗುವು ಹುಟ್ಟುವಾಗಲೇ ಅದರಲ್ಲಿ ಅನುಭವರಾಶಿಯು ಇರುವದೆಂಬುದನ್ನು ಅವರೂ ಅಂಗೀಕರಿಸಿರುತ್ತಾರೆ ; ಆದರೆ ಮಗುವು ಈ ಲೋಕದಲ್ಲಿ ಹುಟ್ಟುವಾಗ ತನ್ನೊಡನೆ ತರುವ ಸಂಸ್ಕಾರಗಳು ಮಗುವಿನ ಹಿಂದಿನ ಸ್ಥಿತಿಗೆ ಸೇರಿದವಲ್ಲ, ಅದರ ಪೂರ್ವಿಕರ ಅನುಭವಕ್ಕೆ ಸೇರಿದವು, ಇದೆಲ್ಲ ವಂಶಕ್ರಮಾನುಗತವಾಗಿ ಬಂದದ್ದು– ಎನ್ನುತ್ತಾರೆ. ಈ ಅಭಿಪ್ರಾಯವೆಲ್ಲ ತಪ್ಪೆಂಬುದನ್ನು ಇಷ್ಟರಲ್ಲಿಯೇ ಅವರು ಕಂಡುಕೊಳ್ಳುವರು. ಈ ವಂಶಾನುಗತಸಂಸ್ಕಾರಗಳ ಭಾವನೆಯನ್ನು ಕೆಲವರು ಜರ್ಮನ್ ಪಂಡಿತರು ಆಗಲೆ ಉಗ್ರವಾಗಿ ಖಂಡಿಸಿರುತ್ತಾರೆ. ವಂಶಾನುಗತವೆಂಬುದೇನೊ ಸರಿ, ಆದರೆ ಅಷ್ಟೇ ಸಾಲದು ; ಏಕೆಂದರೆ ಅದು ಭೌತಿಕಭಾಗವನ್ನು ಮಾತ್ರ ವಿವರಿಸುವದಕ್ಕೆ ಸಾಧಕವಾಗಿರುತ್ತದೆ. ನಮ್ಮನ್ನು ಮಾರ್ಪಡಿಸುವ ಸನ್ನಿವೇಶಗಳಿಗೆ✝ ಯಾವ ಕಾರಣವನ್ನು ಕೊಟ್ಟು ವಿವರಿಸುವಿರಿ ? ಒಂದು ಫಲವಾಗುವದಕ್ಕೆ ಎಷ್ಟೋ ಕಾರಣಗಳಾಗಬೇಕು, ಹೀಗೆ ಮಾರ್ಪಡಿಸುವ ಕಾರಣಗಳಲ್ಲಿ ಸನ್ನವೇಶವೆಂಬುದು ಒಂದು. ಹಿಂದೂತತ್ತ್ವಜ್ಞರ ಅಭಿಪ್ರಾಯವೇನೆಂದರೆ ನಮ್ಮ ನಮ್ಮ ಸನ್ನಿವೇಶಕ್ಕೆ ನಾವೇ ಕಾರಣರು. ನಮ್ಮ ಹಿಂದಿನ ಸ್ಥಿತಿಗೆ ತಕ್ಕಂತೆ ಈಗಿನ ನಮ್ಮ-ಸನ್ನಿವೇಶವು ಇರುವದು. ಕುಡುಕನಾದವನು ಪಟ್ಟಣದಲ್ಲಿ ಅತ್ಯಂತ ಕೊಳಕಾದ ಪ್ರದೇಶಗಳನ್ನು ಹುಡುಕಿಕೊಂಡು ಹೋಗುವದು ಸಹಜವಾಗಿರುತ್ತದೆ.

ತಿಳಿವಳಿಕೆಯೆಂದರೇನೆಂಬುದು ಈಗ ಗೊತ್ತಾಯಿತಷ್ಟೆ ? ತಿಳಿವಳಿಕೆಯೆಂದರೆ ಹೊಸ ಸಂಸ್ಕಾರವೊಂದನ್ನು ಹಳೆಯ ಸಂಸ್ಕಾರಗಳೊಡನೆ ಒಂದು ಖಾನಿಯಲ್ಲಿ ಸೇರಿಸಿಡುವದು,

---

* ಸ್ಪೆನ್ಸರ್ ಮೊದಲಾದವರು.

✝ ಪ್ರಾಣಿಯ ಶರೀರರಚನಾದಿಗಳು ವಂಶಾನುಗತಗುಣಗಳು, ಸನ್ನಿವೇಶ– ಮುಂತಾದವುಗಳಿಗೆ ತಕ್ಕಂತೆ ಮಾರ್ಪಡುವವೆಂಬುದು ವಿಕಾಸವಾದ (Theory of Evolution) ದ ಮತವು : ಆದರೆ ಇಂಥ ಸನ್ನಿವೇಶದಲ್ಲಿಯೇ ಇಂಥ ಪ್ರಾಣಿಯು ಸಿಕ್ಕಿಕೊಳ್ಳಬೇಕಾದದ್ದೇನು ?– ಎಂಬ ಪ್ರಶ್ನೆಗೆ ಈ ವಾದದಲ್ಲಿ ಉತ್ತರವಿಲ್ಲ. ಜನ್ಮಾಂತರಕರ್ಮದಿಂದ ಇದಕ್ಕೆ ಕಾರಣವನ್ನು ಹೇಳಬಹುದೆಂಬದು ಸ್ವಾಮಿಗಳ ಅಭಿಪ್ರಾಯ.

ಹೊಸದೊಂದು ಸಂಸ್ಕಾರವನ್ನು ಗುರುತಿಸುವದು. ಗುರುತಿಸುವದೆಂದರೇನು ? ತನ್ನಲ್ಲಿ ಆಗಲೇ ಇದ್ದುಕೊಂಡಿರುವ ಅದೇ ಬಗೆಯ ಸಂಸ್ಕಾರಗಳೊಡನೆ ಸಾದೃಶ್ಯವನ್ನು ಕಂಡುಕೊಳ್ಳುವದು. ತಿಳಿವಳಿಕೆಯೆಂದರೆ ಇಷ್ಟೇ ಹೊರತು ಮತ್ತೇನೂ ಅಲ್ಲ. ಇದು ನಿಜವಾದರೆ, ತಿಳಿವಳಿಕೆಯೆಂದರೆ ಸಾದೃಶ್ಯ ವಿಶೇಷಗಳನ್ನು ಕಂಡುಕೊಳ್ಳುವದೆಂದಾದರೆ, ಯಾವದಾದರೊಂದನ್ನು ತಿಳಿದುಕೊಳ್ಳಬೇಕಾದರೆ ಆ ಜಾತಿಯ ಸದೃಶ್ಯವ್ಯಕ್ತಿಗಳ ಪ್ರವಾಹವನ್ನೆಲ್ಲ ಕಂಡಿರಬೇಕೆಂದಾಯಿತು. ಅಲ್ಲವೆ ? ಒಂದು ಕಲ್ಲನ್ನು ತೆಗೆದುಕೊಳ್ಳಿರಿ. ಅದರ ಸಾದೃಶ್ಯ ಸಂಬಂಧವನ್ನು ಕಂಡುಕೊಳ್ಳಬೇಕಾದರೆ ಅದರಂತಿರುವ ಕಲ್ಲುಗಳ ಪೂರ್ಣಪ್ರವಾಹವನ್ನೇ ನೀವು ನೋಡಿರಬೇಕು. ಆದರೆ ಜಗತ್ತಿನ ಅನುಭವದಲ್ಲಿ ನಾವು ಹಾಗೆ ಮಾಡುವದಕ್ಕೆ ಆಗುವದಿಲ್ಲ. ಏಕೆಂದರೆ ನಮ್ಮ ಅಂತಃಕರಣದ ಖಾನಿಯಲ್ಲಿ ಇಂಥ ಅನುಭವದ ಒಂದೇ ಒಂದು ಗುರುತಿದೆ. ಇದೇ ಜಾತಿಯ ಮತ್ತೆ ಯಾವದೊಂದು ಅನುಭವವೂ ನಮಗೆ ಇರುವದಿಲ್ಲ. ಅದನ್ನು ಮತ್ತೆ ಯಾವದಕ್ಕೂ ಹೋಲಿಸುವದಕ್ಕೆ ಬರುವದಿಲ್ಲ. ಅದನ್ನು ಅದರ ಸಾದೃಶ್ಯ ಸಂಬಂಧವುಳ್ಳ ಮತ್ತೊಂದಕ್ಕೆ ಹೋಲಿಸುವದಕ್ಕೆ ಆಗುವಹಾಗಿಲ್ಲ. ನಮ್ಮ ವಿಜ್ಞಾನವು ತುಂಡಿಸಿ ತೆಗೆದುಕೊಂಡಿರುವ ಈ ಜಗತ್ತಿನ ತುಂಡು ಅತ್ಯಂತ ನೂತನವಾಗಿರುತ್ತದೆ. ಏಕೆಂದರೆ ನಮಗೆ ಅದರ ಸಾದೃಶ್ಯಸಂಬಂಧವೇನೂ ದೊರಕಿರುವದಿಲ್ಲ. ಆದ್ದರಿಂದ ನಾವು ಅದರೊಡನೆ ಹೋರಾಡುತ್ತಿರುವೆವು. 'ಇದು ಅತ್ಯಂತ ಭಯಂಕರವಾಗಿರುವದು, ದುಷ್ಟವಾಗಿರುತ್ತದೆ, ಕೆಟ್ಟದಾಗಿದೆ'– ಎನ್ನುತ್ತಿರುವೆವು. * ಕೆಲವು ವೇಳೆ ಇದು ಒಳ್ಳೆಯದೆಂದೂ ನಾವು ಭಾವಿಸುವದುಂಟು, ಆದರೆ ನಮಗೆ ಅದು ಯಾವಾಗಲೂ ಅಪೂರ್ಣವಾಗಿಯೇ ತೋರುವದು. ಇದರ ಸಾದೃಶ್ಯಸಂಬಂಧವನ್ನು ಕಂಡುಕೊಂಡರೆ ಮಾತ್ರ ಈ ಜಗತ್ತನ್ನು ಅರಿತುಕೊಂಡಂತೆ ಆಗುವದು. ಈ ಜಗತ್ತನ್ನು ಮೀರಿ, ವಿಜ್ಞಾನವನ್ನೂ ಮೀರಿ ಹೋದರೆ ಇದನ್ನು ಗುರುತಿಸಿ ಅರಿತುಕೊಳ್ಳಬಹುದು, ಆಗ ಜಗತ್ತಿನ ಮರ್ಮವೆಲ್ಲ ತಿಳಿದುಬರುತ್ತದೆ. ಆ ಕೆಲಸವನ್ನು ಮಾಡುವವರೆಗೂ ಸುಮ್ಮನೆ ಗೋಡೆಗೆ ಎಷ್ಟು ತಲೆ ಚಚ್ಚಿಕೊಂಡರೂ ಜಗತ್ತೆಂದರೇನೆಂಬುದು ತಿಳಿಯುವದಿಲ್ಲ, ಏಕೆಂದರೆ ತಿಳಿವಳಿಕೆಯೆಂದರೆ ಸಾದೃಶ್ಯವನ್ನು ಕಂಡುಕೊಳ್ಳುವದು ; ಆದರೆ ಈ ವಿಜ್ಞಾನಭೂಮಿಕೆಯು ಇದರ ಒಂದೇ ಒಂದು ಅನುಭವವನ್ನು ನಮಗೆ ಕೊಟ್ಟಿರುತ್ತದೆ.✝

---

*ಈ ಜಗತ್ತೇಕೆ ಇಷ್ಟು ಪಾಪಮಯವಾಗಿದೆ, ಅಥವಾ ಅಪರಿಪೂರ್ಣವಾಗಿದೆ ?– ಎಂಬ ಪ್ರಶ್ನೆಯುಂಟಾಗಲು 'ಪರಿಪೂರ್ಣವಾದ ಜಗತ್ತು ಹೀಗಿರಬೇಕೆಂಬುದನ್ನು ನೀವು ಎಲ್ಲಿ ಕಂಡುಕೊಂಡಿರುವಿರಿ? ಕಾಣದಿದ್ದರೆ ಪ್ರಶ್ನೆ ಹೇಗೆ ?– ಎಂಬ ಉತ್ತರವನ್ನು ಕೊಟ್ಟಂತಾಯಿತು. ನಮಗೆ ಗೊತ್ತಿರುವ ಜಗತ್ತೆಲ್ಲ ಒಂದು, ಅದು ಹೇಗಿರುವದೋ ಹಾಗೆಯೇ ಅದನ್ನು ತೆಗೆದುಕೊಳ್ಳಬೇಕು– ಎಂಬುದು ಉತ್ತರದ ತಿರುಳಾಯಿತು. ಆದರೆ ಜಗತ್ತಿನಲ್ಲಿ ದೋಷವಿಲ್ಲ, ಕಷ್ಟವಿಲ್ಲ– ಎಂದೇನೂ ಇದರಿಂದ ಸಿದ್ಧವಾಗುವದಿಲ್ಲ ; ನಿರ್ದುಷ್ಟನಾದ ದೇವರಿಂದ ಈ ಜಗತ್ತು ಉಂಟಾಗಿರಲಾರದು, ಏಕೆಂದರೆ ಜಗತ್ತಿನಲ್ಲಿ ದೋಷವಿದೆ– ಎಂಬ ಆಕ್ಷೇಪಕ್ಕೆ ಪರಿಪೂರ್ಣವಾದ ಉತ್ತರವೂ ಇದಲ್ಲ.

✝ ಜಗತ್ತಿನ ಸಾದೃಶ್ಯಸಂಬಂಧವನ್ನು ಹೇಗೆ ಕಂಡುಕೊಳ್ಳಬೇಕೆಂಬುದನ್ನೇನೂ ಈ ಉಪನ್ಯಾಸದಲ್ಲಿ ಸ್ವಾಮಿಗಳವರು ತಿಳಿಸಿರುವದಿಲ್ಲ. ಅವಸ್ಥಾತ್ರಯದೃಷ್ಟಿಯನ್ನು ಅವಲಂಬಿಸಿದರೆ ಈ ಸಂಬಂಧವು

ಈಶ್ವರನ ವಿಷಯದಲ್ಲಿ ನಮಗಿರುವ ಭಾವನೆಯ ವಿಚಾರವೂ ಹೀಗೆಯೇ. ನಮಗೆ ದೇವರ ವಿಷಯದಲ್ಲಿ ತಿಳಿದಿರುವದೆಲ್ಲ ಒಂದು ಅಂಶವೇ, ಉಳಿದದ್ದೆಲ್ಲ ಮನುಷ್ಯನ ತಿಳಿವಳಿಕೆಯನ್ನು ಮೀರಿರುತ್ತದೆ. "ಸರ್ವವ್ಯಾಪಕನಾದ ನಾನು ಎಷ್ಟು ದೊಡ್ಡವನೆಂದರೆ, ಈ ವಿಶ್ವವೆಲ್ಲವೂ ನನ್ನ ಒಂದಂಶವಮಾತ್ರವಾಗಿರುತ್ತದೆ." (ಗೀ. 10–42) ಆದ್ದರಿಂದಲೇ ನಮಗೆ ದೇವರು ಅಪರಿಪೂರ್ಣನೆಂದು ತೋರುತ್ತದೆ. ಅವನ ನಿಜವಾದ ಸ್ವರೂಪವು ತಿಳಿಯುವದಿಲ್ಲ. ಆತನನ್ನೂ ಈ ಜಗತ್ತನ್ನೂ ತಿಳಿಯುವದಕ್ಕೆ ಬುದ್ಧಿಯನ್ನು ಮೀರಿ, ವಿಜ್ಞಾನಭೂಮಿಕೆಯನ್ನು ದಾಟಿಹೋಗುವದೊಂದೇ ಮಾರ್ಗವು. "ಕೇಳಿದ್ದು, ಕೇಳುವಿಕೆ, ಮಂತವ್ಯಮನನ– ಇವೆರಡನ್ನೂ ದಾಟಿದಮೇಲೆಯೇ ನಿಮಗೆ ನಿಜವು ಗೊತ್ತಾಗುವದು" (ಗೀ. 2–52) "ವೇದಗಳು ಮೂರು ಗುಣಗಳನ್ನು ಮಾತ್ರವೇ ತಿಳಿಸುತ್ತವೆಯಾದ್ದರಿಂದ ನೀನು ಅವುಗಳನ್ನು ಮೀರಿಹೋಗುವನಾಗು" (ಗೀ. 2–45) ಅವುಗಳನ್ನು ಮೀರಿದ ಮೇಲೆಯೇ ನಮಗೆ ಹೊಂದಿಕೆಯು ಕಂಡುಬರುವದೇ ಹೊರತು, ಅದಕ್ಕಿಂತ ಮೊದಲು ಕಂಡುಬರುವದೇ ಇಲ್ಲ.*

ಪಿಂಡಾಂಡವೂ ಬ್ರಹ್ಮಾಂಡವೂ ಒಂದೇ ಬಗೆಯ ರಚನೆಯುಳ್ಳವುಗಳಾಗಿ ಏರ್ಪಟ್ಟಿರುತ್ತವೆ. ಪಿಂಡಾಂಡದಲ್ಲಿ ನಮಗೆ ಒಂದೇ ಒಂದು ಅಂಶವು, ನಡುವಣ ಅಂಶವು, ತಿಳಿದಿರುತ್ತದೆ. ನಮಗೆ ಅಧೋವಿಜ್ಞಾನಭೂಮಿಕೆಯಾಗಲಿ ಅತಿವಿಜ್ಞಾನಾವಸ್ಥೆಯಾಗಲಿ ತಿಳಿಯದು– ನಮಗೆ ವಿಜ್ಞಾನಾವಸ್ಥೆಯೊಂದೇ ತಿಳಿದಿರುವದು. ಒಬ್ಬನು ಎದ್ದು ನಿಂತು "ನಾನು ಪಾಪಿಯು" ಎಂದರೆ ಅವನು ಹೇಳುವದು ನಿಜವಲ್ಲ, ಏಕೆಂದರೆ ಅವನು ತನ್ನನ್ನು ತಾನು ಅರಿಯನು. ಅವನು ಅಜ್ಞಾನಿಗಳಲ್ಲೆಲ್ಲ ಅಜ್ಞಾನಿಯು ; ತನ್ನ ವಿಷಯದಲ್ಲಿ ಕೂಡ ಅವನಿಗೆ ಒಂದೇ ಒಂದು ಭಾಗವು ತಿಳಿದಿದೆ, ಏಕೆಂದರೆ ಅವನು ತಾನು ನಿಂತಿರುವ ಭೂಮಿಕೆಯ ಒಂದು ಭಾಗವನ್ನು ಮಾತ್ರ ಬಲ್ಲವನು. ಈ ಜಗತ್ತಿನ ವಿಷಯವೂ ಹೀಗೆಯೇ. ಬುದ್ಧಿಯಿಂದ ಅದರ ಒಂದಂಶವನ್ನು ಮಾತ್ರ ತಿಳಿದುಕೊಳ್ಳಬಹುದು, ಆದರೆ ಪ್ರಕೃತಿಯಲ್ಲಿ ಅದೆಲ್ಲವೂ, ಎಂದರೆ ಅಧೋವಿಜ್ಞಾನ, ವಿಜ್ಞಾನ, ಅತಿವಿಜ್ಞಾನ ವ್ಯ ಮಹತ್ತು ಸಮಷ್ಟಿಮಹತ್ತು ಮತ್ತು ಈಚಿನ ಎಲ್ಲಾ ವಿಕೃತಿಗಳು–ಇವೆಲ್ಲವೂ ಸೇರಿವೆ;

---

ತಿಳಿದುಬರುತ್ತ ಯೆಂದು ಹೇಳಬಹುದಾಗಿದೆ. ಏಕೆಂದರೆ ಕನಸಿನಲ್ಲಿ ಎಚ್ಚರದ ಪ್ರಪಂಚದಂತೆಯೇ ಅನಂತ ಪ್ರಪಂಚಗಳು ತೋರಿ ಅಡಗುವವೆಂಬುದು ನಮ್ಮ ಅನುಭವದಲ್ಲಿದೆ. ಆಯಾ ಪ್ರಪಂಚದಲ್ಲಿಯೂ ನಾವು ಹೀಗೆಯೇ ವ್ಯವಹಾರಮಾಡುತ್ತೇವೆ. ಸುಷುಪ್ತಿಸಮಾಧಿಗಳಲ್ಲಿ ಜಗತ್ತನ್ನೂ ವಿಜ್ಞಾನವನ್ನೂ ಮೀರಿದ ಅನುಭವವು ನಮಗೆ ಉಂಟು.

*ಸ್ವಾಮಿಗಳವರು ಉದಾಹರಿಸಿರುವ ಕೊನೆಯ ಮೂರು ಗೀತಾವಚನಗಳಿಗೆ ಇಲ್ಲಿ ಕೊಟ್ಟಿರುವ ಅರ್ಥವೇ ಸಂದರ್ಭಕ್ಕೂ ಸರಿಯಾಗಿ ಹೊಂದುವಂತಿದೆಯೆಂದು ಹೇಳಲಾಗುವದಿಲ್ಲ. ಜಗತ್ತು, ಈಶ್ವರ– ಎಂಬ ವಿಭಾಗವೂ ಇವುಗಳ ವಿಷಯದಲ್ಲಿ ನಮಗೆ ಈಗ ಇರುವ ಅಭಿಪ್ರಾಯವೂ ಪರಿಚ್ಛಿನ್ನವಾಗಿರುತ್ತವೆ; ಇವುಗಳ ಪೂರ್ಣಾಭಿಪ್ರಾಯವಾಗಬೇಕಾದರೆ ಒಂದೇ ಒಂದು ಪರಿಚ್ಛಿನ್ನಾನುಭವಭೂಮಿಕೆಯಿಂದ ನೋಡಿದ ತಿಳಿವಳಿಕೆಯು ಸಾಲದು, ಅತಿಸಂವೇದನಾಸ್ಥಿತಿಯಂಥ ಅನುಭವವೂ ಬೇಕು– ಎಂಬುದಿಷ್ಟನ್ನು ಮಾತ್ರ ಪ್ರಕೃತದಲ್ಲಿ ಸ್ವಾಮಿಗಳವರ ಪರಮತಾತ್ಪರ್ಯವೆಂದು ಇಟ್ಟುಕೊಂಡರೆ ಸಾಕಾಗಿರುತ್ತದೆ.

ಇವು ಬುದ್ಧಿಯನ್ನು ಮೀರಿರುತ್ತವೆ.

ಪ್ರಕೃತಿಯಲ್ಲಿ ಆಗುವ ಮಾರ್ಪಾಡಿಗೆ ಕಾರಣವೇನು ? ಪ್ರತಿಯೊಂದೂ, ಪ್ರಕೃತಿಯೆಲ್ಲವೂ, ಜಡವೇ ಎಂದು ಇದುವರೆಗಿನ ವಿಚಾರದಿಂದ ಸಿದ್ಧವಾಗಿರುತ್ತದೆ. ಅದೆಲ್ಲವೂ ನಿಯಮಬದ್ಧವಾಗಿರುತ್ತದೆ. ಅದು ಸಂಯೋಗದಿಂದಾಗಿರುತ್ತದೆ ; ಜಡವಾಗಿರುತ್ತದೆ. ಮನಸ್ಸು, ಬುದ್ಧಿ, ಅಹಂಕಾರ– ಎಲ್ಲವೂ ಜಡವೆ. ಆದರೆ ಅವುಗಳಲ್ಲೆಲ್ಲ ಯಾವದೋ ಒಂದು ತತ್ತ್ವದ ಚಿತ್ತವು ಪ್ರತಿಬಿಂಬಿತವಾಗಿರುತ್ತದೆ. ಈ ತತ್ತ್ವವನ್ನು ಸಾಂಖ್ಯರು ಪುರುಷನೆಂದು ಹೆಸರಿಟ್ಟಿರುತ್ತಾರೆ. ಪ್ರಕೃತಿಯಲ್ಲಿ ಆಗುತ್ತಿರುವ ಈ ವಿಕಾರಗಳಿಗೆಲ್ಲ ಪುರುಷನು ಸನ್ನಿಧಿಮಾತ್ರದಿಂದ ಕಾರಣನಾಗಿರುತ್ತಾನೆ. ಎಂದರೆ ಸಾಮಾನ್ಯವ್ಯಾಪಕದೃಷ್ಟಿಯಿಂದ ನೋಡಿದರೆ ಈ ಪುರುಷನೇ ವಿಶ್ವದ ಈಶ್ವರನು. ಈಶ್ವರನ ಸಂಕಲ್ಪದಿಂದ ಜಗತ್ತು ನಿರ್ಮಾಣವಾಯಿತೆನ್ನುವರಷ್ಟೆ ; ವ್ಯವಹಾರಕ್ಕೆ ಇದೇನೋ ಸಾಕು, ಆದರೆ ಅದು ಪರಮಾರ್ಥವಾಗಲಾರದು. ಸಂಕಲ್ಪವು ಹೇಗಾದೀತು ? *ಸಂಕಲ್ಪವೆಂಬುದು ಪ್ರಕೃತಿಯಲ್ಲಾಗುವ ಮೂರನೆಯ ಅಥವಾ ನಾಲ್ಕನೆಯ ವಿಕಾರವು– ಅವುಗಳಿಗಿಂತ ಮೊದಲು ಎಷ್ಟೋ ಪದಾರ್ಥಗಳಿರುವವು; ಅವುಗಳನ್ನು ಸೃಷ್ಟಿಮಾಡಿದ್ದು ಯಾವದು? ಸಂಕಲ್ಪವೆಂಬುದು ಸಂಯುಕ್ತಪದಾರ್ಥವು, ಯಾವಯಾವದು ಸಂಹತವಾಗಿರುವದೋ ಅದು ಪ್ರಕೃತಿಯ ಕಾರ್ಯವಾಗಿರುತ್ತದೆ. ಆದ್ದರಿಂದ ಸಂಕಲ್ಪದಿಂದ ಪ್ರಕೃತಿಯುಂಟಾಗಲಾರದು. ಆದ್ದರಿಂದ ಈಶ್ವರನ ಸಂಕಲ್ಪವು ಜಗತ್ತನ್ನು ಸೃಷ್ಟಿಮಾಡಿರುವದೆಂದು ಹೇಳುವದಕ್ಕೆ ಅರ್ಥವಿಲ್ಲ. ಮನುಷ್ಯನ ಅಂತಃಕರಣದಲ್ಲಿ ಒಂದಂಶವನ್ನು ಮಾತ್ರ ಸಂಕಲ್ಪವು ಆವರಿಸಿಕೊಂಡಿರುತ್ತದೆ. ಅದು ನಮ್ಮ ಮೆದುಳನ್ನು ಕೆಲಸಮಾಡಿಸುತ್ತದೆಂದು ಕೆಲವರು ಹೇಳುತ್ತಾರೆ. ✝ಇದು ನಿಜವಾದರೆ ನಮಗೆ ಮೆದುಳಿನ ಕೆಲಸವನ್ನು ನಿಲ್ಲಿಸುವದಕ್ಕೆ ಸಾಧ್ಯವಾಗುತ್ತಿತ್ತು. ಆದರೆ ಅದು ಆಗುವದಿಲ್ಲ. ಆದ್ದರಿಂದ ಇದು ಸಂಕಲ್ಪದ ಕೆಲಸವಲ್ಲ. ಹೃದಯವನ್ನು ಚಲಿಸುವಂತೆ ಮಾಡುವದು ಯಾವದು? ಸಂಕಲ್ಪವಲ್ಲ, ಅದು ನಿಜವಾದರೆ ಸಂಕಲ್ಪಮಾತ್ರದಿದ ಅದನ್ನು ನಾವು ನಿಲ್ಲಿಸಿಬಿಡಬಹುದಾಗಿತ್ತು. ನಮ್ಮ ಶರೀರವನ್ನಾಗಲಿ

---

* ಸಂಕಲ್ಪವಾದದ ತಿರುಳೇನೆಂದರೆ ನಮ್ಮಲ್ಲಿ ಕಾಣಬರುವ ವ್ಯಾಪಾರಗಳೆಲ್ಲ ಯಾವದರ ಅಧೀನವಾಗಿರುವದೋ ಅದೇ ಸಂಕಲ್ಪವೆಂಬ ನಮ್ಮ ಮೂಲರೂಪವು. ಪ್ರಪಂಚದಲ್ಲಿ ಕಾಣಬರುವ ಸಕಲ ವ್ಯಾಪಾರಗಳೂ ಇದರಂತೆಯೇ ಒಂದು ಸಂಕಲ್ಪದಿಂದ ಉಂಟಾಗಿರುತ್ತವೆ ; ಆದರೆ ಅದು ಜ್ಞಾನರೂಪವಾದ ಸಂಕಲ್ಪವಲ್ಲ, ಅಜ್ಞಾನಸಂಕಲ್ಪ (Unconscious Will) ಈ ವಾದವನ್ನು ಮುಖ್ಯವಾಗಿ ಷೋಪನಹ್ಯಾವರ್ (Schopenhauer) . ಎಂಬಾತನು ಮುಂದಕ್ಕೆ ತಂದಿದ್ದನು. ಪ್ರಕೃತಿಯಲ್ಲಿರುವ ವ್ಯಾಪಾರವು ಸಂಕಲ್ಪಕೃತವಲ್ಲ ; ಸಂಕಲ್ಪಾದಿಸಕಲರೂಪದಲ್ಲಿ ತೋರಿಕೊಳ್ಳುತ್ತಿರುವ ಪ್ರಕೃತಿಯು ಪುರುಷನ ಸನ್ನಿಧಿಮಾತ್ರದಿಂದ ಸೂಜಿಗಲ್ಲಿನ ಬಳಿಯಿರುವ ಸೂಜಿಯಂತೆ ಕೆಲಸಮಾಡುತ್ತಿರುವದು– ಎಂಬ ಸಾಂಖ್ಯಸಿದ್ಧಾಂತವನ್ನು ಮನಗಾಣಿಸುವದಕ್ಕಾಗಿ ಈ ಸಂಕಲ್ಪವಾದವನ್ನು ಸ್ವಾಮಿಗಳವರು ಖಂಡಿಸುವದಕ್ಕೆ ಯತ್ನಮಾಡಿರುತ್ತಾರೆ. ಖಂಡನೆಯ ಯುಕ್ತಿಗಳಲ್ಲಿ ಕೆಲವು ದುರ್ಬಲವಾಗಿದ್ದರೂ ತೀರ್ಮಾನವು ನಿರ್ದುಷ್ಟವಾಗಿದೆಯೆಂದು ಹೇಳಬೇಕಾಗಿಲ್ಲ.

✝ ಈ ಭಾಗವನ್ನು ಉದ್ಬೋಧನಸಂಸ್ಕರಣದಂತೆ ಕನ್ನಡಿಸಿದೆ.

ಪ್ರಪಂಚವನ್ನಾಗಲಿ ಮಾರ್ಪಡಿಸುತ್ತಿರುವದು ಸಂಕಲ್ಪವಲ್ಲ, ಸಂಕಲ್ಪವೆಂಬುದೂ ಅದರ ರೂಪಾಂತರಗಳಲ್ಲಿ ಒಂದಾಗಿದೆ. ಇಡಿಯ ಜಗತ್ತೇ ಸಂಕಲ್ಪದಿಂದ ನಡೆಯುತ್ತಲಿಲ್ಲ. ಆದ್ದರಿಂದಲೇ ಬರಿಯ ಸಂಕಲ್ಪವಾದದಿಂದ ಇದೆಲ್ಲಕ್ಕೂ ಕಾರಣವನ್ನು ತೋರಿಸುವದಕ್ಕಾಗುವಂತಿಲ್ಲ. ಸಂಕಲ್ಪವೇ ಈ ಶರೀರವ್ಯಾಪಾರವನ್ನು ಮಾಡಿಸುತ್ತಿರುವದೆಂದು ನಾನು ಇಟ್ಟುಕೊಂಡು, ಅದು ನಡೆಯದಿರುವಾಗ ಸಿಡಿಗುಟ್ಟುವದು ಧುಮುಗುಟ್ಟುವದು– ಹೀಗೆಲ್ಲ ಮಾಡಬೇಕಾಗಿಬರುತ್ತದೆ. ಇಲ್ಲಿ ನನ್ನದೇ ದೋಷವು, ಏಕೆಂದರೆ ಸಂಕಲ್ಪವೇ ಚಾಲಕಕಾರಣವೆಂದು ಇಟ್ಟುಕೊಳ್ಳುವದಕ್ಕೆ ನನಗೆ ಕಾರಣವೇನಿತ್ತು ? ಇದರಂತೆ ಬ್ರಹ್ಮಾಂಡದ ವಿಷಯದಲ್ಲಿ ಅದು ಸಂಕಲ್ಪದಿಂದಲೇ ಚಲಿಸುತ್ತಿರುವದೆಂದು ಇಟ್ಟುಕೊಂಡು, ವಿದ್ಯಮಾನಗಳು ಅದಕ್ಕೆ ಸರಿಹೊಂದದಿದ್ದರೆ ಅಲ್ಲಿಯೂ ನನ್ನದೇ ತಪ್ಪು. ಹೀಗೆ ಈ ಪುರುಷನು ಸಂಕಲ್ಪವಲ್ಲ; ಅದು ಜ್ಞಾನವೂ ಅಲ್ಲ, ಏಕೆಂದರೆ ಜ್ಞಾನವೆಂಬುದು ಸಂಹತಪದಾರ್ಥವಾಗಿದೆ. ಯಾವದಾದರೊಂದು ಬಗೆಯ ಭೌತಿಕವಸ್ತುವಿಲ್ಲದೆ ಜ್ಞಾನವೆಂಬುದು ಉಂಟಾಗಲಾರದು. ಮನುಷ್ಯನಲ್ಲಿ ಈ ಭೌತಿಕವಸ್ತುವು ಮೆದುಳಿನ ರೂಪವನ್ನು ಧರಿಸಿರುತ್ತದೆ. ಎಲ್ಲೆಲ್ಲಿ ಜ್ಞಾನವಿದೆಯೋ ಅಲ್ಲಲ್ಲಿ ಒಂದಲ್ಲದಿದ್ದರೆ ಒಂದು ರೂಪದಲ್ಲಿ ಭೌತಿಕವಸ್ತುವು ಇರಲೇಬೇಕು. ಹೀಗೆ ಜ್ಞಾನವೆಂಬುದು ಸಂಹತವಸ್ತುವೆಂದಾಯಿತು. ಹಾಗಾದರೆ ಪುರುಷನೆಂಬುದೇನು ? ಅದು ಜ್ಞಾನವೂ ಅಲ್ಲ, ಸಂಕಲ್ಪವೂ ಅಲ್ಲ– ಇವೆರಡಕ್ಕೂ ಅದೇ ಕಾರಣವು. ಅದರ ಸನ್ನಧಿಯೇ ಇವುಗಳ ಭಾವನೆಗೂ ಸಂಘಾತಕ್ಕೂ ಕಾರಣವಾಗಿರುವದು. *ಈ ಪುರುಷನಿಗೆ ಉಪಮಾನವಾಗಿ ಸನ್ನಿಧಿಮಾತ್ರದಿಂದ ರಸಾಯನಕ್ರಿಯೆಗೆ ಉತ್ತೇಜನಕೊಡುವ ವಸ್ತುವಿಶೇಷಗಳನ್ನು ಉದಾಹರಿಸಬಹುದು. †ಚಿನ್ನವನ್ನು ಕರಗಿಸುವಾಗ ಹಾಕುವ ಬಿಳಿಗಾರವು ಇಂಥ ಒಂದು ವಸ್ತುವಾಗಿರುತ್ತದೆ. ಬಿಳಿಗಾರವು ತಾನು ಇದ್ದಂತೆಯೇ ಬೇರೆಯಾಗಿಯೇ ಇದ್ದುಕೊಂಡಿರುತ್ತದೆ–ಯಾದರೂ ಈ ವಿಲಯನಕ್ರಿಯೆಗೆ ಅದರ ಸನ್ನಿಧಿಯು ಅತ್ಯಂತ ಅವಶ್ಯಕವಾಗಿರುತ್ತದೆ. ಪುರುಷನೂ ಹಾಗೆಯೇ. ಅದು ಪ್ರಕೃತಿಯೊಡನೆ ಬೆರೆಯುವದಿಲ್ಲ. ಅದು ಬುದ್ಧಿಯಲ್ಲ; ಎಂದರೆ ಮಹತ್ತೂ ಅಲ್ಲ, ಅದರ ವಿಕಾರಗಳೂ ಅಲ್ಲ. ಶುದ್ಧಪರಿಪೂರ್ಣವಾದ ಆತ್ಮನೇ ಅದು. "ನಾನು ಸಾಕ್ಷಿಯು, ನನ್ನ ಸಾಕ್ಷಿತ್ವದಿಂದಲೇ ಪ್ರಕೃತಿಯು ಚೇತನಾಚೇತನಗಳನ್ನೆಲ್ಲ ಹಡೆಯುತ್ತಿರುವದು" (ಗೀ. 9–10).

ಹಾಗಾದರೆ ಈ ಪ್ರಕೃತಿಯಲ್ಲಿರುವ ಚೈತನ್ಯವು ಎಲ್ಲಿಂದ ಬಂದಿತು ? ಇದಕ್ಕೆ ಪುರುಷನೇ ಆಧಾರವು, ಅದು ಪುರುಷನ ಸ್ವಭಾವವೇ ಆಗಿರುತ್ತದೆ. ಅದು ಯಾವದಕ್ಕೂ ವಿಷಯವಾಗತಕ್ಕದ್ದಲ್ಲ, ತಿಳಿಯಲ್ಪಡತಕ್ಕದ್ದಲ್ಲ ; ತಿಳಿವಳಿಕೆಯೆಂದು ನಾವು ಕರೆಯುತ್ತಿರುವದಕ್ಕೆಲ್ಲ ತಿರುಳೇ ಅದು. ಈ ಪುರುಷನು ಜ್ಞಾನವಲ್ಲ, ಏಕೆಂದರೆ ಜ್ಞಾನವೆಂಬುದು ಸಂಯುಕ್ತವಸ್ತುವಾಗಿದೆ ; ಆದರೆ ಈ ಜ್ಞಾನದಲ್ಲಿ ಪ್ರಕಾಶಾತ್ಮಕವಾಗಿಯೂ ನಿರ್ಮಲವಾಗಿಯೂ ಇರುವದೆಲ್ಲ ಪುರುಷನಿಗೆ ಸೇರಿದ್ದು. ಪುರುಷನಲ್ಲಿ

---

* ಇಲ್ಲಿ ಕಾರಣವೆಂದರೆ ಉಪಾದಾನಕಾರಣವೆಂದರ್ಥವಲ್ಲ. ಅದರ ವ್ಯಾಪಾರಗಳಿಗೆ ನಿಮಿತ್ತಕಾರಣವೆಂದು ಅರ್ಥ, ಮುಂದಿನ ವಿವರಣೆಯಲ್ಲಿ ಇದು ಸ್ಪಷ್ಟವಾಗುತ್ತದೆ.

† ಈ ದೃಷ್ಟಾಂತೋಪನ್ಯಾಸವು ಉದ್ಬೋಧನಸಂಸ್ಕರಣದಲ್ಲಿ ಮಾತ್ರ ಇರುತ್ತದೆ.

ಚೈತನ್ಯವಿದೆ ; ಆದರೆ ಪುರುಷನು ಜ್ಞಾನವುಳ್ಳವನಲ್ಲ, ಜ್ಞಾತೃವಲ್ಲ. ಪುರುಷನಲ್ಲಿ ಚಿತ್ತು ಮತ್ತು ಪ್ರಕೃತಿ– ಈ ಎರಡರ ಬೆರಕೆಯೇ ನಮಗೆ ಬುದ್ಧಿಯು, ಅರಿವು– ಎಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ಪ್ರಪಂಚದಲ್ಲಿರುವ ಸಂತೋಷವೂ ಸುಖವೂ ಪ್ರಕಾಶವೂ– ಎಲ್ಲವೂ ಪುರುಷನದೇ ; ಆದರೆ ಅದು ಪುರುಷ, ಪ್ರಕೃತಿ– ಈ ಎರಡರ ಸಂಯೋಗದಿಂದಾಗಿರುತ್ತದೆ. * ಎಲ್ಲೆಲ್ಲಿ ಸೌಖ್ಯವಿರುವದೋ, ಎಲ್ಲೆಲ್ಲಿ ಆನಂದವಿರುವದೋ, ಅಲ್ಲೆಲ್ಲ ಆ ಪುರುಷನೆಂಬ ಅಮೃತದ ಒಂದು ಕಿಡಿಯಿರುವದು. ಈ ಪುರುಷನೇ ಜಗತ್ತನ್ನೆಲ್ಲ ತನ್ನ ಕಡೆಗೆ ಎಳೆಯುತ್ತಿರುವದು; ಅದು ಅಸಂಗವಾಗಿ ಜಗತ್ತಿಗೆ ಯಾವ ಸಂಬಂಧವೂ ಇಲ್ಲದ್ದಾದರೂ ಅದು ಇಡಿಯ ಜಗತ್ತನ್ನೇ ತನ್ನ ಕಡೆಗೆ ಎಳೆಯುತ್ತಿರುವದು. ಒಬ್ಬೊಬ್ಬನು ಚಿನ್ನವನ್ನು ಹುಡುಕಿಕೊಂಡು ಹೋಗುತ್ತಾನಲ್ಲವೆ ? ಅದೇಕೆಂದರೆ ಅದರಲ್ಲಿ ಪುರುಷನ ಒಂದು ಕಿಡಿಯಿರುತ್ತದೆ ; ಆದರೆ ಅವನಿಗೆ ಇದು ತಿಳಿಯದು, ಅಷ್ಟೆ. ಮನುಷ್ಯನಿಗೆ ಮಕ್ಕಳ ಮೇಲೆ ಪ್ರೀತಿಯುಂಟಾದರೆ ಹೆಂಡತಿಗೆ ಗಂಡನ ಮೇಲೆ ಪ್ರೀತಿಯುಂಟಾದರೆ ಅಲ್ಲಿ ಅವರನ್ನು ಸೆಳೆಯುವ ಶಕ್ತಿ ಯಾವದು ? ಆ ಮಕ್ಕಳ ಆ ಗಂಡನ ಆಧಾರವಾಗಿರುವ ಪುರುಷನ ಕಿಡಿಯೇ. ✝ ಪ್ರತಿಯೊಂದಕ್ಕೂ ಅದೇ ಆಧಾರವು, ಆದರೆ ಅದನ್ನು ಭೌತಿಕವಸ್ತುವು ಮುಸುಕಿಕೊಂಡಿರುವದು, ಮತ್ತೆ ಯಾವದೊಂದೂ ನಮ್ಮನ್ನು ಎಳೆಯಲಾರದು. ಈ ಅಚೇತನಪ್ರಪಂಚದಲ್ಲಿ ಪುರುಷನೊಬ್ಬನೇ ಚೇತನನು. ☞

ಇದೇ ■ ಸಾಂಖ್ಯರು ಹೇಳುವ ಪುರುಷನು. ಹೀಗಿರುವದರಿಂದ ಈ ಪುರುಷನು ಸರ್ವವ್ಯಾಪಿಯಾಗಿರಬೇಕೆದು ತಾನೇ ಸಿದ್ಧವಾಗುತ್ತದೆ; ಏಕೆಂದರೆ ಸರ್ವವ್ಯಾಪಿಯಲ್ಲದಿದ್ದರೆ ಪರಿಚ್ಛಿನ್ನವಾಗಿರಬೇಕು. ಪರಿಚ್ಛೇದಗಳೆಲ್ಲ ಸಾದಿಯಾಗಿರಬೇಕು, ಯಾವದು ಸಾದಿಯೋ ಅದು ಹುಟ್ಟಿ ಸಾಯಲೇಬೇಕು. ಪುರುಷನು ಪರಿಚ್ಛಿನ್ನನಾಗಿದ್ದರೆ ಅದು ನಾಶವಾಗಬೇಕು; ಅದು ಸ್ವತಂತ್ರವಾಗಿರಲಾರದು, ಕೊನೆಯ ತತ್ತ್ವವಾಗಲಾರದು, ಅದೂ ಮತ್ತೊಂದರಿಂದ ಆಗಿರಬೇಕೆಂದಾಗುವದು. ಆದ್ದರಿಂದ ಅದು ಸರ್ವವ್ಯಾಪಕವಾಗಿರಬೇಕು. ಕಪಿಲನ ಮತದಲ್ಲಿ ಅನೇಕ ಪುರುಷರುಂಟು. ಒಬ್ಬನೇ ಒಬ್ಬ ಪುರುಷನಲ್ಲ, ಅನಂತಸಂಖ್ಯಾಕರಾಗಿರುವರು ; ನನ್ನಲ್ಲೊಬ್ಬ, ನಿನ್ನಲ್ಲೊಬ್ಬ, ಪ್ರತಿಯೊಬ್ಬರಲ್ಲಿಯೂ ಒಬ್ಬೊಬ್ಬ ಪುರುಷನುಂಟು. ಒಂದೊಂದೂ ಅನಂತವಾಗಿರುವ ಅನಂತ ಸಂಖ್ಯಾಕವಾದ ವೃತಗಳು ಈ ಜಗತ್ತಿನಲ್ಲಿ ವ್ಯಾಪಿಸಿಕೊಂಡಿರುವವು. ಪುರುಷನು ಹುಟ್ಟುವದೂ ಇಲ್ಲ, ಸಾಯುವದೂ ಇಲ್ಲ. ಅದು ಮನಸ್ಸೂ ಅಲ್ಲ, ಭೌತಿಕವಸ್ತುವೂ ಅಲ್ಲ; ಅದರ ಪ್ರತಿಬಿಂಬವೊಂದೇ ನಮಗೆ ಗೊತ್ತಿರುವದು. ಅದು ಸರ್ವವ್ಯಾಪಕವಾಗಿದ್ದಮೇಲೆ ಅದಕ್ಕೆ ಸಾವೂ ಇರಲಾರದು, ಹುಟ್ಟೂ

---

* ಗೀತೆಯ 13–26 ರ ಸೂಚನೆ

✝ ಬೃ. 4.–3–32 ರ ಸೂಚನೆ

☞ ಕ. 2–2–13ರ ಆರ್ಥಿಕಾರ್ಥ.

■ ಪುರುಷ, ಆತ್ಮ– ಎಂಬ ಮಾತುಗಳನ್ನು ಸ್ವಾಮಿಗಳವರು ತತ್ತ್ವವಾಚಕವೆಂದು ಭಾವಿಸಿ ಅದು ಎಂದೇ ವ್ಯವಹರಿಸಿರುತ್ತಾರೆ ; ಪುರುಷನಿಗೆ ಸ್ತ್ರೀ ಪುಲ್ಲಿಂಗಭೇದವಿಲ್ಲವೆಂಬುದು ಸ್ಪಷ್ಟವೇ ಆಗಿರುತ್ತದೆ.

ಇರಲಾರದು– ಎಂಬುದು ಕಡುಖಂಡಿತ. ಪ್ರಕೃತಿಯು ತನ್ನ ಛಾಯೆಯನ್ನು ಅದರ ಮೇಲೆ ಹಾಕುತ್ತಿರುವದು. ಹುಟ್ಟುಹೊಂದುಗಳ ಛಾಯೆಯನ್ನು ಅದರಮೇಲೆ ಹಾಕುತ್ತಿರುವದು. ಆದರೆ ಸ್ವತಃ ಈ ಪುರುಷನು ಶುದ್ಧವಾಗಿಯೇ ಇರುವದು.

ಇಲ್ಲಿಂಯುವರೆಗೆ ಸಾಂಖ್ಯದರ್ಶನವು ಆಶ್ಚರ್ಯಕರವಾಗಿರುವದೆಂಬುದನ್ನು ಕಂಡುಕೊಂಡದ್ದಾಯಿತು. ಇನ್ನು ಇದರ ಮೇಲಿನ ಖಂಡನಯುಕ್ತಿಗಳನ್ನು ತೆಗೆದುಕೊಳ್ಳೋಣ. ಇಲ್ಲಿಯವರೆಗೆ ತತ್ತ್ವವಿಭಜನೆಯು ನಿರ್ದುಷ್ಟವಾಗಿರುತ್ತದೆ, ಅದರ ಮನಃಶಾಸ್ತ್ರವಿಚಾರವು ನಿರ್ವಿವಾದವಾಗಿರುತ್ತದೆ. ಪ್ರಕೃತಿಯನ್ನು ಸೃಷ್ಟಿಸಿರುವವರು ಯಾರು ?– ಎಂದು ಕೇಳಿದರೆ ಕಪಿಲನು ಪ್ರಕೃತಿಯು ಅನಾದಿಯೆಂದು ಉತ್ತರಹೇಳಿದ್ದಾನೆ. ಪುರುಷನು ಅನಾದಿಯೆಂದೂ ಪುರುಷರು ಅನಂತಸಂಖ್ಯಾಕರಾಗಿರುವರೆಂದೂ ಆತನು ಹೇಳಿದಾನೆ. ಈ ಕೊನೆಯ ವಾದವನ್ನು ನಾವು ಖಂಡಿಸಬೇಕಾಗುವದು. ಇದಕ್ಕಿಂತ ಉತ್ತಮವಾದ ಉತ್ತರವೊಂದನ್ನು ಕಂಡುಕೊಂಡು ವೇದಾಂತದ ಭೂಮಿಕೆಗೆ ಏರಬೇಕಾಗುವದು. ಮೊಟ್ಟಮೊದಲು ಇವೆರಡೂ ಹೇಗೆ ಅನಂತವಾಗಿದ್ದಾವು ?– ಎಂಬುದೇ ನಮ್ಮ ಆಕ್ಷೇಪಣೆ–ಯಾಗಿರುವದು. ಇದು ನಿರ್ದುಷ್ಟವಾದ ತೀರ್ಮಾನವಲ್ಲವೆಂದೂ ಇದರಲ್ಲಿ ಪೂರ್ಣವಾದ ಉತ್ತರವು ದೊರೆತಂತೆ ಆಗಲಿಲ್ಲವೆಂದೂ ನಾವು ವಾದಮಾಡಬೇಕಾಗುವದು. ಆಗ ವೇದಾಂತಿಗಳು ಈ ಎಲ್ಲಾ ಕಷ್ಟಗಳಿಂದಲೂ ಪಾರಾಗಿ ನಿರ್ದುಷ್ಟವಾದ ಉತ್ತರವನ್ನು ಹೇಗೆ ಕಂಡುಕೊಂಡಿರುವರೆಂಬುದು ಕಂಡುಬರುತ್ತದೆ. ಹೀಗಿದ್ದರೂ ಇದರ ಕೀರ್ತಿಯೆಲ್ಲ ಕಪಿಲನಿಗೇ ಸೇರಿದ್ದು. ಏಕೆಂದರೆ ಕಟ್ಟಡವು ಸ್ವಲ್ಪ ಹೆಚ್ಚು ಕಡಿಮೆ ಮುಗಿದಂತೆ ಆದಮೇಲೆ ಅದರಲ್ಲಿ ನಯಗೆಲಸಮಾಡುವದು ಬಹುಸುಲಭ. *

..............

* ಸಾಂಖ್ಯರು ಚೈತನ್ಯಸ್ವರೂಪವನ್ನು ಗೊತ್ತುಮಾಡಿರುತ್ತಾರೆ, ಪ್ರಕೃತಿಗೂ ಪುರುಷನಿಗೂ ಯಾವ ಸಂಬಂಧವಿಲ್ಲವೆಂತಲೂ ಗೊತ್ತುಪಡಿಸಿರುತ್ತಾರೆ : ಆದರೆ ಪ್ರಕೃತಿಯು ನಿಜವಾಗಿ ಸ್ವರೂಪದಿದ ಅದ್ವಿತೀಯಪರಮಾತ್ಮನೇ, ಈಗ ತೋರುವ ರೂಪದಿಂದ ಅದು ಮಿಥ್ಯಾರೂಪವಾದದ್ದೆಂಬುದನ್ನಾಗಲಿ ಚೈತನ್ಯದಲ್ಲಿ ಸಂಖ್ಯಾದಿಗುಣಗಳು ಇರಲಾರವೆಂಬುದನ್ನಾಗಲಿ ಅವರು ಕಂಡುಹಿಡಿಯಲಿಲ್ಲ. ಆದ್ದರಿಂದ ಈ ಎರಡು ವಿಷಯುಗಳನ್ನು ಸೇರಿಸಿ ಸಾಂಖ್ಯಸಿದ್ಧಾಂತವನ್ನು ವೇದಾಂತಿಗಳು ಪರಿಪೂರ್ಣಗೊಳಿಸಿರುತ್ತಾರೆಂದು ಭಾವ.

# 12

# ಸಾಂಖ್ಯವೂ ವೇದಾಂತವೂ

ಮೊದಲು ಸಾಂಖ್ಯದರ್ಶನದ ಸಾರವನ್ನು ನಿಮಗೆ ತಿಳಿಸುವೆನು. ಏಕೆಂದರೆ ಈ ಉಪನ್ಯಾಸದಲ್ಲಿ ಅದರ ನ್ಯೂನತೆಗಳು ಯಾವವು, ವೇದಾಂತವು ಎಲ್ಲಿ ಹೇಗೆ ಅದನ್ನು ಪರಿಪೂರ್ತಿಗೊಳಿಸುತ್ತದೆ– ಎಂಬುದನ್ನು ಕಂಡುಕೊಳ್ಳ ಬೇಕಾಗಿರುತ್ತದೆ. ಸಾಂಖ್ಯದರ್ಶನದಂತೆ ಮನಸ್ಸು, ಬುದ್ಧಿ, ವಿಚಾರ, ರಾಗ, ದ್ವೇಷ, ಸ್ಪರ್ಶ, ರಸ– ಎಂದು ನಾವು ಕರೆಯುತ್ತಿರುವದೆಲ್ಲ ಪ್ರಕೃತಿಯಿಂದಾಗಿರುವದು, ಪ್ರಕೃತಿಯಿಂದಲೇ ಎಲ್ಲವೂ ಉಂಟಾಗಿರುವದು– ಎಂಬುದನ್ನು ನೀವು ನೆನಪಿನಲ್ಲಿಟ್ಟಿರಬೇಕು. ಈ ಪ್ರಕೃತಿಯಲ್ಲಿ ಮೂರು ಬಗೆಯ ಮೂಲಧಾತುಗಳಿವೆ; ಇವುಗಳಲ್ಲಿ ಒಂದಕ್ಕೆ **ಸತ್ತ್ವ**ವೆಂದು ಹೆಸರು, ಮತ್ತೊಂದಕ್ಕೆ **ರಜಸ್ಸು** ಎಂದು ಹೆಸರು, ಮಗುದೊಂದಕ್ಕೆ **ತಮಸ್ಸು** ಎಂದು ಹೆಸರು. ಇವು ಗುಣಗಳಲ್ಲ, * ಮೂಲಧಾತುಗಳು ; ಇವುಗಳಿಂದಲೇ ಅಖಿಲಪ್ರಪಂಚವೂ ಪರಿಣಾಮ ದಿಂದಾಗಿರುತ್ತದೆ. ಕಲ್ಪಾದಿಯಲ್ಲಿ ಇವು ಸಮಪ್ರಧಾನವಾಗಿರುತ್ತವೆ, ಸೃಷ್ಟಿಯು ಮೊದಲಾಗುತ್ತಲೂ ಅವು ಒಂದರಲ್ಲೊಂದು ಮಿಶ್ರವಾಗುತ್ತಾ ಆಗುತ್ತಾ ಕೊನೆಗೆ ಪ್ರಪಂಚವಾಗುತ್ತವೆ. ಇವುಗಳಲ್ಲಿ ಮೊದಲನೆಯ ವ್ಯಕ್ತರೂಪವನ್ನು ಸಾಂಖ್ಯರು **'ಮಹತ್ತು'** ಎಂದು ಕರೆಯುತ್ತಾರೆ, ಇದರಿಂದ ಅಹಂಕಾರವು ಉಂಟಾಗುತ್ತದೆ. ಈ ಅಹಂಕಾರದಿಂದ ಮನಸ್ಸು, ಇಂದ್ರಿಯಗಳು, ತನ್ಮಾತ್ರೆಗಳು (ಶಬ್ದಾಣುಗಳು, ಸ್ಪರ್ಶಾಣುಗಳು, ರಸಾಣುಗಳು, ಇತ್ಯಾದಿಯಾದವು)– ಇವೆಲ್ಲ ಉಂಟಾಗುತ್ತವೆ.✝ ಎಲ್ಲಾ ಸೂಕ್ಷ್ಮಾಣುಗಳೂ ಜ್ಞಾನದಿಂದಲೇ ಉಂಟಾಗುತ್ತವೆ; ಈ ಸೂಕ್ಷ್ಮಾಣುಗಳಿಂದ "ಮ್ಯಾಟರ್" (ವಸ್ತು) ವೆಂದು ☞ ನಾವು ಕರೆಯುತ್ತಿರುವ ಪಂಚಸ್ಥೂಲಭೂತಗಳು ಉಂಟಾಗುತ್ತವೆ.

ಬುದ್ಧಿ, ಅಹಂಕಾರ, ಮನಸ್ಸು– ಎಂಬ ಮೂರು ಬಗೆಯ ವೃತ್ತಿಗಳಿಂದೊಡ– ಗೂಡಿದ ಚಿತ್ತವು ತನ್ನ ವ್ಯಾಪಾರದಿಂದ ಪ್ರಾಣವೆಂಬ ಹೆಸರಿನ ಶಕ್ತಿಗಳನ್ನುಂಟು ಮಾಡುತ್ತದೆ. ಈ ಪ್ರಾಣಗಳು ಉಸಿರಲ್ಲ, ಅವು ಉಸಿರೆಂಬ ಭಾವನೆಯನ್ನು ಕೂಡಲೆ ನೀವು ತೊಲಗಿಸಿಕೊಳ್ಳಬೇಕು. ಉಸಿರೆಂಬುದು ಪ್ರಾಣದ ಒಂದು ಕಾರ್ಯವು. ಪ್ರಾಣಗಳೆಂದರೆ ಇಡಿಯ ಶರೀರವನ್ನೇ

---

* ಸಾಂಖ್ಯರು ಸತ್ತ್ವ, ರಜಸ್ಸು, ತಮಸ್ಸು– ಇವು ಮೂರನ್ನೂ ಗುಣಗಳು ಎಂದೇ ಕರೆಯುತ್ತಾರೆ ; ಆದರೆ ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಸಂಖ್ಯಾ, ಪರಿಮಾಣ – ಮುಂತಾದವುಗಳು ಒಂದಾನೊಂದು ದ್ರವ್ಯವನ್ನಾಶ್ರಯಿಸಿರುವಂತೆ ಸತ್ತ್ವಾದಿಗಳು ದ್ರವ್ಯವನ್ನು ಆಶ್ರಯಿಸಿರುವದಿಲ್ಲ ; ಅವು ಮೂರೂ ಸೇರಿ ಪ್ರಕೃತಿಯಾಗಿರುತ್ತವೆ. ಆದ್ದರಿಂದ ಇವು ದ್ರವ್ಯಾಧಾರವಾದ ಗುಣಗಳಲ್ಲ– ಎಂದು ಸ್ವಾಮಿಗಳು ಹೇಳಿರುತ್ತಾರೆ.

✝ ಹಿಂದೆ 13ನೆಯ ಪುಟವನ್ನು ನೋಡಿ.

☞ ಪಾಶ್ಚಾತ್ಯವೈಜ್ಞಾನಿಕರು ಪಂಚಭೂತಗಳನ್ನೇ ಮ್ಯಾಟರ್, ಬಾಹ್ಯ 'ವಸ್ತು' (ಟಚಿಣಣಜಡಿ) ಎಂದು ಕರೆಯುವರು ; ಆದ್ದರಿಂದ ಅವರಿಗೆ ತಿಳಿಯುವ ಭಾಷೆಯನ್ನೇ ಸ್ವಾಮಿಗಳು ಉಪಯೋಗಿಸಿರುತ್ತಾರೆ.

ವಶದಲ್ಲಿಟ್ಟುಕೊಂಡು ಚಲಿಸುವಂತೆ ಮಾಡುತ್ತಿರುವ ನರಗಳ ಶಕ್ತಿವಿಶೇಷಗಳು; ಇವು ಅರಿವಿನ ರೂಪದಲ್ಲಿಯೂ ಶರೀರದ ಬಗೆಬಗೆಯ ವ್ಯಾಪಾರಗಳ ರೂಪದಲ್ಲಿಯೂ ಕಾಣಿಸಿಕೊಳ್ಳುತ್ತಿರುತ್ತವೆ. ಇವುಗಳಲ್ಲೆಲ್ಲ ಅತ್ಯಂತಪ್ರಧಾನವಾದದ್ದು, ಅತ್ಯಂತಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತಿರುವದು, ಶ್ವಾಸಕ್ರಿಯೆ. ಇದು ವಾಯುವಿನಿಂದ ಆಗುವಂತಿದ್ದರೆ ಶವವೂ ಉಸಿರನ್ನು ಬಿಡಬಹುದಾಗಿದ್ದಿತು. ಪ್ರಾಣವು ವಾಯುವಿನ ಮೇಲೆ ಕೆಲಸಮಾಡುವದೇ ಹೊರತು ವಾಯುವು ಅದರ ಮೇಲೆ ಕೆಲಸಮಾಡಲಾರದು. ಶ್ವಾಸಕ್ರಿಯೆಯನ್ನು ವಶದಲ್ಲಿಟ್ಟುಕೊಳ್ಳುವದೇ ಪ್ರಾಣಾಯಾಮವು. ಪ್ರಾಣಾಯಾಮ- ವನ್ನು ಅಭ್ಯಾಸಮಾಡುವದು ಈ ಕ್ರಿಯೆಯನ್ನು ವಶದಲ್ಲಿಟ್ಟುಕೊಳ್ಳುವದಕ್ಕೆ; ಇಲ್ಲಿ ನಮಗೆ ಬೇಕಾಗಿರುವದು ಸುಮ್ಮನೆ ಉಸಿರನ್ನು ಸ್ವಾಧೀನಕ್ಕೆ ತಂದುಕೊಳ್ಳುವದಲ್ಲ, ಶ್ವಾಸಕೋಶಗಳನ್ನು ಬಲಪಡಿಸುವದೂ ಅಲ್ಲ. [ಶ್ವಾಸಕೋಶಗಳನ್ನು ಬಲಪಡಿಸುವುದು **ಡೆಲ್ಸಾರ್ಟ್*** (Delsorte) ಅಭ್ಯಾಸವೇ ಹೊರತು ಪ್ರಾಣಾಯಾಮವಲ್ಲ. ಈ ಪ್ರಾಣಗಳೇ ಇಡಿಯ ಶರೀರವನ್ನು ಸವ್ಯಾಪಾರವಾಗಿ ಮಾಡುವ ಪ್ರಾಣಶಕ್ತಿಗಳು, ಮತ್ತು ಇವುಗಳನ್ನು ಮನಸ್ಸು, ಇಂದ್ರಿಯಗಳೂ ಸವ್ಯಾಪಾರವಾಗಿರಿಸಿವೆ.]

ಇಲ್ಲಿಯವರೆಗೇನೋ ಸರಿಯಾಯಿತು. ಈ ಮನಃಶಾಸ್ತ್ರಪ್ರಕ್ರಿಯೆಯು ಸುಸ್ಪಷ್ಟವಾಗಿರುತ್ತದೆ, ಸೂಜಿಮೊನೆಯಷ್ಟೂ ಹೆಚ್ಚು ಕಡಿಮೆಯಿಲ್ಲದೆ ಇದೆ. ಇದು ಪ್ರಚಾರದಲ್ಲಿದ್ದ ಕಾಲವು ಯಾವದೆಂಬುದನ್ನು ಸ್ವಲ್ಪ ಮನಸ್ಸಿಗೆ ತಂದುಕೊಳ್ಳಿರಿ ; ಈ ಲೋಕದಲ್ಲಿ ಇದೇ ಅತ್ಯಂತ ಪುರಾತನವಾದ ತರ್ಕಸಿದ್ಧಾಂತವಾಗಿರುವದು! ಎಲ್ಲಿಯಾದರೂ ತತ್ತ್ವಶಾಸ್ತ್ರವಿದೆ, ತರ್ಕವಿಚಾರವಿದೆ- ಎಂದರೆ ಕಪಿಲನಿಗೆ ಯಾವ ಬಗೆಯಲ್ಲಾದರೂ ಅದು ಋಣಿಯಾಗಿ ಇದ್ದೇ ಇರುತ್ತದೆ. ✝ಇದಿರಲಿ, ಇಲ್ಲಿಯವರೆಗೇನೋ ಆತನ ಮನಃಶಾಸ್ತ್ರಪ್ರಕ್ರಿಯೆಯು ಆಶ್ಚರ್ಯಕರ-ವಾಗಿರುತ್ತದೆಯಷ್ಟೆ. ಆದರೆ ಇನ್ನು ಮುಂದೆ ಹೋದಹಾಗೆಲ್ಲ ನಮಗೂ ಆತನಿಗೂ ಕೆಲವು ಮತಭೇದಗಳಾಗುವವು. ಆತನು ಒಂದು ತತ್ತ್ವವನ್ನು ಮತ್ತೊಂದರಿಂದ ವಿಕಾಸವಾಗುವಂತೆ ಮಾಡಿರುತ್ತಾನೆ; ಏಕೆಂದರೆ ಅವನ ಮತದಲ್ಲಿ ಉತ್ಪತ್ತಿ ಯೆಂಬುದರ ಲಕ್ಷಣವೇ 'ರೂಪಾಂತರದಲ್ಲಿರುವ ಕಾರಣವು' ಎಂದಾಗಿರುತ್ತದೆ, ಮತ್ತು ನಮಗೆ ತಿಳಿದುಬರುವಮಟ್ಟಿಗೆ ಇಡಿಯ ವಿಶ್ವವೇ ಮುಂದುವರಿಯುತ್ತಲೂ ವಿಕಾಸವಾಗುತ್ತಲೂ ಇರುತ್ತದೆ. ಜೇಡಿಮಣ್ಣು ಮತ್ತೊಂದು ರೂಪದಲ್ಲಿ ಕಾಣಿಸಿಕೊಂಡರೆ ಅದನ್ನೇ 'ಗಡಿಗೆ' ಎಂದು ಕರೆಯುತ್ತೇವೆ. ಇಲ್ಲಿ ಮಣ್ಣೇ ಕಾರಣವು, ಗಡಿಗೆಯೇ ಕಾರ್ಯವು. ಇದಕ್ಕಿಂತ ಬೇರೆಯಾಗಿ ಉತ್ಪತ್ತಿಯೆಂಬುದಕ್ಕೆ ನಮಗೆ ಮತ್ತೇನೂ ಅರ್ಥವಾಗುವಂತಿಲ್ಲ. ಆದ್ದರಿಂದ ಈ ಇಡಿಯ ವಿಶ್ವವು ಒಂದಾನೊಂದು

---

* ಫ್ರಾನ್ಸಾಯಿ ಡೆಲ್ಸಾರ್ಟ್ ಎಂಬಾತನು ಒಬ್ಬ ಫ್ರೆಂಚ್ ಸಂಗೀತಗಾರನು, ವಾಗ್ಮಿತಾವಿದ್ಯಾಚಾರ್ಯನು. ಆತನು ದೇಹಸೌಂದರ್ಯವನ್ನು-ಮುಖ್ಯವಾಗಿ ಅಭಿನಯಭಾವವನ್ನು ಉಂಟುಮಾಡುವ ಒಂದಾನೊಂದು ಸಾಧನಕ್ರಮುವನ್ನು ಏರ್ಪಡಿಸಿದ್ದನು. ಕಂಸದಲ್ಲಿರುವಷು ಭಾಗವು ಉದ್ಬೋಧನಸಂಸ್ಕರಣದಲ್ಲಿರುವದಿಲ್ಲ.

✝ ಇಲ್ಲಿರುವ ಕೆಲವು ವಾಕ್ಯಗಳು ಉದ್ಬೋಧನಸಂಸ್ಕರಣದಲ್ಲಿ ಹೆಚ್ಚಾಗಿವೆ ; ಮಾಯಾವತೀ ಸಂಸ್ಕರಣದಲ್ಲಿಯೂ ಹಿಂದಿನ ಉಪನ್ಯಾಸದಲ್ಲಿ ಅವು ಬಂದುಬಿಟ್ಟಿವೆ. ಆದ್ದರಿಂದ ಅವನ್ನು ಇಲ್ಲಿ ಕೈಬಿಟ್ಟಿರುತ್ತದೆ.

ದ್ರವ್ಯದಿಂದ, ಅಂದರೆ ಮೂಲಪ್ರಕೃತಿಯಿಂದ, ಉಂಟಾಗಿರಬೇಕು; ಅದು ತನ್ನ ಕಾರಣಕ್ಕಿಂತ ಸ್ವರೂಪದಲ್ಲಿ ಬೇರೆಯಾಗಿರಲೇ ಆರದು.

ಕಪಿಲನ ಮತದಲ್ಲಿ ಅವ್ಯಾಕೃತವಾದ ಪ್ರಕೃತಿಯಿಂದ ಹಿಡಿದು ತೀರ ಕೊನೆಯ ವ್ಯಾಕೃತತತ್ತ್ವದವರೆಗೂ ಯಾವದೊಂದೂ ಅವನು ಹೇಳುವ ಭೋಕ್ತೃವಲ್ಲ, ಪ್ರಕಾಶಕನಲ್ಲ. ಒಂದು ಜೇಡಿಮಣ್ಣಿನ ಮುದ್ದೆಯು ಎಷ್ಟರಮಟ್ಟಿನದೋ ಮನಸ್ಸಿನ ರಾಶಿಯೂ ಅಷ್ಟೇ. ಅದು ಸ್ವಯಂಪ್ರಕಾಶವಲ್ಲ, ಆದರೂ ಅದರಲ್ಲಿ ವಿಚಾರವೂ ವಿತರ್ಕವೂ ಇರುತ್ತದೆ. ಆದ್ದರಿಂದ ಇದಕ್ಕೆ, ಈ ಒಟ್ಟು ಪ್ರಕೃತಿಗೆ, ಆಧಾರವಾಗಿ ಯಾವದೋ ಒಂದು ಇರಬೇಕು. ಅದರ ಬೆಳಕೇ ಮಹತ್ತು ಅಹಂಕಾರ, ಮುಂತಾದ ವಿಕೃತಿಗಳ ಮೂಲಕವಾಗಿ ಜಿನುಗಿಕೊಂಡು ಬರುತ್ತಿರಲೇಬೇಕೆಂದಾಯಿತಷ್ಟೆ. ಇದೇ ಕಪಿಲನು ಹೇಳುವ **ಪುರುಷ**ನು, ವೇದಾಂತಿಯು ಹೇಳುವ **ಆತ್ಮ**ನು.

ಕಪಿಲನ ದರ್ಶನದಲ್ಲಿ ಪುರುಷನು ಶುದ್ಧನು, ಮತ್ತೊಂದರೊಡನೆ ಸೇರಿಕೊಂಡಿರುವದಿಲ್ಲ. ಅವನು ಭೌತಿಕವಲ್ಲ ; ಅವನೊಬ್ಬನೇ ಅಭೌತಿಕತತ್ತ್ವವು, ಮಿಕ್ಕತತ್ತ್ವಗಳೆಲ್ಲ ಭೌತಿಕವೇ.*ಪುರುಷನೊಬ್ಬನೇ ಅರಿಯುವಾತನು. ಒಂದು ಬರೆಯುವ ಹಲಗೆಯು ನನಗೆ ಕಾಣಿಸುತ್ತದೆ ಎಂದಿಟ್ಟುಕೊಳ್ಳಿ. ಇಲ್ಲಿ ಮೊಟ್ಟಮೊದಲು ಗೋಳಕಗಳು ಆ ವೇದನೆಯನ್ನು ನರಸ್ಥಾನಕ್ಕೆ, ಎಂದರೆ ಕಪಿಲನ ಮತದಂತೆ ಇಂದ್ರಿಯಕ್ಕೆ, ತಂದುಕೊಡುತ್ತವೆ ; ಇಂದ್ರಿಯದಿಂದ ಅದು ಮನಸ್ಸಿನ ಬಳಿಗೆ ಹೋಗಿ ಅಲ್ಲಿ ಒಂದು ಸಂಸ್ಕಾರವನ್ನುಂಟುಮಾಡುತ್ತದೆ ; ಮನಸ್ಸು ಅಹಂಕಾರವೆಂಬ ಮುಸುಕನ್ನು ಅದಕ್ಕೆ ಹಾಕಿ ಅದನ್ನು ಮಹತ್ತಿಗೆ (ಬುದ್ಧಿಗೆ) ಕೊಟ್ಟುಬಿಡುತ್ತದೆ. ಆದರೆ ಬುದ್ಧಿಯು ಸ್ವತಃ ವ್ಯಾಪಾರಮಾಡಲಾರದು; ಇವೆಲ್ಲಕ್ಕೂ ಆಧಾರನಾಗಿರುವ ಪುರುಷನಿಂದಲೇ ಈ ವ್ಯಾಪಾರವು ಬರುವದು. ಇವೆಲ್ಲವೂ ಅವನ ಆಳುಗಳಂತಿದ್ದು, ವೇದನೆಗಳನ್ನು ಅವನಿಗೆ ತಂದೊಪ್ಪಿಸುತ್ತಿರುವವು; ಅವನು ಅಪ್ಪಣೆಕೊಡುತ್ತಲೂ✝ ಮಹತ್ತು ಪ್ರತಿಕ್ರಿಯೆಯನ್ನುಂಟುಮಾಡುತ್ತದೆ. ಪುರುಷನು ಭೋಕ್ತೃವು, ಜ್ಞಾತೃ, ನಿಜವಾಗಿರುವವನು, ಸಿಂಹಾಸನದ ಮೇಲಿರುವ ರಾಜನು, ಮಾನವನ ಆತ್ಮನು ; ಅವನು ಅಭೌತಿಕನಾಗಿರುತ್ತಾನೆ.

ಪುರುಷನು ಅಭೌತಿಕನಾಗಿರುವದರಿಂದ ಅವನು ಅಪರಿಚ್ಛಿನ್ನನಾಗಿರುತ್ತಾನೆಂದು, ಅವನಿಗೆ ಯಾವದೊಂದು ಎಲ್ಲೆಕಟ್ಟೂ ಇರಲೇ ಆರದೆಂದು ತಾನೇ ಸಿದ್ಧವಾಗುತ್ತದೆ. ಹೀಗಿರುವದರಿಂದ ಒಬ್ಬೊಬ್ಬ ಪುರುಷನೂ ವಿಭುವಾಗಿರುತ್ತಾನೆ. ಪ್ರತಿಯೊಬ್ಬನೂ ಸರ್ವವ್ಯಾಪಕನೇ ಆದರೂ ಅವನು

---

* ಇಲ್ಲಿ ಭೌತಿಕವೆಂದರೆ ಜಡವೇ ಎಂದರ್ಥವನ್ನು ಮಾಡಿಕೊಳ್ಳಬೇಕು ; ಏಕೆಂದರೆ ಪ್ರಧಾನ, ಮಹತ್ತು, ಅಹಂಕಾರ– ಈ ತತ್ತ್ವಗಳುಂಟಾದ ಮೇಲೆ ಸೂಕ್ಷ್ಮಭೂತಗಳುಂಟಾಗುತ್ತವೆ.

✝ ಪುರುಷನು ಅಪ್ಪಣೆಕೊಡುವನೆಂದರೆ ಯಾವದಾದರೊಂದು ಕ್ರಿಯೆಯನ್ನು ಮಾಡುವನೆಂದೇನೂ ಅರ್ಥವಲ್ಲ ; ಏಕೆಂದರೆ ಸಾಂಖ್ಯಮತದಲ್ಲಿ ಪುರುಷನು ಅಕರ್ತೃವಾಗಿರುತ್ತಾನೆ. ಆದರೆ ಪುರುಷನ ಸನ್ನಿಧಿಯಲ್ಲಿಯೇ ಜಡವಾದ ಮಹದಹಂಕಾರಾದಿಗಳು ಕೆಲಸಮಾಡುವವಾದ್ದರಿಂದ ಪುರುಷನು ಅಪ್ಪಣೆಕೊಡುವನು ಎಂದು ಹೇಳಿರುತ್ತದೆ.

ಸ್ಥೂಲಸೂಕ್ಷ್ಮರೂಪಗಳಲ್ಲಿರುವ ಭೌತಿಕರೂಪವಿಶೇಷಗಳ ಮೂಲಕವಾಗಿಯೇ ಕೆಲಸಮಾಡಬೇಕಾಗಿರುತ್ತದೆ. ಮನಸ್ಸು, ಅಹಂಕಾರ, ಇಂದ್ರಿಯಗಳು, ಪ್ರಾಣಗಳು– ಇವೆಲ್ಲವೂ ಸೇರಿ **ಸೂಕ್ಷ್ಮಶರೀರ**ವಾಗಿರುತ್ತವೆ. ಕ್ರಿಸ್ತಿಯನ್‌ತತ್ತ್ವಜ್ಞಾನದಲ್ಲಿ ಇದಕ್ಕೆ **ಮಾನಸಶರೀರ** (spiritual body) ಎಂದು ಹೆಸರು. ಈ ಶರೀರಕ್ಕೆ ಪಾಪಪುಣ್ಯಗಳ ಫಲವು ತಟ್ಟುವದು. ಇದೇ ಬೇರೆಬೇರೆಯ ಲೋಕಗಳಿಗೆ ಹೋಗತಕ್ಕದ್ದು, ಜನ್ಮಾಂತರವನ್ನು ಹೊಂದತಕ್ಕದ್ದು ; ಏಕೆಂದರೆ ಪುರುಷನಿಗೆ ಹೋಗುವದು ಬರುವದು– ಎಂಬದು ಆಗದ ಮಾತೆಂಬದು ಮೊದಲೇ ನಮಗೆ ತಿಳಿದಿರುತ್ತದೆ. ಚಲನೆಯೆಂದರೆ ಹೋಗುವದು, ಬರುವದು ; ಯಾವದು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗುವದೋ ಅದು ವಿಭುವಾಗಿರಲಾರದು. ಆದ್ದರಿಂದ ಈ ಲಿಂಗಶರೀರವೇ ಬರುತ್ತಲೂ ಹೋಗುತ್ತಲೂ ಇರುತ್ತದೆ.

ಇಲ್ಲಿಯವರೆಗೆ ನೋಡಿದ್ದರಲ್ಲಿ ಕಪಿಲನ ಮಾನಸಶಾಸ್ತ್ರಪ್ರಕ್ರಿಯೆಯಂತೆ ಪುರುಷನು ಅಪರಿಚ್ಛಿನ್ನನಾಗಿರುತ್ತಾನೆ, ಪುರುಷನೊಬ್ಬನೇ ಪ್ರಕೃತಿಯಿಂದಾಗದೆ ಇರುವವನು. ಪ್ರಕೃತಿಯ ಹೊರಗೆ ಇರುವವನು ಅವನೊಬ್ಬನೇ; ಆದರೂ ಅವನು ಪ್ರಕೃತಿಯಿಂದ ಬದ್ಧನಾಗಿರುವಂತೆ ತೋರುತ್ತಿದಾನೆ. ಅವನನ್ನು ಪ್ರಕೃತಿಯು ಸುತ್ತುವರಿದಿರುವದರಿಂದ ಅವನು ತಾನು ಅದೇ ಎಂದು ಭಾವಿಸಿಕೊಂಡು ಬಿಟ್ಟಿರುತ್ತಾನೆ. ಅವನು 'ನಾನೇ ಲಿಂಗಶರೀರವು' ಎಂದುಕೊಳ್ಳುತ್ತಾನೆ, 'ನಾನೇ ಭೌತಿಕವಸ್ತುವು, ಸ್ಥೂಲಶರೀರವು' ಎಂದುಕೊಳ್ಳುತ್ತಿದಾನೆ; ಆದ್ದರಿಂದ ಸುಖದುಃಖಗಳನ್ನು ಅನುಭವಿಸುತ್ತಿರುತ್ತಾನೆ. ಆದರೆ ನಿಜವಾಗಿ ಈ ಸುಖದುಃಖಗಳು ಅವನವಲ್ಲ, ಈ ಸೂಕ್ಷ್ಮಶರೀರಕ್ಕೆ ಸೇರಿದವುಗಳಾಗಿರುತ್ತವೆ. ಕೆಲವು ನರಗಳಿಗೆ ಅಪಾಯವಾದರೆ ನಮಗೆ ನೋವು ಉಂಟಾಗುತ್ತದೆ. ಅದು ಕೂಡಲೆ ನಮಗೆ ಗೊತ್ತಾಗಿಬಿಡುತ್ತದೆ. ನಮ್ಮ ಬೆರಳುಗಳಲ್ಲಿರುವ ನರಗಳು ನಿರ್ಜೀವವಾದರೆ ಬೆರಳುಗಳನ್ನು ಕತ್ತರಿಸಿದರೂ ಅದರ ವೇದನೆಯು ನಮಗೆ ಉಂಟಾಗುವದಿಲ್ಲ. ಆದ್ದರಿಂದ ಸುಖದುಃಖಗಳು ನರಗಳ ಸ್ಥಾನಗಳಿಗೇ ಸೇರಿದವುಗಳಾಗಿವೆ. ನನ್ನ ಚಕ್ಷುರಿಂದ್ರಿಯವು ನಾಶವಾಯಿತೆಂದು ಇಟ್ಟುಕೊಳ್ಳಿ, ಆಗ ಕಣ್ಣುಗಳು ಇರುವಂತೆಯೇ ಇದ್ದರೂ ಬಣ್ಣದಿಂದಾಗುವ ಸುಖವಾಗಲಿ ದುಃಖವಾಗಲಿ ನನಗೆ ತೋಚಲಾರದು. ಆದ್ದರಿಂದ ಸುಖದುಃಖಗಳು ಪುರುಷನಿಗೆ ಸೇರಿದವಲ್ಲವೆಂಬುದು ಸ್ಪಷ್ಟವಾಗಿರುತ್ತದೆ. ಅವು ಮನಸ್ಸು, ಶರೀರ ಇವುಗಳಿಗೇ ಸೇರಿದವುಗಳಾಗಿರುತ್ತವೆ.

ಪುರುಷನಿಗೆ ಸುಖವೂ ಇಲ್ಲ, ದುಃಖವೂ ಇಲ್ಲ ; ಅವನು ಎಲ್ಲಕ್ಕೂ ಸಾಕ್ಷಿಯು, ಅವನು ಯಾವಯಾವದು ಆಗುತ್ತಿರುವದೋ ಅವೆಲ್ಲವನ್ನೂ ನೋಡುತ್ತಿರುವ ನಿತ್ಯಸಾಕ್ಷಿಯು. ಆದರೆ ಅವನು ಯಾವದೊಂದರ ಫಲವನ್ನೂ ತೆಗೆದುಕೊಳ್ಳುವದಿಲ್ಲ. "ಸೂರ್ಯನು ಪ್ರತಿಯೊಬ್ಬನ ಕಣ್ಣಿನ ನೋಟಕ್ಕೆ ಸಹಾಯಮಾಡುವನಾದರೂ ಕಣ್ಣಿನ ಯಾವ ಕೊರತೆಯೂ ಅವನಿಗೆ ಅಂಟದಿರುವಂತೆ," (ಕಠ 2–11) ಈ ಪುರುಷನಿರುತ್ತಾನೆ. ತನ್ನ ಮುಂದೆ ಕೆಂಪು ಹೂಗಳನ್ನಿಟ್ಟರೆ ಸ್ಫಟಿಕಮಣಿಯು ಹೇಗೆ ಕೆಂಪಾಗಿಯೇ ತೋರುತ್ತದೆಯೋ ಅದರಂತೆ (ಸಾಂಖ್ಯಸೂತ್ರ) 2–35) ಪ್ರಕೃತಿಯಿಂದಾಗುವ ಪ್ರತಿಬಿಂಬದಿಂದ ಈ ಪುರುಷನು ಸುಖದುಃಖಗಳ– ನ್ನನುಭವಿಸುವಂತೆ

ತೋರುತ್ತಾನೆ. ನಿಜವಾಗಿ ಎಂದಿಗೂ ನಿರ್ವಿಕಾರಿಯಾಗಿಯೇ ಇರುತ್ತಾನೆ. ಈ ಪುರುಷನ ಸ್ಥಿತಿಯನ್ನು ತಿಳಿಸುವದಕ್ಕೆ ಅತ್ಯಂತ ಸಮೀಪವಾದ ಹಾದಿ ಯಾವದೆಂದರೆ ಸಮಾಧಿಯಲ್ಲಿ ಅದನ್ನು ಅನುಭವಿಸುವಂತೆಯೆಂದು ಹೇಳುವದು. ಈ ಸಮಾಧಿಸ್ಥಿತಿಯಲ್ಲಿ ಪುರುಷನಿಗೆ ಅತ್ಯಂತ ಸಮೀಪದಲ್ಲಿ ನಾವಿರುತ್ತೇವೆ. ಯೋಗಿಯು ಸಮಾಧಿಯನ್ನು ಅತ್ಯಂತ ಉತ್ಕೃಷ್ಟಸ್ಥಿತಿಯೆಂದು ಏತಕ್ಕೆ ಹೇಳಿರುತ್ತಾನೆಂಬುದು ಈಗ ನಮಗೆ ತಿಳಿಯುತ್ತದೆ. ತಾನೇ ಆ ಪುರುಷನೆಂಬ ಭಾವನೆಯನ್ನು ತಂದುಕೊಳ್ಳುವ ಸ್ಥಿತಿಯನ್ನು ಸವ್ಯಾಪಾರಸ್ಥಿತಿ– ಯೆಂದಾಗಲಿ ನಿರ್ವ್ಯಾಪಾರಸ್ಥಿತಿಯೆಂದಾಗಲಿ ಹೇಳುವದಕ್ಕಿಲ್ಲ ; ಅದು ಸಮಾಧಿಯೇ.* ಹೀಗೆಂಬುದು ಸಾಂಖ್ಯರ ತತ್ತ್ವಶಾಸ್ತ್ರಪ್ರಕ್ರಿಯೆಯು.✞

ಸಾಂಖ್ಯರು ಹೇಳುವ ಇನ್ನೊಂದು ಮಾತು ಏನೆಂದರೆ ಈ ಪ್ರಕೃತಿಯ ವ್ಯಾಪಾರವೆಲ್ಲ ಪುರುಷನಿಗೇ, ಸಂಗಾತವೆಂಬುದೆಲ್ಲ ಪರಾರ್ಥಕ್ಕಾಗಿ. ಪ್ರಕೃತಿಯೆಂದು ನಾವು ಕರೆಯುತ್ತಿರುವ ಈ ಸಂಘಾತಗಳೆಲ್ಲ, ನಮ್ಮೊಳಗೂ ಹೊರಗೂ ಎಡೆಬಿಡದೆ ಆಗುತ್ತಿರುವ ಮಾರ್ಪಾಡುಗಳೆಲ್ಲ, ಪುರುಷನ ಭೋಗಕ್ಕಾಗಿಯೇ ಆಗುತ್ತಿರುವವು, ಅದರ ಮುಕ್ತಿಗಾಗಿಯೇ ಆಗುತ್ತಿರುವವು, ಅತ್ಯಂತ ಕಡಿಮೆಯ ಅನುಭವದಿಂದ ಹಿಡಿದು ಅತ್ಯಂತ ಮೇಲಿನ ಅನುಭವದವರೆಗಿನ ಎಲ್ಲಾ ಅನುಭವವನ್ನೂ ಅದು ಹೊಂದಲಿ ಎಂದೇ ಆಗುತ್ತಿರುವವು. ಈ ಅನುಭವಗಳೆಲ್ಲ ಆದ ಮೇಲೆ ಪುರುಷನು 'ನಾನು ಎಂದೂ ಪ್ರಕೃತಿಯೊಳಗೆ ಇದ್ದದ್ದೇ ಇಲ್ಲ ; ಎಂದೆಂದಿಗೂ ಅದಕ್ಕಿಂತ ಭಿನ್ನವಾಗಿಯೇ ಇರುತ್ತಿದ್ದೆನು, ನಾನು ನಾಶರಹಿತನು, ನಾನು ಹೋಗುವದೂ ಇಲ್ಲ, ಬರುವದೂ ಇಲ್ಲ– ಲೋಕಾಂತರಕ್ಕೆ ಹೋಗುವದೂ ಮತ್ತೆ ಜನ್ಮವನ್ನು ತಾಳುವದೂ ಪ್ರಕೃತಿಗೆ ಸೇರಿದ್ದವೇಹೊರತು ನನಗೆ ಸೇರಿರಲಿಲ್ಲ'– ಎಂಬುದನ್ನು ಕಂಡುಕೊಳ್ಳುವನು. ಆಗ ಪುರುಷನು ಮುಕ್ತನಾಗುವನು. ಹೀಗೆ ಪ್ರಕೃತಿಯೆಲ್ಲವೂ ಪುರುಷನ ಭೋಗಕ್ಕಾಗಿಯೂ ಅನುಭವಕ್ಕಾಗಿಯೂ ಕೆಲಸಮಾಡುತ್ತಿರುತ್ತದೆ. ಪುರುಷನು ತನ್ನ ಪರಮಪುರುಷಾರ್ಥವನ್ನು ಹೊಂದುವದಕ್ಕಾಗಿ ಈ ಅನುಭವವನ್ನು ಪಡೆಯುತ್ತಿರುವನು. ಈ ಪರಮಪುರುಷಾರ್ಥವೇ ಮೋಕ್ಷವು. ☙ ಆದರೆ ಸಾಂಖ್ಯ ಮತದಲ್ಲಿ ಈ ಪುರುಷರು ಅನೇಕರು, ಅವರ ಸಂಖ್ಯೆಯು ಅನಂತವಾಗಿರುತ್ತದೆ.

---

*ಪ್ರಕೃತಿಪುರುಷವಿವೇಕದಿಂದಲೇ ಪುರುಷನು ನಾನೆಂಬ ಅರಿವನ್ನು ಪಡೆದುಕೊಳ್ಳಬಹುದಾದರೂ ಪ್ರಕೃತಿಪುರುಷಸಂಕರರೂಪವಾದ ವ್ಯವಹಾರದಲ್ಲಿ ತೊಡಗಿರುವ ಬಹುಜನರಿಗೆ ಅದು ಸಾಧ್ಯವಲ್ಲ. ಆದ್ದರಿಂದ ಅಂಥ ಒಂದು ಸ್ಥಿತಿಯು ಅನುಭವವನ್ನು ಪಡೆದುಕೊಳ್ಳುವದೇ ಇದಕ್ಕೆ ಉಪಾಯವು– ಎಂದು ಸಾಂಖ್ಯರೂ ಯೋಗಿಗಳೂ ತಿಳಿಸುತ್ತಾರೆ.

✞ ಈ ಪ್ರಘಟ್ಟವನ್ನು ಉದ್ಬೋಧನಸಂಸ್ಕರಣದಂತೆ ಕನ್ನಡಿಸಿರುತ್ತದೆ.

☙ ಪುರುಷನ ಭೋಗಮೋಕ್ಷಗಳಿಗಾಗಿ ಪ್ರಕೃತಿಯು ಕೆಲಸಮಾಡುವದೆಂಬದು ವ್ಯಾವಹಾರಿಕವಾಗಿ ಹೇಳುವ ಮಾತೇ ಹೊರತು ಇದನ್ನು ಪರಮಾರ್ಥವೆಂದು ಹೇಳಲಾಗುವದಿಲ್ಲವೆಂದು ವೇದಾಂತಿಗಳೆನ್ನುವರು. ಮಾಂಡೂಕ್ಯಕಾರಿಕಾಭಾಷ್ಯ, ಅದ್ವೈತಪ್ರಕರಣ–3–5ರ ಭಾಷ್ಯವನ್ನು ನೋಡಿ.

ಅದರಲ್ಲಿ ಮತ್ತೊಂದು ಸಿದ್ಧಾಂತವೇನೆಂದರೆ ದೇವರಿಲ್ಲ, ಪ್ರಪಂಚದ ಸೃಷ್ಟಿಕರ್ತನೊಬ್ಬನು ಇರುವದಿಲ್ಲ– ಎಂಬುದು. ಈ ಆಕಾರವಿಶೇಷಗಳನ್ನುಂಟು ಮಾಡುವದಕ್ಕೆ ಪ್ರಕೃತಿಯೊಂದೇ ಸಾಕಾಗಿರುವಲ್ಲಿ ಈಶ್ವರನ ಅಗತ್ಯವೇನೂ ಇಲ್ಲ– ಎಂದು ಸಾಂಖ್ಯರು ಹೇಳುತ್ತಾರೆ.

ಈಗ ನಾವು ಸಾಂಖ್ಯರ ಈ ಮೂರು ವಾದಗಳನ್ನು ಖಂಡಿಸಬೇಕಾಗಿರುತ್ತದೆ. ಅವರ ಮೊದಲನೆಯ ವಾದವೇನೆಂದರೆ, ಜ್ಞಾನವಾಗಲಿ ಅದರಂತಿರುವ ಮತ್ತೆ ಯವದೇ ಆಗಲಿ, ಪುರುಷನಿಗೆ ಸಂಬಂಧಪಟ್ಟದ್ದಲ್ಲ ; ಅದು ಸಂಪೂರ್ಣವಾಗಿ ಪ್ರಕೃತಿಗೇ ಸೇರಿದ್ದು ; ಪುರುಷನು ನಿರ್ಗುಣನು, ಯಾವ ಬಣ್ಣವೂ ಇಲ್ಲದವನು– ಎಂಬುದು. ಎರಡನೆಯ ವಾದವು ಯಾವದೆಂದರೆ ಈಶ್ವರನಿಲ್ಲವೆಂಬುದು; ಈಶ್ವರನಿಲ್ಲದೆ ಯಾವದೊಂದಕ್ಕೂ ಕಾರಣವನ್ನು ಹೇಳುವದಕ್ಕೇ ಆಗುವದಿಲ್ಲವೆಂದು ವೇದಾಂತವು ತೋರಿಸಿಕೊಡುವದು. ಇನ್ನು ಮೂರನೆಯದಾಗಿ ಅನೇಕ ಪುರುಷರಿರುವರೆಂಬುದನ್ನೂ ನಾವು ಖಂಡಿಸಬೇಕಾಗುತ್ತದೆ; ಪುರುಷರು ಅನಂತರಾಗಿರಲಾರರು; ಒಬ್ಬನೇ ಒಬ್ಬ ಪುರುಷನಿರುವನು, ಆವೊಬ್ಬನೇ ಅನೇಕರಾಗಿ ಕಾಣುತ್ತಿರುವನು– ಎಂದು ನಾವು ಪ್ರತಿಪಾದಿಸುವೆವು.

ಈಗ ಮೊದಲನೆಯ ವಾದವನ್ನು, ಎಂದರೆ ಜ್ಞಾನವು ಪ್ರಕೃತಿಗೇ ಪೂರ್ತಿಯಾಗಿ ಸೇರಿದ್ದು, ಅದು ಪುರುಷನಿಗೆ ಸಂಬಂಧಿಸಿರುವದಿಲ್ಲ– ಎಂಬ ವಾದವನ್ನು ತೆಗೆದುಕೊಳ್ಳೋಣ. ಪುರುಷನ ಪರಮಾರ್ಥಸ್ವರೂಪವು ಅಪರಿಚ್ಛಿನ್ನವಾದದ್ದು, ಪುರುಷನು ಅಖಂಡಸಚ್ಚಿದಾನಂದಸ್ವರೂಪನು– ಎಂದು ವೇದಾಂತವು ಹೇಳುತ್ತದೆ. ಸಾಂಖ್ಯರು ಜ್ಞಾನವೆನ್ನುತ್ತಾರಲ್ಲ, ಅದು ಸಂಯುಕ್ತವಸ್ತುವೇ ಎಂಬುದನ್ನು ನಾವೂ ಒಪ್ಪುತ್ತೇವೆ. ಉದಾಹರಣೆಗೆ ನಮಗೆ ಆಗುವ ಪ್ರತ್ಯಕ್ಷಜ್ಞಾನಗಳನ್ನು ಪರೀಕ್ಷಿಸೋಣ. ಚಿತ್ತವೆಂಬುದು ಇವೆಲ್ಲವನ್ನೂ ಸೇರಿಸುತ್ತಿರುವದೆಂದೂ ಅದರಲ್ಲಿ ಇವುಗಳ ಸಂಸ್ಕಾರಗಳು ಆಗುತ್ತಿರುವವೆಂದೂ ಮೊದಲೆ ಹೇಳಿದ್ದು ನೆನಪಿರಬಹುದು. ಇಗೋ ಒಂದು ಕಪ್ಪುಹಲಗೆಯು ಕಾಣಿಸುತ್ತಿದೆ. ಇದರ ತಿಳಿವಳಿಕೆಯುಂಟಾಗುವದು ಹೇಗೆ ? ಬರಿಯ ಕಪ್ಪುಹಲಗೆಯು ಸ್ವತಃ ಅಜ್ಞಾತವಾಗಿರುತ್ತದೆ, ಅದನ್ನು ನಾನು ಅರಿಯುವದೆಂಬುದು ಎಂದಿಗೂ ಆಗಲಾರದು. ಇದನ್ನು ಜರ್ಮನತತ್ತ್ವವಿಚಾರಕರು 'ಯಥಾವಸ್ಥಿತವಸ್ತು' * (thing-in-itself) ಎಂದು ಕರೆಯುತ್ತಾರೆ. ಅದಕ್ಕೆ 'ಕ್ಷ' ಎಂದು ಹೆಸರಿಡೋಣ. ಅದು ಪ್ರತಿಕ್ರಿಯೆಯುಳ್ಳದ್ದಾಗುವದು. ಚಿತ್ತವು ಒಂದು ಕೊಳವಿದ್ದಂತೆ. ಕೊಳದಲ್ಲಿ ಒಂದು ಕಲ್ಲನ್ನು ಎಸೆದರೆ ಆ ಕಲ್ಲಿನ ಕಡೆಗೆ ಪ್ರತಿಕ್ರಿಯಾರೂಪವಾಗಿ ಒಂದು ಅಲೆಯು ಬರುತ್ತದೆ ; ಈ ಅಲೆಯೇನೂ ಕಲ್ಲಲ್ಲ, ಅದೊಂದು

---

*ಪ್ರಪಂಚದಲ್ಲಿರುವ ವಸ್ತುಗಳು ತಮ್ಮ ಸ್ವರೂಪದಲ್ಲಿ ಹೇಗಿರುವವೋ ಹೇಳುವದಕ್ಕಾಗುವದಿಲ್ಲ, ಅವುಗಳು ನಮ್ಮ ಮನಸ್ಸಿನ ಜ್ಞಾನಾಕಾರವಿಶೇಷಗಳಾದ ಕಾಲ, ದೇಶ, ನಿಮಿತ್ತ– ಇವುಗಳ ಮೂಲಕವೇ ನಮಗೆ ತಿಳಿಯಬರುವವು – ಎಂದು ಕ್ಯಾಂಟ್ ಎಂಬ ಜರ್ಮನ್ ವಿದ್ವಾಂಸನು ಹೇಳಿರುತ್ತಾನೆ. ಅದರ ಸೂಚನೆಯಿದು. ನಮ್ಮ ದೇಶದಲ್ಲಿ ಈ ಬಗೆಯ ವಾದವೇನೂ ಇಲ್ಲವಾದರೂ ಇಂದ್ರಿಯಗಳ ಮೂಲಕ ವಸ್ತುವಿನ ಕಡೆಗೆ ಹೋಗುವ ಜ್ಞೇಯಾಕಾರವೃತ್ತಿಗಳ ಸಂಬಂಧವಾದ ಮೇಲೆಯೇ ಜ್ಞಾನವಾಗುವದೆಂಬ ವಾದವು ನಮ್ಮಲ್ಲಿ ಪ್ರಚಲಿತವಾಗಿರುತ್ತದೆ.

ಅಲೆ. 'ಕ್ಷ' ಎಂಬ ಕಪ್ಪುಹಲಗೆಯ ಚಿತ್ತವೆಂಬ ಕೊಳಕ್ಕೆ ಬಡಿಯುವ ಒಂದು ಕಲ್ಲಿದ್ದಂತೆ, ಈ ಚಿತ್ತವು ಅದರ ಕಡೆಗೆ ಒಂದು ಅಲೆಯನ್ನೆಬ್ಬಿಸಿಕಳುಹಿಸುತ್ತದೆ. ಈ ಅಲೆಯನ್ನೇ ನಾವು 'ಕಪ್ಪುಹಲಗೆ'ಯೆಂದು ಕರೆಯುವದು. ಇಗೋ, ನನಗೆ ನೀವು ಕಾಣಿಸುತ್ತಿರುವಿರಷ್ಟೆ. ನಿಜವಾಗಿ ನೀವು ಹೇಗಿರುವಿರೋ ತಿಳಿಯದು, ತಿಳಿಯುವದಕ್ಕೆ ಆಗುವಂತೆಯೂ ಇಲ್ಲ. ನೀವೇ ಕ್ಷ, ಕ್ಷರೂಪರಾದ ನೀವು ನನ್ನ ಚಿತ್ತದ ಮೇಲೆ ವ್ಯಾಪಾರಮಾಡಲು ಚಿತ್ತವು ಈ ಕ್ರಿಯೆಯು ಎತ್ತಲಿಂದ ಬಂದಿತೋ ಅತ್ತಕಡೆಗೆ ಒಂದು ಅಲೆಯನ್ನು ಕಳುಹಿಸುವದು ; ಈ ಅಲೆಯನ್ನೇ ನಾನು ಶ್ರೀಯುತ ಇಂಥವನು, ಶ್ರೀಮತಿ ಇಂಥಾಕೆಯು– ಎಂದು ಕರೆಯುತ್ತೇನೆ.

ಇದರಲ್ಲಿ ಎರಡು ಅಂಶಗಳಿವೆ ; ಒಂದು ಒಳಗಿನದು, ಮತ್ತೊಂದು ಹೊರಗಿನದು. ಈ ಎರಡರ ಒಟ್ಟೇ, ಎಂದರೆ ಕ್ಷ ಮತ್ತು ಚಿತ್ತಗಳ ಮಿಶ್ರವೇ ನಮ್ಮ ಹೊರಗಿನ ಪ್ರಪಂಚವು. ಹೀಗೆ ತಿಳಿವಳಿಕೆಯೆಂಬುದೆಲ್ಲ ಪ್ರತಿಕ್ರಿಯೆ ಯಿಂದಾಗಿರುತ್ತದೆ. ತಿಮಿಂಗಲದ ಬಾಲವನ್ನು ಚುಚ್ಚಿದ ಮೇಲೆ ಎಷ್ಟು ಹೊತ್ತಿಗೆ ಅದರ ಚಿತ್ತವೃತ್ತಿಯ ವ್ಯಾಪಾರವು ಬಾಲದ ಕಡೆಗೆ ಹೋಗಿ ಆ ಬಾಲಕ್ಕೆ ನೋರು ತೋಚೀತೆಂಬುದನ್ನು ಲೆಕ್ಕಾಚಾರಮಾಡಿ ಗೊತ್ತುಪಡಿಸಿರುತ್ತಾರೆ. ಮುತ್ತಿನ ಹುಳುವಿನ ದೃಷ್ಟಾಂತವನ್ನು ತೆಗೆದುಕೊಳ್ಳಿರಿ : ಚಿಪ್ಪಿನೊಳಕ್ಕೆ ಮರಳಿನ ಕಣವು ನುಗ್ಗಲು ಅದಕ್ಕೆ ನವೆಯುಂಟಾಗಿ ಅದು ತನ್ನ ರಸವನ್ನು ಕಣದ ಸುತ್ತಲೂ ಬಳಿದ ಮೇಲೆ ಮುತ್ತು ಉಂಟಾಗುತ್ತದೆ. ಇಲ್ಲಿ ಮುತ್ತು ಉಂಟಾಗುವದಕ್ಕೆ ಎರಡು ಕಾರಣಗಳಿವೆ. ಮೊದಲನೆಯದು ಹುಳುವಿನ ರಸವು, ಎರಡನೆಯದು ಹೊರಗಿನ ಪೆಟ್ಟು. ಈ ಮೇಜಿನ ಅರಿವು ನನಗೆ ಉಂಟಾಗುವಾಗಲೂ ಹೀಗೆಯೇ, ಅದು ಕ್ಷ ಮತ್ತು ಚಿತ್ತ– ಇವೆರಡೂ ಸೇರಿ ಆಗಿರುತ್ತದೆ. ಅದನ್ನು ಅರಿಯುವ ಪ್ರಯತ್ನವೆಂಬುದೇ ಮೊದಲು ಚಿತ್ತದಿಂದಾದದ್ದು. ಆದ್ದರಿಂದ ಚಿತ್ತವು ಅದರ ತಿಳಿವಳಿಕೆಯುಂಟಾಗುವದಕ್ಕೆ ಅನುಕೂಲವಾಗುವಂತೆ ತನ್ನ ಸಾರದಲ್ಲಿ ಒಂದಿಷ್ಟನ್ನು ಕೊಟ್ಟಿರುತ್ತದೆ; ಅದನ್ನು ತಿಳಿದಮೇಲೋ ಎಂದರೆ ಅದೊಂದು ಮಿಶ್ರವಸ್ತುವಾಗಿ ಬಿಟ್ಟಿರುತ್ತದೆ, ಎಂದರೆ ಕ್ಷ ಮತ್ತು ಚಿತ್ತ– ಎಂಬ ಮಿಶ್ರವಾಗಿ ಬಿಟ್ಟಿರುತ್ತದೆ. ನಮ್ಮ ಸ್ವರೂಪವನ್ನು ನಾವು ತಿಲಿದುಕೊಳ್ಳಬೇಕೆಂದು ನಾವು ಪ್ರಯತ್ನಿಸುವಾಗ ಆಗುವ ಒಳ ಅರಿವಿನ ವಿಚಾರವೂ ಹೀಗೆಯೇ. ನಮ್ಮಲ್ಲಿರುವ ನಿಜವಾದ ಆತ್ಮವೂ ಅಜ್ಞಾತನಾಗಿರುತ್ತದೆ, ಅದನ್ನು ಇದ್ದಂತೆ ಅರಿತುಕೊಳ್ಳುವದೆಂಬುದೂ, ಆಗುವಹಾಗಿಲ್ಲ. ಅದಕ್ಕೆ 'ಯ' ಎಂದು ಹೆಸರಿಡೋಣ. ನನ್ನನ್ನು ನಾನು ಶ್ರೀಯುತ ಇಂಥವನೆಂದು ತಿಳಿದುಕೊಳ್ಳೋಣವೆನ್ನುವಾಗ ಈ 'ಯ' ವು ಯ ಮತ್ತು ಚಿತ್ತ– ಇವುಗಳ ಬೆರಕೆಯಾಗಿ ತೋರಿಕೊಳ್ಳಬೇಕು. ಈ 'ಯ' ವು ಚಿತ್ತಕ್ಕೆ ಬಂದು ಪೆಟ್ಟುಹಾಕುತ್ತದೆ, ಈ ಚಿತ್ತವೂ ಆ 'ಯ' ದ ಮೇಲೆ ಒಂದು ಪೆಟ್ಟನ್ನು ಹಿಂತಿರುಗಿಸುತ್ತದೆ, ಈ ರೀತಿಯಲ್ಲಿ ನಮಗೆ ಆಗಿರುವ ಇಡಿಯ ಪ್ರಪಂಚದ ತಿಳಿವಳಿಕೆಯೆಂದರೆ 'ಕ್ಷ+ಚಿತ್ತ' (ಬಾಹ್ಯ), ಯ+ಚಿತ್ತ (ಆಂತರ)– ಎಂದಾಯಿತು.* ಅದ್ವೈತಿಯ ಅಭಿಪ್ರಾಯವನ್ನು ಶಾಸ್ತ್ರೀಯರೀತಿಯಿಂದ ನಿರಕಾಗಿ ಹೇಗೆ ಸಿದ್ಧಪಡಿಸಿಕೊಡಬಹುದೆಂಬುದು ಮುಂದೆ ಗೊತ್ತಾಗುವದು.

*ಆದ್ದರಿಂದ ನಮಗೆ ಆಗುವ ಜ್ಞಾನವು ಬರಿಯ ಪ್ರಕೃತಿಯಿಂದಲೂ ಆದದ್ದಲ್ಲ, ಬರಿಯ ಪುರುಷನೂ ಅಲ್ಲ – ಈ ಎರಡರ ಮಿಶ್ರಣವು ಎಂದು ಅಭಿಪ್ರಾಯ. ಸ್ವರೂಪಜ್ಞಾನವು ವೃತ್ತಿಯ ಮೂಲಕ ತೋರಿಕೊಳ್ಳುವದೇ ವಿಶೇಷಜ್ಞಾನವು– ಎಂಬ ವಾದವೇ ಇದು.

ವೇದಾಂತದಂತೆ ನಮ್ಮ ಅರಿವಿನಲ್ಲಿ ಮೂರು ಅಂಶಗಲಿರುತ್ತವೆ. ನಾನು ಇರುತ್ತೇನೆ, ನಾನು ಅರಿಯುತ್ತೇನೆ, ನಾನು ಸುಖಿಯಾಗಿರುತ್ತೇನೆ– ಎಂಬಿವೇ ಆ ಅಂಶಗಳು. ನನಗೆ ಏನೇನೂ ಬೇಕಿರುವದಿಲ್ಲ, ನಾನು ನಿತ್ಯ ವಿಶ್ರಾಂತ ನಾಗಿರುತ್ತೇನೆ, ಶಾಂತನಾಗಿರುತ್ತೇನೆ– ಎಂಬ ಭಾವನೆಯು ಆಗಾಗ್ಗೆ ನಮಗೆ ಬರುತ್ತದೆಯಷ್ಟೆ ; ಇದೇ ನಮ್ಮ ಇರವಿನ ಕೇಂದ್ರಸ್ಥಾನೀಯವಾಗಿರುವದು, ಇದೇ ನಮ್ಮ ಜೀವನದ ತತ್ತ್ವವು. ಇದು ಪರಿಚ್ಛಿನ್ನವಾದಾಗ, ಇದು ಮಿಶ್ರಿತವಾದಾಗ, ವ್ಯಾವಹಾರಿಕ ಇರವು, ವ್ಯಾವಹಾರಿಕ ಅರಿವು, ವ್ಯಾವಹಾರಿಕ ಪ್ರೇಮ– ಎಂಬ ರೂಪದಲ್ಲಿ ತೋರಿಕೊಳ್ಳುತ್ತದೆ. ಪ್ರತಿಯೊಬ್ಬನೂ ಇರುತ್ತಾನೆ, ಪ್ರತಿಯೊಬ್ಬನೂ ಅರಿಯುತ್ತಾನೆ, ಪ್ರತಿಯೊಬ್ಬನೂ ಪ್ರೀತಿಸುವದಕ್ಕೆ ಹುಟ್ಟಿರುತ್ತಾನೆ; ಯಾರಿಗೂ ಪ್ರೀತಿಸದೆ ಇರುವದಕ್ಕೆ ಆಗುವದೇ ಇಲ್ಲ. ಯಾವ ಪ್ರಾಣಿಯೇ ಆಗಲಿ, ಅತ್ಯಂತ ಕೀಳುಪ್ರಾಣಿಯಿಂದ ಹಿಡಿದು ಅತ್ಯಂತ ಮೇಲಿನ ಸ್ಥಿತಿಯ ಪ್ರಾಣಿಯವರೆಗೂ, ಎಲ್ಲರೂ ಪ್ರೀತಿಸಲೇ ಬೇಕು. ಒಳಗಿರುವ ಯಕಾರವನ್ನು, ಎಂದರೆ ಯಥಾಸ್ಥಿತವಸ್ತುವನ್ನು, ಚಿತ್ತದೊಡನೆ ಬೆರೆತು ಇರವು, ಅರಿವು, ಪ್ರೇಮ– ಇವುಗಳನ್ನುಂಟುಮಾಡುವದಲ್ಲ ಅದನ್ನು, ವೇದಾಂತಿಗಳು ಅಖಂಡವಾದ ಇರವು, ಅಖಂಡವಾದ ಅರಿವು, ಅಖಂಡವಾದ ಆನಂದ– ಎಂದು ಕರೆಯುತ್ತಾರೆ.

ನಿಜವಾದ ಇರವು ಎಲ್ಲೆಕಟ್ಟಿಲ್ಲದೆ, ಅಮಿಶ್ರಿತವಾಗಿ, ಅಸಂಯುಕ್ತವಾಗಿರುತ್ತದೆ; ಅದಕ್ಕೆ ವಿಕಾರವಿಲ್ಲ, ಅದೇ ಮುಕ್ತಾತ್ಮನು. ಆದರೆ ಅದು ಯಾವಾಗ ಬೆರಕೆಯಾಗಿಬಿಡುವದೋ, ಯಾವಾಗ ಚಿತ್ತದೊಡನೆ ಸೇರಿ ಕಲಗಚ್ಚಾಗಿ ಬಿಡುವದೋ, ಆಗ ವ್ಯಕ್ತಿಯ ಇರವಾಗುತ್ತದೆ. ಅಖಂಡಮಹಾಕಾಶವು ಮಠಾಕಾಶವೂ ಘಟಾಕಾಶವೂ ಆಗಿ ಖಂಡವಾಗುವಂತೆ ಅದು ಸ್ಥಾವರಪ್ರಾಣಿಯೂ ಜಂಗಮಪ್ರಾಣಿಯೂ ಮಾನವಪ್ರಾಣಿಯೂ ಎನಿಸಿಕೊಳ್ಳುತ್ತದೆ. ಇದರಂತೆ ಆ ನಿಜವಾದ ಜ್ಞಾನವೆಂಬುದು ನಮಗೆ ತಿಳಿದಿರುವ ಅರಿವಲ್ಲ ; ಅದು ಸಾಕ್ಷಿ ಜ್ಞಾನವಲ್ಲ (Intuition), ತರ್ಕಜ್ಞಾನವಲ್ಲ, ಅಥವಾ ನಿಸರ್ಗಜ್ಞಾನವೂ ಅಲ್ಲ. ಅದು ಕೀಳುಸ್ಥಿತಿಗೆ ಬಂದು ಸಮ್ಮುಗ್ಧವಾದಾಗ ಅದನ್ನು ಸಾಕ್ಷಿಜ್ಞನವೆನ್ನುತ್ತೇವೆ ; ಇನ್ನೂ ಕೀಳುಸ್ಥಿತಿಗೆ ಬಂದರೆ ಅದನ್ನು ತರ್ಕವೆನ್ನುತ್ತೇವೆ ; ಇನ್ನೂ ಕೀಳುಸ್ಥಿತಿಗೆ ಬಂತೆಂದರೆ ಅದನ್ನು ನಿಸರ್ಗಜ್ಞಾನವೆನ್ನುತ್ತೇವೆ. ಆ ಅರಿವು ನಿಜವಾಗಿ **ವಿಜ್ಞಾನವು**; ಸಾಕ್ಷಿಜ್ಞಾನವೂ ಅಲ್ಲ, ತರ್ಕವೂ ಅಲ್ಲ, ನಿಸರ್ಗಜ್ಞಾನವೂ ಅಲ್ಲ. ಅದನ್ನು ಹೇಳುವದಕ್ಕೆ ತೀರ ಹತ್ತಿರವಾದ ಮಾತೆಂದರೆ ಸರ್ವಜ್ಞತೆ. ಅದಕ್ಕೆ ಯಾವದೊಂದು ಎಲ್ಲೆಕಟ್ಟೂ ಇರುವದಿಲ್ಲ, ಅದರಲ್ಲಿ ಯಾವದೊಂದು ಸಂಸರ್ಗವೂ ಇರುವದಿಲ್ಲ. ಹೀಗೆಯೇ ಆ ನಿಜವಾದ ಆನಂದವು ಆವೃತವಾದರೆ ಅದಕ್ಕೆ ಪ್ರೇಮವೆಂಬ ಹೆಸರನ್ನಿಡುತ್ತೇವೆ ; ಅದನ್ನು ಸ್ಥೂಲವಸ್ತುಗಳ, ಸೂಕ್ಷ್ಮವಸ್ತುಗಳ, ಅಥವಾ ಭಾವನೆಗಳ ಆಸಕ್ತಿಯೆಂದು ಕರೆಯುತ್ತೇವೆ. ನಿಜವಾಗಿ ಇದು ಆ ಆನಂದಸ್ಥಿತಿಯ ಕಲುಷಿತರೂಪಾಂತರವಾಗಿರುತ್ತದೆ.

ಅಖಂಡವಾದ ಸತ್ತೆ, ಅಖಂಡವಾದ ಚಿತ್ತ್ವ, ಅಖಂಡವಾದ ಆನಂದ– ಇವು ಪುರುಷನ ಗುಣಗಳಲ್ಲ. ಅದರ ಸ್ವರೂಪವೇ ಆಗಿರುತ್ತವೆ ; ಅವುಗಳಿಗೂ ಪುರುಷನಿಗೂ ಯಾವ ಹೆಚ್ಚು ಕಡಿಮೆಯೂ ಇರುವದೇ ಇಲ್ಲ. ಇವು ಮೂರೂ ಒಂದೇ, ಒಂದನ್ನೇ ಮೂರು ರೂಪವಾಗಿ ಕಾಣುತ್ತಿದ್ದೇವೆ. ಇವು ಸಾಪೇಕ್ಷವಾದ ಎಲ್ಲ ತಿಳಿವಳಿಕೆಯನ್ನೂ ಮೀರಿರುತ್ತವೆ. ಆ ಆತ್ಮನ ನಿತ್ಯಜ್ಞಾನವು

ಮಾನವನ ಮೆದುಳಿನ ಮೂಲಕ ಜಿನುಗಿ ಬಂದಾಗ ಅವನ ಸಾಕ್ಷಿಜ್ಞಾನವು, ತರ್ಕವು– ಎಂದು ಮೊದಲಾಗಿ ಹೆಸರನ್ನು ಪಡೆಯುತ್ತದೆ. ಅದು ಯಾವ ಉಪಾಧಿಯ ಮೂಲಕ ಹೊಳೆಯುವದೋ ಆಯಾ ಉಪಾಧಿಯನ್ನವಲಂಬಿಸಿ ಅದರ ಹೊರತೋರಿಕೆಯು ಆಗುತ್ತದೆ. ಪುರುಷನ ರೂಪದಿಂದ ನೋಡಿದರೆ ಮಾನವನಿಗೂ ಅತ್ಯಂತ ಕೀಳುಪ್ರಾಣಿಗೂ ಯಾವದೊಂದು ತಾರತಮ್ಯವೂ ಇರುವದೇ ಇಲ್ಲ. ಆದರೆ ಪ್ರಾಣಿಯ ಮೆದುಳು ಅಷ್ಟು ಪಕ್ವವಾಗಿರುವದಿಲ್ಲ, ಆದ್ದರಿಂದ ಅದರಲ್ಲಿ ತೋರಿಕೊಳ್ಳುವ ನಿಸರ್ಗಜ್ಞಾನವೆಂದು ನಾವು ಕರೆಯುವ ಜ್ಞಾನದ ವಿಭೂತಿಯು ಬಲು ಮಂಕಾಗಿರುತ್ತದೆ. ಮನುಷ್ಯನಲ್ಲಿ ಮೆದುಳು ಹೆಚ್ಚು ಸೂಕ್ಷ್ಮವಾಗಿರುತ್ತದೆ, ಆದ್ದರಿಂದ ಅಲ್ಲಿ ಆಗುವ ಪ್ರತಿಬಿಂಬವು ಇನ್ನೂ ಸ್ವಚ್ಛವಾಗಿರುತ್ತದೆ. ಇರವಿನ ವಿಷಯದಲ್ಲಿಯೂ ಹೀಗೆಯೇ. ನಮಗೆ ಗೊತ್ತಾಗಿರುವ ಇರವೆಂಬುದು, ಖಂಡಸತ್ತೆಯು, ಪುರುಷನ ಸ್ವರೂಪವೇ ಆಗಿರುವ ಪರಮಾರ್ಥಸತ್ತೆಯು ಪ್ರತಿಬಿಂಬಮಾತ್ರವಾಗಿರುತ್ತದೆ. ಆನಂದದ ವಿಚಾರವೂ ಹೀಗೆಯೇ. ಪ್ರೇಮವೆಂದೂ ಆಸಕ್ತಿಯೆಂದೂ ನಾವು ಕರೆಯುತ್ತೇವಲ್ಲ, ಅದು ಆತ್ಮನ ನಿತ್ಯಾನಂದಸ್ವರೂಪದ ಬರಿಯ ಪ್ರತಿಬಿಂಬವು. ಹೊರಕ್ಕೆ ತೋರಿಕೊಳ್ಳುವಾಗ ಪರಿಚ್ಛೇದವು ಆಗಲೇಬೇಕು. ಆದರೆ ಯಾವದು ತೋರಿಕೊಳ್ಳದೆ ಇರುವದೋ ಆ ಪುರುಷನ ಪರಮಾರ್ಥಸ್ವರೂಪವು ಅನಂತವಾಗಿರುತ್ತದೆ ; ಆ ಆನಂದಕ್ಕೆ ಅಂತವೆಂಬುದೇ ಇಲ್ಲ. ಆದರೆ ಪ್ರೇಮಕ್ಕೆ ಪರಿಚ್ಛೇದವುಂಟು. ನನಗೆ ನಿಮ್ಮ ಮೇಲೆ ಒಂದು ದಿನ ಪ್ರೇಮವಾಗುತ್ತದೆ, ಮಾರನೆಯ ದಿನ ದ್ವೇಷವಾಗುತ್ತದೆ. ನನ್ನ ಪ್ರೇಮವು ಒಂದು ದಿನ ಹಿಗ್ಗುವದು, ಮತ್ತೊಂದು ದಿನ ತಗ್ಗುವದು, ಏಕೆಂದರೆ ಅದು ತೋರಿಕೆಮಾತ್ರವಾಗಿರುತ್ತದೆ.

ನಾವು ಪ್ರತಿಭಟಿಸಬೇಕಾಗಿರುವ ಕಪಿಲನ ಎರಡನೆಯ * ವಾದವು ಯಾವವೆಂದರೆ, ಆತನ ಈಶ್ವರವಿಚಾರವು, ವ್ಯಷ್ಟಿಬುದ್ಧಿಯಿಂದ ಹಿಡಿದು ವ್ಯಷ್ಟಿಶರೀರದವರೆಗಿನ ಪ್ರಕೃತಿಯ ವಿಕಾರಗಳಿಗೆ ಆಧಾರವಾಗಿ ಅವುಗಳನ್ನು ಆಳುವ ಅಧಿಪತಿಯಾದ ಒಬ್ಬ ಪುರುಷನು ಹೇಗೆ ಇರಬೇಕೋ, ಅದರಂತೆಯೇ ಬ್ರಹ್ಮಾಂಡದಲ್ಲಿಯೂ ಸಮಷ್ಟಿಬುದ್ಧಿ, ಸಮಷ್ಟಿ ಅಹಂಕಾರ, ಸಮಷ್ಟಿ ಮನಸ್ಸು– ಇವುಗಳಿಗೂ ಸಕಲ ಸೂಕ್ಷ್ಮವಸ್ತುಗಳಿಗೂ ಆಧಾರವಾಗಿ ಅವನ್ನು ಆಳುವ ಒಬ್ಬ ಅಧಿಪತಿಯು ಇದ್ದೇ ಇರಬೇಕು. ಇಂಥ ಆಳುವ ಅಧಿಪತಿಯೊಬ್ಬನಿಲ್ಲದೆ ಬ್ರಹ್ಮಾಂಡದ ವಿಕೃತಿಗಳ ಸಾಲು ಹೇಗೆ ಪೂರ್ಣವಾದೀತು ? ಬ್ರಹ್ಮಾಂಡವಿಕೃತಿಗಳಿಗೆ ಆಧಾರನಾಗಿರುವ ಆ ಸಮಷ್ಟಿವ್ಯಾಪಕಪುರುಷನನ್ನು ನೀವು ಇಲ್ಲವೆನ್ನುವದಾದರೆ ನಾವು ಪಿಂಡಾಂಡದ ವಿಕೃತಿಗಳಿಗೆ ಆಧಾರನಾಗಿರುವ ಪುರುಷನನ್ನೂ ಇಲ್ಲವೆನ್ನುತ್ತೇವೆ. ಕ್ರಮಪಡಿಸಿ ಪರಿಣಮಿಸುತ್ತಿರುವ ವ್ಯಷ್ಟಿತತ್ತ್ವಗಳಿಗೆ ಆಧಾರವಾಗಿ ಅಜಡಪುರುಷನೊಬ್ಬನು ಇರುವನೆಂಬುದು ನಿಜವಾದರೆ, ಇದೇ ತರ್ಕವೇ ಸಮಷ್ಟಿವಿಕಾರಗಳಿಗೂ ಹೊಂದುತ್ತದೆ. ಪ್ರಕೃತಿಯ ಸಮಷ್ಟಿವಿಕಾರಗಳಿಗೆ ಆಧಾರವಾಗಿರುವ ಈ ಸಮಷ್ಟ್ಯಾತ್ಮನಿಗೆ ಈಶ್ವರನು,

---

* ಮಾಯಾವತೀಸಂಸ್ಕರಣದಲ್ಲಿ 'ಮೊದಲನೆಯ' ವಾದವೆಂದಿದ್ದರೂ ವಿಚಾರಸರಣಿಯಲ್ಲಿ ಇದು ಎರಡನೆಯದಾಗಿರುತ್ತದೆ ; ಉದ್ಬೋಧನಸಂಸ್ಕರಣದಲ್ಲಿ ಇದು ಎರಡನೆಯದೆಂದೇ ಇದೆ.

ಎಂದರೆ ಎಲ್ಲವನ್ನೂ ಆಳುವಾತನು, ದೇವರು– ಎಂದು ಹೆಸರು.*

ಈಗ ಮತ್ತೊಂದು ಇನ್ನೂ ಮುಖ್ಯವಾದ ವಾದಗ್ರಸ್ತವಿಷಯವು ಮುಂದಕ್ಕೆ ಬರುತ್ತದೆ. ಪುರುಷರು ಅನೇಕರಿರಬಹುದೆ ? ಪುರುಷನು ಸರ್ವವ್ಯಾಪಿಯೆಂದೂ ಅನಂತನೆಂದೂ ಈ ಮೊದಲೇ ತಿಳಿದುಕೊಂಡದ್ದಾಗಿರುತ್ತದೆ. ಸರ್ವವ್ಯಾಪಿಯೂ ಅನಂತನೂ ಆಗಿರುವದು ಎರಡಾಗಿರಲಾರದು ; A ಎಂಬುದೊಂದು B ಎಂಬುದೊಂದು– ಹೀಗೆ ಎರಡು ಅನಂತಗಳು ಇರುವವೆಂದು ಇಟ್ಟುಕೊಂಡರೆ ಆಗ ಅನಂತವಾದ A ಯು ಅನಂತವಾದ B ಗೆ ಪರಿಚ್ಛೇದಕವಾಗುವದು, ಏಕೆಂದರೆ ಅನಂತವಾದ A ಯು ಅನಂತವಾದ B ಅಲ್ಲ, ಅನಂತವಾದ B ಯು ಅನಂತವಾದ A ಅಲ್ಲ. ಒಂದಕ್ಕೊಂದು ತಾದಾತ್ಮ್ಯವಿಲ್ಲವೆಂದರೆ ಒಂದನ್ನೊಂದು ಹೊರತುಮಾಡಿದೆಯೆಂದೇ ಅರ್ಥ, ಹೊರತುಮಾಡುವದೆಂದರೆ ಪರಿಚ್ಛೇದವನ್ನುಂಟು ಮಾಡುವದೆಂದೇ ಅರ್ಥ. ಆದ್ದರಿಂದ A ಮತ್ತು B – ಈ ಎರಡೂ ಒಂದನ್ನೊಂದು ಪರಿಚ್ಛೇದಗೊಳಿಸುವದರಿಂದ ಅನಂತವಲ್ಲದೆ ಹೋಗುವವು. ಆದ್ದರಿಂದ ಅನಂತಾದದ್ದು ಒಂದೇ ಇರಬೇಕು, ಎಂದರೆ ಪುರುಷನು ಒಬ್ಬನೇ ಆಗಿರಬೇಕು –ಎಂದಾಯಿತು.✝

ಈಗ ನಮ್ಮ ಕ್ಷ ಮತ್ತು ಯ ಗಳನ್ನು ತೆಗೆದುಕೊಂಡು ಅವೆರಡೂ ಒಂದೇ ಎಂಬುದನ್ನು ತೋರಿಸಿಕೊಡುವೆವು. ಹೊರಗಿನ ಪ್ರಪಂಚವೆಂದು ನಾವು ಕರೆಯುತ್ತಿರುವದು ಕ್ಷ ಮತ್ತು ಚಿತ್ತವೆಂದೂ ಒಳಗಿನ ಪ್ರಪಂಚವು ಯ ಮತ್ತು ಚಿತ್ತವೆಂದೂ ತೋರಿಸಿಕೊಟ್ಟಿರುತ್ತೇವೆ. ಭೇದವೆಂಬುದೆಲ್ಲ ದೇಶಕಾಲನಿಮಿತ್ತಗಳಿಂದ ಆಗಿರುತ್ತದೆ. ಈ ಮೂರೂ ಚಿತ್ತದ ಕಾರಣಸಾಮಗ್ರಿಗಳಾಗಿರುತ್ತವೆ ;

---

*ಸರಿಯಾಗಿ ನೋಡಿದರೆ ಪುರುಷನು ಪ್ರಕೃತಿಗೆಲ್ಲ ಸಾಕ್ಷಿಯಾಗಿರುವದರಿಂದ ಸ್ವತಃ ಸಿದ್ಧನಾಗಿರುತ್ತಾನೆ; ಆದ್ದರಿಂದ ಪುರುಷನನ್ನು ತಿರಸ್ಕಾರಮಾಡುವದಕ್ಕೆ ಆಗುವದೇ ಇಲ್ಲ. ಸಮಷ್ಟಿ ವಿಕಾರಗಳಿಗೆ ಆಧಾರನಾಗಿ ಒಬ್ಬನೇ ಪುರುಷನಿರಬೇಕೆಂಬುದು ಅನುಮಾನಪ್ರಮಾಣದಿಂದ ಸಿದ್ಧವಾಗತಕ್ಕದ್ದು. ಆದ್ದರಿಂದ ಈ ಇಬ್ಬರು ಪುರುಷರ ಸಾಧನೆಯೂ ಒಂದೇ ಸಮತೂಕವಾಗುವದಿಲ್ಲ. ಇದೂ ಅಲ್ಲದೆ ಸಾಂಖ್ಯರು ಆಯಾ ಕಲ್ಪಕ್ಕೆ ಒಬ್ಬೊಬ್ಬ ಈಶ್ವರರೂಪನಾದ ಪುರುಷನಿರುವನೆಂದು ಒಪ್ಪಿಯೂ ಇರುತ್ತಾರೆ. (51 ನೆಯ ಪುಟವನ್ನು ನೋಡಿ) ಆದ್ದರಿಂದ ಈ ಖಂಡನೆಯು ನ್ಯಾಯಬದ್ಧವಲ್ಲವೆಂದು ಮೊದಲು ತೋರಬಹುದು. ಆದರೆ ಸಾಂಖ್ಯಪುರುಷನು ನಿತ್ಯಾನುಮೇಯನಾಗಿರುತ್ತಾನೆ. ನಿತ್ಯಾನುಮೇಯನಾಗಿರುವ ವ್ಯಷ್ಟಿಪುರುಷನು ನಿತ್ಯಸಿದ್ಧನೆಂದು ಅಂಗೀಕರಿಸುವದಾದರೆ ಅನುಮೇಯನಾಗಿರುವ ಈಶ್ವರನನ್ನೂ ನಿತ್ಯನೆಂದೇ ಏತಕ್ಕೆ ಅಂಗೀಕಾರಮಾಡಬಾರದು ?– ಎಂದು ಸ್ವಾಮಿಗಳವರ ಅಭಿಪ್ರಾಯವಿರಬೇಕು.

✝ ಈ ಘಟ್ಟದಲ್ಲಿ ಪುರುಷನು ವ್ಯಾಪಕನೆಂದು ಸಿದ್ಧಪಡಿಸುವ ವಾಕ್ಯಗಳು ಕೆಲವು ಉದ್ಬೋಧನಸಂಸ್ಕರಣದಲ್ಲಿ ಹೆಚ್ಚಾಗಿರುತ್ತವೆ. ಅನಂತವೆಂದರೆ ದೇಶದಿಂದಲೂ ಕಾಲದಿಂದಲೂ ವಸ್ತುವಿನಿಂದಲೂ ಅನಂತವಾದದ್ದು ; ಪುರುಷರು ಇಬ್ಬರಾದರೆ ವಸ್ತುಕೃತವಾದ ಆನಂತ್ಯವು ಇಲ್ಲದೆ ಹೋಗುವದು ; ಎಲ್ಲೆಲ್ಲಿಯೂ ಎಲ್ಲಾ ಕಾಲದಲ್ಲಿಯೂ ಇರುವ ಚಿದಾತ್ಮರಾದ ಪುರುಷರನ್ನು ಭೇದಗೊಳಿಸುವ ಧರ್ಮವೂ ಇಲ್ಲ– ಎಂಬುದು ಖಂಡನೆಯ ಸಾರವು.

ಇವುಗಳಿಲ್ಲದೆ ಯಾವದೊಂದು ಚಿತ್ತವೃತ್ತಿಯೂ ಆಗಲೇ ಆರದು. *ಕಾಲವಿಲ್ಲದೆ ವಿಚಾರಮಾಡುವದಕ್ಕೇ ಆಗುಹಾಗಿಲ್ಲ, ದೇಶವಿಲ್ಲದೆ ಯಾವ ವಸ್ತುವನ್ನೂ ಕಲ್ಪಿಸುವದಕ್ಕೆ ಬರುವಂತಿಲ್ಲ, ಯಾವದೊಂದೂ ಕಾರ್ಯಕಾರಣಭಾವದಿಂದಲ್ಲದೆ ಆಗುವಂತೆಯೇ ಇಲ್ಲ. ಇವುಗಳು ಚಿತ್ತದ ಆಕಾರಗಳು; ಇವುಗಳನ್ನು ತೆಗೆದುಹಾಕಿದರೆ ಚಿತ್ತವೇ ಇರುವದಿಲ್ಲ. ಹೀಗಿರುವದರಿಂದ ಭೇದವೆಂಬುದೆಲ್ಲವೂ ಚಿತ್ತಕೃತವೆಂದಾಯಿತು. ವೇದಾಂತಸಿದ್ಧಾಂತದಂತೆ ಚಿತ್ತವು ಎಂದರೆ ಅದರ ಆಕಾರಗಳೇ ಕ್ಷ ಮತ್ತು ಯ – ಇವುಗಳಿಗೆ ಪರಿಚ್ಛೇದವನ್ನುಂಟು ಮಾಡಿರುವಂತೆ ತೋರುತ್ತವೆ, ಅವುಗಳೇ ಇವುಗಳನ್ನು ಹೊರಗಿನ ಪ್ರಪಂಚ, ಒಳಗಿನ ಪ್ರಪಂಚ– ಎಂದು ತೋರಿಸಿಕೊಳ್ಳುವಂತೆ ಮಾಡಿರುತ್ತವೆ.

ಆದರೆ ಕ್ಷ ಮತ್ತು ಯ– ಇವೆರಡೂ ಮನಸ್ಸಿಗೆ ಅತೀತವಾಗಿರುವದರಿಂದ ಅವುಗಳಲ್ಲಿ ಯಾವ ಹೆಚ್ಚು ಕಡಿಮೆಯೂ ಇರುವದಿಲ್ಲ, ಆದ್ದರಿಂದ ಇವು ಒಂದೇ. ಅವುಗಳಲ್ಲಿ ಯಾವದಾದರೊಂದು ಧರ್ಮವು ಇದೆಯೆಂದು ಹೇಳುವದಕ್ಕಿಲ್ಲ, ಏಕೆಂದರೆ ಧರ್ಮಗಳೆಂಬಿವು ಚಿತ್ತದಿಂದಲೇ ಆಗಿರುತ್ತವೆ. ಯಾವದಕ್ಕೆ ಧರ್ಮವೇ ಇಲ್ಲವೋ ಅದು ಒಂದೇ ಆಗಿರಬೇಕು. ಕ್ಷ ಎಂಬುದು ನಿರ್ಧರ್ಮಕವಾಗಿರುತ್ತದೆ. ಅದರಲ್ಲಿ ಚಿತ್ತದ ಧರ್ಮಗಳು ಮಾತ್ರ ತೋರುತ್ತವೆ; ಯ ಎಂಬುದೂ ಹಾಗೆಯೇ. ಆದ್ದರಿಂದ ಈ ಕ್ಷ ಮತ್ತು ಯ. ಎರಡೂ ಒಂದೇ. ಇಡಿಯ ಪ್ರಪಂಚವೆಲ್ಲವೂ ಒಂದೇ. ಈ ಪ್ರಪಂಚದಲ್ಲಿರುವ ಆತ್ಮನೂ ಒಬ್ಬನೇ. ಇರುವದೆಲ್ಲ ಒಂದೇ ಸತ್ತೆ, ಆವೊಂದು ಸತ್ತೆಯ ಕಾಲದೇಶನಿಮಿತ್ತಗಳ ಮೂಲಕ ಹೊರತೋರಿಕೊಂಡಾಗ ಅದಕ್ಕೆ ಬುದ್ಧಿ, ಸೂಕ್ಷ್ಮಭೂತ, ಸ್ಥೂಲಭೂತ– ಎಂದು ಬೇರೆ ಬೇರೆ ಹೆಸರುಗಳನ್ನಿಡುತ್ತೇವೆ, ಪ್ರಪಂಚದಲ್ಲಿರುವ ಪ್ರತಿಯೊಂದೂ ಆ ಒಂದು ಸತ್ತೆಯೇ, ಅದೇ ನಾನಾರೂಪಗಳಲ್ಲಿ ತೋರಿಕೊಳ್ಳುತ್ತಿರುವನು. ಅದರಲ್ಲಿ ಬಂದು ಅಲ್ಪಾಂಶವು ಈ ಕಾಲದೇಶನಿಮಿತ್ತಗಳ ಬಲೆಯೊಳಗೆ ಸಿಕ್ಕಿಕೊಂಡಂತೆ ಆದಾಗ ಅದಕ್ಕೆ ರೂಪಗಳು ಬರುತ್ತವೆ, ಈ ಬಲೆಯನ್ನು ತೆಗೆದುಹಾಕಿದೆವೆಂದರೆ ಎಲ್ಲವೂ ಒಂದೇ ಆಗಿಬಿಡುತ್ತದೆ. ✝

---

* ಇವುಗಳಲ್ಲಿ ಯಾವದಾದರೂ ಒಂದು ಇರಲೇ ಬೇಕು– ಎಂದರ್ಥ. ಒಳಗಿನ ಭಾವಗಳಿಗೆ ದೇಶವು ಬೇಕಿಲ್ಲದಿದ್ದರೂ ಕಾಲನಿಮಿತ್ತಗಳು ಇರಲೇಬೇಕು ; ಹೊರಗಿನ ವಸ್ತುಗಳಿಗಂತೂ ದೇಶಕಾಲ ನಿಮಿತ್ತಗಳು ಮೂರೂ ಬೇಕು

✝ ಎಲ್ಲವೂ ಚಿತ್ತಾಕಾರಗಳಾದ ದೇಶಕಾಲನಿಮಿತ್ತಗಳ ಮೂಲಕ ಭಿನ್ನಭಿನ್ನವಾಗಿ ತೋರಿಕೊಳ್ಳುವವೆಂಬುದು ಪಾಶ್ಚಾತ್ಯರ ಕ್ಯಾಂಟ್ ವಿದ್ವಾಂಸನ ಮತವು. ಪಶ್ಚಿಮದೇಶದವರಿಗೆ ಅದೇ ಬೇಗ ಹಿಡಿಯುವದೆಂಬುದರ ಮೇಲೆ ಸ್ವಾಮಿಗಳು ಅದನ್ನೇ ಅನುಸರಿಸಿ ಇಲ್ಲಿ ಪ್ರತಿಪಾದನೆಮಾಡಿರುತ್ತಾರೆ. ಆದರೆ ಚಿತ್ತವೂ ಚಿತ್ತಾಕಾರಗಳೂ ಪ್ರಪಂಚಕ್ಕೇ ಸೇರಿರುವದರಿಂದ ಈ ಚಿತ್ತರೂಪವಾದ ಪ್ರಪಂಚವು ಹೇಗೆ ಉಂಟಾಯಿತು ?– ಎಂಬ ಪ್ರಶ್ನೆಯು ಇಲ್ಲಿ ಹಾಗೆಯೇ ಉಳಿದುಕೊಳ್ಳುವದು. ಅವಸ್ಥಾತ್ರಯಕ್ರಮದಿಂದ ವಿಚಾರಮಾಡಿದರೆ ಎಲ್ಲವೂ ಶುದ್ಧಚೈತನ್ಯದಿಂದಲೇ ಉಂಟಾಗುವದೆಂಬ ವೇದಾಂತದ ಪರಮಸಿದ್ಧಾಂತವು ನಿಸ್ಸಂಶಯವಾಗಿ ಮನದಟ್ಟಾಗುತ್ತದೆ. ಈ ಪ್ರಕ್ರಿಯೆಯನ್ನು ಮಾಂಡೂಕ್ಯಾದಿ ಭಾಷ್ಯಗಳಲ್ಲಿ ವಿವರಿಸಿರುತ್ತದೆ ; ಅಧ್ಯಾತ್ಮಪ್ರಕಾಶಪತ್ರಿಕೆಯ ಸಂಪಾದಕರಲೇಖನಗಳಲ್ಲಿಯೂ ಇದನ್ನು ವಿಸ್ತಾರವಾಗಿ ಪ್ರತಿಪಾದಿಸಿರುತ್ತದೆ.

ಆದ್ದರಿಂದ ಅದ್ವೈತಸಿದ್ಧಾಂತದಲ್ಲಿ ಇಡಿಯ ವಿಶ್ವವೇ ಆತ್ಮನಲ್ಲಿ ಒಂದಾಗಿ ಬಿಡುತ್ತದೆ. ಈ ಆತ್ಮನಿಗೆ ಬ್ರಹ್ಮವೆಂದು ಹೆಸರು. ಈ ಆತ್ಮನು ಪ್ರಪಂಚಕ್ಕೆ ಆಧಾರನಾಗಿ ಕಾಣಿಸಿಕೊಳ್ಳುವಾಗ ಈಶ್ವರನೆನಿಸುವನು. ಅದೇ ಆತ್ಮನು ಈ ಪಿಂಡಾಂಡವೆಂಬ ಚಿಕ್ಕ ಪ್ರಪಂಚಕ್ಕೆ ಆಧಾರನಾಗಿ ಕಾಣಿಸಿಕೊಳ್ಳುವಾಗ ಪುರುಷನೆನಿಸಿಕೊಳ್ಳುವನು. ಆದ್ದರಿಂದ ಈ ಪುರುಷನೇ ಮನುಷ್ಯನೊಳಗಿರುವ ಆ ಆತ್ಮನು. ಇರುವವನು ಒಬ್ಬನೇ ಪುರುಷನು, ಇವನೇ ವೇದಾಂತಿಗಳು ಹೇಳುವ ಬ್ರಹ್ಮವು. ದೇವರು, ಮನುಷ್ಯನು, ಇವರನ್ನು ಚೆನ್ನಾಗಿ ಬಿಚ್ಚಿ ನೋಡಿದರೆ ಇದರಲ್ಲಿ ಒಂದಾಗಿ ಬಿಡುತ್ತಾರೆ. ಈ ವಿಶ್ವವು ನೀನೇ, ಅಖಂಡವಾದ ನೀನೇ: ನೀನು ವಿಶ್ವದಲ್ಲೆಲ್ಲ ವ್ಯಾಪಿಸಿರುತ್ತೀಯೆ. "ಎಲ್ಲಾ ಕೈಗಳಿಂದಲೂ ನೀನು ಕೆಲಸಮಾಡುತ್ತಿರುವೆ, ಎಲ್ಲಾ ಮುಖಗಳಿಂದಲೂ ನೀನು ತಿನ್ನುತ್ತಿರುವೆ. ಎಲ್ಲಾ ಮೂಗುಗಳಿಂದಲೂ ವಾಸನೆನೋಡುತ್ತಿರುವೆ, ಎಲ್ಲಾ ಮನಸ್ಸುಗಳಿಂದಲೂ ವಿಚಾರಮಾಡುತ್ತಿರುವೆ"* ಇಡಿಯ ಪ್ರಪಂಚವೇ ನೀನು ; ಈ ಪ್ರಪಂಚವು ನಿನ್ನ ಶರೀರವು. ನೀನೇ ವ್ಯಾಕೃತಾವ್ಯಾಕೃತಪ್ರಪಂಚವು. ನೀನೇ ಅದಕ್ಕೆ ಆತ್ಮನು, ನೀನೇ ಅದಕ್ಕೆ ಶರೀರವು. ನೀನೇ ಈಶ್ವರನು, ನೀನೇ ದೇವತೆಗಳು, ನೀನೇ ಖನಿಜಗಳು, ನೀನು ಸರ್ವವೂ ಆಗಿರುವೆ ; ಪ್ರತಿಯೊಂದು ವಿಭೂತಿಯೂ ನೀನೇ.

ನೀನು ಅನಂತನು, ಅನಂತವಾದದ್ದನ್ನು ವಿಭಾಗಿಸುವದಕ್ಕಗುವದಿಲ್ಲ. ಅದಕ್ಕೆ ಅಂಶಗಳು ಇರುವಂತಿಲ್ಲ; ಏಕೆಂದರೆ ಒಂದೊಂದು ಅಂಶವೂ ಅನಂತವಾಗಿರುವದು, ಆಗ ಅಂಶವು ಅಂಶಿಯಾಗಬೇಕಾಗುವದು, ಇದು ಉಪಹಾಸ್ಯವಾಗಿರುತ್ತದೆ. ಆದ್ದರಿಂದ ನೀನು ಶ್ರೀಯುತ ಇಂಥವನು ಎಂಬುದು ಎಂದಿಗೂ ನಿಜವಾಗಲಾದು, ಅದು ಬರಿಯ ಹಗಲುಕನವರಿಕೆ. ಇದನ್ನರಿತು ಮುಕ್ತರಾಗಿರಿ. ಇದೇ ಅದ್ವೈತಸಿದ್ಧಾಂತವು. "ನಾನು ದೇಹವಲ್ಲ, ಇಂದ್ರಿಯಗಳಲ್ಲ, ಅಂತಃಕರಣವೂ ಅಲ್ಲ ; ನಾನು ಅಖಂಡಸಚ್ಚಿದಾನಂದರೂಪನು, ನಾನು ಆತನೇ" ಹೀಗೆಂಬುದೇ ನಿಜವಾದ ಜ್ಞಾನವು, ಮಿಕ್ಕದ್ದೆಲ್ಲವೂ ಅಜ್ಞಾನವು. ನನಗೆ ಜ್ಞಾನವೆಂಬುದೆಲ್ಲಿ ಬಂತು ? ನಾನು ಜ್ಞಪ್ತಿಸ್ವರೂಪನೇ ! ನನಗೆ ಪ್ರಾಣವೆಂಬುದೆಲ್ಲಿ ಬಂತು ? ನಾನು ಪ್ರಾಣದ ಸ್ವರೂಪನೇ. ✠ ನಾನು ಬದುಕಿರುತ್ತೇನೆಂದು ನನಗೆ ಕಡುಖಂಡಿತವಾದ ನಿಶ್ಚಯವಿರುವುದೇಕೆಂದರೆ ನಾನೇ ಈ ಜೀವನವಾಗಿರುತ್ತೇನೆ, ಏಕಮಾತ್ರ ಸತ್ತಾಸ್ವರೂಪನಾಗಿದ್ದೇನೆ ; ಬೇರೆ ಯಾವದೊಂದೇ ಆಗಲಿ, ನನ್ನ ಮೂಲಕವೇ, ನನ್ನಲ್ಲಿಯೇ, ನನ್ನ ರೂಪದಲ್ಲಿಯೇ ಹೊರತು ಸ್ವತಂತ್ರವಾಗಿರುವದೇ ಇಲ್ಲ. ನಾನು ಭೂತಗಳ ಮೂಲಕ ಹೊರತೋರಿಕೊಳ್ಳುವೆನು, ಆದರೆ ನಾನು ಅದ್ವಿತೀಯನು, ನಿತ್ಯಮುಕ್ತನು. ಮುಕ್ತಿಯು ಬೇಕೆನ್ನುವವರು ಯಾರು ? ಯಾರೊಬ್ಬರೂ ಇಲ್ಲ. ನೀನು ಬದ್ಧನೆಂದು ಭಾವಿಸಿಕೊಂಡರೆ ಬದ್ಧನೇ ಆಗಿರುವೆ; ಮುಕ್ತನೆಂಬುದನ್ನು ಮನದಂದರೆ, ಇದೇ ಕ್ಷಣವೇ ಮುಕ್ತನಾದೆ ! ಇದೇ ಜ್ಞಾನವು, ಇದೇ ಮುಕ್ತಿಯ ಜ್ಞಾನವು. ಮುಕ್ತಿಯೇ ಈ ಪ್ರಕೃತಿಗೆಲ್ಲ ಪರಮಗತಿಯು.

---

* ಗೀತಾ 13–13 ಶ್ಲೇ. 3–16 ಇವುಗಳನ್ನು ಹೋಲಿಸಿರಿ.

✠ ಜ್ಞಾನ. ಪ್ರಾಣ– ಎಂಬವು ಆತ್ಮನ ಧರ್ಮಗಳಲ್ಲ, ಸ್ವರೂಪವೇ ಎಂದು ಭಾವ.

# 13

# ನಿತ್ಯಮುಕ್ತನಾದ ಆತ್ಮ

ಸಾಂಖ್ಯರು ಮಾಡಿರುವ ತತ್ತ್ವವಿವೇಕವು ಪ್ರಕೃತಿ, ಪುರುಷರು–ಎಂಬ ದ್ವೈತದಲ್ಲಿಯೇ ನಿಂತುಬಿಟ್ಟಿರುತ್ತದೆ. ಪುರುಷರು ಲೆಕ್ಕವಿಲ್ಲದಷ್ಟು ಇರುವರು; ಇವರು ನಿರವಯವರಾಗಿರುವದರಿಂದ, ಇವರಿಗೆ ಮರಣವಿಲ್ಲ. ಆದ್ದರಿಂದಲೇ ಇವರು ಪ್ರಕೃತಿಗಿಂತ ಬೇರೆಯಾಗಿಯೇ ಇರುವರು. ಪ್ರಕೃತಿಯು ತನ್ನಷ್ಟಕ್ಕೆ ತಾನು ಮಾರ್ಪಾಡಾಗುತ್ತಲೇ ಇರುವದು. ಅದರಲ್ಲಿಯೇ ಈ ದೃಶ್ಯಗಳೆಲ್ಲ ತೋರಿಕೊಳ್ಳುತ್ತಿರುವವು ; ಸಾಂಖ್ಯರ ಮತದಲ್ಲಿ ಪುರುಷನು ಅಕರ್ತೃ, ಎಂದರೆ ಏನೂ ಮಾಡುವದಿಲ್ಲ. ಪುರುಷನು ತಾನೊಬ್ಬನೇ ಇರುವನು; ಪ್ರಕೃತಿಯು ಈ ಪುರುಷನಿಗೆ ಕೈವಲ್ಯವಾಗುವದಕ್ಕಾಗಿ ಈ ದೃಶ್ಯಗಳ ರೂಪದಲ್ಲಿ ಪರಿಣಮಿಸುತ್ತಾ ಇರುವದು. ಕೈವಲ್ಯವೆಂದರೆ, ಪುರುಷನು ತಾನು ಪ್ರಕೃತಿಯಲ್ಲವೆಂದು ವಿಂಗಡಿಸಿ ಅರಿತುಕೊಳ್ಳುವದು. ಹೀಗಿದ್ದರೂ ಸಾಂಖ್ಯರು ಪ್ರತಿಯೊಬ್ಬ ಪುರುಷನೂ ಸರ್ವವ್ಯಾಪಕನೆಂಬುದನ್ನು ಮಾತ್ರ ಒಪ್ಪಲೇ ಬೇಕಾಯಿತು. ಈ ವಿಷಯವನ್ನು ಈ ಮೊದಲೇ ತಿಳಿಸಿರುತ್ತೇನೆ. ಪುರುಷನು ನಿರವಯವನಾಗಿರುವದರಿಂದ, ಇಷ್ಟೆಂಬ ಅಳತೆಗೆ ಸಿಕ್ಕಲಾರನು; ಏಕೆಂದರೆ ಇಷ್ಟೆಂಬ ಪರಿಚ್ಛೇದವು ಬರಬೇಕಾದರೆ ಕಾಲದಿಂದಲೋ, ದೇಶದಿಂದಲೋ, ಕಾರ್ಯಕಾರಣಭಾವದಿಂದಲೋ ಬರುತ್ತದೆ. ಆದರೆ ಪುರುಷನು ಇವುಗಳನ್ನೆಲ್ಲಾ ಮೀರಿ ಇರುವದರಿಂದ, ಅವನಿಗೆ ಯಾವ ಪರಿಚ್ಛೇದವೂ ಉಂಟಾಗಲಾರದು. ಪರಿಚ್ಛಿನ್ನವಾಗಿರಬೇಕಾದರೆ, ಆಕಾಶದಲ್ಲಿ ಇಂಥ ಕಡೆಯಲ್ಲಿರುವದೆಂಬ ನಿಯಮವಿರಬೇಕು. ಶರೀರವು ಬಯಲಿನಲ್ಲಿ ಒಂದು ಗೊತ್ತಾದ ಕಡೆಯಲ್ಲಿರುವದು, ಆದರೆ ಅದು ಪ್ರಕೃತಿಗೇ ಸೇರಿರುವದು. ಹೀಗೆಯೇ ಪುರುಷನಿಗೂ ಆಕಾರವಿದ್ದರೆ ಪುರುಷನೂ ಪ್ರಕೃತಿಯೇ ಆಗಿಬಿಡುತ್ತಿದ್ದನು. ಆದ್ದರಿಂದ ಪುರುಷನಿಗೆ ಆಕಾರವಿಲ್ಲವೆಂದಾಯಿತು. ಯಾವದಕ್ಕೆ ಆಕಾರವಿಲ್ಲವೋ ಅದು ಇಲ್ಲಿ, ಅಲ್ಲಿ, ಅಥವಾ ಮತ್ತೆಲ್ಲಿಯಾದರೂ ಗೊತ್ತಾದ ಕಡೆಯಲ್ಲಿ ಇರುವದೆಂದು ಹೇಳುವದಕ್ಕಿಲ್ಲ. ಅದು ಎಲ್ಲೆಲ್ಲಿಯೂ ಇರಲೇಬೇಕು. ಸಾಂಖ್ಯಸಿದ್ಧಾಂತವು ಇಲ್ಲಿಂದ ಮುಂದಕ್ಕೆ ಹಾಯುವದಿಲ್ಲ.

ವೇದಾಂತಿಗಳು ಇದರ ಮೇಲೆ ಮಾಡಿರುವ ಮೊದಲನೆಯ ಆಕ್ಷೇಪಣೆ ಏನೆಂದರೆ, ಈ ವಿಭಾಗವು ಪೂರ್ಣವಲ್ಲ. ಏಕೆಂದರೆ ಪ್ರಕೃತಿಯೂ ಸ್ವತಂತ್ರವಾಗಿ ಪುರುಷನೂ ಸ್ವತಂತ್ರನಾದರೆ ಎರಡು ಸ್ವತಂತ್ರತತ್ತ್ವಗಳೆಂದಾಗುವದು. ಪುರುಷನು ಸರ್ವವ್ಯಾಪಕನೆಂದು ತೋರಿಸುವದಕ್ಕೆ ಹೇಳುವ ಯುಕ್ತಿಗಳು ಪ್ರಕೃತಿಗೂ ಹೊಂದುತ್ತವೆಯಾದ್ದರಿಂದ ಪ್ರಕೃತಿಯೂ ದೇಶಕಾಲನಿಮಿತ್ತಗಳೆಂಬ ಪರಿಚ್ಛೇದವಿಲ್ಲದ್ದೆಂದು ಆಗುವದು; ಅದೂ ಆಗಲಿ ಎಂದರೆ ಪರಿಣಾಮವು, ಬಗೆ ಬಗೆಯ ದೃಶ್ಯಗಳ ರೂಪದಲ್ಲಿ ತೋರಿಕೊಳ್ಳುವದೆಂಬುದು, ಇಲ್ಲದೆ ಹೋಗುವದು. ಆಗ ಎರಡು ಅಪರಿಚ್ಛಿನ್ನವಾದ ಸ್ವತಂತ್ರ ತತ್ತ್ವಗಳನ್ನು ಒಪ್ಪಿದಂತೆ ಆಗುತ್ತದೆ. ಅದು ಆಗುವ ಮಾತಲ್ಲ. ಹಾಗಾದರೆ ಇದಕ್ಕೆ ವೇದಾಂತಿಯ ಪರಿಹಾರವೇನು ? ಎಂದರೆ ಸಾಂಖ್ಯರು ಹೇಳುವಂತೆ ಭೌತಿಕವಸ್ತುಗಳಿಂದ ಹಿಡಿದು

ಮಹತ್ತತ್ತ್ವದವರೆಗಿನ ಪ್ರಕೃತಿಯ ಪರಿಣಾಮವಾಗಿರುವ ತತ್ತ್ವಗಳೆಲ್ಲವೂ ಜಡವಾಗಿರುವದರಿಂದ ಮನಸ್ಸಿಗೆ ಆಲೋಚನೆಮಾಡುವಂತೆಯೂ ಹೊರಗಿನ ಪ್ರಕೃತಿಯಲ್ಲಿ ಚಲನೆಯುಂಟಾಗುವಂತೆಯೂ ಮಾಡುವದಕ್ಕೆ ಪ್ರೇರಕವಾಗಿ ಯಾವದಾದರೂ ಒಂದು ಚೇತನಶಕ್ತಿಯಿರಬೇಕು. ಈ ಪ್ರಪಂಚಕ್ಕೆಲ್ಲ ಹೀಗೆ ಆಧಾರವಾಗಿರುವ ಈ ಚೇತನವೇ ಈಶ್ವರನು. ಆದ್ದರಿಂದ ಈ ಪ್ರಪಂಚವು ಈತನಿಗಿಂತ ಬೇರೆಯಾಗಿರುವದಿಲ್ಲ– ಎಂಬುದು ವೇದಾಂತಿಯ ಮತವು.

ಆ ಈಶ್ವರನೇ ಈ ಪ್ರಪಂಚವಾಗಿರುವವನು. ಆತನು ಈ ಪ್ರಪಂಚಕ್ಕೆ ಬರಿಯ ನಿಮಿತ್ತಕಾರಣಮಾತ್ರವಲ್ಲ, ಉಪಾದಾನಕಾರಣವೂ ಆಗಿರುತ್ತಾನೆ. ಕಾರಣಕ್ಕೂ ಕಾರ್ಯಕ್ಕೂ ಎಂದಿಗೂ ಭೇದವಿರುವದಿಲ್ಲ ; ಕಾರ್ಯವೆಂಬುದು ಕಾರಣದ ರೂಪಾಂತರಮಾತ್ರವಾಗಿರುತ್ತದೆ. ಇದು ನಮಗೆ ದಿನದಿನವೂ ಕಾಣಬರುತ್ತಿರುವದು. ಹೀಗೆ ಈತನು ಪ್ರಕೃತಿಗೂ ಕಾರಣನಾಗಿರುತ್ತಾನೆ. ವೇದಾಂತದಲ್ಲಿ ದ್ವೈತವೇ ಆಗಲಿ, ಅದ್ವೈತವೇ ಆಗಲಿ, ವಿಶಿಷ್ಟಾದ್ವೈತವೇ ಆಗಲಿ–ಯಾವದಾದರೊಂದು ವಾದದಲ್ಲಿ ನೋಡಿದರೂ, ಯಾವ ಪ್ರಕ್ರಿಯೆಯಲ್ಲಿ ನೋಡಿದರೂ 'ಈಶ್ವರನು ಈ ಪ್ರಪಂಚಕ್ಕೆ ಬರಿಯ ನಿಮಿತ್ತಕಾರಣನು ಮಾತ್ರವಲ್ಲ, ಉಪಾದಾನಕಾರಣವೂ* ಆಗಿರುತ್ತಾನೆ'–ಎಂಬೀ ಅಭಿಪ್ರಾಯವು ಮೊಟ್ಟಮೊದಲನೆಯದಾಗಿರುವದು. ವೇದಾಂತದಲ್ಲಿ ಎರಡನೆಯ ಮೆಟ್ಟಲು ಯಾವದೆಂದರೆ: ಈ ಜೀವರೂ ಈಶ್ವರನ ಅಂಶಗಳು, ಆ ಅನಂತವಾದ ಬೆಂಕಿಯ ಸಣ್ಣ ಸಣ್ಣ ಕಿಡಿಗಳು. "ಧಗಧಗನೆ ಉರಿಯುತ್ತಿರುವ ಬೆಂಕಿಯಿಂದ ಲಕ್ಷಗಟ್ಟಲೆಯ ಕಿಡಿಗಳು ಹೇಗೆ ಸಿಡಿದು ಬರುತ್ತವೆಯೋ ಅದರಂತೆಯೇ ಈ ನಾಶರಹಿತನಾದ ಮೂಲಪುರುಷನಿಂದ ಈ ಜೀವರೆಲ್ಲರೂ ಬಂದಿರುವರು" (ಮುಂ. 2–1–1).

ಇದೇನೋ ಸರಿಯೇ ; ಆದರೂ ಇಷ್ಟೇ ಸಾಲದು. ಅನಂತವಾದದ್ದಕ್ಕೆ ಅಂಶವೆಂದರೆ ಏನರ್ಥ? ಅನಂತವಾಗಿರುವದನ್ನು ಭಾಗಿಸುವದಕ್ಕೆ ಬರುವದಿಲ್ಲ; ಅನಂತವಾಗಿರುವದಕ್ಕೆ ಅಂಶಗಳೇನೂ ಇರಲಾರವು. ಬ್ರಹ್ಮವನ್ನು ಭಾಗಿಸುವದಕ್ಕೆ ಆಗುವದಿಲ್ಲವೆಂದ ಮೇಲೆ ಈ ಜೀವರೆಲ್ಲರೂ ಅದರಿಂದ ಬಂದಿರುವ ಕಿಡಿಗಳೆಂದರೇನರ್ಥ? ಅದ್ವೈತಿಯು, ಬ್ರಹ್ಮಕ್ಕಿಂತ ಬೇರೆಯಾಗಿ ಎರಡನೆಯದೇನೂ ಇಲ್ಲವೆಂಬ ಮತದವನಾದ ವೇದಾಂತಿಯು. ಈ ತೊಡಕನ್ನು ಬಿಡಿಸುವ ಬಗೆ ಹೇಗೆಂದರೆ, ಅವನ ಮತದಲ್ಲಿ ನಿಜವಾಗಿ ಅಂಶಗಳೆಂಬವು ಇರುವದೇ ಇಲ್ಲ. ಪ್ರತಿಯೊಬ್ಬ ಜೀವನೂ ಆ ಅನಂತತತ್ತ್ವದ ಒಂದು ಅಂಶಮಾತ್ರವಲ್ಲ, ಸರಿಯಾಗಿ ನೋಡಿದರೆ ತಾನೇ ಆ ಅಪರಿಚ್ಛಿನ್ನವಾದ ಪರಬ್ರಹ್ಮವಾಗಿರುತ್ತಾನೆ. ಹಾಗಾದರೆ ಇಷ್ಟೊಂದು ಜೀವರು ಆದದ್ದು ಹೇಗೆಂದು ಕೇಳಬಹುದು. ಸೂರ್ಯನು ಲಕ್ಷಗಟ್ಟಲೆ

---

* ಕಾರಣವನ್ನು ಉಪಾದಾನಕಾರಣವೆಂತಲೂ ನಿಮಿತ್ತಕಾರಣವೆಂತಲೂ ಎರಡು ಬಗೆಯಾಗಿ ವಿಂಗಡಿಸುವದುಂಟು. ಗಡಿಗೆಗೆ ಮಣ್ಣು ಉಪಾದಾನಕಾರಣ, ಕುಂಬಾರನು ನಿಮಿತ್ತಕಾರಣನು. ಜಗತ್ತನ್ನು ಪರಮೇಶ್ವರನು ತನ್ನ ಸಂಕಲ್ಪಮಾತ್ರದಿಂದ ಮಾಡಿರುತ್ತಾನೆಂದೂ ಅದಕ್ಕೆ ಮತ್ತೆ ಯಾವ ಉಪಾದಾನವಸ್ತುವೂ ಬೇಕಿಲ್ಲವೆಂದೂ ಕ್ರಿಸ್ತಿಯನ್ ಮಹಮ್ಮದೀಯ ಮತಗಳವರ ಅಭಿಪ್ರಾಯವು ; ಪರಮಾಣುಗಳಿಂದ ಜಗತ್ತನ್ನು ಈಶ್ವರನು ಮಾಡಿರುವನೆಂದು ತಾರ್ಕಿಕರ ಮತವು ; ಜಡಪ್ರಕೃತಿಯಿಂದ ಮಾಡಿರುವನೆಂದು ಮಾಧ್ವವೇದಾಂತಿಗಳ ಮತವು. ಈ ಎಲ್ಲಾ ಮತಗಳಲ್ಲಿಯೂ ಈಶ್ವರನು ಜಗತ್ತಿಗೆ ಬರಿಯ ನಿಮಿತ್ತಕಾರಣನಾಗಿರುತ್ತಾನೆ ; ಆದರೆ ಮಿಕ್ಕ ವೇದಾಂತಿಗಳ ಮತದಲ್ಲಿ ಈಶ್ವರನು ನಿಮಿತ್ತಕಾರಣವೂ ಉಪಾದಾನಕಾರಣವೂ ಆಗಿರುತ್ತಾನೆ.

ನೀರಿನ ತೊಟ್ಟುಗಳಲ್ಲಿ ಪ್ರತಿಬಿಂಬಿಸಿದರೆ ಲಕ್ಷಗಟ್ಟಲೆ ಸೂರ್ಯರಾಗಿ ತೋರುವದಿಲ್ಲವೆ? ಪ್ರತಿಯೊಂದು ತೊಟ್ಟಿನಲ್ಲಿಯೂ ಸೂರ್ಯನಾಕಾರದ ಒಂದು ಸಣ್ಣ ಪ್ರತಿಬಿಂಬವಿರುವದಿಲ್ಲವೆ ? ಇದರಂತೆಯೆ ಈ ಜೀವರೂ ಆತ್ಮನ ಪ್ರತಿಬಿಂಬಗಳೇ ಹೊರತು ನಿಜವಾದ ಆತ್ಮನಲ್ಲ. ಇವರೇನೂ ಈ ಜಗತ್ತಿಗೆಲ್ಲ ಈಶ್ವರನೆನಿಸಿಕೊಂಡು ಈ ಜಗತ್ತಿನಲ್ಲಿರುವ, ನಿರ್ವಿಭಾಗನಾದ ಸದ್ರೂಪನಾದ ಪರಮಾತ್ಮನಾಗಿರುವ, ನಿಜವಾದ 'ನಾನು' ಎಂಬ ವಸ್ತುವಲ್ಲ. ಮನುಷ್ಯರು ಪಶುಪಕ್ಷಿಗಳು–ಮುಂತಾದ ಈ ಬೇರೆ ಬೇರೆ ಪ್ರಾಣಿಗಳೆಲ್ಲ ಪ್ರತಿಬಿಂಬಗಳೇ ಹೊರತು ನಿಜವಾದ ಆತ್ಮನಲ್ಲ. ಅವು ಪ್ರಕೃತಿಯ ಮೇಲೆ ಮಾರುಹೋಲೆದಿರುವ ಬರಿಯ ಮಾಯಿಕವಾದ ಪ್ರತಿಬಿಂಬಗಳೇ. ಈ ಪ್ರಪಂಚದಲ್ಲಿ ಒಂದೇ ಒಂದು ಅಪರಿಚ್ಛಿನ್ನನಾದ ತತ್ತ್ವವಿರುವದು. ಆ ತತ್ತ್ವವು ನೀನು, ನಾನು– ಎಂದು ತೋರಿಕೊಳ್ಳುತ್ತಿರುವದು ; ಆದರೆ ನಿಜವಾಗಿ ನೋಡಿದರೆ ಈ ಭೇದವು ಮಾಯಿಕವೇ. ಆತನು ನಿಜವಾಗಿ ಬೇರೆಬೇರೆಯಾಗಿರುವದಿಲ್ಲ ; ಬೇರೆಬೇರೆಯಾಗಿರುವಂತೆ ತೋರುತ್ತಿದಾನೆ. ಅಷ್ಟೆ. ಕಾಲ, ದೇಶ, ಕಾರ್ಯಕಾರಣ ಭಾವವೆಂಬ ಜಾಲದ ಮಲಕ ಆತನನ್ನು ನೋಡುವದರಿಂದ ಈ ತೋರಿಕೆಯ ಭೇದವು ಉಂಟಾಗಿರುತ್ತದೆ. ಕಾಲ, ದೇಶ, ಕಾರ್ಯಕಾರಣಭಾವವೆಂಬ ಬಲೆಯ ಮೂಲಕ ಈಶ್ವರನನ್ನು ನೋಡಿದರೆ ಆತನು ಈ ಭೌತಿಕಪ್ರಪಂಚವಾಗಿ ತೋರುವನು. ಇದೇ ಬಲೆಯ ಮೂಲಕ, ಇನ್ನೂ ಸ್ವಲ್ಪ ಹೆಚ್ಚಿನ ಅಂತಸ್ತಿನಿಂದ ನೋಡಿದರೆ, ಒಂದು ಪ್ರಾಣಿಯಾಗಿ, ಇನ್ನೂ ಸ್ವಲ್ಪ ಮೇಲಿನಿಂದ ನೋಡಿದರೆ ಮನುಷ್ಯನಾಗಿ, ಇನ್ನೂ ಮೇಲಿನಿಂದ ದೇವತೆಯಾಗಿ, ತೋರುವನು ; ಹೀಗೆಲ್ಲ ತೋರುತ್ತಿದ್ದರೂ ಆತನು ನಿಜವಾಗಿ ಈ ಬ್ರಹ್ಮಾಂಡದಲ್ಲಿರುವ ನಿಜವಾದ ಅನಂತವಾದ ಒಂದೇ ತತ್ತ್ವವಾಗಿರುತ್ತಾನೆ. ಆ ತತ್ತ್ವವೇ ನಾವು. ನಾನೂ ಅದೇ, ನೀವೂ ಅದೇ. ಅದರ ಅಂಶಗಳೆಂದಲ್ಲ, ಪೂರ್ಣವಾಗಿಯೂ ಅದೇ. ಈ ದೃಶ್ಯಗಳಿಗೆಲ್ಲ ಹಿಂದೆ ನಿಂತು ನೋಡುತ್ತಿರುವ ನಿತ್ಯಪ್ರಮಾತ್ರವೇ ಆತನು, ಆತನೇ ಈ ದೃಶ್ಯವು. ಆತನೇ ವಿಷಯಿ, ಆತನೇ ವಿಷಯ. ಆತನೇ ನಾನು, ಆತನೇ ನೀನು.

ಇದು ಹೇಗೆ ? "ಈ ಅರಿಯುವಾತನನ್ನು ಅರಿತುಕೊಳ್ಳುವದು ಹೇಗೆ ?" (ಬೃ. 4–5–15) ಜ್ಞಾತೃವಾದವನು ತನ್ನನ್ನು ತಾನೇ ಅರಿಯಲಾರನು. ನನಗೆ ಮಿಕ್ಕದ್ದೆಲ್ಲವೂ ಕಾಣಬಹುದು, ನನ್ನನ್ನೆ ನಾನು ನೋಡುವದೆಂಬುದು ಆಗದ ಮಾತು. ಈ ಆತ್ಮನು, ಈ ಜ್ಞಾತೃವು, ಈ ಸರ್ವೇಶ್ವರನು, ಈ ಸತ್ಯಸ್ವರೂಪನು, ಈ ಪ್ರಪಂಚದಲ್ಲಿರುವ ನೋಟಕ್ಕೆಲ್ಲ ಹೇತುವಾಗಿರುತ್ತಾನೆ; ಆದರೆ ಆತನು ತಾನೇ ತನ್ನನ್ನು ನೋಡಬೇಕೆಂದರೆ ಪ್ರತಿಬಿಂಬದ ಮೂಲಕವಲ್ಲದೆ ಬೇರೆ ಮಾರ್ಗವಿಲ್ಲ. ನಿಮ್ಮ ನಿಮ್ಮ ಮುಖವನ್ನು ನೋಡಿಕೊಳ್ಳಬೇಕಾದರೆ ಕನ್ನಡಿಯಲ್ಲಿ ನೋಡಬೇಕೇ ಹೊರತು ಬೇರೆ ಮಾರ್ಗವಿಲ್ಲ. ಇದರಂತೆ ಪರಮಾತ್ಮನು ತನ್ನ ಸ್ವರೂಪವನ್ನು ಕಾಣಬೇಕಾದರೆ ಪ್ರತಿಬಿಂಬಿಸಬೇಕು. ಆದ್ದರಿಂದ ಈ ಪ್ರಪಂಚವೆಂಬುದೆಲ್ಲ ಆ ಪರಮಾತ್ಮನು ತನ್ನನ್ನು ತಾನು ಸಾಕ್ಷಾತ್ಕರಿಸಿಕೊಳ್ಳುವ ಪ್ರಯತ್ನವು. ಈ ಪ್ರತಿಬಿಂಬವು ಮೊಟ್ಟಮೊದಲು ಜೀವಾಣುವಿನಲ್ಲಿ * ಬೀಳುವದು. ಆಮೇಲೆ ಗಿಡಗಳಲ್ಲಿ, ಆಮೇಲೆ

---

* ಪ್ರಾಣಿಗಳಲ್ಲಿಯೂ ಮರಗಿಡಗಳಲ್ಲಿಯೂ ತೋರಿಕೊಳ್ಳುವ ಪ್ರಾಣಕ್ಕೆ ಆಧಾರವಾಗಿಯೂ ಅರ್ಧದ್ರವರೂಪವಾಗಿಯೂ ಅರ್ಧ ತಿಳಿಯಾಗಿಯೂ ಇರುವ ಒಂದು ವಸ್ತುವಿದೆ : ಇದು ಆಮ್ಲಜನಕ, ಜಲಜನಕ, ಇಂಗಾಲ, ಸಾರಜನಕ– ಇವುಗಳಿಂದಾಗಿದೆ. ಇದನ್ನು ಜೀವಾಣು (protoplasm) ವೆಂದು ಪ್ರಾಣಿಶಾಸ್ತ್ರಜ್ಞರು ಕರೆಯುತ್ತಾರೆ.

ಪ್ರಾಣಿಗಳಲ್ಲಿ ; ಹೀಗೆಯೇ ಮುಂದು ಮುಂದಕ್ಕೆ ಹೋಗುತ್ತಾ ಹೆಚ್ಚು ಹೆಚ್ಚು ಉತ್ತಮವಾದ ಪ್ರತಿಬಿಂಬ ಗ್ರಾಹಿಗಳಲ್ಲಿ ಬೀಳುತ್ತಾ ಹೋಗುವದು. ಕೊನೆಗೆ ಅತ್ಯುತ್ತಮವಾದ ಅತ್ಯಂತ ಸ್ವಚ್ಛವಾದ ಕನ್ನಡಿಯಂತಿರುವ ಪರಿಪೂರ್ಣವಾದ ಮನುಷ್ಯನಲ್ಲಿ ಬೀಳುವದು. ಒಬ್ಬನು ತನ್ನ ಮುಖವನ್ನು ನೋಡಿಕೊಳ್ಳಬೇಕೆಂದು ಮೊದಲು ಬಗ್ಗಡವಾದ ನೀರಿರುವ ಕುಂಟೆಯಲ್ಲಿ ನೋಡಿದರೆ ಮುಖದ ರೂಪರೇಖೆಯು ಮಾತ್ರ ಕಾಣಿಸುವದು ; ಆಮೇಲೆ ತಿಳಿನೀರಿಲ್ಲಿ ನೋಡಿಕೊಂಡರೆ ಅದಕ್ಕಿಂತ ಸ್ಫುಟವಾಗಿ ಮುಖದ ನೆರಳು ಗೋಚರವಾಗುವದು. ಇದಾದ ಮೇಲೆ ಒಂದು ಹೊಳೆಯುವ ಲೋಹದಲ್ಲಿ ನೋಡಿಕೊಂಡರೆ ಪ್ರತಿಬಿಂಬವು ಇನ್ನೂ ಚೆನ್ನಾಗಿ ಕಾಣುವದು. ಕೊನೆಗೆ ಒಂದು ಕನ್ನಡಿಯಲ್ಲಿ ನೋಡಿಕೊಂಡರೆ ತನ್ನ ಮುಖವು ಇದ್ದದ್ದು ಇದ್ದಹಾಗೆಯೇ ಬಿಂಬಿಸಿರುವದು ಕಾಣಬರುತ್ತದೆಯಲ್ಲವೆ? ಅದರಂತೆಯೆ, ಇಲ್ಲಿಯೂ ತಿಳಿಯಬೇಕು. ವಿಷಯಿಯೂ ವಿಷಯವೂ ಆಗಿರುವ ಆ ಪರಬ್ರಹ್ಮಕ್ಕೆ ಪರಿಪೂರ್ಣನಾದ ಮನುಷ್ಯನೇ ಅತ್ಯಂತ ಉತ್ತಮವಾದ ಪ್ರತಿಬಿಂಬವು. ಪ್ರತಿಯೊಂದು ವಸ್ತುವನ್ನೂ ಪೂಜಿಸುವದು ಮನುಷ್ಯನಿಗೆ ಏತಕ್ಕೆ ಸಹಜವಾಗಿರುವದೆಂಬುದೂ ಪ್ರತಿಯೊಂದು ದೇಶದಲ್ಲಿಯೂ ಪರಿಪೂರ್ಣರಾದ ಮಹಾಪುರುಷರನ್ನು ದೇವರೆಂದೇ ಏತಕ್ಕೆ ಪೂಜಿಸುತ್ತಾರೆಂಬುದೂ ಈಗ ನಿಮಗೆ ತಿಳಿದಿರಬಹುದು. ನೀವು ಏನು ಬೇಕಾದರೂ ಹೇಳಿರಿ, ಇಂಥವರನ್ನು ಜನರು ಪೂಜಿಸಿಯೇ ತೀರುತ್ತಾರೆ. ಕ್ರೈಸ್ತ, ಬುದ್ಧ– ಮುಂತಾದ ಅವತಾರಪುರುಷರನ್ನು ಜನರನ್ನು ಪೂಜಿಸುತ್ತಿರುವದಕ್ಕೆ ಇದೇ ಕಾರಣವು. ಅವರು ಆ ನಿತ್ಯಾತ್ಮನ ಅತ್ಯಂತಪರಿಪೂರ್ಣವಾದ ವಿಭೂತಿಗಳಾಗಿರುತ್ತಾರೆ. ನಾನೂ ನೀವೂ ತಿಳಿದುಕೊಳ್ಳಬಹುದಾದ ಈಶ್ವರನಿಗಿಂತ ಅವರು ಎಷ್ಟೋ ಮೇಲ್ತರದವ–ರಾಗಿರುವರು. ಪರಿಪೂರ್ಣನಾದ ಮಹಾ ಪುರುಷನು ಇಂಥ ಕಲ್ಪನೆಗಳಿಗಿಂತ ಎಷ್ಟೋ ಮೇಲುಗಡೆಯಲ್ಲಿರುತ್ತಾನೆ. ಆತನಲ್ಲಿ ಈ ವೃತ್ತವು ಪೂರ್ಣವಾಗಿರುತ್ತದೆ, ವಿಷಯಿಯೂ ವಿಷಯವೂ ಒಂದಾಗಿ ಬಿಟ್ಟಿರುತ್ತವೆ. ಆತನಲ್ಲಿ ಸಕಲ ಭ್ರಾಂತಿಗಳೂ ತೊಲಗಿ, ಅವುಗಳ ಸ್ಥಾನದಲ್ಲಿ ತಾನು ಯಾವಾಗಲೂ ಆ ಪರಿಪೂರ್ಣವಾದ ತತ್ತ್ವವೇ ಆಗಿರುವೆನೆಂಬ ಅನುಭವವು ಬಂದುಬಿಟ್ಟಿರುತ್ತದೆ.

ಹಾಗಾದರೆ ಈ ಬಂಧವು ಆದದ್ದು ಹೇಗೆ ? ಪರಿಪೂರ್ಣವಾದ ಈ ಬ್ರಹ್ಮವು, ಅಪರಿಪೂರ್ಣರೂಪವಾದದ್ದು ಹೇಗೆ ? ಮುಕ್ತವಾಗಿದ್ದದ್ದು ಬದ್ಧವಾದದ್ದು ಹೇಗೆ ? ಎಂದು ನೀವು ಕೇಳಬಹುದು. ಇದಕ್ಕೆ ಅದ್ವೈತಿಯ ಉತ್ತರವೇನೆಂದರೆ: ಆತ್ಮನಿಗೆ ಬಂಧವೆಂಬುದು ಇಲ್ಲವೇ ಇಲ್ಲ, ಆತನು ಯಾವಾಗಲೂ ಮುಕ್ತನೆ, ಆಕಾಶದ ಮುಂಗಡೆಯಲ್ಲಿ ಬೇರೆ ಬೇರೆ ಬಣ್ಣದ ಬೇರೆ ಬೇರೆ ಮೋಡಗಳು ಬಂದು ಒಂದೊಂದು ನಿಮಿಷವಿದ್ದು ಆಮೇಲೆ ಹೊರಟುಹೋಗುವವು; ಆದರೂ ಆಕಾಶವು ಮಾತ್ರ ಎಂದೆಂದಿಗೂ ಅದೇ ನಿಲಬಣ್ಣವಾಗಿ ಇದ್ದುಕೊಂಡಿರುವದು. ಆಕಾಶದಲ್ಲಿ ಯಾವ ಮಾರ್ಪಾಡೂ ಆಗಿರುವದಿಲ್ಲ, ಮೋಡವೇ ಮಾರ್ಪಾಡಾಗುತ್ತಿರುವದು. ಇದರಂತೆ ನೀವು ಎಂದೆಂದಿಗೂ ಪೂರ್ಣರೇ, ನಿತ್ಯವೂ ಪರಿಪೂರ್ಣರೆ. ನಿಮ್ಮ ಸ್ವರೂಪವನ್ನು ಯಾವದೂ ಮಾರ್ಪಡಿಸಿಲ್ಲ, ಮಾರ್ಪಡಿಸಲೂ ಆರದು. ನಾನು ಅಪರಿಪೂರ್ಣನು, ನಾನು ಗಂಡಸು, ನಾನು ಹೆಂಗಸು, ಪಾಪಿಯು, ನನಗೆ ಮನಸ್ಸಿದೆ, ನಾನು ಯೋಚಿಸುತ್ತಿರುವೆನು– ಎಂದು ಮುಂತಾಗಿ

ಎಣಿಸಿಕೊಳ್ಳುವ ಈ ಭಾವನೆಗಳಿಗೆಲ್ಲ ಬಯಲ ಭ್ರಾಂತಿಗಳು. ನೀವು ಯೋಚಿಸಿದ್ದೆಂಬುದೇ ಇಲ್ಲ, ನಿಮಗೆ ಶರೀರವೆಂಬುದೇ ಎಂದಿಗೂ ಇರಲಿಲ್ಲ. ನೀವು ಅಪರಿಪೂರ್ಣರಾದಿರೆಂಬುದೇ ಸುಳ್ಳು. ನೀವು ಈ ಬ್ರಹ್ಮಾಂಡನಾಯಕನಾದ ಪರಮೇಶ್ವರನು. ನೀವೇ ಹಿಂದೆ ಆಗಿಹೋದ ಮತ್ತು ಮುಂದೆ ಹೊಸದಾಗಿ ಬರುವ ಪ್ರತಿಯೊಂದಕ್ಕೂ ಅಧಿಪತಿಯಾದ ಸರ್ವಶಕ್ತನು ; ಈ ಸೂರ್ಯರು, ಚಂದ್ರರು, ನಕ್ಷತ್ರಗಳು, ಭೂಮಿಗಳು, ಗ್ರಹಗಳು–ಮುಂತಾದ ಈ ಬ್ರಹ್ಮಾಂಡದ ಚೂರುಗಳಿಗೆಲ್ಲ ಒಡೆಯನಾದ ಸರ್ವೇಶ್ವರನು ನೀವೇ. ನಿಮ್ಮಿಂದಲೇ ಸೂರ್ಯನು ಬೆಳಗುವನು, ನಕ್ಷತ್ರಗಳು ಮಿನುಗುವವು, ಭೂಮಿಯು ಇಷ್ಟು ಸುಂದರವಾಗಿರುವದು. ನಿಮ್ಮ ಆನಂದ ಸ್ವರೂಪದ ಮಹಿಮೆಯಿಂದಲೇ ಎಲ್ಲರೂ ಒಬ್ಬರನ್ನೊಬ್ಬರು ಪ್ರೀತಿಸುತ್ತಿರುವರು, ಒಬ್ಬರನ್ನೊಬ್ಬರು ಆಕರ್ಷಿಸುತ್ತಿರುವರು. ನೀವು ಎಲ್ಲದರಲ್ಲಿಯೂ ಇರುವಿರಿ, ನೀವು ಎಲ್ಲವೂ ಆಗಿರುವಿರಿ. ಬಿಡುವದು ಯಾರನ್ನು, ಪರಿಗ್ರಹಿಸುವದು ಯಾರನ್ನು ? ಸರ್ವದರಲ್ಲಿಯೂ ನೀವೆ, ಸರ್ವವೂ ನೀವೆ. ಈ ಜ್ಞಾನವು ಬಂದೊಡನೆಯೇ ಅಜ್ಞಾನವು ಸ್ವಲ್ಪವೂ ತಡವಿಲ್ಲದೆ ಮಾಯವಾಗುವದು.

ಹಿಂದಕ್ಕೆ ಒಂದು ಸಲ ಇಂಡಿಯಾದಲ್ಲಿ ನಾನು ಮರುಭೂಮಿಯಲ್ಲಿ ಪ್ರಯಾಣಹೋಗುತ್ತಿದ್ದೆನು. ಒಂದು ತಿಂಗಳಿಗಿಂತ ಹೆಚ್ಚಾಗಿ ಅಲ್ಲಿ ಪ್ರಯಾಣ– ಮಾಡಿದೆನು ; ಅಲ್ಲಿ ಯಾವಾಗಲೂ ಸುಂದರವಾದ ಸರೋವರವೇ ಮುಂತಾದ ಉತ್ತಮವಾದ ನೋಟಗಳೇ ಕಣ್ಣಿಗೆ ಬೀಳುತ್ತಿದ್ದವು. ಒಂದು ದಿನ ನನಗೆ ತುಂಬ ಬಾಯಾರಿಕೆಯಾಗಿದ್ದದ್ದರಿಂದ, ಈ ಸರೋವರಗಳಲ್ಲೊಂದರಲ್ಲಿ ನೀರು ಕುಡಿಯಬೇಕೆಂದು ಯೋಚಿಸಿಕೊಂಡೆನು. ಆದರೆ ಆ ಸರೋವರದ ಹತ್ತಿರಕ್ಕೆ ಹೋದೆನೋ ಇಲ್ಲವೋ, ಅದು ಮಾಯವಾಯಿತು. ಥಟ್ಟನೆ ಇದು ಒಂದು ಬಿಸಿಲುಕುದುರೆ ಎಂದು ನನಗೆ ಬೆನ್ನ ಮೇಲೆ ತಟ್ಟಿ ಎಚ್ಚರಿಸಿದಂತೆ ಆಯಿತು ನಾನು ಎಷ್ಟೋ ದಿನಗಳಿಂದ ಈ ಬಿಸಿಲುಕುದುರೆಯ ವಿಷಯವಾಗಿ ಗ್ರಂಥಗಳಲ್ಲಿ ಓದಿ ಕೇಳಿದ್ದೆನು. ಹಿಂದೆ ಒಂದು ತಿಂಗಳಿಂದ ನಾನು ನೋಡುತ್ತಿದ್ದ ಸುಂದರವಾದ ನೋಟವೆಲ್ಲ ಬರಿಯ ಬಿಸಿಲುಕುದುರೆಯೇ ಎಂದೂ, ಆದರೆ ನನಗೆ ಆ ಕಾಲಕ್ಕೆ ಇದು ಗೊತ್ತಾಗಲಿಲ್ಲವೆಂದೂ ಮನಸ್ಸಿಗೆ ಬಂದಿತು; ನನ್ನ ಹುಚ್ಚಿಗೆ ನಾನೇ ನಸುನಗುತ್ತಾ ಮುಂದಕ್ಕೆ ಹೊರಟೆನು. ಮಾರನೆಯ ದಿನ ಪಯಣದಲ್ಲಿ, ಎಂದಿನಂತೆ ನೋಟವೂ ಸರೋವರವೂ ಕಾಣಿಸಿಕೊಂಡಿತು; ಆದರೆ ಅದನ್ನು ಕಾಣುತ್ತಲೆ ಇದು ಬಿಸಿಲುಕುದುರೆಯೇ ಎಂಬ ಭಾವನೆಯೂ ಬಂದಿತು. ಒಂದು ಸಲ ಇಂಥದ್ದೆಂದು ತಿಳಿದುಬಿಟ್ಟದ್ದರಿಂದ ಅದರ ಮೋಹಕಶಕ್ತಿಯು ಹೋಗಿ ಬಿಟ್ಟಿತ್ತು. ಇದರಂತೆ ಈ ಸಂಸಾರಮೋಹವೂ ಒಂದು ದಿನ ಬಯಲಾಗುವದು. ಇದೆಲ್ಲವೂ ಒಂದು ದಿನ ಮಾಯವಾಗಿ, ಕರಗಿಹೋಗುವದು. ಇದೇ ಸಾಕ್ಷಾತ್ಕಾರವೆಂಬುದು. ವೇದಾಂತವೆಂದರೆ ಹುಡುಗಾಟಿಕೆಯಲ್ಲ, ಬರಿಯ ಹರಟೆಯಲ್ಲ. ಅದು ಅನುಭವಕ್ಕೆ ಬರುವದು; ಈ ಶರೀರವು ಹೋಗಿಬಿಡುವದು, ಈ ಭೂಮಿಯೇ ಮುಂತಾದದ್ದೆಲ್ಲವೂ ಮಾಯವಾಗುವದು. ನಾನು ದೇಹವು ಅಥವಾ ಅನ್ತಃಕರಣವು ಎಂಬ ಭಾವವು ಮರೆಯಾಗುವದು; ಕರ್ಮವು ಸವೆದುಹೋಗಿದ್ದರೆ ಇದು ಎಂದೆಂದಿಗೂ ಮರೆಯಾಗಿಬಿಡುವದು, ಮತ್ತೆ ತೋರಿಕೊಳ್ಳುವದೇ ಇಲ್ಲ; ಆದರೆ

ಕರ್ಮದಲ್ಲಿ * ಒಂದು ಭಾಗವು ಉಳಿದುಕೊಂಡಿದ್ದರೆ- ಕುಂಬಾರನು ಗಡಿಗೆಯನ್ನು ಮಾಡಿ ಮುಗಿಸಿದ ಮೇಲೂ ತಿಗುರಿಯು ಮೊದಲಿನ ವೇಗದಿಂದ ಇನ್ನೂ ಸ್ವಲ್ಪ ಹೊತ್ತು ತಿರುಗುತ್ತಲೇ ಇರುವಂತೆ-ಈ ಶರೀರವು ಸ್ವಲ್ಪ ಕಾಲದವರೆಗೆ ಇದ್ದುಕೊಂಡಿರುವದು. ಮತ್ತೆ ಈ ಪ್ರಪಂಚವು ಬಂದು ತೋರಿಕೊಳ್ಳುವದು ; ಗಂಡಸರು, ಹೆಂಗಸರು, ಮೂಕಪ್ರಾಣಿಗಳು-ಎಲ್ಲವೂ ಬಿಸಿಲುಕುದುರೆಯೆಂದು ತಿಳಿದ ಮಾರನೆಯ ದಿನವೂ ನನಗೆ ಸರೋವರವು ತೋರಿಕೊಂಡಂತೆ- ಮತ್ತೆ ತೋರಿಕೊಳ್ಳುವದು. ಆದರೆ ಅದಕ್ಕೆ ಮೊದಲಿನ ಶಕ್ತಿ ಇರುವದಿಲ್ಲ; ಅದರೊಂದಿಗೆ 'ಇದರ ಸ್ವರೂಪವು ಈಗ ನನಗೆ ಗೊತ್ತು'- ಎಂಬ ಭಾವನೆಯೂ ಬಂದುಬಿಡುವದು. ಆದ್ದರಿಂದ ಆಗ ಅದು ಬಂಧಕವಾಗುವದಿಲ್ಲ ; ಅದರಿಂದ ಇನ್ನು ಮೇಲೆ ದುಃಖವಾಗಲಿ ವ್ಯಥೆಯಾಗಲಿ ಕ್ಲೇಶವಾಗಲಿ ಉಂಟಾಗುವದಿಲ್ಲ. ಏನಾದರೂ ದುಃಖವು ಬಂತೆಂದರೆ, ಕೂಡಲೆ ಮನಸ್ಸು 'ನೀನು ಬರಿಯ ಭ್ರಾಂತಿಯೆಂದು ನಾನು ಬಲ್ಲೆ' ಎನ್ನುವದಕ್ಕೆ ಸಿದ್ಧವಾಗಿರುವದು. ಯಾವನಿಗೆ ಈ ಸ್ಥಿತಿಯು ಬಂದಿರುವದೋ ಆತನಿಗೆ **'ಜೀವನ್ಮುಕ್ತ'** ನೆಂದು ಹೆಸರು. ಜೀವನ್ಮುಕ್ತನೆಂದರೆ ಬದುಕಿರುವಾಗಲೇ ಮುಕ್ತನಾಗಿರುವಾತನು. ಹೀಗೆ ಜೀವನ್ಮುಕ್ತನಾಗುವದೇ, ಬದುಕಿರುವಾಗಲೇ ಮುಕ್ತನಾಗುವದೇ ಜ್ಞಾನಯೋಗಿಗೆ ಪರಮಪುರುಷಾರ್ಥವು. ಈ ಪ್ರಪಂಚದಲ್ಲಿ ಯಾವದಕ್ಕೂ ಅಂಟಿಕೊಳ್ಳದೆ ಇರಬಲ್ಲಾತನೇ ಜೀವನ್ಮುಕ್ತನು. ನೀರಿನಲ್ಲಿರುವ ತಾವರೆ ಎಲೆಗಳು ಎಂದಿಗೂ ಒದ್ದೆಯಾಗದಿರುವಂತೆ ಆತನು ಪ್ರಪಂಚದಲ್ಲಿ ವ್ಯವಹರಿಸುತ್ತಿರುವನು. ಮನುಷ್ಯರಲ್ಲೆಲ್ಲ ಅವನು ಅತ್ಯಂತ ಶ್ರೇಷ್ಠನು, ಅಥವಾ ಮನುಷ್ಯರಲ್ಲಿಯೇ ಏಕೆ, ಸಕಲ ಪ್ರಾಣಿಗಳಲ್ಲಿಯೂ ಆತನೇ ಶ್ರೇಷ್ಠನು ; ಏಕೆಂದರೆ ಆತನು ಬ್ರಹ್ಮಾತ್ಮೈಕ್ಯವನ್ನು ಸಾಕ್ಷಾತ್ಕರಿಸಿಕೊಂಡಿರುತ್ತಾನೆ, ತಾನು ಈಶ್ವರನೇ ಎಂಬುದನ್ನು ಮನಗಂಡಿರುತ್ತಾನೆ. ಎಲ್ಲಿಯವರೆಗೆ ಈಶ್ವರನಿಗೂ ನಿಮಗೂ ಒಂದಿಷ್ಟು ಭೇದವಿರುವದೆಂದು ಎಣಿಸಿಕೊಂಡಿರುವಿರೋ ಅಲ್ಲಿಯವರೆಗೂ ನಿಮಗೆ ಭಯವು ಬಿಟ್ಟಿದ್ದಲ್ಲ (ತೈ. ಬ್ರ-21); ಆದರೆ ಆತನೇ ನೀವೆಂದು, ನಿಮಗೂ ಆತನಿಗೂ ಭೇದವಿಲ್ಲವೆಂದು, ಎಳ್ಳಷ್ಟೂ ಭೇದವಿಲ್ಲವೆಂದು, ತಿಳಿದುಕೊಂಡರೆ, ನೀವೇ ಆತನೆಂದು- ಸಂಪೂರ್ಣವಾಗಿ ಒಂದಿಷ್ಟೂ ಉಳಿಯದೆ ಆತನೇ ನೀವೆಂದು- ಅರಿತುಕೊಂಡರೆ, ಆಗ ಯಾವ ಭಯವೂ ಇರುವದಿಲ್ಲ. ಅಲ್ಲಿ ಯಾರು ಯಾರನ್ನು ನೋಡುವದು? ಯಾರು ಯಾರನ್ನು ಪೂಜಿಸುವದು ? ಯಾರು ಯಾರೊಂದಿಗೆ ಮಾತಾಡುವದು? ಯಾರು ಯಾರ ಮಾತನ್ನು ಕೇಳುವದು? "ಎಲ್ಲಿ ಮತ್ತೊಂದನ್ನು ಕಾಣುವನೋ, ಮತ್ತೊಬ್ಬನೊಡನೆ ಮಾತಾಡುತ್ತಿರುವನೋ ಮತ್ತೊಬ್ಬನು ಮಾತಾಡುವದನ್ನು ಕೇಳುತ್ತಿರುವನೋ, ಅದು ಅಲ್ಪವು. ಎಲ್ಲಿ ಯಾರೂ ಏನನ್ನು ಕಾಣುವದಿಲ್ಲವೋ, ಯಾರೂ ಮತ್ತೊಬ್ಬರೊಡನೆ ಮಾತನಾಡುವದಿಲ್ಲವೋ, ಅದೇ ಅತ್ಯಂತ ಹೆಚ್ಚಿನದು, ಅದೇ ದೊಡ್ಡದು, ಅದೇ ಬ್ರಹ್ಮವು". (ಛಾ. 7-24-1) ಅದೇ ನೀವಾಗಿರುವದರಿಂದ, ನೀವು ಎಂದೆಂದಿಗೂ ಬ್ರಹ್ಮವೇ.

"ಆಗ ಈ ಪ್ರಪಂಚವೇನಾಗುವದು ?" "ಆಗ ಈ ಪ್ರಪಂಚಕ್ಕೆ ನಮ್ಮಿಂದ ಆಗಬೇಕಾದ

---

*ಕರ್ಮವು ಉಳಿದಿರುವದೆಂಬುದೂ ವ್ಯವಹಾರದೃಷ್ಟಿಯಿಂದಲೇ ; ಏಕೆಂದರೆ ನಿಜವಾಗಿ ಆತ್ಮನಲ್ಲಿ ಯಾವ ಕರ್ಮವೂ ಇಲ್ಲವೆಂದೂ ಆತ್ಮನು ನಿತ್ಯಮುಕ್ತನೆಂದೂ ತಿಳಿಯುವದೇ ಪರಮಾರ್ಥ ಜ್ಞಾನವು.

ಉಪಕಾರವೇನು ?" ಎಂದರೆ ಇಂಥ ಪ್ರಶ್ನೆಗಳು ಹುಟ್ಟುವದಕ್ಕೇ ಕಾರಣವಿಲ್ಲ. "ನಾನು ದೊಡ್ಡವನಾದರೆ ನನ್ನ ಪೆಪ್ಪರ್‌ಮೆಂಟಿಗೇನು ಗತಿ ?" ಎಂದು ಮಗು ಅನ್ನುತ್ತದೆ. "ನಾನು ದೊಡ್ಡವನಾದರೆ ನನ್ನ ಗೋಲಿಗಳಿಗೇನು ಗತಿ ? ನಮ್ಮಪ್ಪ ! ನಾನು ದೊಡ್ಡವನಾಗುವದೇ ಇಲ್ಲ" ಎಂದು ಹುಡುಗನು ಅನ್ನುತ್ತಾನೆ. "ನಾನು ದೊಡ್ಡವನಾದರೆ ನನ್ನ ಗೊಂಬೆಗಳಿಗೇನು ಗತಿ ?" ಎಂದು ಹೆಣ್ಣುಮಗು ಅನ್ನುತ್ತದೆ. ಈ ಪ್ರಪಂಚದ ವಿಷಯದಲ್ಲಿ ಈಗ ಕೇಳಿರುವದೂ ಅಂಥ ಪ್ರಶ್ನೆಯೇ ; ಇದು ಹಿಂದೆಯೂ ಇರಲಿಲ್ಲ, ಈಗಲೂ ಇಲ್ಲ, ಮುಂದೆಯೂ ಇರುವದಿಲ್ಲ. ಆತ್ಮನು ಹೇಗೆ ಇರುವನೋ ಹಾಗೆಯೇ ತಿಳಿದುಕೊಂಡರೆ, ಈ ಆತ್ಮನನ್ನು ಬಿಟ್ಟು ಮತ್ತೇನೂ ಇಲ್ಲವೆಂದೂ ಮಿಕ್ಕದ್ದೆಲ್ಲವೂ ಕನಸೆಂದೂ ನಾವು ತಿಳಿದುಕೊಂಡರೆ, ಆಗ ಬಡತನ, ಸಂಕಟ, ಕೃಪೆ, ನೈಷ್ಠುರ್ಯ–ಮುಂತಾದವುಗಳಿಂದ ಕೂಡಿರುವ ಈ ಪ್ರಪಂಚವು ನಮ್ಮನ್ನು ಏನೇನೂ ಮಾಡಲಾರದು. ಇವುಗಳೇ ಇಲ್ಲದ ಮೇಲೆ ಯಾರಿಗಾಗಿ ಏತಕ್ಕಾಗಿ ಒದ್ದಾಡಬೇಕು? ಹೀಗೆಂಬುದು ಜ್ಞಾನಯೋಗಿಗಳ ಅಭಿಪ್ರಾಯವು. ಹೀಗಿರುವದರಿಂದ ಧೈರ್ಯದಿಂದ ಮುಕ್ತಿಯನ್ನು ಹೊಂದಿರಿ, ವಿಚಾರವು ಎಲ್ಲಿಗೆ ಒಯ್ಯುವದೋ ಅಲ್ಲಿಯವರೆಗೂ ಧೈರ್ಯದಿಂದ ಹೋಗಿರಿ, ಅದರಂತೆ ವ್ಯವಹಾರದಲ್ಲಿ ಧೈರ್ಯದಿಂದ ನಡೆದುಕೊಳ್ಳಿರಿ.

ಜ್ಞಾನವನ್ನು ಸಂಪಾದಿಸುವದೆಂಬುದು ಬಲು ಕಷ್ಟ. ಇದು ಮಹಾ– ಧೈರ್ಯಶಾಲಿಗಳಿಗೆ ಮಾತ್ರ, ಮೂಢವಿಚಾರದಿಂದ ನಾವು ಮಾಡಿಟ್ಟುಕೊಂಡಿರುವ ಅಭಿಮಾನದ ಮಾನಸ ವಿಗ್ರಹಗಳನ್ನೇ ಅಲ್ಲದೆ ಇಂದ್ರಿಯಗಳು ಕಲ್ಪಿಸಿರುವ ವಿಗ್ರಹಗಳನ್ನು ಕೂಡ ಒಡೆದು ಪುಡಿಪುಡಿಮಾಡುವದಕ್ಕೆ ಸಿದ್ಧರಾಗಿರುವ ಧೀರರಿಗೆ ಮಾತ್ರ, ಅಳವಡುವದು. ಈ ಶರೀರವು ನಾನಲ್ಲ ; ಆದ್ದರಿಂದ ಇದನ್ನು ಕೈಬಿಡಬೇಕು. ಇದನ್ನು ಚೆನ್ನಾಗಿ ತಿಳಿದುಕೊಳ್ಳದೆ ಜನರು ಏನೇನೋ ವಿಲಕ್ಷಣವಾದ ಶಂಕೆಗಳನ್ನು ತೆಗೆಯಬಹುದು. "ನಾನು ಶರೀರವಲ್ಲವಷ್ಟೆ ; ಹಾಗಾದರೆ ನನ್ನ ತಲೆನೋವು ವಾಸಿಯಾಗಲಿ !" ಎನ್ನುವರು. ಸರಿಯೆ, ಆದರೆ ಶರೀರದಲ್ಲಲ್ಲದೆ ಆ ತಲೆನೋವೆಂಬುದು ಮತ್ತೆಲ್ಲಿರಬೇಕು ? ಸಾವಿರ ತಲೆನೋವುಗಳು ಸಾವಿರ ಶರೀರಗಳು ಬರಲಿ ಹೋಗಲಿ ; ಅದರಿಂದ ನನಗಾಗುವದೇನು ? ನಾನು ಹುಟ್ಟುವದೂ ಇಲ್ಲ, ಸಾಯುವದೂ ಇಲ್ಲ ; ನನಗೆ ತಂದೆಯಾಗಲಿ ತಾಯಿಯಾಗಲಿ ಇರಲೇ ಇಲ್ಲ. ನನಗೆ ಬೇಕಾದವರೂ ಇಲ್ಲ, ಬೇಡದವರೂ ಇಲ್ಲ ; ಏಕೆಂದರೆ ಅವರೆಲ್ಲರೂ ನಾನೆ. ನಾನೇ ನನಗೆ ಮಿತ್ರನು, ನಾನೇ ನನಗೆ ಶತ್ರುವು. ಸಚ್ಚಿದಾನಂದರೂಪನಾದ ಶಿವನೇ ನಾನು, ನಾನು ಅವನೆ, ನಾನು ಅವನೆ.* ಸಾವಿರ ಶರೀರಗಳಲ್ಲಿ ಜ್ವರವೇ ಮುಂತಾದ ರೋಗಗಳಿಂದ ನಾನು ನರಳುತ್ತಿರುವೆನಾದರೆ, ಲಕ್ಷಗಟ್ಟಲೆಯ ಶರೀರಗಳಲ್ಲಿ ಆರೋಗ್ಯವನ್ನು ಅನುಭವಿಸುತ್ತಿರುವೆನು. ಸಾವಿರ ಶರೀರಗಳಲ್ಲಿ ನಾನು ಹಸಿವಿನಿಂದ ಸಂಕಟಪಡುತ್ತಿರುವೆನಾದರೆ, ಮತ್ತೊಂದು ಸಾವಿರ ಶರೀರಗಳಲ್ಲಿ ನಾನು ಮೃಷ್ಟಾನ್ನಭೋಜನವನ್ನು ಮಾಡುತ್ತಿರುವೆನು. ಸಾವಿರಾರು ಶರೀರಗಳಲ್ಲಿ ದುಃಖಪಡುತ್ತಿರುವೆನಾದರೆ, ಸಾವಿರಾರು ಶರೀರಗಳಲ್ಲಿ ಸುಖವನ್ನು ಅನುಭವಿಸುತ್ತಿರುವೆನು. ಯಾರ ಮೇಲೆ ಯಾರು ತಪ್ಪುಹೊರಿಸುವದು, ಯಾರನ್ನು ಯಾರು ಹೊಗಳುವದು ? ಯಾರನ್ನು ಬೇಕೆನ್ನುವದು, ಯಾರನ್ನು ಬೇಡವೆನ್ನುವದು? ನನಗೆ ಬೇಕಾದವರೂ ಇಲ್ಲ, ಬೇಡವಾದವರೂ ಇಲ್ಲ ; ಏಕೆಂದರೆ ಬ್ರಹ್ಮಾಂಡವೆಲ್ಲವೂ

ನಾನೇ. ನನ್ನನ್ನು ನಾನೇ ಕೊಂಡಾಡಿಕೊಳ್ಳುತ್ತಿರುವೆನು, ನನ್ನನ್ನು ನಾನೇ ದೂರಿಕೊಳ್ಳುತ್ತಿರುವೆನು. ನನ್ನಿಂದಲೇ ನಾನು ದುಃಖಿಸುತ್ತಿರುವೆನು, ನನ್ನಿಂದಲೇ ನಾನು ಸುಖಿಯಾಗಿರುವೆನು. ನಾನು ಮುಕ್ತನು. ಹೀಗೆಂಬುದು ಜ್ಞಾನಿಯ ನಂಬಿಕೆಯು ; ಇದು ಧೀರನಾದ ಶೂರನಾದ ಜ್ಞಾನಿಯ ಮತವು. ಈ ಬ್ರಹ್ಮಾಂಡವೇ ಕಳಚಿಕೊಂಡು ಬೀಳಲಿ, ಅವನು ಮುಗುಳುನಗೆಯಿಂದ 'ಅದು ಇರಲೇ ಇಲ್ಲ ' ಅದು ಇತ್ತೆಂಬುದೇ ಬಯಲ ಭ್ರಾಂತಿ' ಎಂದುಕೊಳ್ಳುತ್ತಾ ಬ್ರಹ್ಮಾಂಡವು ಕಳಚಿಕೊಂಡು ಉರುಳುತ್ತಿರುವದನ್ನೂ ಸುಮ್ಮನೆ ನೋಡುತ್ತಲಿರುವನು. ಅದು ಇದ್ದದ್ದೆಲ್ಲಿ, ಹೋದದ್ದೆಲ್ಲಿ ? ಇರುವದೆಲ್ಲ ಒಂದೇ ಒಂದೆಂದೂ ಅದಕ್ಕಿಂತ ಬೇರೆಯಾದದ್ದೆಲ್ಲ ಮಿಥ್ಯವೆಂದೂ ನಿರ್ಣಯವಾಗುವವರೆಗೂ ಎಲ್ಲಿಯೂ ನಿಲ್ಲುವದಕ್ಕೆ ಸ್ಥಳವು ಸಿಕ್ಕುವದಿಲ್ಲ. ವಿಚಾರಶೀಲರಾದ ಮನುಷ್ಯರಿಗೆ ಈ ಅಭಿಪ್ರಾಯವನ್ನು ಇಟ್ಟುಕೊಂಡ ಹೊರತು ಬೇರೆ ದಾರಿಯಿರುವದಿಲ್ಲ. ಸರಿಯೆ, ಆದರೆ ಅನಂತವಾಗಿಯೂ ಎಂದೆಂದಿಗೂ ಪರಿಪೂರ್ಣವಾಗಿಯೂ ಎಂದೆಂದಿಗೂ ಆನಂದರೂಪವಾಗಿಯೂ ಇರುವ, ಸಚ್ಚಿದಾನಂದಸ್ವರೂಪವಾದ ಬ್ರಹ್ಮವು ಈ ಮೋಹಕ್ಕೆ ಒಳಗಾದದ್ದು ಹೇಗೆ ? ಇದು ಪ್ರಪಂಚದಲ್ಲೆಲ್ಲ ಜನರು ಕೇಳುತ್ತಿರುವ ಪ್ರಶ್ನೆಯೇ. ಈ ಪ್ರಶ್ನೆಯನ್ನು ಸಾಮಾನ್ಯರೂಪದಲ್ಲಿಟ್ಟರೆ, "ಈ ಪ್ರಪಂಚದೊಳಗೆ ಪಾಪವು ಹೇಗೆ ಸೇರಿಕೊಂಡಿತು?" ಎಂದಾಗುವದು. ಇದು ಅದೇ ಪ್ರಶ್ನೆಯ ಅತ್ಯಂತ ಸಾಮಾನ್ಯವಾದ ಸ್ಥೂಲವಾದ ಆಕಾರವು; ಆದರೆ ಮೊದಲು ನಾವು ಕೇಳಿರುವದು ಶಾಸ್ತ್ರೀಯರೂಪದಲ್ಲಿರುವ ಪ್ರಶ್ನೆ. ಹೇಗಾದರೂ ಎರಡಕ್ಕೂ ಉತ್ತರವು ಒಂದೇ. ಇದೇ ಪ್ರಶ್ನೆಯನ್ನೇ ಬೇರೆ ಬೇರೆ ಅಂತಸ್ತಿನಲ್ಲಿ ಬೇರೆ ಬೇರೆ ರೀತಿಯಲ್ಲಿ ಜನರು ಕೇಳುತ್ತಿರುತ್ತಾರೆ. ಆದರೆ ಸ್ಥೂಲರೂಪದಲ್ಲಿ ಇದಕ್ಕೆ ಸರಿಯಾದ ಉತ್ತರವಿರುವದಿಲ್ಲ; ಏಕೆಂದರೆ ಸೇಬಿನಹಣ್ಣುಗಳು, ಹಾವುಗಳು, ಹೆಂಗಸರು–ಮುಂತಾದವುಗಳ ಕಥೆಯನ್ನು * ಹೇಳಿದಷ್ಟರಿಂದ ಉತ್ತರವನ್ನು ಕೊಟ್ಟಂತಾಗುವದಿಲ್ಲ. ಆ ರೂಪದಲ್ಲಿ ಪ್ರಶ್ನೆಯೂ ಹುಡುಗಾಟಿಕೆಯದು, ಉತ್ತರವೂ ಅಂಥದ್ದೇ. ಆದರೆ ಈಗ ನಾವು ಕೇಳಿರುವ ರೂಪದಲ್ಲಿ, ಪ್ರಶ್ನೆಯು ತುಂಬ ಗಡುಸಾಗಿಬಿಟ್ಟಿರುವದು. 'ಈ ಭ್ರಾಂತಿಯು ಹೇಗೆ ಬಂದಿತು ?' ಎಂಬುದೀಗ ಪ್ರಶ್ನೆ. (ವೇದಾಂತಿಗಳು ಇದಕ್ಕೆ ಕೊಡುವ) ಉತ್ತರವೂ ಇದಕ್ಕೆ ತಕ್ಕಂತೆಯೇ ಇದೆ. ಕೇಳಬಾರದ ಪ್ರಶ್ನೆಗೆ ಹೇಳಬಾರದ ಉತ್ತರ. ಈ ಪ್ರಶ್ನೆಯೇ ಮೊದಲು ಸರಿಯಲ್ಲ, ಈ ಪ್ರಶ್ನೆಯನ್ನು ಕೇಳುವದೇ ನ್ಯಾಯವಲ್ಲ. ಏಕೆಂದರೆ ಕೇಳಿ. ಪರಿಪೂರ್ಣತ್ವವೆಂದರೇನು ? ಕಾಲ, ದೇಶ, ಕಾರ್ಯಕಾರಣಭಾವ– ಇವುಗಳನ್ನು ಮೀರಿರುವದೇ ಅಲ್ಲವೆ? ಅದೀಗ ಪರಿಪೂರ್ಣವು ; ಇಂಥ ಪರಿಪೂರ್ಣವಾದದ್ದು ಅಪರಿಪೂರ್ಣವಾದದ್ದು ಹೇಗೆ? –ಎಂಬುದೀಗ ನಿಮ್ಮ ಪ್ರಶ್ನೆ. ವಿಚಾರಕ್ಕೆ ಹೊಂದಿಕೆಯಾದ

---

*ದೇವರು ಆಡಾಮ್ ಮತ್ತು ಈವ್– ಎಂಬ ಮೂಲದಂಪತಿಗಳನ್ನು ಸೃಷ್ಟಿಸಿ ಈಡನ್ ಎಂಬ ತೋಟದಲ್ಲಿಟ್ಟು ಅವರು ಬೇಕಾದದ್ದನ್ನೆಲ್ಲ ಅಲ್ಲಿ ಉಪಭೋಗಿಸಬಹುದೆಂದೂ ಆದರೆ ತಾನು ತೋರಿಸಿದ ಒಂದು ಮರದ ಹಣ್ಣನ್ನು ಮಾತ್ರ ತಿನ್ನಬಾರದೆಂದೂ ಅಪ್ಪಣೆಕೊಟ್ಟನು. ಸೈತಾನನು ಒಂದು ಹಾವಿನ ರೂಪದಿಂದ ಬಂದು ಈವಳನ್ನು ಆಶೆಗೊಳಿಸಿ ಆ ಹಣ್ಣನ್ನೇ ತಂದುಕೊಡುವಂತೆ ಗಂಡನನ್ನು ಪೀಡಿಸುವ ಹಾಗೆ ಪ್ರೇರಿಸಿದನು. ದಂಪತಿಗಳಿಬ್ಬರೂ ಈ ಮೋಹಕ್ಕೆ ಸಿಲುಕಿ ಆ ಹಣ್ಣನ್ನು ತಿಂದುಬಿಟ್ಟರು. ಅಂದಿನಿಂದ ಆ ಮೂಲಪುರುಷರ ಅಪರಾಧವು ಅವರ ಸಂತತಿಯವರಾದ ಮಾನವರಿಗೆಲ್ಲ ತಟ್ಟಿರುತ್ತದೆ– ಹೀಗೆಂದು ಬೈಬಲಿನ ಹಳೆ ಒಡಂಬಡಿಕೆಯೆಂಬ ಮೊದಲನೆಯ ಕಾಂಡದ ಕಥೆ.

ರೂಪದಲ್ಲಿಟ್ಟರೆ, "ಕಾರ್ಯಕಾರಣಭಾವವನ್ನು ಮೀರಿರುವದು ಸೃಷ್ಟವಾದದ್ದು ಹೇಗೆ ?" ಎಂದು ಕೇಳಿದಂತೆ ಆಗುವದು. ಇದು ಪೂರ್ವಾಪರವಿರುದ್ಧವು. ಅದು ಕಾರ್ಯಕಾರಣ– ಭಾವವನ್ನು ಮಿಂಚಿರುವದೆಂದು ಮೊದಲು ಒಪ್ಪಿ, ಆಮೇಲೆ ಅದು ಏತರಿಂದ ಆಗಿರುವದೆಂದೂ ಕೇಳಿರುತ್ತೀರಿ. ಈ ಪ್ರಶ್ನೆಯನ್ನು ಕಾರ್ಯಕಾರಣಕ್ಷೇತ್ರಕ್ಕೆ ಸಂಬಂಧಿಸಿದಾಗ ಮಾತ್ರವೇ ಕೇಳಬಹುದು ; ಎಲ್ಲಿಯವರೆಗೆ ದೇಶಕಾಲನಿಮಿತ್ತಗಳು ಇರುವವೋ ಅಲ್ಲಿಯವರೆಗೆ ಈ ಪ್ರಶ್ನೆಯನ್ನು ಹಾಕುವದು ಯುಕ್ತವೇ ಆಗಿರುವದು. ಆದರೆ ಅದರಿಂದಾಚೆಗೆ ಈ ಪ್ರಶ್ನೆಯನ್ನು ಕೇಳುವದೆಂದರೆ ಅರ್ಥವಿಲ್ಲದ ಮಾತಾಗುವದು; ಏಕೆಂದರೆ ಆಗ ಪ್ರಶ್ನೆಯೇ ನ್ಯಾಯವಿರುದ್ಧವಾಗಿರುವದು.* ಕಾಲದೇಶನಿಮಿತ್ತಗಳ ಒಳಗೆ ಇರುವಾಗ ಈ ಪ್ರಶ್ನೆಗೆ ಉತ್ತರವನ್ನು ಹೇಳುವದು ಆಗುವ ಮಾತಲ್ಲ ; ಈ ಸರಹದ್ದಿನ ಆಚೆಗೆ ಹೋದಾಗ ಏನು ಉತ್ತರವನ್ನು ಹೇಳಬೇಕೋ ಅದು ಇವುಗಳನ್ನು ದಾಟಿದ ಮೇಲೆಯೇ ಗೊತ್ತಾಗಬೇಕು. ಆದ್ದರಿಂದ ಈ ವಿಷಯವನ್ನು ಇಲ್ಲಿಗೇ ಕೈಬಿಡುವದೇ ಜಾಣತನವು. ಒಬ್ಬನಿಗೆ ರೋಗವು ✝ ಬಂದಿರುವಾಗ ಅದನ್ನು ವಾಸಿಮಾಡಿಕೊಳ್ಳುವದಕ್ಕೆ ಹೊರಡುವವನು ಈ ರೋಗವು ಹೇಗೆ ಬಂದಿತೆಂಬುದು ತನಗೆ ಮೊದಲು ಗೊತ್ತಾಗಿಯೇ ತೀರಬೇಕೆನ್ನುವದಿಲ್ಲ. ಇದೇ ಪ್ರಶ್ನೆಯನ್ನು ಮತ್ತೊಂದು ವಿಧದಲ್ಲಿ ಕೇಳಬಹುದು; ಅದು ಇದಕ್ಕಿಂತ ಸ್ವಲ್ಪ ಕೆಳಗಿನ ಅಂತಸ್ತಿನದು, ಆದರೆ ಅದು ಹೆಚ್ಚು ಪ್ರಯೋಜನಕರವಾದದ್ದು ಮತ್ತು ಬೋಧಪ್ರದವಾದದ್ದು. "ಈ ಭ್ರಾಂತಿಯು ಏತರಿಂದ ಆಯಿತು ?" ಸತ್ಯವಾದದ್ದರಿಂದ ಭ್ರಾಂತಿಯು ಹುಟ್ಟುವದು, ಅದರಿಂದ ಮತ್ತೊಂದು ಹುಟ್ಟುವದು; ಹೀಗಾಗುವದನ್ನು ನಾವು ಕಂಡಿರುತ್ತೇವೆ. ಯಾವಾಗಲೂ ಭ್ರಾಂತಿಯಿಂದಲೇ ಭ್ರಾಂತಿಯು ಹುಟ್ಟುವದು. ರೋಗದಿಂದ ರೋಗವು ಹುಟ್ಟುವದೇ ಹೊರತು ಆರೋಗ್ಯದಿಂದ ರೋಗವು ಹುಟ್ಟುವದಿಲ್ಲ. ಅಲೆ ಎಂಬುದು ನೀರೇ, ಕಾರ್ಯವೆಂಬುದು ಕಾರಣದ್ದೇ ಮತ್ತೊಂದು ರೂಪವು. ಕಾರ್ಯವು ಭ್ರಾಂತಿ, ಆದ್ದರಿಂದ ಕಾರಣವೂ ಭ್ರಾಂತಿಯಾಗಿರಬೇಕಾಯಿತು. ಈ ಭ್ರಾಂತಿ

---

* ಸರಿಯಾಗಿ ನೋಡಿದರೆ ಪೂರ್ವಪಕ್ಷಿಯ ಮಾತು ಪೂರ್ವಪರವಿರುದ್ಧವಲ್ಲ. ಅದ್ವೈತಿಯು ಹೇಳುವಂತೆ ಆತ್ಮನು ಕಾರ್ಯಕಾರಣಭಾವವನ್ನು ಮೀರಿರುವದು ನಿಜವಾದರೆ, ಕಾರ್ಯಕಾರಣ ಭಾವಯುಕ್ತವಾದ ಪ್ರಪಂಚದ ಭ್ರಾಂತಿಯಲ್ಲಿ ಸಿಕ್ಕಿಕೊಂಡಿರುವಂತೆ ಕಾಣುವದಕ್ಕೆ ನಿಮಿತ್ತವೇನು? ಕಾರ್ಯಕಾರಣಬದ್ಧನಾಗಿ ತೋರುವದರಿಂದ ಆತ್ಮನು ಕಾರ್ಯಕಾರಣಭಾವವನ್ನು ಮೀರಿರುವನೆಂಬುದೇ ನಿಜವಲ್ಲವೆಂದು ಏತಕ್ಕೆ ಎಣಿಸಬಾರದು ?– ಎಂಬುದು ಪೂರ್ವಪಕ್ಷಿಯ ಆಕ್ಷೇಪವು. ಆದರೆ ಆತ್ಮನು ನಿಷ್ಪ್ರಪಂಚನೆಂದೂ ಅದ್ವಿತೀಯನೆಂದೂ ಕಾರ್ಯಕಾರಣಭಾವರಹಿತನೆಂದೂ ಇಟ್ಟುಕೊಂಡರೆ ಆಕ್ಷೇಪವು ಹುಟ್ಟುವದಿಲ್ಲವೆಂಬುದೇ ಸ್ವಾಮಿಗಳ ತಾತ್ಪರ್ಯವೆಂದು ತೋರುತ್ತದೆ.

✝ ರೋಗದ ಕಾರಣವನ್ನು ತಿಳಿಯುವದೂ ಪರಿಹಾರಕ್ಕೆ ಸಾಧನವಾಗಬಹುದಲ್ಲವೆ ?– ಎಂದರೆ ದೃಷ್ಟಾಂತದಲ್ಲಿ ಹಾಗೆ ಕೆಲವು ವೇಳೆ ಆಗಬಹುದು. ಆದರೆ ಸಂಸಾರದ ಭ್ರಾಂತಿಯೆಂಬ ರೋಗವು ನಿಜವಾಗಿ ಬಂದದ್ದಲ್ಲವಾದ್ದರಿಂದ ಇದನ್ನು ವಿಚಾರದಿಂದ ಪರಿಹರಿಸಿಕೊಳ್ಳುವದು ನ್ಯಾಯವೇ ಹೊರತು, 'ಇದು ಹೇಗೆ ಬಂದಿತು ?' ಎಂದು ವಿಚಾರಿಸುವದು ನ್ಯಾಯವೂ ಅಲ್ಲ, ಜಾಣತನವೂ ಅಲ್ಲ. ಹೋಗಬೇಕಾದ ಭ್ರಾಂತಿಯಾಗಲಿ, ಬರಬೇಕಾದ ಜ್ಞಾನವಾಗಲಿ ಯಾವದೂ ನಿಜವಾಗಿ ಇಲ್ಲವೆಂಬುದೇ ಪರಮಾರ್ಥವು.

ಏತರಿಂದಾಯಿತು ?–ಎಂದರೆ ಮತ್ತೊಂದು ಭ್ರಾಂತಿಯಿಂದ, ಅದು ಮತ್ತೊಂದರಿಂದ. ಹೀಗೆಯೇ ಒಂದು ಭ್ರಾಂತಿಯು ಮತ್ತೊಂದರಿಂದ ಆಗುತ್ತಲೇ ಹೋಗುತ್ತಿರುವದು. ಈ ಭ್ರಾಂತಿಯು ಅನಾದಿ.* ಈಗ ನಿಮಗೆ ಇದೊಂದೇ ಪ್ರಶ್ನೆ ಉಳಿದುಕೊಂಡಿತು: "ಇದರಿಂದ ಅದ್ವೈತಕ್ಕೆ ಹಾನಿಯಿಲ್ಲವೆ? ನಿಮ್ಮ ಆತ್ಮವೊಂದು, ಈ ಭ್ರಾಂತಿಯೊಂದು–ಹೀಗೆ ಎರಡು ಸತ್ಪದಾರ್ಥಗಳಾಗುವವಲ್ಲವೆ?" ಇದಕ್ಕೆ ಉತ್ತರವೇನೆಂದರೆ– ಭ್ರಾಂತಿಯೆಂಬುದು ಸತ್ಪದಾರ್ಥವೆನಿಸಿಕೊಳ್ಳಲಾರದು. ಸಾವಿರಾರು ಕನಸುಗಳು ನಿಮಗೆ ಕಾಣಿಸುತ್ತಲೇ ಇರುತ್ತವೆ; ಆದರೂ ಅವುಗಳು ಯಾವವೂ ನಿಮ್ಮ ನಿಜವಾದ ಬಾಳುವೆಗೆ ಒಂದಿಷ್ಟೂ ಸೇರಿದವುಗಳಲ್ಲ. ಕನಸುಗಳು ಬರುತ್ತವೆ, ಹೋಗುತ್ತವೆ. ಆದರೆ ಅವುಗಳಿಗೆ ನಿಜವಾದ ಇರುವಿಕೆಯೇನೂ ಇಲ್ಲ. ಭ್ರಾಂತಿಯನ್ನು ಸತ್ಪದಾರ್ಥವೆಂದು ಕರೆಯುವದು ಕುತರ್ಕವಾಗುವದು. ಆದ್ದರಿಂದ ಪ್ರಪಂಚದಲ್ಲಿ ನಿಜವಾಗಿರುವದು ಒಂದೇ ಒಂದು ತತ್ತ್ವವು; ಇದು ಎಂದೆಂದಿಗೂ ಮುಕ್ತವಾಗಿ ಎಂದೆಂದಿಗೂ ಆನಂದಸ್ವರೂಪವಾಗಿರುವದು; ಅದೇ ನೀವು. ಇದೇ ಅದ್ವೈತಿಗಳ ಕಟ್ಟಕಡೆಯ ಸಿದ್ಧಾಂತವು.

"ಹಾಗಾದರೆ ಈ ಉಪಾಸನೆಗಳ ಗತಿ ಏನು ?" ಎಂದು ಯಾರಾದರೂ ಕೇಳೀರಿ. ಅವೂ ಇದ್ದೇ ಇರುವವು. ಅವು ಕತ್ತಲೆಯಲ್ಲಿ ಬೆಳಕಿಗಾಗಿ ತಡವರಿಸುವ ಸ್ಥಿತಿಯನ್ನು ಸೂಚಿಸುವವು. ಹೀಗೆ ತಡವರಿಸುತ್ತಿದ್ದರೆ ಬೆಳಕು✝ ಬರುವದು. ಆತ್ಮನು ತನ್ನನ್ನು ತಾನು ನೋಡಲಾರನೆಂದು ಹಿಂದೆ ಹೇಳಿರುತ್ತದೆ. ನಮ್ಮ ತಿಳಿವಳಿಕೆಯೆಲ್ಲ ಮಾಯೆಯ ಬಲೆಯೊಳಗೆ; ಅದರಿಂದಾಚೆಗೆ ಮುಕ್ತಿಯಿರುವದು. ಈ ಬಲೆಯೊಳಗಿರುವವರೆಗೆ ದಾಸ್ಯವೇ, ಎಲ್ಲವೂ ನಿಯಮಕ್ಕೆ ಒಳಪಟ್ಟೇ ಇರುವದು. ಇದರ ಆಚೆಗೆ ಯಾವ ನಿಯಮವೂ ಇಲ್ಲ. ಈ ಪ್ರಪಂಚದಲ್ಲಿರುವವರೆಗೂ ಎಲ್ಲವೂ ನಿಯಮಕ್ಕೊಳಪಟ್ಟೇ ಇರಬೇಕು; ಅದನ್ನು ದಾಟಿದ ಮೇಲೆ ಸ್ವಾತಂತ್ರ್ಯವು ಬರುವದು. ಕಾಲದೇಶನಿಮಿತ್ತಗಳ ಬಲೆಯೊಳಗೆ ಬಿದ್ದಿರುವವರೆಗೂ ನೀವು ಮುಕ್ತರಾಗಿರುವೆವೆಂದು ಹೇಳಿಕೊಂಡರೆ ಅದು ಅರ್ಥವಿಲ್ಲದ ಮಾತಾಗುವದು; ಏಕೆಂದರೆ ಈ ಬಲೆಯೊಳಗಿರುವದೆಲ್ಲ ಹೇತುಫಲಾತ್ಮಕವಾಗಿ ನಿಯಮಕ್ಕೆ ಒಳಪಟ್ಟೇ ಇರುವದು. ನೀವು ಯೋಚಿಸುತ್ತಿರುವ ಪ್ರತಿಯೊಂದು ಯೋಚನೆಗೂ ಕಾರಣವುಂಟು. ನಿಮ್ಮ ಪ್ರತಿಯೊಂದು ಭಾವನೆಗೂ ಕಾರಣವುಂಟು. ಸಂಕಲ್ಪವು ಸ್ವತಂತ್ರವಾಗಿರುವದೆಂದು ಹೇಳುವದು ತೀರ ಗೊತ್ತುಗೆಟ್ಟ ಮಾತು. ಏಕೆಂದರೆ ಆ ಅನಂತಸದ್ರೂಪವಾದ ವಸ್ತು ಈ ಮಾಯಾಜಾಲದೊಳಕ್ಕೆ ಬಂದಂತೆ ಆದರೆ ಮಾತ್ರ ಅದು ಜೀವಸಂಕಲ್ಪವೆನಿಸುವದು. ಸಂಕಲ್ಪವೆಂಬುದು ಮಾಯಾಜಾಲಕ್ಕೆ ಸಿಕ್ಕಿಕೊಂಡ ಆ ವಸ್ತುವಿನ ಒಂದಂಶವು, ಆದ್ದರಿಂದ ಜೀವಸ್ವಾತಂತ್ರ್ಯವೆಂಬುದು ವಿರುದ್ಧವಾದ ಮಾತು. ಇದಕ್ಕೆ ಅರ್ಥವೇ

---

* ಭ್ರಾಂತಿಯು ಅನಾದಿಯಾಗಿದ್ದರೆ ಆತ್ಮವು ಅನಾದಿಕಾಲದಿಂದಲೂ ಭ್ರಾಂತವೆಂದಾಗುವದಿಲ್ಲವೆ? ಎಂಬ ಪ್ರಶ್ನೆಗೆ 'ವ್ಯವಹಾರದೃಷ್ಟಿಯಿಂದ ಹಾಗೆಯೇ ಸರಿ' ಎಂದು ಉತ್ತರವನ್ನು ಹೇಳಿರುತ್ತಾರೆ. ಆದರೆ 'ನಾನಾತ್ವವೆಂಬುದೂ ಸಂಸಾರವೆಂಬುದೂ ಭ್ರಾಂತಿಯೆನ್ನುವದು ಹೇಗೆ ?'– ಎಂಬ ಪ್ರಶ್ನೆಯು ಹಾಗೆಯೇ ಉಳಿದುಕೊಳ್ಳುವದು. ಇದಕ್ಕೆ ಉತ್ತರವು ಈ ಉಪನ್ಯಾಸದಲ್ಲಿ ಬಂದಿರುವದಿಲ್ಲ.

✝ ಉಪಾಸನೆಯು ಚಿತ್ತೈಕಾಗ್ರ್ಯವನ್ನುಂಟುಮಾಡುವದರ ಮೂಲಕ ಜ್ಞಾನಕ್ಕೆ ಕಾರಣವಾಗುವದು.

ಇಲ್ಲ, ಶುದ್ಧ ಹುಚ್ಚು ಮಾತು. ನಾವು ಸ್ವತಂತ್ರರೆಂದು ಹೇಳಿಕೊಳ್ಳುವ ಮಾತೆಲ್ಲ ಇಂಥದ್ದೆ; ಏಕೆಂದರೆ ಮಾಯೆಯೊಳಗೆ ನಿಜವಾಗಿ ಯಾವ ಸ್ವಾತಂತ್ರ್ಯವೂ ಇರುವದಿಲ್ಲ.

ಜಡವಾದ ಕಲ್ಲುದುಂಡಿಯು ಅಥವಾ ಈ ಮೇಜು ಎಷ್ಟರಮಟ್ಟಿಗೆ ಪರತಂತ್ರವಾಗಿರುವದೋ ಅಷ್ಟರ ಮಟ್ಟಿಗೇ ಪ್ರತಿಯೊಬ್ಬನೂ ಮನೊವಾಕ್ಕಾಯ- ಗಳೆಂಬ ಮೂರರಲ್ಲಿಯೂ ಪರತಂತ್ರನಾಗಿರುತ್ತಾನೆ. ನಾನು ನಿಮ್ಮೊಡನೆ ಮಾತನಾಡುತ್ತಿರುವದೂ ಕಾರ್ಯಕಾರಣನಿಯಮಕ್ಕೆ ಒಳಪಟ್ಟಿರುವದು, ನೀವು ಈ ಮಾತನ್ನು ಕೇಳುತ್ತಿರುವದೂ ಕಾರ್ಯಕಾರಣನಿಯಮಕ್ಕೆ ಒಳಪಟ್ಟೇ ಇರುವದು. ಮಾಯೆಯನ್ನು ದಾಟಿದ ಹೊರತು ಸ್ವಾತಂತ್ರ್ಯವೆಂಬುದು ಇರುವದಿಲ್ಲ; ಆಗಲೇ ಆತ್ಮನಿಗೆ ನಿಜವಾದ ಸ್ವಾತಂತ್ರ್ಯವುಂಟಾಗುವದು. ಜನರು ಎಷ್ಟೇ ಜಾಣರಾಗಿರಲಿ, ಎಷ್ಟೇ ಬುದ್ಧಿವಂತರಾಗಿರಲಿ, ಈ ಜಗತ್ತಿನಲ್ಲಿ ಯಾರಿಗೂ ಸ್ವಾತಂತ್ರ್ಯವಿಲ್ಲವೆಂಬ ವಾದದ ಸಾರವನ್ನು ಎಷ್ಟೇ ಸ್ಪಷ್ಟವಾಗಿ ತಿಳಿದುಕೊಂಡಿರಲಿ, ತಾವು ಸ್ವತಂತ್ರರಾಗಿರುವೆ ವೆಂದೇ ಅವರೆಲ್ಲರೂ ತಿಳಿದುಕೊಂಡಿರಲಿ, ತಾವು ಸ್ವತಂತ್ರರಾಗಿರುವೆವೆಂದೇ ಅವರೆಲ್ಲರೂ ತಿಳಿದುಕೊಳ್ಳುವರು. ಏಕೆಂದರೆ ಹಾಗೆ ತಿಳಿದುಕೊಳ್ಳದೆ ಇರುವದಕ್ಕೆ ಆಗುವದೇ ಇಲ್ಲ. ನಾವು ಸ್ವತಂತ್ರರು ಎಂದುಕೊಂಡ ಹೊರತು ಯಾವ ವ್ಯವಹಾರವೂ ಸಾಗುವದಿಲ್ಲ. ಇದಕ್ಕೆ ಕಾರಣವೇನೆಂದರೆ ನಾವು ಸ್ವಾತಂತ್ರ್ಯವೆಂದು ಕರೆಯುತ್ತಿರುವದು ಈ ವ್ಯವಹಾರದ ಮೋಡಗಳಿಂದಾಚೆಗೆ ಇರುವ ಸ್ವಚ್ಛವಾದ ನೀಲಾಕಾಶದ ಒಂದು ಝಳುಕು, ನಿಜವಾದ ಸ್ವಾತಂತ್ರ್ಯವೆಂಬ ಆ ನೀಲಾಕಾಶವು ಇದಕ್ಕೆ ಆಧಾರವಾಗಿದ್ದುಕೊಂಡಿರುವದು. ಶರೀರ, ಇಂದ್ರಿಯ, ಮನಸ್ಸು- ಇವುಗಳ ಈ ಪ್ರಪಂಚದಲ್ಲಿ, ಈ ಭ್ರಾಂತಿಯಲ್ಲಿ, ಈ ಮೋಹದಲ್ಲಿ, ಈ ಮಿಥ್ಯಾಪ್ರಪಂಚದಲ್ಲಿ, ನಿಜವಾದ ಸ್ವಾತಂತ್ರ್ಯವೆಂಬುದು ಎಂದಿಗೂ ಇರಲಾರದು. ಮೊದಲಿಲ್ಲದೆ ತುದಿಯಿಲ್ಲದೆ, ಸ್ವಾಧೀನಕ್ಕೆ ಸಿಕ್ಕದೆ ಸಿಕ್ಕುವ ಹಾಗೂ ಇಲ್ಲದೆ, ಹೊಂದಿಕೆಯಿಲ್ಲದೆ, ಮುರುಕುಮುರುಕಾಗಿ, ಯಾವ ಸೇರುವೆಯೂ ಇಲ್ಲದ ಈ ಸ್ವಪ್ನಗಳನ್ನೇ ನಾವು ಪ್ರಪಂಚವೆಂದು ಕರೆಯುತ್ತಿರುವೆವು. ಇಪ್ಪತ್ತು ತಲೆಗಳ ಒಬ್ಬ ರಾಕ್ಷಸನು ನಿಮ್ಮನ್ನು ಓಡಿಸಿಕೊಂಡು ಬರುತ್ತಿರುವಂತೆಯೂ ನೀವು ಅವನನ್ನು ತಪ್ಪಿಸಿಕೊಂಡು ಓಡಿಹೋಗುತ್ತಿರುವಂತೆಯೂ ಒಂದು ಕನಸಾದರೆ, ಆಗ ಅದು ಹೊಂದುಗೆಯಾಗಿಲ್ಲವೆಂದು ನೀವು ಎಂದಿಗೂ ಎಣಿಸುವದಿಲ್ಲ; ಇದೇ ಸರಿ, ಹೀಗೆಯೇ ಇರತಕ್ಕದ್ದು-ಎಂದೇ ನೀವು ತಿಳಿದುಕೊಂಡಿರುತ್ತೀರಲ್ಲವೆ? ಇಲ್ಲಿ ತೋರುವ ಪ್ರಕೃತಿನಿಯಮವೆಂಬುದೂ ಹಾಗೆಯೇ. ನೀವು ಪ್ರಕೃತಿನಿಯುಮವೆಂದು ಕರೆಯುತ್ತಿರುವದೆಲ್ಲ ಆಕಸ್ಮಿಕವಾಗಿಯೇ ಅನಾದಿಯಾಗಿ ಸಂಭವಿಸುತ್ತಿರುವದು. ಇದಕ್ಕೆ ಏನೇನೂ ಅರ್ಥವಿರುವದಿಲ್ಲ. ಆದರೆ ಈ ಸ್ವಪ್ನಾವಸ್ಥೆಯಲ್ಲಿ ನೀವು ಅದನ್ನು ಪ್ರಕೃತಿನಿಯಮವೆಂದು ಕರೆಯುತ್ತಿರುವಿರಿ. ಈ ದೇಶಕಾಲನಿಮಿತ್ತಗಳ ನಿಯಮವು ಇರುವವರೆಗೂ, ಈ ಮಾಯೆಯೊಳಗೆ ಇರುವವರೆಗೂ, ನಿಮಗೆ ಯಾವ ಸ್ವಾತಂತ್ರ್ಯವೂ ಇರುವದಿಲ್ಲ. ಈ ಬಗೆಬಗೆಯ ಉಪಾಸನೆಗಳೆಲ್ಲ ಈ ಮಾಯೆಗೇ ಸೇರಿದವುಗಳಾಗಿವೆ. ಈಶ್ವರನೆಂಬುದೂ, ಪಶುವೆಂಬುದೂ ಮನುಷ್ಯನೆಂಬುದೂ ಎಲ್ಲವೂ ಈ ಮಾಯೆಯೊಳಗೇ; ಆದ್ದರಿಂದ ಎಲ್ಲವೂ ಭ್ರಾಂತಿಯೇ, ಎಲ್ಲವೂ ಕನಸೇ. ಆದ ಮಾತ್ರಕ್ಕೆ ಈಗಿನ ಕಾಲದ ಕೆಲವು ವಿಲಕ್ಷಣ ಪುರುಷರಂತೆ ವಾದಹೂಡುವದು ಸರಿಯಲ್ಲ. ಅವರು ಹೇಳುವದೇನೆಂದರೆ: "ಈಶ್ವರನೆಂಬುದು ಸುಳ್ಳುಭಾವನೆ, ಈ ಪ್ರಪಂಚವೆಂಬುದೊಂದೇ ನಿಜವಾದದ್ದು." ಇದು ಎಂದಿಗೂ ಸರಿಯಲ್ಲ; ಏಕೆಂದರೆ ಈ

ಎರಡೂ ಭಾವನೆಗಳಿಗೂ ಒಂದೇ ಯುಕ್ತಿ; ಅವು ಎರಡೂ ನಿಲ್ಲಬೇಕು, ಇಲ್ಲದಿದ್ದರೆ ಎರಡೂ ಬೀಳಬೇಕು. ಯಾವನು ಪರಲೋಕವಿಲ್ಲವೆನ್ನುವದರ ಜೊತೆಗೆ ಈ ಲೋಕವೂ ಇಲ್ಲವೆನ್ನುವನೋ ಅವನಿಗೇ ನಾಸ್ತಿಕನೆಂದುಕೊಳ್ಳುವ ಹಕ್ಕು ಇರುವದು. ಈಶ್ವರನಿಂದ ಹಿಡಿದು ಅತ್ಯಂತ ಕೀಳುಪ್ರಾಣಿಯವರೆಗೂ, ಸ್ತಂಬದಿಂದ ಹಿಡಿದು ಬ್ರಹ್ಮನವರೆಗೂ ಒಂದೇ ಮಾಯೆಯು ಹರಡಿರುವದು. ಇವೆರಡೂ ನಿಜವಾಗುವದಕ್ಕೆ ಅಥವಾ ಸುಳ್ಳಾಗುವದಕ್ಕೆ ಒಂದೇ ನ್ಯಾಯವನ್ನು ಹೇಳಬೇಕಾಗಿರುವದು. ಈಶ್ವರನೆಂಬ ಭಾವನೆಯು ತಪ್ಪೆಂದು ಯಾವಾತನಿಗೆ ತೋರುವದೋ ಆತನಿಗೆ ತನ್ನ ಶರೀರವೆಂಬ ಭಾವನೆಯೂ ತನ್ನ ಮನಸ್ಸೆಂಬ ಭಾವನೆಯೂ ತಪ್ಪೆಂದೇ ತೋರಬೇಕು. ಈಶ್ವರನು ಹೋದರೆ, ಶರೀರವೂ ಮನಸ್ಸೂ ಹೋಗಿಯೇ ತೀರಬೇಕು. ಈ ಎರಡೂ ಮಾಯವಾದರೆ ಪರಮಾರ್ಥಸತ್ಯವಾದ ನಿತ್ಯತತ್ತ್ವವು ಉಳಿದುಕೊಳ್ಳುವದು. "ಅಲ್ಲಿಗೆ ಚಕ್ಷುರಿಂದ್ರಿಯವು ಹೋಗಲಾರದು, ವಾಕ್ಕು ಹೋಗಲಾರದು, ಮನಸ್ಸೂ ಹೋಗಲಾದು; ಅದನ್ನು ನಾವು ನೋಡಲಾರೆವು ತಿಳಿಯಲೂ ಆರೆವು" (ಕೇನ.) ಎಲ್ಲಿಯವರೆಗೂ ವಾಕ್ಕೂ ಮನಸ್ಸೂ ಬುದ್ಧಿಯೂ ಹೋಗಬಹುದೋ ಅಲ್ಲಿಯವರೆಗೂ ಮಾಯೆಯೊಳಗೇ, ಬಂಧದೊಳಗೇ, ಸೇರಿರುವದೆಂದು ಇದರಿಂದ ಸಿದ್ಧವಾಗುವದು. ಅಲ್ಲಿಂದಾಚೆಗೆ ಸತ್ಯವಸ್ತುವಿರುವದು; ಅಲ್ಲಿಗೆ ವಾಕ್ಕಾಗಲಿ, ಮನಸ್ಸಾಗಲಿ ಬುದ್ಧಿಯಾಗಲಿ ಹಾಯಲಾರವು.

ಯುಕ್ತಿಯಿಂದ ನೋಡಿದರೆ ಇಲ್ಲಿಯವರೆಗೂ ಸರಿಹೋಯಿತು. ಇನ್ನು ಸಾಧನೆಯ ಮಾತು ಸಾಧನೆಯಲ್ಲಿಯೇ ನಿಜವಾದ ಕೆಲಸವಿರುವದು. ಈ ಏಕತ್ವವನ್ನು ಸಾಕ್ಷಾತ್ಕರಿಸಿಕೊಳ್ಳಲಿಕ್ಕೆ ಏನಾದರೂ ಸಾಧನಗಳನ್ನು ಮಾಡತಕ್ಕದ್ದಿದೆಯೋ ? ಎಂದರೆ ಇದೆ, ಆ ವಿಷಯದಲ್ಲಿ ಸಂದೇಹವೇ ಇಲ್ಲ. ಸಾಧನದಿಂದ ಬ್ರಹ್ಮವಾಗಬೇಕೆಂದು ಅಭಿಪ್ರಾಯವಲ್ಲ ; ಏಕೆಂದರೆ ನೀವು ಮೊದಲೇ ಅದಾಗಿರುವಿರಿ. ಇನ್ನು ಮುಂದೆ ನೀವು ದೇವರಾಗುವಿರೆಂದೂ ಪರಿಪೂರ್ಣರಾಗುವಿರೆಂದೂ ತಿಳಿಯಬಾರದು ; ಏಕೆಂದರೆ ನೀವು ಈಗಲೇ ಪರಿಪೂರ್ಣರಾಗಿರುವಿರಿ. ನೀವು ಇನ್ನೂ ಪೂರ್ಣರಾಗಿಲ್ಲವೆಂದು ಎಣಿಸಿದರೆ ಅದೇ ಭ್ರಾಂತಿಯು. ನಾನು ಶ್ರೀಯುತ ಇಂಥವನು, ಶ್ರೀಮತಿ ಇಂಥಾಕೆಯು ಎಂಬ ಈ ಭ್ರಾಂತಿಯನ್ನು ಇನ್ನೊಂದು ಭ್ರಾಂತಿಯಿಂದ ಪರಿಹರಿಸಿಕೊಳ್ಳಬಹುದು; ಇದೇ ಸಾಧನವು. ಬೆಂಕಿಯು ಬೆಂಕಿಯನ್ನು ನುಂಗುವದು. ಇದರಂತೆಯೇ ಒಂದು ಭ್ರಾಂತಿಯಿಂದ ಮತ್ತೊಂದು ಭ್ರಾಂತಿಯನ್ನು ಗೆಲ್ಲಬಹುದು. ಒಂದು ಮೋಡವು ಬಂದು ಮತ್ತೊಂದನ್ನು ಆಚೆಗೆ ತಳ್ಳಿ ಆಮೇಲೆ ಎರಡೂ ಹೋಗಿಬಿಡುವದಿಲ್ಲವೆ? ಅದರಂತೆಯೇ ಇದು. ಹಾಗಾದರೆ ಈ ಸಾಧನೆಗಳೆಂದರೆ ಏನು? ಇನ್ನು ಮುಂದೆ ನಾವು ಮುಕ್ತರಾಗಬೇಕಾದ್ದಿಲ್ಲವೆಂತಲೂ, ಈಗಲೇ ನಾವು ಮುಕ್ತರಾಗಿರುವೆವೆಂತಲೂ, ಯಾವಾಗಲೂ ನೆನಪಿನಲ್ಲಿಟ್ಟಿರಬೇಕು. ನಾವು ಬದ್ಧರಾಗಿರುವೆವೆಂದು ತಿಳಿದುಕೊಳ್ಳುವದೆಲ್ಲ ಭ್ರಾಂತಿಯೆ. ನಾವು ಸುಖಿಯಾಗಿರುವೆವೆಂದಾಗಲಿ, ದುಃಖಿಗಳಾಗಿರುವೆವೆಂದಾಗಲಿ ತಿಳಿದುಕೊಂಡರೆ ಅದು ದೊಡ್ಡ ಭ್ರಾಂತಿಯು. ಇದರ ಮೇಲೆ ಮತ್ತೊಂದು ಭ್ರಾಂತಿಯು–ನಾವು ಕರ್ಮವನ್ನು ಮಾಡಿ ಉಪಾಸನೆಯನ್ನು ಮಾಡಿ ಮುಕ್ತರಾಗಲು ಹೆಣಗಾಡಬೇಕೆಂಬ ಮತ್ತೊಂದು ಭ್ರಾಂತಿಯು– ಒಂದು ಮೊದಲನೆಯ ಭ್ರಾಂತಿಯನ್ನು ಓಡಿಸಿಬಿಡುವದು; ಆಮೇಲೆ ಈ ಎರಡು ಭ್ರಾಂತಿಗಳೂ ನಿಂತುಬಿಡುವವು.

ಮಹಮ್ಮದೀಯರೂ ಹಿಂದುಗಳೂ ನರಿಯನ್ನು ಬಹಳ ಮೈಲಿಗೆಯ ಪ್ರಾಣಿಯೆಂದು

ಭಾವಿಸುವರು ; ಮತ್ತು ಅನ್ನವನ್ನು ನಾಯಿ ಮುಟ್ಟಿದರೆ ಅದು ಮೈಲಿಗೆಯಾಗುವದರಿಂದ ಅದನ್ನು ಆಚೆಗೆ ಎಸೆದುಬಿಡಬೇಕೆಂದೂ ಅದನ್ನು ಯಾರೂ ತಿನ್ನಬಾರದೆಂದೂ ಅವರ ಭಾವನೆ. ಒಬ್ಬ ಮುಸಲಮಾನರವನ ಮನೆಗೆ ಒಂದು ನರಿಯು ನುಗ್ಗಿ ಬಡಿಸಿದ್ದ ಅನ್ನದಲ್ಲಿ ಒಂದಿಷ್ಟನ್ನು ತಿಂದು ಓಡಿಹೋಯಿತು. ಆತನು ಬಹು ಬಡವನು. ಆ ದಿನ ಒಳ್ಳೆ ಪಕ್ವಾನ್ನವನ್ನು ಮಾಡಿಕೊಂಡಿದ್ದನು. ಅದು ಮೈಲಿಗೆಯಾಗಿಬಿಟ್ಟಿದ್ದರಿಂದ ಅದನ್ನು ಊಟಮಾಡುವದಕ್ಕಿಲ್ಲದೆ ಹೋಯಿತು. ಆದ್ದರಿಂದ ಅವನು ಒಬ್ಬ ಮುಲ್ಲನ ಬಳಿಗೆ ಹೋಗಿ, "ಸ್ವಾಮಿ, ಇಂಥ ಸಂಭವ ಬಂದುಬಿಟ್ಟಿತು. ಒಂದು ನರಿಯು ನನಗೆ ಬಡಿಸಿದ್ದ ಅನ್ನದಲ್ಲಿ ಒಂದು ತುತ್ತು ತಿಂದುಬಿಟ್ಟಿತು. ಈಗ ಏನು ಮಾಡಲಿ? ಒಳ್ಳೆಯ ಪಕ್ವಾನ್ನವನ್ನು ಮಾಡಿಸಿದ್ದೆನು. ಇನ್ನೇನು ಮನದಣಿಯ ಊಟಮಾಡಬೇಕು, ಎನ್ನುವಷ್ಟರಲ್ಲಿ ಈ ಹಾಳುನರಿಯು ಬಂದು ಎಲ್ಲವನ್ನೂ ಕೆಡಿಸಿಬಿಟ್ಟಿತಲ್ಲ" ಎಂದನು. ಮುಲ್ಲನು ಒಂದು ಕ್ಷಣಹೊತ್ತು ಆಲೋಚಿಸಿ ಇದಕ್ಕೆ ಒಂದೇ ಒಂದು ಉಪಾಯವೆಂದು ಕಂಡು "ನೀನು ಇಷ್ಟೇ ಮಾಡಬೇಕು. ಒಂದು ನಾಯಿಯನ್ನು ಹಿಡಿದುತಂದು ಅದೇ ಪಕ್ವಾನ್ನದಲ್ಲಿ ಒಂದು ಸ್ವಲ್ಪ ತಿನ್ನಿಸಿಬಿಡು. ಏಕೆಂದರೆ ನಾಯಿಗಳೂ ನರಿಗಳೂ ನಿತ್ಯವೈರಿಗಳು. ನರಿ ತಿಂದನ್ನವೂ ನಿನ್ನ ಹೊಟ್ಟೆಯೊಳಕ್ಕೆ ಹೋಗುವದು, ನಾಯಿ ತಿಂದದ್ದೂ ಅಲ್ಲಿಗೇ ಹೋಗುವದು; ಆಗ ಎರಡೂ ಶುದ್ಧವಾಗುವವು" ಎಂದನಂತೆ! ನಮ್ಮ ಅವಸ್ಥೆಯೂ ತುಸು ಹೆಚ್ಚು ಕಡಿಮೆ ಇದರಂತೆಯೇ ಆಗಿಬಿಟ್ಟಿದೆ. ನಾವು ಅಪೂರ್ಣರಾಗಿರುವೆವೆಂಬುದು ಒಂದು ಭ್ರಾಂತಿ; ಇದಕ್ಕೆ ನಾವು ಸಾಧನವನ್ನು ಮಾಡಿ ಪೂರ್ಣರಾಗುವೆವೆಂಬ ಮತ್ತೊಂದು ಭ್ರಾಂತಿಯನ್ನು ಕೈಕೊಳ್ಳಬೇಕು. ಆಗ ಒಂದು ಭ್ರಾಂತಿಯು ಮತ್ತೊಂದನ್ನು ಓಡಿಸಿಬಿಡುವದು. ಒಂದು ಮುಳ್ಳಿನಿಂದ ಮತ್ತೊಂದನ್ನು ಕಿತ್ತು ಎರಡನ್ನೂ ಆಚೆಗೆ ಬಿಸಾಟುಬಿಡುವದಿಲ್ಲವೆ? ಅದರಂತೆಯೇ* ಇದು. "ಅದೇ ನೀನು" (ತತ್ತ್ವಮಸಿ) ಎಂಬ ವಾಕ್ಯವನ್ನು ಕೇಳಿದರೆ ಸಾಕು, ಅಷ್ಟು ಮಾತ್ರದಿಂದಲೇ ಜಗತ್ತು ಕ್ಷಣಮಾತ್ರದಲ್ಲಿ ಮಾಯವಾಗಿ ಅವರ ನಿಜವಾದ ಸ್ವರೂಪವು ಬೆಳಗುತ್ತಾ ನಿಲ್ಲುವದು–ಅಂಥ ಜನರೂ ಕೆಲವರು ಉಂಟು; ಉಳಿದವರೆಲ್ಲ ತಾವು ಬದ್ಧರಾಗಿದ್ದೇವೆಂಬ ಭಾವನೆಯನ್ನು ತೊಲಗಿಸುವದಕ್ಕೆ ತುಂಬ ಕಷ್ಟಪಟ್ಟು ಸಾಧನೆಯನ್ನು✝ ಮಾಡಬೇಕಾಗಿರುವದು.

---

* ಒಂದು ಭ್ರಾಂತಿಯು ಮತ್ತೊಂದು ಭ್ರಾಂತಿಯನ್ನು ಹೋಗಲಾಡಿಸುವದೆಂಬುದಕ್ಕೆ ಮೇಲಿನ ದೃಷ್ಟಾಂತವು ಅಷ್ಟು ಸರಿಯಾಗಿ ತೋರುವದಿಲ್ಲ. ಮುಳ್ಳಿನಿಂದ ಮುಳ್ಳನ್ನು ಕೀಳುವದು ಅನುಭವದಲ್ಲಿದೆ, ಭ್ರಾಂತಿಯಿಂದ ಭ್ರಾಂತಿಯು ಹೋದದ್ದು ಅನುಭವದಲ್ಲಿಲ್ಲ. ಕತ್ತಲೆಯು ಕತ್ತಲೆಯನ್ನು ಕಳೆಯಲಾರದಂತೆ ಭ್ರಾಂತಿಯನ್ನು ಭ್ರಾಂತಿಯು ಎಂದಿಗೂ ಕಳೆಯಲಾರದು – ಎಂದು ಈ ವಾದದ ಮೇಲೆ ಆಕ್ಷೇಪಣೆಯನ್ನು ಹೂಡಬಹುದಾಗಿದೆ. ನಾವು ಅಪೂರ್ಣರಾಗಿರುವೆವೆಂಬುದೂ ಸಾಧನದಿಂದ ಪೂರ್ಣರಾಗುವೆವೆಂಬುದೂ ಭ್ರಾಂತಿಯೆಂಬುದು ಹೇಗೆಂಬುದನ್ನು ಸಿದ್ಧಮಾಡಿಕೊಟ್ಟ ಹೊರತು ಈ ವಿಷಯದ ಸಂದೇಹವು ತೊಲಗಲಾರದು.

✝ ಭಾವನೆಯಿಂದಲೂ ಸಾಧನೆಯಿಂದಲೂ ಬಂಧದ ಕಲ್ಪನೆಯು ತೀರ ತೊಲಗಿಹೋಗುವದೆಂಬುದು ವೇದಾಂತಕ್ಕೆ ಅಷ್ಟು ಒಪ್ಪಾಗಿರುವಂತೆ ತೋರುವದಿಲ್ಲ ; ಏಕೆಂದರೆ ಜ್ಞಾನದಿಂದಲೇ ಮುಕ್ತಿ ಎಂಬುದು ವೇದಾಂತಸಿದ್ಧಾಂತವಾಗಿದೆ.

ಜ್ಞಾನಯೋಗಿಗಳಾಗುವದಕ್ಕೆ ಯಾರು ತಕ್ಕವರು ?– ಎಂಬುದೇ ಮೊದಲನೆಯ ಪ್ರಶ್ನೆ. ಯಾರಿಗೆ ಈ ಸಾಧನಸಂಪತ್ತುಗಳಿರುವವೋ ಅವರು ಈ ಯೋಗಕ್ಕೆ ಅಧಿಕಾರಿಗಳು. ಈ ಲೋಕದಲ್ಲಿಯೇ ಆಗಲಿ, ಪರಲೋಕದಲ್ಲಿಯೇ ಆಗಲಿ, ಯಾವ ಕರ್ಮದ ಫಲವನ್ನೂ ಯಾವ ಬಗೆಯ ಭೋಗವನ್ನೂ ಕೋರದೆ ವಿರಕ್ತಿಯಿಂದಿರುವದು ಮೊದಲನೆಯ ಸಾಧನವು. ಈ ಬ್ರಹ್ಮಾಂಡಕ್ಕೆ ನೀವೇ ಸೃಷ್ಟಿಕರ್ತರೆಂಬುದು ನಿಜವಾಗಿದ್ದರೆ ನಿಮಗೇನು ಬೇಕಾದರೆ ಅದು ಸಿದ್ಧವಾಗಿಯೇ ತೀರುವದು ; ಏಕೆಂದರೆ ನೀವೇ ಅದನ್ನು ಸೃಷ್ಟಿಮಾಡಿಕೊಂಡುಬಿಡಬಹುದು. ಇದಕ್ಕೆ ಕಾಲವು ಬೇಕು, ಅಷ್ಟೆ. ಕೆಲವರಿಗೆ ಕೂಡಲೆ ಅದು ಪ್ರಾಪ್ತವಾಗುವದು; ಮತ್ತೆ ಕೆಲವರಿಗೆ ಹಿಂದಿನ ಸಂಸ್ಕಾರಗಳು ಆಯಾ ಸಂಕಲ್ಪವನ್ನು ಪೂರ್ತಿಗೊಳಿಸಿಕೊಳ್ಳುವದಕ್ಕೆ ಅಡ್ಡಿಯಾಗಿ ನಿಂತಿರುವವು. ಈ ಜನ್ಮದಲ್ಲಿಯಾಗಲಿ ಮತ್ತೊಂದು ಜನ್ಮದಲ್ಲಿಯಾಗಲಿ ವಿಷಯಭೋಗದ ಆಸೆಗಳಿಗೇ ನಾವು ಅಗ್ರಸ್ಥಾನವನ್ನು ಕೊಟ್ಟಿರುತ್ತೇವೆ. ನಾವು ಬದುಕಿರುತ್ತೇವೆಂಬ ಭಾವನೆಯನ್ನೇ ಮೊದಲು ಕಿತ್ತೊಗೆಯಬೇಕು. ಏಕೆಂದರೆ ಬದುಕಿರುವದೆಂಬುದು ಮರಣಕ್ಕೆ ಮತ್ತೊಂದು ಹೆಸರಾಗಿರುವದು. ನೀವು ಬದುಕಿರುವ ಪ್ರಾಣಿ ಎಂಬುದನ್ನೇ ಮೊದಲು ನಿಷೇಧಿಸಿಬಿಡಿ. ಈ ಬದುಕು ಯಾರಿಗೆ ಬೇಕು ? ಬದುಕಿರುವದೆಂಬುದು ಒಂದು ಭ್ರಾಂತಿ, ಸಾವೆಂಬುದು ಅದರ ಪ್ರತಿದ್ವಂದ್ವವು. ಸುಖವೆಂಬುದು ಈ ಭ್ರಾಂತಿಯ ಒಂದು ಭಾಗ. ದುಃಖವೆಂಬುದು ಮತ್ತೊಂದು ಭಾಗ. ಹಿಗೆಯೇ ಮಿಕ್ಕ ದ್ವಂದ್ವಗಳನ್ನೂ ಅರಿಯಬೇಕು. ಹೀಗಿರುವಲ್ಲಿ ಬದುಕಿರುವದಾಗಲಿ ಸಾವಾಗಲಿ ಯಾರಿಗೆ ಬೇಕು ? ಇವೆಲ್ಲ ಮನಸ್ಸಿನ ಕಲ್ಪನೆಗಳು. ಹೀಗೆಂಬುದಕ್ಕೆ **'ಇಹಾಮುತ್ರಫಲಭೋಗವಿರಾಗ'** (ಈ ಲೋಕದಲ್ಲಿಯಾಗಲಿ ಪರಲೋಕ–ದಲ್ಲಿಯಾಗಲಿ ಆಗಬಹುದಾದ ಭೋಗಗಳ ಆಸೆಯನ್ನು ತೊರೆದುಬಿಡುವದು)– ಎಂದು ಹೆಸರು.

**ಮನಶ್ಶಾಂತಿಯೆಂಬುದು** ಎರಡನೆಯ ಸಾಧನವು. ಮನಸ್ಸು ತರಂಗ ತರಂಗವಾಗಿ ಎದ್ದುಕೊಂಡು ಕಂಡಕಂಡ ಸಂಕಲ್ಪಗಳನ್ನು ಮಾಡದಂತೆ ಅದನ್ನು ಸುಮ್ಮನಾಗಿಸಿಕೊಳ್ಳುವದೇ ಶಾಂತಿಯು ; ಹೊರಗಿನ ನಿಮಿತ್ತಗಳಿಂದಾಗಲಿ ಒಳಗಿನ ನಿಮಿತ್ತಗಳಿಂದಾಗಲಿ ಮನಸ್ಸು ಅಲೆಗಳ ರೂಪದಲ್ಲಿ ಎದ್ದು ಕುಣಿಯದಂತೆ ಮನಸ್ಸನ್ನು ಒಂದೇ ಸಮನೆ ಇರುವಂತೆ ಮಾಡಿಕೊಳ್ಳುವದೇ, ಕೇವಲ ಸಂಕಲ್ಪಶಕ್ತಿಯ ಬಲದಿಂದ ಅದನ್ನು ಪೂರ್ಣವಾಗಿ ವಶಗೊಳಿಸಿಕೊಳ್ಳುವದೇ, ಶಾಂತಿಯು. ಜ್ಞಾನಯೋಗಿಗೆ ಬಾಹ್ಯಸಾಧನಗಳಾಗಲಿ ಮಾನಸಿಕಸಾಧನಗಳಾಗಲಿ ಬೇಕಿರುವದಿಲ್ಲ; ಕೇವಲ ತತ್ತ್ವವಿಚಾರ, ಜ್ಞಾನ, ತನ್ನ ಸಂಕಲ್ಪಶಕ್ತಿ– ಇವನ್ನೇ ಆತನು ಸಾಧನಗಳೆಂತ ಕರೆಯುವದು.

**ತಿತಿಕ್ಷ** ಎಂಬುದು ಮುಂದಿನ ಸಾಧನವು. ತಿತಿಕ್ಷೆ ಎಂದರೆ ಗೋಳಾಡದೆ ಗೊಣಗುಟ್ಟದೆ ಎಲ್ಲಾ ಬಗೆಯ ಕಷ್ಟಗಳನ್ನೂ ಸಹಿಸಿಕೊಂಡಿರುವದು. ಏನಾದರೂ ಕೇಡು ಉಂಟಾದರೆ ಅದನ್ನು ಹಚ್ಚಿಕೊಳ್ಳದೆ ಇರಬೇಕು. ಒಂದು ಹುಲಿ ಬಂದರೂ, ಅಲ್ಲಿಯೇ ನಿಂತಿರಬೇಕು. ಓಡಿಹೋಗುವವರು ಯಾರು? ತಿತಿಕ್ಷೆಯನ್ನು ಈ ರೀತಿಯಲ್ಲಿ ಸಾಧನಮಾಡಿ ಜಯಶೀಲರಾಗಿರುವವರೂ ಉಂಟು. ಇಂಡಿಯದ ಉರಿಬೇಸಗೆಯ ಮಟಮಟಮಧ್ಯಾಹ್ನದಲ್ಲಿ ಗಂಗಾನದಿಯ ದಡದಲ್ಲಿ ಮಲಗಿಕೊಂಡು

ಚಳಿಗಾಲದಲ್ಲಿ ಗಂಗಾನದಿಯ ನೀರ ಮೇಲೆ ಹಗಲೆಲ್ಲ* ಈಜುತ್ತಿರುವವರೂ ಉಂಟು. ಅವರಿಗೆ ಯಾವದೂ ಲೆಕ್ಕವಿಲ್ಲ. ಹಿಮಾಲಯದ ಮಂಜಿನಲ್ಲಿ ಕುಳಿತಿದ್ದರೂ ಯಾವದೊಂದು ಬಟ್ಟೆಯನ್ನೂ ಹಾಕಿಕೊಳ್ಳದೆ ಇರುವರು. ಶೀತವೆಂದರೇನು, ಉಷ್ಣವೆಂದರೇನು? ಇವು ಬರುತ್ತಲೂ ಹೋಗುತ್ತಲೂ ಇದ್ದರೆ ನನಗೇನಾಯಿತು? ನಾನೇನೂ ಶರೀರವಲ್ಲ. ಈ ಪಶ್ಚಿಮದೇಶಗಳಲ್ಲಿ ಇದನ್ನೆಲ್ಲ ನಂಬುವದೆಂದರೆ ಕಷ್ಟವಾಗಿರುವದು ; ಆದರೆ ಜನರು ನಿಜವಾಗಿಯೂ ಹೀಗೆಲ್ಲ ಮಾಡುತ್ತಾರೆಂದು ತಿಳಿದಿರುವದು ಒಳ್ಳೆಯದು. ನಿಮ್ಮ ಜನರು ಫಿರಂಗಿಯ ಬಾಯಿಯೊಳಕ್ಕೆ ನುಗ್ಗುವದಕ್ಕೆ ಅಥವಾ ಯುದ್ಧರಂಗದ ನಟ್ಟ ನಡುವೆಗೆ ಪ್ರವೇಶಿಸುವದಕ್ಕೆ ಧೈರ್ಯದಿಂದ ಸಿದ್ಧರಾಗಿರುವಂತೆಯೇ ನಮ್ಮವರೂ ತಮ್ಮ ವೇದಾಂತ ಸಿದ್ಧಾಂತವನ್ನು ಕುರಿತು ವಿಚಾರಮಾಡುವದಕ್ಕೂ ಅದರಂತೆ ಅನುಷ್ಠಾನಮಾಡುವದಕ್ಕೂ ಧೈರ್ಯದಿಂದ ಸಿದ್ಧರಾಗಿರುವರು. ಅವರು ಅದಕ್ಕಾಗಿ ತಮ್ಮ ಪ್ರಾಣವನ್ನೇ ಒಪ್ಪಿಸುವರು. "ನಾನು ಸಚ್ಚಿದಾನಂದಸ್ವರೂಪನಾದ ಬ್ರಹ್ಮವು ನಾನೇ ಆ ಪರಮಾತ್ಮನು, ನಾನೇ ಆ ಪರಮಾತ್ಮನು" ಎನ್ನುವದು ಅವರ ಸಿದ್ಧಾಂತ. ವ್ಯವಹಾರದಲ್ಲಿ ದುಂದುಗಾರಿಕೆಯನ್ನು ಇಟ್ಟುಕೊಳ್ಳುವದು ಪಶ್ಚಿಮ–ದೇಶದವರಿಗೆ ಹೇಗೆ ಗುರಿಯಾಗಿರುವದೋ, ಹಾಗೆಯೇ ಅಧ್ಯಾತ್ಮಶಕ್ತಿಯ ತುಟ್ಟತುದಿಯನ್ನು ಏರುವದು ನಮ್ಮ ಗುರಿ ; ಧರ್ಮವೆಂದರೆ ಬರಿಯ ಹರಟೆಯಲ್ಲವೆಂತಲೂ ಅದರಲ್ಲಿ ಪ್ರತಿಯೊಂದು ಅಂಶವನ್ನೂ ಈ ವ್ಯವಹಾರದಲ್ಲಿ ಅನುಸರಿಸುವದು ಆಗುವದೆಂತಲೂ ತೋರಿಸುವದೇ ನಮ್ಮ ಗುರಿ. ಪ್ರತಿಯೊಂದನ್ನೂ ಸಹಿಸಿಕೊಂಡು, ಏತಕ್ಕೂ ಗೋಣಗುಟ್ಟದೆ ಇರುವದೇ ತಿತಿಕ್ಷೆಯು. "ನಾನು ಆತ್ಮನು ; ಈ ಪ್ರಪಂಚದಿಂದ ನನಗೇನಾಗಬೇಕು ? ಸುಖವಾಗಲಿ ದುಃಖವಾಗಲಿ, ಗುಣವಾಗಲಿ ದೋಷವಾಗಲಿ, ಶೀತವಾಗಲಿ ಉಷ್ಣವಾಗಲಿ– ನನಗೇನೂ ಮಾಡಲಾರವು" ಎನ್ನುವವರನ್ನು ನಾನು ಕಣ್ಣಾರೆ ಕಂಡಿರುವೆನು✞ ಇದೇ ತಿತಿಕ್ಷೆಯೇ ಹೊರತು ಶರೀರದ ಸುಖಕ್ಕೆ ಹಾತುವರಿಯುತ್ತಿರುವದಲ್ಲ.

ಧರ್ಮವೆಂದರೇನು ? "ಇದನ್ನು ಕೊಡು, ಅದನ್ನು ಕೊಡು" ಎಂದು ಪ್ರಾರ್ಥಿಸುವದೆ ? ಛೇ! ಅದೆಂಥ ಧರ್ಮ ! ಈ ಭಾವನೆಗಳಿರುವವರಿಗೆ ದೇವರೆಂದರೇನು, ಆತ್ಮನೆಂದರೇನು– ಎಂಬುದೇ ತಿಳಿಯದು. ಈ ವಿಷಯದಲ್ಲಿ ನಮ್ಮ ಗುರುಗಳು ಹೀಗೆನ್ನುತ್ತಿದ್ದರು : ಹಳೆಯಹದ್ದು ಮೇಲುಮೇಲಕ್ಕೆ ಹಾರುತ್ತಾ ಕೊನೆಗೆ ಒಂದು ಸಣ್ಣ ಚುಕ್ಕಿಯ ಹಾಗೆ ಕಾಣಿಸುವಷ್ಟು ಮೇಲಕ್ಕೆ ಹೋಗುವದು. ಆದರೆ ಅದರ ಕಣ್ಣು ಮಾತ್ರ ನೆಲದ ಮೇಲಿರುವ ಕೊಳೆತ ಮಾಂಸದ ತುಂಡಿನ ಮೇಲೆಯೇ ಇರುವದು. ನೀವು ಎಷ್ಟೆಲ್ಲಾ ಹೇಳಿದರೂ ಕೊನೆಗೆ ನೋಡಿದರೆ, ಧರ್ಮವೆಂಬುದರ ವಿಷಯದಲ್ಲಿ ನಿಮ್ಮ ಭಾವನೆಯೇನಿರುವದು? ಬೀದಿಗಳನ್ನು ಗುಡಿಸುವದು, ಅನ್ನ ಬಟ್ಟೆಗಳನ್ನು ಹೆಚ್ಚಿಸಿಕೊಳ್ಳುವದು–

---

* ಈ ದೃಷ್ಟಾಂತವನ್ನು ತಿತಿಕ್ಷೆಗೆ ಉದಾಹರಣೆಯಾಗಿ ಕೊಡುವದಕ್ಕಿಂತಲೂ ಶಾರೀರ ತಪಸ್ಸಿಗೆ ಉದಾಹರಣೆಯಾಗಿ ಕೊಡುವದು ಹೆಚ್ಚು ಒಪ್ಪುವದೆಂದು ತೋರುವದು. ತಿತಿಕ್ಷೆ ಎಂದರೆ ತಾವಾಗಿಯೇ ಬಂದೊದಗಿದ ದುಃಖಗಳನ್ನು ಪ್ರತೀಕಾರಬುದ್ಧಿಯಿಲ್ಲದೆ ತಡೆದುಕೊಂಡು ಮನಸ್ಸಿನಲ್ಲಿ ಏರುಪೇರುಗಳಿಲ್ಲದೆ ಇರುವದೇ ಹೊರತು ತಾನೇ ಶರೀರವನ್ನು ದಂಡಿಸುವದಕ್ಕೆ ಹೋಗುವದಲ್ಲ.

✞ ಸ್ವಾಮಿಯವರು ಇದನ್ನು ತಮ್ಮ ಅನುಷ್ಠಾನದಲ್ಲಿಯೂ ಇಟ್ಟಿದ್ದರೆಂಬುದು ಅವರ ಚರಿತ್ರೆಯಲ್ಲಿ ಕಂಡುಬರುವದು.

ಇಷ್ಟೇನೆ? *ಅನ್ನಬಟ್ಟೆಗಳು ಯಾರಿಗೆ ಬೇಕು ? ಪ್ರತಿಯೊಂದು ಕ್ಷಣದಲ್ಲಿಯೂ ಲಕ್ಷಗಟ್ಟಲೆಯ ಜೀವರು ಬಂದುಹೋಗುತ್ತಿರುವರು. ಆದರೇನು? ಈ ಚಿಕ್ಕ ಪ್ರಪಂಚದ ಸುಖದುಃಖಗಳನ್ನು ಕಟ್ಟಿಕೊಂಡು ಒದ್ದಾಡಿದ್ದರಿಂದ ಆಗುವದೇನು? ನಿಮಗೆ ಎದೆಯಿದ್ದರೆ, ಅದರಿಂದಾಚೆಗೆ ಹೋಗಿರಿ; ಪ್ರಕೃತಿನಿಯಮವನ್ನೆಲ್ಲ ಮೀರಿರಿ. ಈ ಇಡಿಯ ಪ್ರಪಂಚವೇ ಕಾಣದಂತಾಗಲಿ, ನೀವು ಒಬ್ಬರೇ ನಿಂತುಬಿಡಿ. "ನಾನು ಪರಮಾರ್ಥಸತ್ಯನು, ಪರಮಾರ್ಥಜ್ಞಾನವು, ಪರಮಾರ್ಥ ಆನಂದವು; ನಾನೇ ಆತನು, ನಾನೇ ಆತನು" ಎಂಬ ಪರಮಾರ್ಥವನ್ನು ಕಂಡುಕೊಳ್ಳಿರಿ.

---

* ಪರೋಪಕಾರವೇ, ಎಂದರೆ ಜನಗಳ ಆರ್ಥಿಕಸ್ಥಿತಿಯನ್ನು ಸರಿಪಡಿಸುವದಕ್ಕೆ ಮಾಡುವ ಪ್ರಯತ್ನವೇ, ಧರ್ಮವೆಂದು ಹೇಳುವ ಕೆಲವು ಪಾಶ್ಚಾತ್ಯರ ಅಭಿಪ್ರಾಯವನ್ನು ಇಲ್ಲಿ ಅಲ್ಲಗಳೆದಿರುತ್ತಾರೆ.

# 14

# ನಾನಾರೂಪವಾಗಿ ತೋರುವ ಅದ್ವಿತೀಯವಸ್ತು

ವೈರಾಗ್ಯವೆಂಬುದು ಎಲ್ಲಾ ಯೋಗಗಳಲ್ಲಿಯೂ ಬಹು ಮುಖ್ಯವಾದ ಸಾಧನವು. ಕರ್ಮಿಯು ತನ್ನ ಕರ್ಮಗಳ ಫಲವನ್ನು ತ್ಯಾಗಮಾಡುವನು ; ಭಕ್ತನು ಸಣ್ಣ ಪುಟ್ಟ ಪ್ರೇಮಗಳನ್ನೆಲ್ಲ ತ್ಯಾಗಮಾಡಿ ಸರ್ವಶಕ್ತವಾದ ಸರ್ವವ್ಯಾಪಕವಾದ ಪ್ರೇಮವನ್ನು ಕೈಕೊಳ್ಳುವನು ; ಯೋಗಿಯು ತನ್ನ ಅನುಭವಗಳನ್ನೆಲ್ಲ ತ್ಯಾಗಮಾಡುವನು. ಏಕೆಂದರೆ ಅವನ ಸಿದ್ಧಾಂತದಂತೆ ಪ್ರಕೃತಿಯೆಲ್ಲವೂ ಪುರುಷನ ಭೋಗಕ್ಕೋಸ್ಕರವೇ ಇರುವದಾದರೂ ಕೊನೆಗೆ ತಾನು ಪ್ರಕೃತಿಯಲ್ಲವೆಂದೂ ಯಾವಾಗಲೂ ಪ್ರಕೃತಿಗಿಂತ ಭಿನ್ನ ಸ್ವಭಾವದವನೆಂದೂ ಕೊನೆಗೆ ತಿಳಿಸುವದೇ ಅದರ ಕೆಲಸವು. ಜ್ಞಾನಿಯು ತ್ಯಾಗಮಾಡುವದೇಕೆಂದರೆ ಅವನ ಸಿದ್ಧಾಂತದಲ್ಲಿ ಪ್ರಕೃತಿಯೆಂಬುದು ಯಾವಾಗಲೂ ಇರುವದಿಲ್ಲ; ಹಿಂದೆ ಇರಲಿಲ್ಲ, ಈಗ ಇಲ್ಲ, ಮುಂದೆ ಇರುವದೂ ಇಲ್ಲ.

ಇದರಿಂದಾಗುವ ಪ್ರಯೋಜನವೇನೆಂಬ ಪ್ರಶ್ನೆಯನ್ನು ಈ ಮೇಲ್ತರದ ವಿಚಾರಗಳಲ್ಲಿ ತರುವದಕ್ಕೇ ಆಗುವದಿಲ್ಲ ; ಅದನ್ನು ಕೇಳುವದೇ ಹಾಸ್ಯಾಸ್ಪದವಾಗಿರುವದು. ಒಂದು ವೇಳೆ ಕೇಳಿದರೂ ಈ ಪ್ರಯೋಜನದ ಪ್ರಶ್ನೆಯನ್ನು ಚೆನ್ನಾಗಿ ಬಿಡಿಸಿ ನೋಡಿದರೆ ನಮಗೆ ಏನು ಕಂಡುಬರುವದೋ ನೋಡೋಣ. ಸೌಖ್ಯವೆಂಬ ಧ್ಯೇಯವು, ಮನುಷ್ಯನಿಗೆ ಏತರಿಂದ ಹೆಚ್ಚು ಸುಖವುಂಟಾಗುವದೋ ಅದು, ಅವನ ದೃಷ್ಟಿಯಲ್ಲಿ ಈ ಮೇಲ್ತರದ ಪದಾರ್ಥಗಳಿಗಿಂತ ಹೆಚ್ಚು ಉಪಯೋಗಕರವಾಗಿರುವದು ; ಇವುಗಳಿಂದ ಅವನ ಅನ್ನಪಾನಾದಿಗಳೇನೂ ಹೆಚ್ಚುವದಿಲ್ಲ, ಇವುಗಳಿಂದ ಅವನಿಗೇನೂ ಅಷ್ಟು ಸುಖವುಂಟಾಗುವದಿಲ್ಲ. ಭೌತಿಕಶಾಸ್ತ್ರಗಳಿಗೆಲ್ಲ ಇದೊಂದೇ ಗುರಿ, ಮನುಷ್ಯನಿಗೆ ಸುಖವನ್ನು ಕಲ್ಪಿಸಿಕೊಡುವದೇ ಅವುಗಳ ಕೆಲಸ, ಯಾವದರಿಂದ ಹೆಚ್ಚು ಸುಖವು ಸಿಗುವ ಹಾಗಿರುವದೋ ಅದನ್ನೇ ಮನುಷ್ಯನು ತೆಗೆದುಕೊಳ್ಳುವನು, ಯಾವದರಿಂದ ಕಡಿಮೆಯ ಸುಖವು ಸಿಗುವದೋ ಅದನ್ನು ಕೈಬಿಡುವನು. ಸುಖವೆಂಬುದು ದೇಹದಲ್ಲಿಯೋ ಮನಸ್ಸಿನಲ್ಲಿಯೋ ಅಥವಾ ಆತ್ಮನಲ್ಲಿಯೋ ಇರುವದು ; ಈ ವಿಷಯವನ್ನು ಹಿಂದಯೇ ಹೇಳಿದ್ದಾಗಿದೆ. ಪಶುಗಳಿಗೂ ಸ್ವಲ್ಪ ಹೆಚ್ಚು ಕಡಿಮೆಯಾಗಿ ಪಶುಗಳಂತೆಯೇ ಇರುವ ಮನುಷ್ಯರಿಗೂ ಸುಖವು ಸಂಪೂರ್ಣವಾಗಿ ಶರೀರದಲ್ಲಿಯೇ ಇರುತ್ತದೆ. ಹಸಿದಿರುವ ನಾಯಿಯಂತೆ ಅಥವಾ ತೋಳನಂತೆ ಆನಂದದಿಂದ ಆಹಾರವನ್ನು ತಿನ್ನುವದೆಂಬುದು ಯಾವ ಮನುಷ್ಯನಿಗೂ ಆಗಲಾರದು; ಆದ್ದರಿಂದ ನಾಯಿಗೂ ತೋಳಕ್ಕೂ ಸುಖವು ಪೂರ್ತಿಯಾಗಿ ಅಂತಸ್ತಿನಲ್ಲಿ, ಎಂದರೆ ಅಂತಃಕರಣದಲ್ಲಿ ಇರುವದು. ಜ್ಞಾನಿಯಲ್ಲಿಯೋ ಎಂದರೆ ಸುಖವು ಎಲ್ಲರಿಗಿಂತಲೂ ಮೇಲಿನ ಅಂತಸ್ತಿನಲ್ಲಿ, ಎಂದರೆ ಆತ್ಮನಲ್ಲಿ ಇರುವದು. ಹೀಗಿರುವದರಿಂದ ಈ ಆತ್ಮಜ್ಞಾನವು ಜ್ಞಾನಿಗೆ ಅತ್ಯಂತ ಉಪಯೋಗಕರ–ವಾಗಿರುವದು.

ಏಕೆಂದರೆ ಅವನಿಗೆ ಅದೇ ಎಲ್ಲಕ್ಕೂ ಹೆಚ್ಚಿನ ಆನಂದವನ್ನು ಕೊಡುವದು. ಇಂದ್ರಿಯಭೋಗವಾಗಲಿ, ಬಾಹ್ಯವಿಷಯಗಳಾಗಲಿ ಆತನಿಗೆ ಅತ್ಯಂತ ಉಪಯೋಗಕರವಲ್ಲ ; ಏಕೆಂದರೆ ಅವನಿಗೆ ಜ್ಞಾನವೆಂಬುದೇ ನಮಗೆ ತಿಳಿದಿರುವ ಎಲ್ಲಕ್ಕೂ ಹೆಚ್ಚಿನ ಗುರಿಯು, ಅದೇ ಎಲ್ಲಕ್ಕೂ ಹೆಚ್ಚಿನ ಆನಂದವು. ಅಜ್ಞಾನದಿಂದ ಕೆಲಸಮಾಡುತ್ತಿರುವವರೆಲ್ಲರೂ ದೇವತೆಗಳಿಗಾಗಿ ದುಡಿಯುವ ಪಶುಗಳಿದ್ದಂತೆ. ಇಲ್ಲಿ ದೇವತೆಗಳೆಂದರೆ ಜ್ಞಾನಿಗಳು. ಯಾರು ಯಾರು ದಿನದಿನವೂ ಶ್ರಮಪಡುತ್ತಾ ಯಂತ್ರಗಳಂತೆ ದುಡಿಯುತ್ತಿರುವರೋ ಅವರಿಗೆ ಈ ಸಂಸಾರದಲ್ಲಿ ಸುಖವಿಲ್ಲ, ಜ್ಞಾನಿಯೇ ಸುಖಿಯು. ಐಶ್ವರ್ಯವಂತನಾದವನು ಲಕ್ಷಡಾಲರನ್ನು* ಕೊಟ್ಟು ಒಂದು ಚಿತ್ರವನ್ನು ಕೊಂಡುಕೊಳ್ಳಬಹುದು; ಆದರೆ ಚಿತ್ರಕರ್ಮದ ಕೌಶಲವನ್ನು ಅರಿಯಬಲ್ಲಾತನೇ ಅದನ್ನು ಅನುಭವಿಸುವನು. ಯಾವನಿಗೆ ಅದರ ಜ್ಞಾನವಿಲ್ಲವೋ ಅವನಿಗೆ ಅದರಿಂದಲೇನೂ ಉಪಯೋಗವಿರುವದಿಲ್ಲ. ಅದು ಅವನದಾಗಿರುವದು, ಅಷ್ಟೇ. ಪ್ರಪಂಚದಲ್ಲೆಲ್ಲ ಜ್ಞಾನಿಯೇ ಈ ಲೋಕದ ಸೌಖ್ಯವನ್ನು ಅನುಭವಿಸುತ್ತಿರುವಾತನು, ಅಜ್ಞಾನಿದವನಿಗೆ ಎಂದಿಗೂ ಸುಖವಿಲ್ಲ ; ಅವನು ಮತ್ತೊಬ್ಬರಿಗಾಗಿಯೇ ದುಡಿಯುತ್ತಿರುವನು. ಆದರೆ ಹೀಗೆಂಬುದು ಅವನಿಗೆ ತಿಳಿಯದು.

ಇಲ್ಲಿಯವರೆಗೆ ಈ ಅದ್ವೈತಿಗಳೆಂಬ ತತ್ತ್ವಜ್ಞಾನಿಗಳ ವಾದಗಳನ್ನು ತಿಳಿಸಿದ್ದಾಯಿತು. ಆತ್ಮನು ಒಬ್ಬನೇ, ಇಬ್ಬರಿಲ್ಲವೆಂಬುದನ್ನೂ ಹೇಳಿದ್ದಾಯಿತು. ಈ ಬ್ರಹ್ಮಾಂಡದಲ್ಲೆಲ್ಲ ಒಂದೇ ಒಂದು ತತ್ತ್ವವಿರುವದು, ಆ ತತ್ತ್ವವನ್ನು ಇಂದ್ರಿಯಗಳ ಮೂಲಕವಾಗಿ ನೋಡಿದರೆ ಅದು ಪ್ರಪಂಚವೆನಿಸುವದು, ಅಂದರೆ ಅದೇ ಭೌತಿಕಪ್ರಪಂಚವೆನಿಸುವದು. ಮನಸ್ಸಿನ ಮೂಲಕವಾಗಿ ಅದನ್ನು ನೋಡಿದರೆ ಅದು ಭಾವನೆಗಳ ಮತ್ತು ಪ್ರತ್ಯಯಗಳ ಪ್ರಪಂಚವಾಗಿ ತೋರುವದು. ಅದು ಇರುವಂತೆಯೇ ಅದನ್ನು ನೋಡಿದರೆ ಅದು ಅದ್ವಿತೀಯವಾದ, ಅನಂತವಾದ, ಪರಮಾರ್ಥವಸ್ತುವಾಗಿರುವದು. ನೀವು ಇದನ್ನು ಚೆನ್ನಾಗಿ ನೆನಪಿಡಬೇಕು. ಮನುಷ್ಯನಲ್ಲಿ ಆತ್ಮನಿದ್ದಾನೆ ಎಂಬದು ನನ್ನ ಅಭಿಪ್ರಾಯವಲ್ಲ ; ಅದನ್ನು ವಿವರಿಸಿ ತಿಳಿಸುವದಕ್ಕಾಗಿ ನಾನು ಮೊದಲು ಹಾಗೆಂದು ಇಟ್ಟುಕೊಂಡು ಪ್ರಾರಂಭಿಸಿದೆನು, ಅಷ್ಟೇ. ಒಂದೇ ಒಂದು ತತ್ತ್ವವಿರುವದು, ಅದೇ ಆತ್ಮನು. ಇದನ್ನು ಇಂದ್ರಿಯಗಳ ಮೂಲಕವಾಗಿ ನೋಡಿದರೆ, ಇಂದ್ರಿಯಗಳ ಮೂಲಕ ಬರುವ ಕಲ್ಪನೆಗಳ ಮೂಲಕ ನೋಡಿದರೆ, ಇದಕ್ಕೇ ಶರೀರವೆಂಬ ಹೆಸರು ಬರುವದು ; ಬುದ್ಧಿಯ ಮೂಲಕ ನೋಡಿದರೆ ಇದಕ್ಕೇ ಮನಸ್ಸೆಂದು ಹೆಸರು; ಅದು ಇರುವಂತೆ ಅದರ ಸ್ವರೂಪದಿಂದ ನೋಡಿದರೆ ಅದೇ ಆತ್ಮನು, ಅದ್ವಿತೀಯವಸ್ತುವಾಗಿರುವದು. ಹೀಗಿರುವದರಿಂದ ಶರೀರ, ಮನಸ್ಸು, ಆತ್ಮ– ಎಂದು ಮೂರು ಪದಾರ್ಥಗಳು ಸೇರಿ ಒಂದಾಗಿರುವದಿಲ್ಲ; ವಿಷಯವನ್ನು ವಿವರಿಸುವಾಗ ಹಾಗೆ ಹೇಳುವದು ಅನುಕಲವಾಗಿತ್ತು, ಅಷ್ಟೇ. ಇರುವದೆಲ್ಲ ಆತ್ಮನೇ. ಆವೊಂದು ತತ್ತ್ವವೇ ದೃಷ್ಟಿಭೇದದಿಂದ ಕೆಲವು ವೇಳೆ ಶರೀರವೆನಿಸುವದು, ಕೆಲವು ವೇಳೆ ಮನಸ್ಸೆನಿಸುವದು, ಕೆಲವು ವೇಳೆ ಆತ್ಮನೆನಿಸುವದು. ಒಂದೇ ಒಂದು ತತ್ತ್ವವಿರುವದು, ಇದನ್ನು ಅಜ್ಞಾನಿದವರು ಪ್ರಪಂಚವೆಂದು ಕರೆಯುತ್ತಿರುವರು;

---

* ಸುಮಾರು ನಾಲ್ಕು ರೂಪಾಯಿ ಬೆಲೆ ಬಾಳುವ ಅಮೆರಿಕದ ಒಂದು ನಾಣ್ಯ.

ಮನುಷ್ಯನು ತಿಳಿವಳಿಕೆಯ ಮೇಲಿನ ಅಂತಸ್ತಿಗೆ ಹೋದಾಗ ಅದನ್ನೇ ಮಾನಸಪ್ರಪಂಚವೆಂದು ಕರೆಯುತ್ತಾನೆ ; ಸರಿಯಾದ ಜ್ಞಾನವೇ ಬಂದಾಗ, ಭ್ರಾಂತಿಗಳೆಲ್ಲ ತೊಲಗಿ 'ಇದೆಲ್ಲವೂ ಆತ್ಮನೇ ಹೊರತು ಮತ್ತೆ ಬೇರಿಲ್ಲ, ನಾನೇ ಆ ತತ್ತ್ವವು' ಎಂಬುದನ್ನು ಕಂಡುಕೊಳ್ಳುವನು.

ಇದೇ ಕಡೆಯ ತೀರ್ಮಾನವು. ಈ ಪ್ರಪಂಚದಲ್ಲಿ ಮೂರೂ ಇಲ್ಲ, ಎರಡೂ ಇಲ್ಲ ; ಎಲ್ಲವೂ ಒಂದೇ ಒಂದು. ಆವೊಂದು ಮಾಯೆಯ ಭ್ರಾಂತಿಯಿಂದ, ಹಗ್ಗವು ಹಾವಾಗಿ ತೋರುವಂತೆ, ಆನೇಕವಾಗಿ ತೋರುತ್ತಿರುವದು. ಹಗ್ಗ ಬೇರೆ, ಹಾವು ಬೇರೆ– ಎಂದು ಪದಾರ್ಥಗಳೇನೂ ಇರುವದಿಲ್ಲ. ಅಲ್ಲಿ ಒಂದೇ ಕಾಲಕ್ಕೆ ಎರಡು ವಸ್ತುಗಳು ಯಾರಿಗೂ ಕಾಣಿಸುವದಿಲ್ಲ. ದ್ವೈತ, ಅದ್ವೈತ– ಎಂಬಿವು ತತ್ತ್ವಶಾಸ್ತ್ರದಲ್ಲಿ ಉಪಯೋಗಿಸುವದಕ್ಕೇನೋ ಚೆನ್ನಾದ ಮಾತುಗಳೇ ಸರಿ. ಆದರೆ ಪೂರ್ಣವಾದ ದೃಷ್ಟಿಯಿಂದ ನೋಡಿದರೆ ನಿಜವಾದದ್ದು, ಸುಳ್ಳಾದದ್ದು– ಎರಡೂ ಒಟ್ಟಿಗೆ ಎಂದಿಗೂ ಕಾಣಿಸುವ ಹಾಗಿಲ್ಲ. ನಾವೆಲ್ಲರೂ ಐಕ್ಯವಾದಿಗಳಾಗಿಯೇ ಹುಟ್ಟಿರುವೆವು. ಅದನ್ನು ನಾವು ತಪ್ಪಿಸಿಕೊಳ್ಳುವ ಹಾಗೆಯೇ ಇಲ್ಲ. ನಮಗೆ ಯಾವಾಗಲೂ ಒಂದೇ ಒಂದು ಕಾಣಿಸುತ್ತಿರುವದು. ಹಗ್ಗವು ಕಾಣಿಸುವಾಗ ಹಾವು ಕಾಣಿಸುವದೇ ಇಲ್ಲ, ಹಾವು ಕಾಣಿಸುವಾಗ ಹಗ್ಗವು ಕಾಣಿಸುವದೇ ಇಲ್ಲ. ಅದು ಮಾಯವಾಗಿಬಿಟ್ಟಿರುವದು. ನಿಮಗೆ ಭ್ರಾಂತಿಯ ವಸ್ತು ತೋರುವಾಗ ನಿಜವಾದ ವಸ್ತು ಕಾಣಿಸುತ್ತಿರುವದಿಲ್ಲ. ನಿಮ್ಮ ಸ್ನೇಹಿತನೊಬ್ಬನು ಬೀದಿಯಲ್ಲಿ ಬರುತ್ತಿದ್ದಾನೆಂದು ಇಟ್ಟುಕೊಳ್ಳಿ ; ಅವನ ಗುರುತೇನೋ ನಿಮಗೆ ಚೆನ್ನಾಗಿಯೇ ಇರುತ್ತದೆ. ಆದರೆ ನಿಮ್ಮ ಮುಂದೆ ಇರುವ ಕಾವಳದ ಮಬ್ಬಿನಲ್ಲಿ ನೋಡುವದರಿಂದ ಅವನು ಮತ್ತೊಬ್ಬನೆಂತ ತೋರಬಹುದು, ಹಾಗೆ ನಿಮ್ಮ ಸ್ನೇಹಿತನನ್ನು ಮತ್ತೊಬ್ಬನೆಂದು ಕಾಣುವಾಗ, ನಿಮ್ಮ ಸ್ನೇಹಿತನು ಕಾಣಿಸುವದೇ ಇಲ್ಲ ; ಆತನು ಕಣ್ಮರೆಯಾಗಿಬಿಟ್ಟಿರುತ್ತಾನೆ. ನಿಮಗೆ ಕಾಣಿಸುವದು ಒಬ್ಬನೇ. ನಿಮ್ಮ ಸ್ನೇಹಿತನು ಶ್ರೀಯುತ ಅಕಾರನೆಂದು ಇಟ್ಟುಕೊಳ್ಳಿ. ಈ ಅಕಾರನನ್ನು ಬಕಾರನೆಂತ ತಿಳಿದುಕೊಂಡಾಗ ನೀವು ಅಕಾರನನ್ನು ಕಾಣಲೇ ಇಲ್ಲ. ಪ್ರತಿಯೊಂದು ಸಂದರ್ಭದಲ್ಲಿಯೂ ನೀವು ಕಂಡದ್ದು ಒಬ್ಬನನ್ನೇ. ನೀವು ನಿಮ್ಮನ್ನು ಶರೀರವೆಂದು ತಿಳಿದುಕೊಳ್ಳುವಾಗ ನೀವು ಬರಿಯ ಶರೀರವೇ ಹೊರತು ಮತ್ತೇನೂ ಆಗಿರುವದಿಲ್ಲ; ಇದೇ ಅನೇಕ ಜನರ ತಿಳಿವಳಿಕೆ. ಅವರು ಆತ್ಮ, ಮನಸ್ಸು– ಮುಂತಾದ ಮಾತನ್ನೇನೂ ಆಡುತ್ತಿರಬಹುದು ; ಆದರೆ ಅವರಿಗೆ ನಿಜವಾಗಿ ಗೋಚರಿಸುವದು ಭೌತಿಕರೂಪವೇ ; ಶಬ್ದ, ಸ್ಪರ್ಶ, ರೂಪ– ಮುಂತಾದವೇ. ಇನ್ನೊಂದು ವಿಚಾರ. ಕೆಲವು ಜನರಿಗೆ ತಾವು ಮನೋರೂಪರೆಂದು ಭಾವನೆ ಬರುವದು. ತರಗತಿಯಲ್ಲಿ 'ನಗುವ ಗಾಳಿ' (Laughing Gas) ಯ ಪರೀಕ್ಷೆಗಳನ್ನು ತೋರಿಸುತ್ತಿದ್ದ ಸರ್ ಹಂಫ್ರೆಡೇವಿ ಎಂಬಾತನ ಕಥೆಯನ್ನು ನೀವು ಕೇಳಿಯೇ ಇರುತ್ತೀರಷ್ಟೆ. ಆತನು ಪರೀಕ್ಷೆ ಮಾಡುತ್ತಿದ್ದ ಹಾಗೆಯೇ ಒಂದು ಗಾಜಿನ ನಳಿಕೆಯು ಒಡೆದುಕೊಳ್ಳಲು ಆ ಗಾಳಿಯು ಹೊರಕ್ಕೆ ಬಂತು. ಆತನು ಅದನ್ನು ಒಳಕ್ಕೆ ಸೇದಿಕೊಂಡನು. ಆ ವಾಯುವನ್ನು ಸೇವಿಸಿದ ಮೇಲೆ ಕೆಲವು ಕ್ಷಣಗಳವರೆಗೆ ಆತನು ಶಿಲಾವಿಗ್ರಹದಂತೆ ಅಲುಗಾಡದೆ ಇದ್ದುಬಿಟ್ಟನು. ತಾನು ಆ ಸ್ಥಿತಿಯಲ್ಲಿದ್ದಾಗ ಇಡಿಯ ಪ್ರಪಂಚವೇ ಬರಿಯ ವಿಜ್ಞಾನಮಯವಾಗಿರುವ ಹಾಗೆ ತನಗೆ ಗೋಚರಿಸಿತೆಂದು ತರಗತಿಯವರಿಗೆ

ಆಮೇಲೆ ಆತನು ಹೇಳಿದನಂತೆ. ಆ ಗಾಳಿಯು ಸ್ವಲ್ಪ ಹೊತ್ತಿನವರೆಗೆ ಶರೀರದ ಜ್ಞಾನವನ್ನು ಕಳೆದುಹಾಕಿದ್ದರಿಂದ ಯಾವದು ಮೊದಲು ಅವನಿಗೆ ಶರೀರವೆಂದು ಕಾಣುತ್ತಿತ್ತೋ ಅದೇ ಅವನಿಗೆ ವಿಜ್ಞಾನಗಳ ರೂಪವಾಗಿ ಕಾಣಿಸಲಾರಂಭಿಸಿತ್ತು. ಜ್ಞಾನವು ಮತ್ತೂ ಮೇಲಕ್ಕೇರಿದರೆ, ಈ ಸಣ್ಣ ವಿಶೇಷಜ್ಞಾನವು ಸಂಪೂರ್ಣವಾಗಿ ಮರೆಯಾದರೆ, ಎಲ್ಲಕ್ಕೂ ಆಧಾರವಾದ ಪರಮಾರ್ಥವು ಬೆಳಗುವದು. ಆಗ ಅದನ್ನು ನಾವು ಸಚ್ಚಿದಾನಂದ–ಸ್ವರೂಪವಾಗಿ ಒಂದೇ ಒಂದು ಆತ್ಮನಾಗಿ ಎಲ್ಲಕ್ಕೂ ಸಾಮಾನ್ಯವಾಗಿರುವ* ತತ್ತ್ವವಾಗಿ ಕಂಡುಕೊಳ್ಳುವೆವು. "ನಿತ್ಯಜ್ಞಾನಸ್ವರೂಪ– ವಾಗಿಯೂ ಕೇವಲ ಆನಂದಸ್ವರೂಪವಾಗಿಯೂ, ಉಪಮಾನ ರಹಿತವಾಗಿಯೂ, ಪರಿಚ್ಛೇದವಿಲ್ಲದ್ದಾಗಿಯೂ, ಎಂದೆಂದಿಗೂ ಮುಕ್ತವಾಗಿಯೂ, ಯಾವ ಕರ್ಮಬಂಧವೂ ಇಲ್ಲದ್ದಾಗಿಯೂ, ಅನಂತವಾದ ಆಕಾಶದಂತೆ ಇರುವ– ದಾಗಿಯೂ, ನಿರವಯವವಾಗಿಯೂ, ಯಾವ ವಿಕಲ್ಪವೂ ಇಲ್ಲದ್ದಾಗಿಯೂ ಇರುವ ಇಂಥ ತತ್ತ್ವವು ನಿಮ್ಮ ಹೃದಯದಲ್ಲಿ ಸಮಾಧಿಯಲ್ಲಿ ತೋರಿಕೊಳ್ಳುವದು." (ವಿ. ಚೂ. 409)

ಎಲ್ಲಾ ಮತಗಳಲ್ಲಿಯೂ ಹೇಳಿರುವ ಬಗೆಬಗೆಯ ಸ್ವರ್ಗಗಳು, ನರಕಗಳು– ಮುಂತಾದವುಗಳನ್ನು ಅದ್ವೈತವಾದದಲ್ಲಿ ವಿವರಿಸುವದು ಹೇಗೆ ? ಮನುಷ್ಯನು ಸತ್ತ ಮೇಲೆ ಸ್ವರ್ಗಕ್ಕೋ ನರಕಕ್ಕೋ, ಇಲ್ಲಿಗೋ ಅಲ್ಲಿಗೋ, ಹೋಗುತ್ತಾನೆನ್ನುತ್ತಾರಷ್ಟೆ; ಅಥವಾ ಮನುಷ್ಯನು ಸತ್ತ ಮೇಲೆ ಮೇಲಿನ ಲೋಕದಲ್ಲಿಯೋ, ಮತ್ತೊಂದು ಲೋಕದಲ್ಲಿಯೋ ಇನ್ನೊಂದು ಶರೀರದಲ್ಲಿ ಹುಟ್ಟುತ್ತಾನೆಂದು ಹೇಳುತ್ತಾರಷ್ಟೆ. ಇವೆಲ್ಲ ಭ್ರಾಂತಿಗಳೆ. ಸರಿಯಾಗಿ ನೋಡಿದರೆ ಯಾರೂ ಹುಟ್ಟುವದೂ ಇಲ್ಲ, ಸಾಯುವದೂ ಇಲ್ಲ, ಸ್ವರ್ಗವೂ ಇಲ್ಲ, ನರಕವೂ ಇಲ್ಲ. ಈ ಪ್ರಪಂಚವೂ ಇಲ್ಲ ; ಇವು ಮೂರು ಎಂದಿಗೂ ಇರಲೇ ಇಲ್ಲ. ಮಗುವಿಗೆ ನಾವು ದೆವ್ವದ ಕಥೆಗಳನ್ನೇ ಹೇಳುತ್ತಿದ್ದು ಆಮೇಲೆ ರಾತ್ರಿಯಲ್ಲಿ ಅದು ಬೀದಿಗೆ ಹೋಗುತ್ತದೆ ಎಂದು ಇಟ್ಟುಕೊಳ್ಳಿ; ಅಲ್ಲಿ ಒಂದು ಮೋಟುಮರವಿರುತ್ತದೆ. ಅದು ಮಗುವಿಗೆ ಏನಾಗಿ ಕಾಣುವದು ! ಕೈಗಳನ್ನು ಚಾಚಿಕೊಂಡು, ತನ್ನನ್ನು ಎಳೆದುಕೊಳ್ಳಬೇಕೆಂದಿರುವ ದೆವ್ವವೆಂದೇ ಅದಕ್ಕೆ ಭಾವನೆಬರುವದಲ್ಲವೆ? ಒಬ್ಬ ಪುರುಷನು ತನ್ನ ಪ್ರಿಯೆಯನ್ನು ನೋಡಬೇಕೆಂದು ಆ ಬೀದಿಯ ಒಂದು ಓಣಿಯಿಂದ ಬರುತ್ತಾನೆಂದು ಇಟ್ಟುಕೊಳ್ಳಿ ; ಅವನಿಗೆ ಈ ಮೋಟುಮರವು ತನ್ನ ಪ್ರಿಯಳಾಗಿ ಕಾಣಿಸುವದು. ಇನ್ನೊಂದು ಕಡೆಯಿಂದ ಬರುವ ಪೋಲೀಸಿನವನಾಗಿ ತೋರುವದು. ಒಂದೇ ಮರವೇ ಹೀಗೆ ಬೇರೆಬೇರೆಯಾಗಿ ಕಾಣಿಸಿತು. ಮರವೆಂಬುದು ತತ್ತ್ವವು, ಅದರಲ್ಲಿ ನೋಡಿದ ಬೇರೆಬೇರೆ ವ್ಯಕ್ತಿಗಳು ಆಯಾ ಮನಸ್ಸುಗಳ ಅಧ್ಯಾರೋಪಗಳು. ಇದರಂತೆಯೇ ಆತ್ಮನೆಂಬ ಒಂದೇ ಒಂದು ತತ್ತ್ವವು ನಿಜವಾಗಿ ಇದ್ದುಕೊಂಡಿರುವದು ; ಅದು ಬರುವದೂ ಇಲ್ಲ, ಹೋಗುವದೂ ಇಲ್ಲ. ಒಬ್ಬ ಮನುಷ್ಯನು ಅಜ್ಞಾನಿಯಾಗಿರುವಾಗ ಅವನಿಗೆ ಸ್ವರ್ಗಕ್ಕೋ ಅಥವಾ ಮತ್ತೆ

* ಬಿಳಿಯ ಕುದುರೆ, ಕರಿಯ ಕುದುರೆ, ಕೆಂಪುಕುದುರೆ– ಇವುಗಳೆಲ್ಲ ಕುದುರೆಯ ವಿಶೇಷಗಳಾಗಿರುವಂತೆ, ಜಗತ್ತಿನಲ್ಲಿರುವ ವಸ್ತುಗಳೆಲ್ಲ ಸಚ್ಚಿದಾನಂದಸ್ವರೂಪನಾದ ಆತ್ಮನ ವಿಶೇಷರೂಪಗಳೆಂದು ಭಾವ.

ಯಾವದಾದರೊಂದು ಲೋಕಕ್ಕೋ ಹೋಗಬೇಕೆಂಬ ಬಯಕೆಯುಂಟಾಗಿರುತ್ತದೆ. ತನ್ನ ಜೀವಮಾನದಲ್ಲೆಲ್ಲ ಅವನು ಇದನ್ನೇ ಮತ್ತೆ ಮತ್ತೆ ಯೋಚಿಸಿಕೊಳ್ಳುತ್ತಾ ಇರುತ್ತಾನೆ. ಈ ಭೂಲೋಕದ ಕನಸು ಹೋಯಿತೋ ಇಲ್ಲವೋ ಅವನಿಗೆ ಈ ಪ್ರಪಂಚವು ದೇವತೆಗಳೂ ಗಂಧರ್ವರೂ ವಿಹರಿಸುತ್ತಿರುವ ಸ್ವರ್ಗವಾಗಿ ಕಾಣಿಸುವದು. ಹೀಗೆಯೇ ಒಬ್ಬನು ತನ್ನ ಜೀವಮಾನದಲ್ಲೆಲ್ಲ ತನ್ನ ಪಿತೃಗಳನ್ನು ನೋಡಬೇಕೆಂದು ಹಂಬಲಿಸುತ್ತಿದ್ದರೆ, ಆಡಾಮನೇ* ಮೊದಲಾದ ಎಲ್ಲಾ ಪಿತೃಗಳನ್ನೂ ಕಾಣಬಹುದು ; ಏಕೆಂದರೆ ಅವನೇ ಅವರೆಲ್ಲರನ್ನೂ ಕಲ್ಪಿಸಿಕೊಳ್ಳುವನು. ಒಬ್ಬನು ಇನ್ನೂ ಮೂಢನಾಗಿದ್ದು ಮತಾಭಿಮಾನಿಗಳು ಅವನನ್ನು ನರಕದ ಯೋಚನೆಯಿಂದಲೇ ಯಾವಾಗಲೂ ಹೆದರಿಸುತ್ತಿದ್ದರೆ, ಅವನು ಸತ್ತ ಮೇಲೆ ಇದೇ ಪ್ರಪಂಚವೇ ಅವನಿಗೆ ನರಕವಾಗಿ ತೋರುವದು. ಸಾಯುವದು, ಹುಟ್ಟುವದು– ಎಂಬುದೆಲ್ಲ ದೃಷ್ಟಿಯಲ್ಲಾಗುವ ಭೇದವೇ. ನೀವೂ ಚಲಿಸುವದಿಲ್ಲ ; ಯಾವದರಲ್ಲಿ ನಿಮ್ಮ ದೃಷ್ಟಿಯ ಅಧ್ಯಾರೋಪವನ್ನು ಮಾಡುವಿರೋ ಅದೂ ಚಲಿಸುವದಿಲ್ಲ. ನೀವು ಎಂದೆಂದಿಗೂ ಮಾರ್ಪಡದ ನಿತ್ಯಸ್ವರೂಪರಾಗಿರುವಿರಿ; ನೀವು ಬರುವದಾಗಲಿ, ಹೋಗುವದಾಗಲಿ ಎಲ್ಲಿ ಬಂತು ? ಅದು ಎಂದಿಗೂ ಆಗದ ಮಾತು. ನೀವು ಸರ್ವವ್ಯಾಪಕರು. ಆಕಾಶವು ಎಂದಿಗೂ ಚಲಿಸುವದಿಲ್ಲ. ಅದರ ಮೇಲಿನ ಮೋಡಗಳೇ ಚಲಿಸುತ್ತಿರುವವು; ಇದರಿಂದ ಆಕಾಶವೇ ಚಲಿಸುವದೆಂದು ನಾವು ಭಾವಿಸಿಕೊಳ್ಳಬಹುದು. ನೀವು ರೈಲುಗಾಡಿಯಲ್ಲಿರುವಾಗ ಭೂಮಿಯೇ ಚಲಿಸುತ್ತಿರುವದೆಂದು ನೀವು ಭಾವಿಸುವಿರಿ ; ಆದರೆ ನಿಜವಾಗಿ ಹಾಗಿರುವದಿಲ್ಲ. ರೈಲುಗಾಡಿಯೇ ಮುಂದಕ್ಕೆ ಹೋಗುತ್ತಿರುವದು, ನೀವು ಇದ್ದಲ್ಲಿಯೇ ಇರುವಿರಿ; ಈ ಕನಸುಗಳೇ, ಈ ಬಗೆ ಬಗೆಯ ಮೋಡಗಳೇ ಮುಂದಕ್ಕೆ ಹಾಯುತ್ತಿರುವವು. ಒಂದು ಕನಸಾಗುತ್ತಲೂ ಒಂದು ಯಾವ ಸಂಬಂಧವೂ ಇಲ್ಲದೆ ಬರುತ್ತಿರುವದು.

ಈ ಪ್ರಪಂಚದಲ್ಲಿ ನಿಯಮವಾಗಲಿ ಸಂಬಂಧವಾಗಲಿ ಯಾವದೂ ಇರುವದಿಲ್ಲ; ಹೀಗಿದ್ದರೂ ನಾವು ಇಲ್ಲಿ ಎಷ್ಟೋ ಸಂಬಂಧವುಂಟೆಂದು ಭಾವಿಸಿರುವೆವು. **"ಅದ್ಭುತಸೀಮೆಯಲ್ಲಿ ಆಲಿಸಿನ ವಿಹಾರ"** (Alice in Wonderland) ಎಂಬ ಕಥೆಯ ಪುಸ್ತಕವನ್ನು ನೀವೆಲ್ಲರೂ ಓದಿರಬಹುದು. ಈ ಶತಮಾನದಲ್ಲಿ ಮಕ್ಕಳಿಗೋಸ್ಕರವೆಂದು ಬರೆದಿರುವ ಪುಸ್ತಕಗಳಲ್ಲೆಲ್ಲ ಇದು ಅತ್ಯಂತ ವಿನೋದಕರವಾದದ್ದು. ಅದನ್ನು ನಾನು ಓದಿದಾಗ ನನಗೆ ಪರಮಾನಂದವಾಯಿತು. ಇಂಥದ್ದೊಂದು ಪುಸ್ತಕವನ್ನು ಮಕ್ಕಳಿಗಾಗಿ ಬರೆಯಬೇಕೆಂಬ ಯೋಚನೆಯು ನನಗೆ ಯಾವಾಗಲೂ ಇದ್ದೇ ಇತ್ತು. ಅದರಲ್ಲಿ ನನಗೆ ಮುಖ್ಯವಾಗಿ ಮೆಚ್ಚಿಗೆಯಾದದ್ದೇನೆಂದರೆ ಏನೇನೂ ಹೊಂದಿಕೆಯಿಲ್ಲದ ಘಟನಾವಳಿಗಳು. ಒಂದೊಂದಕ್ಕೆ ಏನೇನೂ ಸಂಬಂಧವಿಲ್ಲ. ಒಂದು ಭಾವನೆ ಬರುವದು ; ಅಷ್ಟರಲ್ಲಿಯೇ ಧಡಿಲ್ಲನೆ ಅದು ಮತ್ತೊಂದು ಭಾವನೆಯ ರೂಪವನ್ನು ತೆಗೆದುಕೊಂಡುಬಿಡುವದು. ನೀವು ಮಕ್ಕಳಾಗಿದ್ದಾಗ ನಿಮಗೆ ಅದೇ ಸೊಗಸಾಗಿ ಹೊಂದಿಕೆಯಾಗಿರುವಂತೆ ತೋರುತ್ತಿತ್ತಲ್ಲವೆ ? ಸರಿಯಾಗಿ ಹೊಂದಿಕೆಯಾಗಿಯೇ ತೋರುತ್ತಿದ್ದ ತನ್ನ ಬಾಲ್ಯದಲ್ಲಿದ್ದ ಆ ಭಾವನೆಗಳನ್ನು ಮನಸ್ಸಿಗೆ

---

* ಎಲ್ಲರೂ ಕಶ್ಯಪವಂಶಕ್ಕೆ ಸೇರಿದವರೆಂದು ಹಿಂದುಗಳು ಭಾವಿಸಿರುವಂತೆ ಎಲ್ಲರಿಗೂ 'ಆಡಾಮ' ನೆಂಬಾತನೇ ಮೂಲಪುರುಷನೆಂದು ಯಹೂದ್ಯರೂ ಕ್ರಿಸ್ತಿಯನರೂ ಭಾವಿಸಿರುವರು.

ತಂದುಕೊಂಡು, ಗ್ರಂಥಕರ್ತನು ಮಕ್ಕಳಿಗಾಗಿ ಈ ಪುಸ್ತಕವನ್ನು ಬರೆದಿರುತ್ತಾನೆ. ಆದ್ದರಿಂದಲೇ ತಾವು ದೊಡ್ಡವರಾಗಿರುವಾಗ ತೋರುವ ಭಾವನೆಗಳನ್ನೇ ಮಕ್ಕಳು ಗ್ರಹಿಸುವಂತೆ ಮಾಡಬೇಕೆಂಬ ಅಭಿಲಾಷೆಯಿಂದ ಬರೆದಿರುವ ಪುಸ್ತಕಗಳೆಲ್ಲ ಕೆಲಸಕ್ಕೆ ಬಾರದವಾಗಿಬಿಟ್ಟವು. ನಿಜವಾಗಿ ನೋಡಿದರೆ ನಾವು ಬೆಳೆದಿರುವ ಮಕ್ಕಳೇ ಹೊರತು ಬೇರೆಯಲ್ಲ. ಈ ಪ್ರಪಂಚವೆಂಬುದು ಎಂದಿನಂತೆ ಏನೇನೂ ಹೊಂದಿಕೆಯಿಲ್ಲದ 'ಆಲಿಸಿನ ಅದ್ಭುತಸೀಮೆಯೇ' ಆಗಿರುವದು. ಒಂದಾನೊಂದು ಕ್ರಮದಲ್ಲಿ ಅನೇಕವೇಳೆ ಏನಾದರೂ ನಡೆದರೆ, ನಾವು ಅದಕ್ಕೆ ಕಾರ್ಯಕಾರಣ-ಭಾವವೆಂಬ ಹೆಸರನ್ನಿಟ್ಟು ಮತ್ತೆ ಹಾಗೆಯೇ ಆಗುವದೆಂದು ಹೇಳುವೆವು* ಈ ಕನಸು ಹೋದರೆ ಮತ್ತೊಂದು ಕನಸು ಬಂದು ಇದರಷ್ಟೇ ಸಂಬದ್ಧವಾಗಿರುವಂತೆ ತೋರುವದು. ನಮಗೆ ಕನಸಾಗುತ್ತಿರುವಾಗ ನಮಗೆ ತೋರುವ ವಸ್ತುಗಳೆಲ್ಲ ಸಂಬದ್ಧವಾಗಿಯೇ ತೋರುತ್ತಿರುತ್ತವೆ. ಆ ಕನಸಿನಲ್ಲಿರುವಾಗ ನಮಗೆ ಅವು ಹೊಂದಿಕೆಯಿಲ್ಲದೆ ಇವೆಯೆಂದು ಎಂದಿಗೂ ಭಾವನೆ ಬರುವದಿಲ್ಲ; ನಮಗೆ ಎಚ್ಚರವಾದಾಗ ಮಾತ್ರ ಆ ಸಂಬಂಧವಿರಲಿಲ್ಲವೆಂದು ನಮಗೆ ತಿಳಿಯಬರುತ್ತದೆ. ಈ ಪ್ರಪಂಚದ ಕನಸಿನಿಂದ ಎಚ್ಚತ್ತ ಮೇಲೆ ✝ಪರಮಾರ್ಥಕ್ಕೆ ಇದನ್ನು ಹೋಲಿಸಿದರೆ ಇದೆಲ್ಲ ಅಸಂಬದ್ಧವಾದ ಅವಿವೇಕವೆಂದೂ, ಅಸಂಬದ್ಧ-ವಾಗಿದ್ದುಕೊಂಡು ನಮ್ಮೆದುರಿಗೆ ತೋರಿಕೊಳ್ಳುತ್ತಿರುವದೆಂದೂ ಗೊತ್ತಾಗುವದು; ಇದು ಎಲ್ಲಿಂದ ಬರುವದೋ, ಎಲ್ಲಿಗೆ ಹೋಗುವದೋ ನಮಗೆ ತಿಳಿಯದು; ಆದರೆ ಇದು ಕೊನೆಗಾಣುವದೆಂಬುದೇನೋ ಗೊತ್ತು.

ಇದೇ ಮಾಯೆಯು. ಇದು ವೇಗವಾಗಿ ಚಲಿಸುತ್ತಿರುವ ಮೋಡದ ರಾಶಿಗಳಂತಿರುವದು. ಈ ಮಾರ್ಪಡುತ್ತಿರುವ ವಸ್ತುಗಳೆಲ್ಲ ಆ ಮೋಡಗಳೆ ; ಮಾರ್ಪಡದೆ ಇದ್ದಂತೆಯೇ ಇರುವ ಸೂರ್ಯನೇ ನೀವು. ನಿರ್ವಿಕಾರವಾದ ಆ ಸದ್ವಸ್ತುವನ್ನು ಹೊರಗಿನಿಂದ ನೋಡಿದಾಗ ಅದನ್ನು ದೇವರೆಂದು ಕರೆಯುತ್ತೀರಿ, ಒಳಗಿನಿಂದ ನೋಡಿದಾಗ ನೀವೇ ಎಂದುಕೊಳ್ಳುತ್ತೀರಿ. ಇವೆರಡೂ ಒಂದೇ. ನಿಮಗಿಂತ ಬೇರೆಯಾಗಿ ಈಶ್ವರನಿಲ್ಲ, ನಿಮಗಿಂತ ಎಂದರೆ ನಿಜವಾದ ನಿಮ್ಮ ಸ್ವರೂಪಕ್ಕಿಂತ ಹೆಚ್ಚಿನ ದೇವರಿಲ್ಲ. ನಿಮಗೆ ಹೋಲಿಸಿದರೆ ದೇವತೆಗಳೆಲ್ಲರೂ ಕ್ಷುದ್ರ ಪ್ರಾಣಿಗಳು 'ದೇವರು', 'ಸ್ವರ್ಗದಲ್ಲಿರುವ ತಂದೆ'-ಎಂಬ ಭಾವನೆಗಳೆಲ್ಲ ನಿಮ್ಮ ಪ್ರತಿಬಿಂಬವೆ. ದೇವರೆಂಬವನೇ ನಿಮ್ಮ ಪ್ರತಿಬಿಂಬವು. "ದೇವರು ತನ್ನ ಆಕಾರದಲ್ಲಿಯೇ ಮನುಷ್ಯನನ್ನು ಸೃಷ್ಟಿಸಿದನು" (ಬೈಬಲ್, ಜನಿಸಿಸ್ 1–26–27) ಎಂಬುದು ತಪ್ಪು; ಮನುಷ್ಯನು ತನ್ನ ಆಕಾರದಲ್ಲಿ ದೇವರನ್ನು ಸೃಷ್ಟಿಸಿರುತ್ತಾನೆಂಬುದೇ ಸರಿಯಾದದ್ದು. ಈ ಪ್ರಪಂಚದಲ್ಲೆಲ್ಲ ನಮ್ಮ ಆಕಾರದಲ್ಲಿಯೇ ನಾವು ದೇವತೆಗಳನ್ನು ಕಲ್ಪಿಸಿಕೊಳ್ಳುತ್ತಿರುವೆವು. ನಾವೇ ಆಯಾ ದೇವತೆಯನ್ನು ಕಲ್ಪಿಸಿಕೊಂಡು, ಅದಕ್ಕೆ ನಮಸ್ಕರಿಸುವೆವು. ಇಂಥ ಕನಸೊಂದು ಆದರೆ ನಮಗೆ ಬಹಳ ಮೆಚ್ಚು !

---

* ಭೌತಿಕಪ್ರಪಂಚದಲ್ಲಿಯೂ ಕಾರ್ಯಕಾರಣಭಾವವು ನಾವು ತಿಳಿದುಕೊಂಡಿರುವಷ್ಟು ಬಲವಾಗಿಲ್ಲವೆಂದು ನವೀನಭೌತಿಕಶಾಸ್ತ್ರಜ್ಞರೂ ಈಗ ತೋರಿಸಿಕೊಡುತ್ತಿದಾರೆ.

✝ ಈಗಿನ ಎಚ್ಚರವನ್ನು ಕನಸೆಂದು ತಿಳಿಸುವ ಮತ್ತೊಂದು ಹೊಸ ಎಚ್ಚರವು ಆಗುವದೆಂದು ಅಭಿಪ್ರಾಯವಲ್ಲ ; ಪರಮಾರ್ಥಜ್ಞಾನವಾಗುವದೇ ಎಚ್ಚರವಾಗುವದು.

ಇದು ಬಹುಮುಖ್ಯವಾದ ವಿಷಯವು. ಈ ಉಪನ್ಯಾಸದ ಒಟ್ಟುತಿರುಳೇನೆಂದರೆ ಒಂದೇ ಒಂದು ತತ್ತ್ವವಿರುವದು ; ಆ ಒಂದು ತತ್ತ್ವವೇ ಬೇರೆ ಬೇರೆ ದೃಷ್ಟಿಯಿಂದ ಭೂಮಿಯಾಗಿಯೋ ಸ್ವರ್ಗವಾಗಿಯೋ ನರಕವಾಗಿಯೋ ದೇವತೆಗಳಾಗಿಯೋ ದೆವ್ವಗಳಾಗಿಯೋ ಮನುಷ್ಯರಾಗಿಯೋ ಪ್ರಾಣಿಗಳಾಗಿಯೋ ದಾನವರಾಗಿಯೋ ಅಥವಾ ಇದೆಲ್ಲವೂ ಸೇರಿದ ಪ್ರಪಂಚವಾಗಿಯೋ ಕಾಣಿಸಿಕೊಳ್ಳುತ್ತಿರುವದು. ಈ ವಿವಿಧವಾದ ರೂಪದಲ್ಲಿ "ಈ ಮೃತ್ಯುಸಾಗರದಲ್ಲಿ ಆ ಒಂದು ತತ್ತ್ವವನ್ನು ಯಾವಾತನು ಕಂಡುಕೊಳ್ಳುವನೊ, ಈ ತೇಲಾಡುತ್ತಿರುವ ಪ್ರಪಂಚದಲ್ಲಿ ಆ ಒಂದು ಪ್ರಾಣವನ್ನು ಯಾವಾತನು ಕಂಡುಕೊಳ್ಳುವನೋ, ಎಂದಿಗೂ ಮಾರ್ಪಡದ ಆ ಒಂದು ತತ್ತ್ವವನ್ನು ಯಾವಾತನು ಕಂಡುಕೊಳ್ಳುವನೋ, ಅವನಿಗೇ ನಿತ್ಯವಾದ ಶಾಂತಿಯು ; ಮಿಕ್ಕವರಾರಿಗೂ ಇಲ್ಲ, ಮಿಕ್ಕವರಾರಿಗೂ ಇಲ್ಲ." (ಶ್ರು.) ಈ ಒಂದು ತತ್ತ್ವವನ್ನು ಸಾಕ್ಷಾತ್ಕಾರಮಾಡಿಕೊಳ್ಳಬೇಕು.

ಅದು ಹೇಗೆ?–ಎಂಬುದೇ ಮುಂದಿನ ಪ್ರಶ್ನೆಯು. ಸಾಕ್ಷಾತ್ಕಾರ ಮಾಡಿ ಕೊಳ್ಳುವದೆಂಬುದು ಹೇಗೆ ? ಈ ಕನಸನ್ನು ತೊಲಗಿಸಿಕೊಳ್ಳುವದು ಹೇಗೆ ? ನಾವು ಅಲ್ಪರಾದ ಗಂಡಸರು, ಹೆಂಗಸರು– ಎಂದು ಮುಂತಾಗಿ ಭಾವಿಸಿ– ಕೊಂಡಿರುವ ಈ ಕನಸಿನಿಂದ ಎಚ್ಚರವಾಗುವ ಬಗೆ ಹೇಗೆ ? ನಾವು ಈ ಪ್ರಪಂಚಕ್ಕೆಲ್ಲ ಆಧಾರವಾದ ಅನಂತವಾದ ಇರವು ; ಹಾಗಿದ್ದೂ ನಾವು ಹೆಂಗಸರು ಗಂಡಸರು, ಒಬ್ಬನ ಒಳ್ಳೆಯ ಮಾತನ್ನೊ ಅಥವಾ ಮತ್ತೊಬ್ಬನ ಕೆಟ್ಟ ಮಾತನ್ನೋ ಆಶ್ರಯಿಸಿ ಬಾಳುವರು– ಎಂದು ಮುಂತಾದ ಭಾವನೆಯುಳ್ಳ ಅಲ್ಪರಾಗಿ ಪರಿಣಮಿಸಿರುತ್ತೇವೆ. ಎಂಥ ಭಯಂಕರವಾದ ಆಲಂಬನೆಯಿದು, ಎಂಥ ಭಯಂಕರವಾದ ದಾಸ್ಯವಿದು ! ಸುಖದುಃಖಗಳನ್ನೆಲ್ಲ ಮೀರಿರುವ ನಾನು, ಇಡಿಯ ಜಗತ್ತೇ ಯಾರ ಪ್ರತಿಬಿಂಬವೋ, ಸೂರ್ಯರು, ಚಂದ್ರರು, ನಕ್ಷತ್ರಗಳು– ಎಲ್ಲವೂ ಯಾರ ಲೀಲೆಯ ಸಣ್ಣ ತುಣುಕುಗಳೋ ಆ ನಾನು, ಈ ಭಯಂಕರವಾದ ದಾಸ್ಯಕ್ಕೆ ಕಟ್ಟುಬಿದ್ದಿರುವೆನಲ್ಲ ! ನೀವು ನನ್ನ ಮೈಯನ್ನು ಚಿಗುಟಿದರೆ ನನಗೆ ಸಂಕಟವಾಗುವದು. ಯಾವನಾದರೂ ಒಂದು ಒಳ್ಳೆಯ ಮಾತನಾಡಿದನೆಂದರೆ ಸಾಕು, ಆಗಲೆ ನನಗೆ ಸಂತೋಷವಾಗುವದು. ನೋಡಿ, ನನ್ನ ಅವಸ್ಥೆಯನ್ನು– ದೇಹಕ್ಕೆ ದಾಸನು ಮನಸ್ಸಿಗೆ ದಾಸನು, ಪ್ರಪಂಚಕ್ಕೆ ದಾಸನು, ಒಳ್ಳೆಯ ಮಾತಿಗೆ ದಾಸನು ಕೆಟ್ಟ ಮಾತಿಗೆ ದಾಸನು, ರಾಗದ್ವೇಷಾದಿಗಳಿಗೆ ದಾಸನು, ಸುಖಕ್ಕೆ ದಾಸನು ಬದುಕಿಗೆ ದಾಸನು, ಸಾವಿಗೆ ದಾಸನು– ಎಲ್ಲಕ್ಕೂ ದಾಸನೆ ! ಈ ಗುಲಾಮಗಿರಿಯನ್ನು ತಪ್ಪಿಸಿಕೊಳ್ಳಬೇಕು. ಹೇಗೆ ? ಎಂದರೆ– "ಈ ಆತ್ಮನನ್ನು ಮೊದಲು ಶ್ರವಣಮಾಡಬೇಕು, ಆಮೇಲೆ ಮನನಮಾಡಬೇಕು, ಆಮೇಲೆ ಧ್ಯಾನಮಾಡಬೇಕು" (ಬೃ.2–4–6) ಇದೇ ಅದ್ವೈತಜ್ಞಾನಿಯ ಕ್ರಮವು. ಮೊದಲು ತತ್ತ್ವವನ್ನು ಕೇಳಬೇಕು. ಆಮೇಲೆ ಅದನ್ನು ಕುರಿತು ವಿಚಾರಮಾಡಬೇಕು. ಆಮೇಲೆ ಎಡೆಬಿಡದೆ ಅದನ್ನು ಅನುಷ್ಠಾನಕ್ಕೆ ತರಬೇಕು. ಯಾವಾಗಲೂ 'ನಾನು ಬ್ರಹ್ಮವೆ' ಎಂದು ಭಾವಿಸಿಕೊಳ್ಳುತ್ತಿರಿ; ಮತ್ತಿನ ಎಲ್ಲಾ ಯೋಚನೆಯನ್ನೂ ಅತ್ತೊಗೆಯಿರಿ, ಏಕೆಂದರೆ ಅದು ನಿಮ್ಮನ್ನು ನಿರ್ಬಲವಾಗಿ ಮಾಡುವದು. ನಾವು ಗಂಡಸರು, ಹೆಂಗಸರು– ಎಂದು ತೋರುವ ಭಾವನೆಗಳನ್ನೆಲ್ಲ ಆಚೆಗೆ ಒಗೆಯಿರಿ. ದೇಹವು ಹೋಗಲಿ, ಮನಸ್ಸೂ ಹೋಗಲಿ, ದೇವತೆಗಳು ಹೋಗಲಿ, ದೆವ್ವಗಳೂ ಹೋಗಲಿ. ಮಿಕ್ಕದ್ದೆಲ್ಲ ಹೋಗಲಿ,

ಒಂದು ತತ್ತ್ವವು ಮಾತ್ರ ಉಳಿದುಕೊಳ್ಳಲಿ. "ಎಲ್ಲಿ ಮತ್ತೊಂದನ್ನು ಕೇಳುವನೋ, ಮತ್ತೊಂದನ್ನು ಕಾಣುವನೋಅದು ಅಲ್ಪವಾದದ್ದು; ಎಲ್ಲಿ ಮತ್ತೊಂದು ಕೇಳಿಸುವದಿಲ್ಲವೋ, ಮತ್ತೊಂದು ಕಾಣಿಸುವದಿಲ್ಲವೋ, ಅದೇ ಹೆಚ್ಚಿನದು" (ಛಾ.7–24–1) ಅದೇ ಹೆಚ್ಚಿನದು, ಅಲ್ಲಿ ವಿಷಯವೂ ವಿಷಯಿಯೂ ಒಂದಾಗಿರುವವು. ನಾನೇ ಕೇಳುವವನು, ನಾನೇ ಮಾತನಾಡುವವನು; ನಾನೇ ಹೇಳಿಕೊಡುವವನು, ನಾನೇ ಕಲಿತುಕೊಳ್ಳುವವನು ; ನಾನೇ ಸೃಷ್ಟಿಕರ್ತನು, ನಾನೇ ಸೃಷ್ಟಿಯು– ಹೀಗೆ ಯಾವಾಗ ಆಗಿರುವೆನೋ ಆಗ ಮಾತ್ರ ಹೆದರಿಕೆಯೆಂಬುದು ನಿಂತುಹೋಗುವದು, ಆಗ ನಮ್ಮನ್ನು ಹೆದರಿಸುವದಕ್ಕೆ ಮತ್ತೊಬ್ಬನು ಇರುವದಿಲ್ಲ. ನನ್ನನ್ನು ಬಿಟ್ಟರೆ ಮತ್ತೊಬ್ಬನು ಇರುವದೇ ಇಲ್ಲ, ಹೀಗಿರುವಲ್ಲಿ ನನ್ನನ್ನು ಹೆದರಿಸುವವರು ಯಾರು ? ಇದನ್ನು ದಿನದಿನವೂ ಶ್ರವಣಮಾಡಿರಿ. ಮಿಕ್ಕ ಯೋಚನೆಗಳನ್ನೆಲ್ಲ ಆಚೆಗೆ ತಳ್ಳಿರಿ. ಮಿಕ್ಕದ್ದನ್ನೆಲ್ಲ ಆಚೆಗೆ ಎಸೆದು ಇದನ್ನೇ ಮತ್ತೆ ಮತ್ತೆ ಜಪಮಾಡಬೇಕು, ಇದನ್ನೇ ಕಿವಿಗೆ ಸುರಿಯಬೇಕು. ಕೊನೆಗೆ ಇದು ಹೃದಯವನ್ನು ಮುಟ್ಟಿ ಒಂದೊಂದು ನರದಲ್ಲಿಯೂ ಒಂದೊಂದು ಮಾಂಸಖಂಡದಲ್ಲಿಯೂ ಒಂದೊಂದು ರಕ್ತಕಣದಲ್ಲಿಯೂ 'ನಾನೇ ಆತನು, ನಾನೇ ಆತನು' ಎಂಬ ಈ ಭಾವನೆಯ ಝಣತ್ಕಾರವೇ ಕಂಡುಬರಬೇಕು. ಸಾವಿನ ಹೆಬ್ಬಾಗಿಲನ್ನು ಹೊಗುವಾಗ ಕೂಡ 'ನಾನು ಆತನೇ' ಎನ್ನುತ್ತಿರಿ. ಇಂಡಿಯದಲ್ಲಿ ಹಿಂದಕ್ಕೆ ಒಬ್ಬ ಸಂನ್ಯಾಸಿಯಿದ್ದನು, ಆತನು 'ಶಿವೋऽಹಮ್' (ನಾನು ನಿತ್ಯಮಂಗಲರೂಪನು) ಎಂದು ಜಪಿಸಿಕೊಳ್ಳುತ್ತಿದ್ದನು. ಹೀಗಿರುವಲ್ಲಿ ಒಂದು ದಿನ ಒಂದು ಹುಲಿಯು ಅವನ ಮೇಲೆ ಬಿದ್ದು ಎಳೆದುಕೊಂಡು ಹೋಗಿ ಅವನನ್ನು ಕೊಂದು ಹಾಕಿತು ; ಆದರೆ ಅವನು ಬದುಕಿರುವವರೆಗೂ 'ಶಿವೋऽಹಂ, ಶಿವೋऽಹಂ' ಎಂಬ ಧ್ವನಿಯು ಮಾತ್ರ ಬರುತ್ತಲೇ ಇತ್ತು. ಸಾವಿನ ಹೆಬ್ಬಾಗಿಲಿನಲ್ಲೆ ಇರಲಿ, ಎಂಥ ಅಪಾಯದಲ್ಲಿಯೇ ಇರಲಿ, ಖಾಡಾ ಖಾಡಿಯ ಯುದ್ಧದ ರಂಗದಲ್ಲಾಗಲಿ, ಸಾಗರದ ತಳದಲ್ಲಿರಲಿ, ಅತ್ಯಂತ ಎತ್ತರವಾದ ಪರ್ವತಶಿಖರದ ಮೇಲಿರಲಿ, ಗೊಂಡಾರಣ್ಯದ ನಟ್ಟನಡುವೆ ಇರಲಿ, 'ನಾನು ಆತನೇ, ನಾನು ಆತನೇ !' ಎಂದುಕೊಳ್ಳುತ್ತಿರಿ. ಹಗಲೂ ಇರುಳೂ 'ನಾನು ಆತನೆ !' ಎಂದುಕೊಳ್ಳುತ್ತಿರಬೇಕು. ಇದೇ ಮಹಾಬಲವು, ಇದೇ ಧರ್ಮವು. "ಬಲಹೀನರು ಈ ಆತ್ಮನನ್ನು ಪಡೆಯಲಾರರು" (ಮು. 3–2–4) 'ಪರಮೇಶ್ವರನೆ, ನಾನು ಪಾಪಿಯು' ಎಂದು ಎಂದಿಗೂ ನುಡಿಯದಿರಿ. ನಿಮಗೆ ಯಾರು ಸಹಾಯ ಮಾಡುವರು ? ನೀವೇ ಈ ಪ್ರಪಂಚಕ್ಕೆಲ್ಲ ದಿಕ್ಕು. ಈ ಪ್ರಪಂಚದಲ್ಲಿರುವ ಯಾವದು ತಾನೆ ನಿಮಗೆ ಸಹಾಯಮಾಡೀತು ? ನಿಮಗೆ ಸಹಾಯಮಾಡುವ ಮನುಷ್ಯನಾಗಲಿ, ದೇವತೆಯಾಗಲಿ, ಅಸುರನಾಗಲಿ, ಎಲ್ಲಿರುವನು ? ಯಾವದು ತಾನೆ ನಿಮ್ಮನ್ನು ವಶಗೊಳಿಸಿಕೊಂಡೀತು ? ನೀವೇ ಈ ಜಗತ್ತಿನ ದೇವರು ; ನೀವು ಮತ್ತೆಲ್ಲಿ ಸಹಾಯವನ್ನು ಹುಡುಕುವಿರಿ ? ನಿಮ್ಮನ್ನು ಬಿಟ್ಟರೆ ಮತ್ತೆಲ್ಲಿಂದಲೂ ನಿಮಗೆ ಎಂದೂ ಸಹಾಯವು ಬಂದದ್ದೇ ಇಲ್ಲವು ; ಅಜ್ಞಾನದ ದೆಸೆಯಲ್ಲಿ ನೀವು ಮಾಡಿಕೊಂಡ ಪ್ರತಿಯೊಂದು ಪ್ರಾರ್ಥನೆಗೂ ತಕ್ಕ ಫಲವಾದರೆ, ಆ ಫಲವು ಮತ್ತೆ ಯಾರಿಂದಲೋ ಬಂತೆಂದು ನೀವು ತಿಳಿದುಕೊಂಡಿರಲ್ಲವೆ ? ಆದರೆ ನಿಜವಾಗಿ ಆಗಲೂ ನಿಮಗೆ ಗೊತ್ತಿಲ್ಲದೆಯೆ ನಿಮ್ಮ ಪ್ರಾರ್ಥನೆಯನ್ನು ನೀವೇ ಸಫಲವಾಗಿ ಮಾಡಿಕೊಂಡಿರಿ. ಆ ಸಹಾಯವು ನಿಮ್ಮಿಂದಲೆ ಬಂದಿತು, ಆದರೂ ನೀವು ಯಾರೋ ನಿಮಗೆ ಸಹಾಯವನ್ನು

ಮಾಡುತ್ತಿದ್ದಾರೆಂದು ಅವಿವೇಕದಿಂದ ಭಾವಿಸಿಕೊಳ್ಳುತ್ತಿದ್ದಿರಿ. ನಿಮ್ಮನ್ನು ಬಿಟ್ಟು, ನಿಮ್ಮ ಹೊರಗೆ ಮತ್ತಾರೂ ನಿಮಗೆ ಸಹಾಯಕರಿರುವದಿಲ್ಲ ; ನೀವೇ ಈ ಪ್ರಪಂಚದ ಸೃಷ್ಟಿಕರ್ತನು. ರೇಶ್ಮೆಯ ಹುಳುವಿನಂತೆ ನಿಮ್ಮ ಸುತ್ತಲೂ ನೀವೇ ದಾರದ ಗೂಡನ್ನು ನೂತುಕೊಂಡಿದ್ದೀರಿ. ನಿಮ್ಮನ್ನು ಕಾಪಾಡುವವರು ಯಾರು ? ನಿಮ್ಮ ಗೂಡನ್ನು ನೀವೇ ಒಡೆದುಕೊಂಡು, ಸುಂದರವಾದ ಚಿಟ್ಟೆಯ ಹುಳು ಹೊರಗೆ ಬರುವಂತೆ, ಮುಕ್ತಾತ್ಮರಾಗಿ ಹೊರಕ್ಕೆ ಬನ್ನಿರಿ. ಆಗಲೇ ನಿಮಗೆ ನಿಜವು ಕಾಣಿಸುವದು. ಎಂದೆಂದಿಗೂ 'ನಾನು ಆತನೇ!' ಎಂದುಕೊಳ್ಳುತ್ತಿರಿ. ಈ ಮಾತುಗಳಿಂದ ಮನಸ್ಸಿನಲ್ಲಿ ಕಲ್ಮಷವೆಲ್ಲ ಸುಟ್ಟು ಬೂದಿಯಾಗುವದು. ಇದು ನಿಮ್ಮೊಳಗೆ ಮೊದಲೇ ಇದ್ದುಕೊಂಡಿರುವ ಆ ಮಹಾಶಕ್ತಿಯನ್ನು, ನಿಮ್ಮ ಹೃದಯದಲ್ಲಿಯೇ ನಿದ್ರಿಸುತ್ತಿರುವ ಆ ಅನಂತಶಕ್ತಿಯನ್ನು ಹೊರಕ್ಕೆ ತರುತ್ತದೆ. ಇದಾಗಬೇಕಾದರೆ ತತ್ತ್ವವನ್ನು ಮತ್ತೆ ಮತ್ತೆ ಶ್ರವಣಮಾಡುವದರಿಂದಾಗಬೇಕೇ ಹೊರತು ಮತ್ತೇತರಿಂದಲೂ ಆಗದು. ಎಲ್ಲಿಗಾದರೂ ದುರ್ಬಲತೆಯ ಭಾವನೆಯಿದ್ದರೆ ಆ ಸ್ಥಳದ ಹತ್ತಿರಕ್ಕೇ ಹೋಗದಿರಿ. ನೀವು ಜ್ಞಾನಿಗಳಾಗಬೇಕೆಂಬ ಇಚ್ಛೆಯಿದ್ದರೆ ದೌರ್ಬಲ್ಯವೆಂಬುದಕ್ಕೆ ಒಂದಿಷ್ಟೂ ಇಂಬುಕೊಡದಿರಿ.

ಸಾಧನಮಾಡುವದಕ್ಕೆ ಪ್ರಾರಂಭಿಸುವ ಮೊದಲೇ ನಿಮ್ಮ ಮನಸ್ಸಿನಲ್ಲಿರುವ ಸಂದೇಹಗಳನ್ನೆಲ್ಲ ನೀಗಿಕೊಳ್ಳಿರಿ. ಕಾದಾಡಿ, ಹೋರಾಡಿ, ವಿಚಾರಮಾಡಿ; ಇದೇ, ಇದೊಂದೇ ನಿಜವಾದ ತತ್ತ್ವವು ಮತ್ತೊಂದಲ್ಲ– ಎಂದು ನಿಮ್ಮ ಮನಸ್ಸಿನಲ್ಲಿ ನಿರ್ಣಯವಾದ ಬಳಿಕ, ಇನ್ನು ಮೇಲೆ ವಾದವೇನೂ ಅವಶ್ಯಕವಿರುವದಿಲ್ಲ ; ಆಮೇಲೆ ಬಾಯಿಮುಚ್ಚಿರಿ. ಆಮೇಲೆ ವಾದವನ್ನು ಕೇಳಬೇಡಿ. ವಾದವನ್ನು ಮಾಡಲೂ ಬೇಡಿ, ಇನ್ನು ಮೇಲೆ ವಾದಗಳಿಂದೇನು ಪ್ರಯೋಜನ? ನಿಮಗೆ ತೃಪ್ತಿಯಾಗಿಬಿಟ್ಟಿದೆ, ನೀವು ಇದೇ ಸಿದ್ಧಾಂತವೆಂದು ನಿಶ್ಚಯಮಾಡಿಕೊಂಡಿರುತ್ತೀರಿ. ಇನ್ನು ಉಳಿದಿರುವದೇನು ? ಈಗ ತತ್ತ್ವವನ್ನು ಮನನಗಾಣಬೇಕು ; ಹೀಗಿರುವಾಗ ನಿಮ್ಮ ಅಮೂಲ್ಯವಾದ ಕಾಲವನ್ನು ಒಣವಾದಗಳಲ್ಲಿ ಕಳೆಯಲೇಕೆ ? ಈಗ ತತ್ತ್ವವನ್ನು ಧ್ಯಾನಮಾಡಬೇಕು;* ಯಾವ ಯಾವ ಭಾವನೆಯು ಬಲಕಾರಿಯಾಗಿರುವದೋ ಅದನ್ನು ತೆಗೆದುಕೊಳ್ಳಬೇಕು, ಯಾವ ಯಾವದು ದುರ್ಬಲಗೊಳಿಸುವದೋ ಅದನ್ನು ಒಲ್ಲೆನೆನ್ನಬೇಕು. ಭಕ್ತನಾದವನು ಆಕೃತಿಗಳನ್ನೂ ಪ್ರತಿಮೆಗಳನ್ನೂ, ಇಂಥ ಇನ್ನು ಕೆಲವು ವಸ್ತುಗಳನ್ನೂ ಧ್ಯಾನಿಸುತ್ತಾ ಈಶ್ವರಧ್ಯಾನವನ್ನು ಮಾಡುತ್ತಾನೆ. ಇದೇ ಸ್ವಾಭಾವಿಕವಾದ ಕ್ರಮವು. ಆದರೆ ಇದು ಬಲು ನಿಧಾನವಾದ ಕ್ರಮ. ಯೋಗಿಯು ತನ್ನ ದೇಹದಲ್ಲಿರುವ ಬೇರೆ ಬೇರೆ ಚಕ್ರಗಳನ್ನು ಧ್ಯಾನಮಾಡಿ ತನ್ನ ಮನಸ್ಸಿನ ಶಕ್ತಿ ವಿಶೇಷಗಳನ್ನು ಮಾರ್ಪಡಿಸಿಕೊಳ್ಳುತ್ತಾನೆ. ಆದರೆ ಜ್ಞಾನಿಯು 'ಮನಸ್ಸೆಂಬುದೇ ಇಲ್ಲ, ಶರೀರವೇ ಇಲ್ಲ' ಎನ್ನುವನು. ಈ ದೇಹಭಾವನೆಯೂ ಮನೋಭಾವನೆಯೂ ಹೋಗಬೇಕು, ಇದನ್ನು ತಳ್ಳಿಹಾಕಬೇಕು. ಆದ್ದರಿಂದ

---

*ಧ್ಯಾನದಿಂದ ತತ್ತ್ವವನ್ನು ಮನನಗಾಣಬಹುದೆಂದದ್ದರಿಂದ ತನ್ನನ್ನೇ ತಾನು ವಿಚಾರ ಮಾಡಿಕೊಳ್ಳುವದು ನಿಂತುಬಿಡಬೇಕಾದದ್ದೆಂಬ ಅಭಿಪ್ರಾಯವನ್ನು ಮಾಡಿಕೊಳ್ಳುವದು ಸರಿಯಲ್ಲ. ಧ್ಯಾನವು ಬುದ್ಧಿಗೆ ಸಂಸ್ಕಾರವನ್ನುಂಟುಮಾಡಿ ವಿಚಾರಕ್ಕೆ ಸಹಾಯಮಾಡುವದು, ಅಷ್ಟೆ. ಆದ್ದರಿಂದಲೇ ಮುಂದೆ ಮನಸ್ಸೆಂಬುದೇ ಇಲ್ಲವೆಂದು ಕಂಡುಕೊಳ್ಳುವದೇ ಜ್ಞಾನದ ಗುರುತೆಂದು ಹೇಳಿರುತ್ತಾರೆ.

ಇವುಗಳನ್ನು ಕುರಿತು ಯೋಚಿಸುವದು ಅವಿವೇಕವು. ಹಾಗೆ ಮಾಡಿದರೆ ಒಂದು ರೋಗವನ್ನು ವಾಸಿಮಾಡುವದಕ್ಕೆ ಪ್ರಯತ್ನಮಾಡಿ ಮತ್ತೊಂದು ರೋಗವನ್ನು ತಂದುಕೊಂಡಂತೆ ಆಗುವದು ಎಂಬುದು ಜ್ಞಾನಿಯ ಅಭಿಪ್ರಾಯ. ಆದ್ದರಿಂದ ಅವನ ಧ್ಯಾನವು ಅತ್ಯಂತ ಕಷ್ಟವಾಗಿರುವದು, ಅದು ನಿಷೇಧಕ್ರಮದ ಧ್ಯಾನವು. ಅವನು ಎಲ್ಲವನ್ನೂ ಇಲ್ಲವೆನ್ನುತ್ತಾ ಹೋಗುತ್ತಾನೆ, ಕೊನೆಗೆ ಉಳಿಯುವದೇ ಆತ್ಮನು. ಇದು ಎಲ್ಲಕ್ಕೂ ಮೇಲಾದ ವಿವೇಚನಮಾರ್ಗವು. ಕೇವಲ ವಿವೇಚನೆಯ ಬಲದಿಂದಲೇ ಜ್ಞಾನಿಯು ಆತ್ಮನಿಂದ ಪ್ರಪಂಚವನ್ನು ತೆಗೆದುಹಾಕಲು ಯತ್ನಿಸುತ್ತಾನೆ. 'ನಾನು ಜ್ಞಾನಿಯು' ಎಂದುಕೊಳ್ಳುವದೇನೋ ಬಹು ಸುಲಭ ; ಆದರೆ ನಿಜವಾಗಿ ಜ್ಞಾನಿಯಾಗಿರುವದು ಬಹು ಕಷ್ಟ. "ಈ ದಾರಿಯು ಬಲು ದೂರವಾಗಿರುವದು; ಕ್ಷೌರಕತ್ತಿಯ ಅಲುಗಿನ ಮೇಲೆ ನಡೆದಂತೆ ಇರುವದು, ಈ ಮಾರ್ಗ. ಆದರೂ ನಿರಾಶರಾಗಬೇಕಾದ್ದಿಲ್ಲ. ಏಳಿ, ಎಚ್ಚರಗೊಳ್ಳಿರಿ, ಮಜಲುಮುಟ್ಟುವವರೆಗೂ ನಿಲ್ಲದೆ ನಡೆಯಿರಿ" * (ಕ. 1–3–14) ಎಂದು ವೇದವು ಸಾರುತ್ತಿರುವದು.

ಹಾಗಾದರೆ ಜ್ಞಾನಿಯ ಧ್ಯಾನವೇನು ? ಎಂದರೆ, ಅವನು ದೇಹ ಮತ್ತು ಮನಸ್ಸು ಎಂಬ ಭಾವನೆಯನ್ನೆಲ್ಲ ಮೀರಬೇಕೆನ್ನುವನು ; ತಾನು ಶರೀರವೆಂಬ ಭಾವನೆಯನ್ನು ತೊಲಗಿಸಿಕೊಳ್ಳಬೇಕೆಂದು ಯತ್ನಿಸುತ್ತಾನೆ. ಉದಾಹರಣೆಗೆ : 'ನಾನು ಸ್ವಾಮಿಯು' ಎನ್ನುತ್ತಲೂ ಥಟ್ಟನೆ ಶರೀರಭಾವನೆಯು ಬಂದುಬಿಡುತ್ತದೆ. ಆಗ ಏನು ಮಾಡಬೇಕು ? ಮನಸ್ಸಿಗೆ ಬಲವಾಗಿ ಒಂದು ಪೆಟ್ಟುಹಾಕಿ 'ಛೇ, ನಾನು ಶರೀರವಲ್ಲ, ನಾನು ಆತ್ಮನು' ಎನ್ನಬೇಕು. ಬೇನೆಯು ಬಂದರೇನು, ಅತ್ಯಂತ ಭಯಂಕರವಾದ ಸಾವು ಬಂದರೆ ತಾನೆ ಏನು ? ನಾನೇನೂ ಶರೀರವಲ್ಲ. ಈ ಶರೀರವನ್ನು ಸೊಗಸುಗೊಳಿಸುವದೇತಕ್ಕೆ ? ಆ ಭ್ರಾಂತಿಯನ್ನು ಮತ್ತೆ ಅನುಭವಸಲೆಂದೆ ? ದಾಸ್ಯದಲ್ಲಿಯೇ ಮುಂದೆಯೂ ಇರಬೇಕೆಂದೆ ? ಛೇ, ಅದು ಹೋಗಲಿ, ನಾನೇನೂ ಶರೀರವಲ್ಲ. ಹೀಗೆನ್ನುವದು ಜ್ಞಾನಿಯ ಮಾರ್ಗವು. ಭಕ್ತನು "ಭಗವಂತನು ನನಗೆ ಈ ಸಂಸಾರಸಾಗರವನ್ನು ಸುರಕ್ಷಿತವಾಗಿ ದಾಟುವದಕ್ಕೆಂದು ಈ ಶರೀರವನ್ನು ಕೊಟ್ಟಿರುತ್ತಾನೆ. ಈ ಪ್ರಯಾಣವು ಮುಗಿಯುವವರೆಗೂ ಇದನ್ನು ನಾನು ನೋಡಿಕೊಳ್ಳುತ್ತಿರಬೇಕು" ಎನ್ನುವನು. ಆದರೆ "ನಾನು ಕಾದುಕೊಂಡಿರಲಾರೆನು, ಈ ಕ್ಷಣವೇ ನಾನು ಮಜಲು ಮುಟ್ಟಿಬಿಡಬೇಕು" ಎನ್ನುವದು ಜ್ಞಾನಿಯ ಭಾವನೆ. ಆತನು "ನಾನು ನಿತ್ಯಮುಕ್ತನು, ನಾನು ಎಂದೂ ಬದ್ಧನಾಗಿ ಇರಲೇ ಇಲ್ಲ ; ನಾನು ಎಂದೆಂದಿಗೂ ಈ ಬ್ರಹ್ಮಾಂಡದ ಈಶ್ವರನಾಗಿಯೇ ಇರುತ್ತಿರುವೆನು. ನನ್ನನ್ನು ಪೂರ್ಣಗೊಳಿಸುವವರು ಯಾರು ? ನಾನು ಆಗಲೇ ಪರಿಪೂರ್ಣನಾಗಿಯೇ ಇರುವೆನು" ಎನ್ನುತ್ತಿರುವನು. ತಾನು ಪೂರ್ಣನಾಗಿರುವಾತನಿಗೆ ಮತ್ತೊಬ್ಬರಲ್ಲಿಯೂ ಪೂರ್ಣತೆಯೇ ಕಾಣುವದು ; ಕುಂದುಕೊರತೆಗಳು ಗೋಚರವಾದರೆ, ಅದು ತನ್ನ ದೃಷ್ಟಿಯ ಸೃಷ್ಟಿಯೇ ; ತನ್ನಲ್ಲಿ ಕೊರತೆಯಿಲ್ಲದಿದ್ದರೆ ಮತ್ತೊಬ್ಬರಲ್ಲಿ ಅದು ಹೇಗೆ ಕಂಡೀತು? ಹೀಗಿರುವದರಿಂದ ಪರಿಪೂರ್ಣತೆ, ಅಥವಾ ಅಪರಿಪೂರ್ಣತೆ ಎಂಬ ಯೋಚನೆಯು ಜ್ಞಾನಿಗೆ ಹತ್ತುವದೇ ಇಲ್ಲ. ಅವನಿಗೆ ಎರಡೂ ಇರುವದಿಲ್ಲ. ಅವನು

---

* ಇದು ಶ್ರುತಿಯ ಅಕ್ಷರಾರ್ಥವಲ್ಲ ; ಒಟ್ಟರ್ಥವು.

ಮುಕ್ತನಾದನೋ ಇಲ್ಲವೊ, ಅವನಿಗೆ ಒಳ್ಳೆಯದಾಗಲಿ ಕೆಟ್ಟದ್ದಾಗಲಿ ಕಾಣಿಸಿಕೊಳ್ಳುವದೇ ಇಲ್ಲ. ಒಳ್ಳೆಯದೂ ಕೆಟ್ಟದ್ದೂ ಕಾಣಿಸುವದು ಯಾರಿಗೆ ? ಯಾರಲ್ಲಿ ಅದು ಇದ್ದುಕೊಂಡಿರುವದೋ ಅವರಿಗೆ. ಶರೀರವು ಕಾಣಬರುವದು ಯಾರಿಗೆ ? ಯಾರಿಗೆ ತಾವು ಶರೀರವೆಂಬ ಭಾವನೆಯಿರುವದೋ ಅವರಿಗೆ. ನೀವು ಶರೀರವೆಂಬ ಭಾವನೆಯನ್ನು ತೊಲಗಿಸಿಕೊಂಡ ಕ್ಷಣದಲ್ಲಿಯೇ ನಿಮಗೆ ಈ ಪ್ರಪಂಚವು ಕಾಣಿಸದೆ ಹೋಗುವದು. ಅದು ಎಂದೆಂದಿಗೂ ಮತ್ತೆ ತೋರಿಕೊಳ್ಳದಂತೆ ಮಾಯವಾಗುವದು. ಜ್ಞಾನಿಯು ಕೇವಲ ವಿಚಾರಕ್ರಮದಿಂದಲೇ ತತ್ತ್ವವನ್ನು ಮನಗಂಡು ಈ ಭೌತಿಕಬಂಧವನ್ನು ಕಳಚಿಕೊಳ್ಳಲು ಯತ್ನಿಸುತ್ತಾನೆ. ಇದೇ **'ನೇತಿ, ನೇತಿ'** (ಇದಲ್ಲ. ಇದಲ್ಲ) ಎಂಬ ನಿಷೇಧ ಮಾರ್ಗವು.

****

# 15

# ಆತ್ಮೈಕತ್ವ

ಹಿಂದಿನ ಉಪನ್ಯಾಸದಲ್ಲಿ* ನಾವು ಮಾಡಿದ ತೀರ್ಪಿಗೆ ದೃಷ್ಟಾಂತವಾಗಿ, ಇಂಥ ವಿಚಾರಗಳನ್ನು ಭರತಖಂಡದವರು ಅತ್ಯಂತ ಪ್ರಾಚೀನಕಾಲದಿಂದಲೂ ಹೀಗೆ ತಿಳಿಸಿಕೊಡುತ್ತಿದ್ದರೆಂದು ತೋರಿಸುವದಕ್ಕೆ ಒಂದಾನೊಂದು ಉಪನಿಷತ್ತಿನ† ಭಾಗವನ್ನು ಇಲ್ಲಿ ನಿಮಗೆ ಓದಿಹೇಳುವೆನು.

ಯಾಜ್ಞವಲ್ಕ್ಯನೆಂಬಾತನೊಬ್ಬ ಮಹರ್ಷಿಯು. ಭರತಖಂಡದಲ್ಲಿ ಪ್ರತಿಯೊಬ್ಬನೂ ವಾರ್ಧಕವು ಬಂದಕೂಡಲೆ ಪ್ರಪಂಚವನ್ನು ತೊರೆಯಬೇಕೆಂಬುದೊಂದು ನಿಯಮವಿತ್ತೆಂದು ನಿಮಗೆ ತಿಳಿದೇ ಇದೆಯಷ್ಟೆ. ಅದರಂತೆ ಯಾಜ್ಞವಲ್ಕ್ಯನು ತನ್ನ ಹೆಂಡತಿಯನ್ನು ಕುರಿತು "ಪ್ರಿಯಳೆ, ಇಗೋ ನನ್ನ ಹಣವನ್ನೂ ನನ್ನ ಸರ್ವಸ್ವವನ್ನೂ ನಿಮಗೆ ಬಿಟ್ಟುಕೊಟ್ಟಿರುತ್ತೇನೆ, ನಾನು ಪರಿವ್ರಾಜಕನಾಗಬೇಕೆಂದಿದೇನೆ" ಎಂದನು. ಆಕೆಯು "ಪೂಜ್ಯರೆ, ಈ ಇಡಿಯ ಭೂಲೋಕವೇ ವಿತ್ತಪೂರ್ಣವಾಗಿ ನನ್ನ ವಶಕ್ಕೆ ಬಂದರೂ ಅದರಿಂದ ನನಗೆ ಅಮೃತತ್ವವು ದೊರಕಿತೇನು?" ಎಂದು ಕೇಳಿದಳು. ಯಾಜ್ಞವಲ್ಕ್ಯನು "ಇಲ್ಲ ದೊರಕಲಾರದು ಸಂಪತ್ತುಳ್ಳವರ ಜೀವಿತವು ಹೇಗೆ ಇರುವದೋ ಹಾಗೆಯೇ ನಿನ್ನ ಬಾಳೂ ಇರುವದು; ಅಷ್ಟೇ ಹೊರತು ವಿತ್ತದಿಂದ ಅಮೃತತ್ವವು ಎಂದಿಗೂ ದೊರಕಲಾರದು" ಎಂದನು. ಆಕೆಯು "ಯಾವದರಿಂದ ನನಗೆ ಅಮೃತತ್ವವುಂಟಾದೀತೋ ಅದನ್ನು ಹೇಗೆ ಸಂಪಾದಿಸಿಕೊಳ್ಳಬೇಕು? ಅದು ತಮಗೆ ತಿಳಿದಿದ್ದರೆ ನನಗೆ ಅದನ್ನು ಹೇಳಿಕೊಡಿರಿ" ಎಂದಳು. ಆಗ ಯಾಜ್ಞವಲ್ಕ್ಯನಿಂತೆಂದನು: "ನೀನು ಯಾವಾಗಲೂ ಪ್ರಿಯೆಯೇ ಆಗಿದ್ದೆ; ಈಗ ಈ ಪ್ರಶ್ನೆಯನ್ನು ಕೇಳಿದ್ದರಿಂದ ಮತ್ತಷ್ಟು ಪ್ರಿಯೆಯಾದೆ. ಬಾ, ಇಲ್ಲಿ ಕುಳಿತುಕೊ, ನಿನಗೆ ಅದನ್ನು ತಿಳಿಯಹೇಳುತ್ತೇನೆ. ಅದನ್ನು ಕೇಳಿ ಚೆನ್ನಾಗಿ ಮನದಟ್ಟುಮಾಡಿಕೊ" ಎಂದನು.

ಆಗ ಆತನು ಹೇಳಿದ್ದಿದು: "ಹೆಂಡತಿಯು ಗಂಡನನ್ನು ಪ್ರೀತಿಸುವದು ಆ ಗಂಡನಿಗಾಗಿ ಅಲ್ಲ, ಆತ್ಮನಿಗಾಗಿಯೇ ಅವಳು ಆತನನ್ನು ಪ್ರೀತಿಸುತ್ತಾಳೆ. ಏಕೆಂದರೆ ಅವಳಿಗೆ ಆತ್ಮನಲ್ಲಿ ಪ್ರೀತಿಯಿರುತ್ತದೆ. ಯಾರೊಬ್ಬರೂ ಹೆಂಡತಿಯನ್ನು ಹೆಂಡತಿಗಾಗಿ ಪ್ರೀತಿಸುವದಿಲ್ಲ, ಆತ್ಮನ ಪ್ರೀತಿಯಿಂದಲೇ ಗಂಡನು ಹೆಂಡತಿಯನ್ನು ಪ್ರೀತಿಸುವದು. ಯಾರೊಬ್ಬರೂ ಮಕ್ಕಳನ್ನು ಮಕ್ಕಳಿಗಾಗಿ ಪ್ರೀತಿಸುವದಿಲ್ಲ, ಆತ್ಮನಮೇಲೆ ಪ್ರೀತಿಯಿರುವದರಿಂದಲೇ ಜನರು ತಮ್ಮ ಮಕ್ಕಳನ್ನು ಪ್ರೀತಿಸುತ್ತಾರೆ. ಯಾರೊಬ್ಬರೂ

---

* "ನಾನಾ ವಿಧವಾಗಿ ತೋರಿಕೊಳ್ಳುವ ಅದ್ವಿತೀಯವಸ್ತು" ಉಪನ್ಯಾಸದಲ್ಲಿ.

† ಬೃಹದಾರಣ್ಯಕದ ಭಾಗವನ್ನು. ಇಲ್ಲಿ ಕೊಟ್ಟಿರುವದು ತಾತ್ಪರ್ಯವೇ ಹೊರತು ಅಕ್ಷರಾರ್ಥವಲ್ಲ.

ವಿತ್ತವನ್ನು ವಿತ್ತಕ್ಕಾಗಿ ಪ್ರೀತಿಸುವದಿಲ್ಲ, ಆತ್ಮನ ಪ್ರೀತಿಯಿಂದಲೇ ವಿತ್ತವನ್ನು ಪ್ರೀತಿಸುತ್ತಾರೆ. ಯಾರೊಬ್ಬರೂ ಬ್ರಾಹ್ಮಣನನ್ನು ಬ್ರಾಹ್ಮಣನಿಗಾಗಿ ಪ್ರೀತಿಸುವದಿಲ್ಲ, ಆತ್ಮನ ಪ್ರೀತಿಯಿಂದಲೇ ಬ್ರಾಹ್ಮಣನನ್ನು* ಪ್ರೀತಿಸುತ್ತಾರೆ. ಇದರಂತೆ ಯಾರೊಬ್ಬರೂ ಕ್ಷತ್ರಿಯರನ್ನು ಕ್ಷತ್ರಿಯನಿಗಾಗಿ ಪ್ರೀತಿಸುವದಿಲ್ಲ, ಆತ್ಮನ ಪ್ರೀತಿಯಿಂದಲೇ ಕ್ಷತ್ರಿಯನನ್ನು ಪ್ರೀತಿಸುತ್ತಾರೆ. ಲೋಕಗಳನ್ನಾದರೂ ಯಾರೊಬ್ಬರೂ ಲೋಕಗಳಿಗಾಗಿ ಪ್ರೀತಿಸುವದಿಲ್ಲ, ಆತ್ಮನ ಪ್ರೀತಿಗಾಗಿಯೇ ಅವುಗಳನ್ನು ಪ್ರೀತಿಸುತ್ತಾರೆ. ಹೀಗೆಯೇ ಯಾರೊಬ್ಬರೂ ದೇವತೆಗಳನ್ನು ದೇವತೆಗಳಿಗಾಗಿ ಪ್ರೀತಿಸುವದಿಲ್ಲ, ಅವರು ಆತ್ಮನನ್ನು ಪ್ರೀತಿಸುವದರಿಂದಲೇ ದೇವತೆಗಳನ್ನು ಪ್ರೀತಿಸುತ್ತಾರೆ. (ಯಾರೊಬ್ಬರೂ ಪ್ರಾಣಿಗಳನ್ನು ಪ್ರಾಣಿಗಳಿಗಾಗಿ ಪ್ರೀತಿಸುವದಿಲ್ಲ, ಆತ್ಮನನ್ನು ಪ್ರೀತಿಸುವದರಿಂದಲೇ ಅವರು ಪ್ರಾಣಿಗಳನ್ನು ಪ್ರೀತಿಸುತ್ತಾರೆ). ✞ ಅಂತೂ ಯಾರೊಬ್ಬರೂ ಯಾವದಾದರೂ ಒಂದು ಪದಾರ್ಥವನ್ನು ಆ ಪದಾರ್ಥಕ್ಕಾಗಿ ಪ್ರೀತಿಸುವದಿಲ್ಲ, ಆತ್ಮನಿಗಾಗಿಯೇ ಅದನ್ನು ಪ್ರೀತಿಸುತ್ತಾರೆ. ಆದ್ದರಿಂದ ಎಲೆ, ಆತ್ಮನನ್ನೇ ಕಾಣಬೇಕು, ಕೇಳಬೇಕು, ಆಲೋಚಿಸಬೇಕು, ಧ್ಯಾನಮಾಡಬೇಕು. ಎಲೆ ಮೈತ್ರೇಯಿ, ಆತ್ಮನನ್ನು ಕಂಡುಕೊಂಡರೆ, ಕೇಳಿದರೆ, ಆಲೋಚಿಸಿದರೆ, ಅರಿತುಕೊಂಡರೆ ಇದೆಲ್ಲವನ್ನೂ ಅರಿತಂತಾಗುತ್ತದೆ." (ಬೃ. 2–4–5)

ಇದರ ಅಭಿಪ್ರಾಯವೇನು? ಇಲ್ಲೊಂದು ವಿಚಿತ್ರವಾದ ದರ್ಶನವು ಕಂಡುಬರುತ್ತದೆ. ಈ ಪ್ರಪಂಚವೆಂದು ನಮಗೆ ಕಾಣುತ್ತಿರುವ ಬೇರೆಬೇರೆಯ ಪದಾರ್ಥಗಳಲ್ಲಿ ಆತ್ಮನೇ ಬೆಳಗುತ್ತಿರುವನೆಂಬುದೇ ಈ ದರ್ಶನ. ಪ್ರತಿಯೊಂದು ಪ್ರೇಮವೂ ಅತ್ಯಂತ ಕೀಳುತೆರನಾದ ಸ್ವಾರ್ಥವೇ ಎಂದು ಕೆಲವರು ಹೇಳುತ್ತಾರೆ. ನನ್ನ ಮೇಲೆ ನನಗೆ ಪ್ರೀತಿಯಿರುವದರಿಂದಲೇ ನನಗೆ ಮತ್ತೊಂದರಲ್ಲಿಯೂ ಪ್ರೇಮವಿರುವದೆನ್ನುವದೇ ಅವರ ಅಭಿಪ್ರಾಯವು. ಇದು ಎಂದಿಗೂ ಸರಿಯಾಗಲಾರದು. ಈಚಿನಕಾಲದಲ್ಲಿ ಕೆಲವು ದರ್ಶನಕಾರರು ಕೂಡ ಈ ಲೋಕದಲ್ಲಿ ಅಹಂಪದಾರ್ಥವೊಂದೇ ನಿಜವಾದ ಪ್ರವರ್ತಕವೆಂದು ಹೇಳಿರುತ್ತಾರೆ. ಇದು ನಿಜವೂ ಹೌದು, ಆದರೂ ಅದು ತಪ್ಪೂ ಆಗಿರುತ್ತದೆ. ಏಕೆಂದರೆ ಈ ಅಹಂಪದಾರ್ಥವು ತನಗೆ ಆಧಾರವಾಗಿರುವ ಆತ್ಮನ ಆಭಾಸಮಾತ್ರವಾಗಿರುತ್ತದೆ; ಈ ಸಣ್ಣ ಆತ್ಮನ ಪ್ರೀತಿಯು ಸರಿಯಲ್ಲವೆಂದೂ ದುಃಖಕರವೆಂದೂ ತೋರುವದಕ್ಕೆ ಅದು ಪರಿಚ್ಛಿನ್ನವಾಗಿರುವದೇ ಕಾರಣವು. ಆ ಅನಂತನಾಗಿರುವ ಆತ್ಮನಲ್ಲಿ, ವಿಶ್ವರೂಪನಾದ ಆತ್ಮನಲ್ಲಿ, ನಾವಿಟ್ಟಿರುವ ಪ್ರೀತಿಯೇ ಪರಿಚ್ಛಿನ್ನೋಪಾಧಿಯ ಮೂಲಕ ಹೊರಸೂಸುವದರಿಂದ ಕೆಟ್ಟದ್ದೆಂದೂ ಸ್ವಾರ್ಥತೆಯೆಂದೂ ತೋರುತ್ತಿರುವದು. ಹೆಂಡತಿಯು ಗಂಡನನ್ನು ಪ್ರೀತಿಸುತ್ತಿರುವಾಗಕೂಡ ಆಕೆಗೆ ಅದು ತಿಳಿದಿರಲಿ ತಿಳಿಯದಿರಲಿ, ಆ ಗಂಡನನ್ನು ಆ

---

* ಇಲ್ಲಿ ಬ್ರಾಹ್ಮಣನೆಂದರೆ ಬ್ರಾಹ್ಮಣ್ಯವು. ಕ್ಷತ್ರಿಯ ಮುಂತಾದ ಶಬ್ದಗಳ ಅರ್ಥವನ್ನೂ ಹೀಗೆಯೇ ಮಾಡಿಕೊಳ್ಳಬೇಕು.

✞ ಈ ವಾಕ್ಯವು ಮೂಲದಲ್ಲಿದ್ದದ್ದು ಹೇಗೋ ಇಲ್ಲಿ ಕೈಬಿಟ್ಟುಹೋಗಿರುತ್ತದೆ.

ಪರಮಾತ್ಮನಿಗಾಗಿಯೇ ಪ್ರೀತಿಸುತ್ತಿರುತ್ತಾಳೆ.* ಲೋಕದಲ್ಲಿ ಅದು ತೋರಿಕೊಳ್ಳುತ್ತಿರುವ ರೀತಿಯಿಂದ ನೋಡಿದರೆ ಆ ಪ್ರೀತಿಯು ಸ್ವಾರ್ಥತೆಯಾಗಿರುತ್ತದೆ, ಯಾರೆ ಆಗಲಿ ಪ್ರೀತಿಸುವಾಗ ಆತ್ಮನಲ್ಲಿಯೇ ಆತ್ಮನ ದ್ವಾರದಿಂದಲೇ ಪ್ರೀತಿಸಬೇಕಾಗಿರುತ್ತದೆ.

ಈ ಆತ್ಮನನ್ನು ಅರಿತುಕೊಳ್ಳಬೇಕು. ಯಾರು ಆತ್ಮನೆಂದರೆ ಯಾವದೆಂಬುದನ್ನು ಅರಿಯದೆ ಪ್ರೀತಿಸುವರೋ ಅವರ ಪ್ರೇಮವು ಸ್ವಾರ್ಥತೆಯದಾಗಿರುತ್ತದೆ, ಯಾರು ಆತ್ಮನೆಂದರೆ ಯಾರೆಂಬುದನ್ನು ಅರಿತು ಪ್ರೀತಿಸುವರೋ ಅವರು ಮುಕ್ತರು, ಅವರು ಋಷಿಗಳು. "ಯಾವನು ಬ್ರಾಹ್ಮಣನನ್ನು ✝ ಆತ್ಮನಿಗಿಂತ ಬೇರೆಯಾಗಿ ತಿಳಿಯುತ್ತಾನೋ ಅವನನ್ನು ಬ್ರಾಹ್ಮಣನು ಕೈಬಿಡುತ್ತಾನೆ; ಯಾವನು ಕ್ಷತ್ರಿಯನನ್ನು ಆತ್ಮನಿಗಿಂತ ಬೇರೆಯಾಗಿ ತಿಳಿಯುತ್ತಾನೋ ಅವನನ್ನು ಕ್ಷತ್ರಿಯನು ಕೈಬಿಡುತ್ತಾನೆ; ಯಾವನು ಲೋಕಗಳನ್ನು ಆತ್ಮನಿಗಿಂತ ಬೇರೆಯಾಗಿ ತಿಳಿಯುತ್ತಾನೋ ಅವನನ್ನು ಲೋಕಗಳು ಕೈಬಿಡುತ್ತವೆ. ಯಾವನು ದೇವತೆಗಳನ್ನು ಆತ್ಮನಿಗಿಂತ ಬೇರೆಯಾಗಿ ತಿಳಿಯುತ್ತಾನೋ ಅವನನ್ನು ದೇವತೆಗಳು ಕೈಬಿಡುತ್ತವೆ. (ಯಾವನು ಪ್ರಾಣಿಗಳನ್ನು ಆತ್ಮನಿಗಿಂತ ಬೇರೆಯೆಂದು ತಿಳಿಯುತ್ತಾನೋ ಅವನನ್ನು ಪ್ರಾಣಿಗಳು ಕೈಬಿಡುತ್ತವೆ.) ಯಾವನು ಯಾವದನ್ನೇ ಆಗಲಿ ಆತ್ಮನಿಗಿಂತ ಬೇರೆಯೆಂದು ತಿಳಿಯುತ್ತಾನೋ ಅವನನ್ನು ಆ ಪದಾರ್ಥವೆಲ್ಲವೂ ಕೈಬಿಡುತ್ತದೆ. ಈ ಬ್ರಾಹ್ಮಣರು, ಈ ಕ್ಷತ್ರಿಯರು, ಈ ಲೋಕಗಳು, ಈ ದೇವತೆಗಳು, (ಈ ಪ್ರಾಣಿಗಳು), ಇದೆಲ್ಲವೂ ಈ ಆತ್ಮನೇ." (ಬೃ. 2–4–6) ಪ್ರೀತಿಯೆಂದರೇನೆಂಬುದನ್ನು ಯಾಜ್ಞವಲ್ಕ್ಯನು ಈ ರೀತಿಯಲ್ಲಿ ವಿವರಿಸಿರುತ್ತಾನೆ. ಈ ಪ್ರೀತಿಯನ್ನು ವಿಶೇಷರೂಪಕ್ಕೆ ಇಳಿಸುವದೇ ದುಃಖಕ್ಕೆ ಕಾರಣವಾಗಿರುತ್ತದೆ. ನನಗೆ ಒಬ್ಬ ಸ್ತ್ರೀಯಮೇಲೆ ಪ್ರೀತಿಯಿರುವದೆಂದು ಇಟ್ಟುಕೊಳ್ಳಿ. ಆ ಸ್ತ್ರೀಯನ್ನು ವ್ಯಕ್ತೀಕರಿಸಿ, ಆ ಆತ್ಮನಿಗಿಂತ ಆಕೆಯು ಬೇರೆಯೆಂದು ಮಾಡಿಕೊಂಡೆನೊ ಇಲ್ಲವೊ, ನನ್ನ ಪ್ರೀತಿಯು ನಿತ್ಯವೆನಿಸಲಾರದು. ಅದು ಸ್ವಾರ್ಥತೆಯ ಪ್ರೀತಿಯಾಗುತ್ತದೆಯಾದ್ದರಿಂದ ಅದು ದುಃಖದಲ್ಲಿ ಕೊನೆಗಾಣುವ ಸಂಭವವೇ ಹೆಚ್ಚು. ಆದರೆ ಆ ಸ್ತ್ರೀಯನ್ನು ಆತ್ಮನನ್ನಾಗಿ ಕಂಡೆನೆಂದರೆ ಆ ಪ್ರೀತಿಯು ಪರಿಪೂರ್ಣವಾಗಿ ಎಂದಿಗೂ ಆತಂಕವಿಲ್ಲದ್ದಾಗುವದು. ಇದರಂತೆಯೇ ಈ ಪ್ರಪಂಚದಲ್ಲಿ ನೀವು ಮತ್ತೆ ಏತರಲ್ಲಿಯಾದರೂ ಆಸಕ್ತರಾಗಿ ಒಟ್ಟು ವಿಶ್ವದಿಂದ ಅದನ್ನು ಬಿಡಿಸಿಕೊಂಡರೆ, ಆತ್ಮನಿಂದ ಅದನ್ನು ಬೇರ್ಪಡಿಸಿಕೊಂಡರೆ, ಆಕೂಡಲೆ ಒಂದು ಪ್ರತಿಕ್ರಿಯೆಯುಂಟಾಗುತ್ತದೆ. ಆತ್ಮನಿಗೆ ಹೊರಚ್ಚುಮಾಡಿಕೊಂಡು ನಾವು ಯಾವದನ್ನು ಪ್ರೀತಿಸಿದರೂ ಶೋಕವೂ ದುಃಖವೂ ಉಂಟಾಗುವವು. ಪ್ರತಿಯೊಂದನ್ನೂ ಆತ್ಮನಲ್ಲಿಯೇ ಆತ್ಮನಾಗಿಯೇ ಅನುಭವಿಸುವದಕ್ಕೆ ಪ್ರಾರಂಭಿಸಿದರೆ ಯಾವ ದುಃಖವೂ ಬರುವದಿಲ್ಲ, ಯಾವ ಪ್ರತಿಕ್ರಿಯೆಯೂ ಉಂಟಾಗುವದಿಲ್ಲ. ಇದೇ ಪೂರ್ಣಾನಂದವು.

---

* ಹೆಂಡತಿಯು ಗಂಡನನ್ನು ಪ್ರೀತಿಸುವದು ತನಗಾಗಿ ಎಂಬುದು ಲೋಕಸಿದ್ಧವಾಗಿದೆಯಾದರೂ ಆ ತಾನು ಎಂಬುದರ ನಿಜವಾದ ತಿರುಳೇ ಪರಮಾತ್ಮನು; ಆದ್ದರಿಂದ ಪರಮಾತ್ಮನೇ ಎಲ್ಲಾ ಪ್ರೇಮಕ್ಕೂ ಆಸ್ಪದನಾಗಿರುವ ಆನಂದಸ್ವರೂಪನಾಗಿರುತ್ತಾನೆ– ಎಂದು ಸಿದ್ಧವಾಗುತ್ತದೆ ಎಂದು ಭಾವ.

✝ ಬ್ರಾಹ್ಮಣಜಾತಿಯನ್ನು, ಇದರಂತೆ ಕ್ಷತ್ರಿಯ– ಎಂಬ ಮಾತನ್ನೂ ಅರ್ಥಮಾಡಿಕೊಳ್ಳಬೇಕು.

ಈ ಹೆಗ್ಗುರಿಯನ್ನು ಮುಟ್ಟುವದು ಹೇಗೆ? ಆ ಸ್ಥಿತಿಯನ್ನು ಯಾವ ಕ್ರಮದಿಂದ ಪಡೆದುಕೊಳ್ಳಬಹುದೆಂಬುದನ್ನು ಯಾಜ್ಞವಲ್ಕ್ಯನು ತಿಳಿಸುವದಕ್ಕೆ ಮುಂದುವರಿಯುತ್ತಿದಾನೆ. ಈ ವಿಶ್ವವೆಂಬುದು ಅನಂತವಾಗಿರುತ್ತದೆ. ಇದರಲ್ಲಿರುವ ಪ್ರತಿಯೊಂದು ವಿಶೇಷವಸ್ತುವನ್ನೂ ತೆಗೆದುಕೊಂಡು ಆತ್ಮನೆಂದು ಭಾವಿಸುವದು ಆತ್ಮನನ್ನು ಅರಿತುಕೊಳ್ಳದೆ ಹೇಗಾದೀತು? "ಒಂದು ನಗಾರಿಯನ್ನು ಸ್ವಲ್ಪದೂರದಲ್ಲಿ ಹೊಡೆಯುತ್ತಿರುವಾಗ ಅದರ ಶಬ್ದಗಳನ್ನು ನಾವು ಹಿಡಿಯಲಾರದೆ ಇರುವೆವು, ನಾವು ಶಬ್ದದ ತರಂಗಗಳನ್ನು ಹಿಡಿದು ನಿಲ್ಲಿಸಲಾರದೆ ಇರುವೆವು. ಆದರೆ ನಾವು ನಗಾರಿಯ ಬಳಿಗೆ ಬಂದು ಅದರಮೇಲೆ ಕೈಯಿಟ್ಟರೆ* ಶಬ್ದವನ್ನು ಹಿಡಿದಂತಾಗುವದು. ಒಂದು ಶಂಖವನ್ನು ಊದುತ್ತಿರುವಾಗ ಅದರ ಹತ್ತಿರಕ್ಕೆ ಒಂದು ಶಂಖವನ್ನು ಹಿಡಿದುಕೊಂಡಲ್ಲದೆ ನಾವು ಶಬ್ದವನ್ನು ಸ್ವಾಧೀನಪಡಿಸಿಕೊಳ್ಳುವದಕ್ಕಾಗುವದಿಲ್ಲ, ಆಗಲೇ ಅದು ನಮಗೆ ವಶವಾಗುತ್ತದೆ. ವೀಣೆಯನ್ನು ಬಾರಿಸುತ್ತಿರುವಾಗ ನಾವು ವೀಣೆಯಬಳಿಗೆ ಬಂದೊಡನೆ ಶಬ್ದವು ಹೊರ ಹೊರಡುತ್ತಿರುವ ಶಬ್ದಕೇಂದ್ರವನ್ನು ವಶದಲ್ಲಿಟ್ಟುಕೊಳ್ಳಬಹುದು. ಯಾರಾದರೂ ಹಸಿಯ ಸೌದೆಯನ್ನು ಉರಿಸುತ್ತಿರುವಾಗ ಬಗೆಬಗೆಯ ಹೊಗೆಗಳೂ (ಕಿಡಿಗಳೂ)✞ ಹೊರಟುಬರುವಂತೆ ಈ ಮಹಾಭೂತ (ನಾದ ಆತ್ಮನಿಂದ) ವೇದವು ☞ ಉಸಿರಾಗಿ ಹೊರಟುಬಂದಿರುತ್ತದೆ. ಪ್ರತಿಯೊಂದೂ ಅವನಿಂದ ಎಲ್ಲವೂ ಬಂದಿರುತ್ತದೆ. ನೀರಿಗೆಲ್ಲ ಸಮುದ್ರವೊಂದೇ ಮೂಲವಾಗಿರುವಂತೆಯೂ ಸ್ಪರ್ಶಗಳಿಗೆಲ್ಲ ತ್ವಗಿಂದ್ರಿಯವೇ ಮೂಲವಾಗಿರುವಂತೆಯೂ ಎಲ್ಲಾ ಬಗೆಯ ವಾಸನೆಗಳಿಗೂ ಘ್ರಾಣೇಂದ್ರಿಯವೇ ಮೂಲವಾಗಿರುವಂತೆಯೂ ಎಲ್ಲಾ ಸವಿಗಳಿಗೂ ರಸನೇಂದ್ರಿಯವೊಂದೇ ಮೂಲಸ್ಥಾನವಾಗಿರುವಂತೆಯೂ ಎಲ್ಲಾ ರೂಪಗಳಿಗೂ ಚಕ್ಷುರಿಂದ್ರಿಯವೊಂದೇ ಮೂಲವಾಗಿರುವಂತೆಯೂ ಶಬ್ದಗಳಿಗೆಲ್ಲ ಶ್ರೋತ್ರೇಂದ್ರಿಯವೊಂದೇ ಮೂಲವಾಗಿರುವಂತೆಯೂ ಸಂಕಲ್ಪಗಳಿಗೆಲ್ಲವೂ ಮನಸ್ಸೊಂದೇ ಮೂಲವಾಗಿರುವಂತೆಯೂ

---

* ಇಲ್ಲಿ ಕೊಟ್ಟಿರುವ ಪರಿವರ್ತನೆಯು ಸ್ವಾಮಿಗಳ ಅಭಿಪ್ರಾಯಕ್ಕೆ ತಕ್ಕಂತೆ ಇದೆ. ಶಬ್ದವು ಎಲ್ಲಿಂದ ಹೊರಡುವದೋ ಆ ಕೇಂದ್ರದಲ್ಲಿ ಶಬ್ದಗ್ರಹಣವಾಗುವಂತೆ ದೂರದಲ್ಲಿ ಆಗಲಾರದು; ಇದರಂತೆ ಎಲ್ಲಕ್ಕೂ ಕೇಂದ್ರವಾಗಿರುವ ಆತ್ಮಸ್ವರೂಪವನ್ನು ಅರಿತುಕೊಂಡರೆ ಇಡಿಯ ವಿಶ್ವವನ್ನೇ ಗ್ರಹಿಸಿದಂತಾಯಿತು– ಎಂಬುದು ಅವರ ಅಭಿಪ್ರಾಯವೆಂದು ತೋರುತ್ತದೆ. ಆದರೆ ಭಾಷ್ಯಕಾರರು ಈ ಶ್ರುತಿಗೆ ಮಾಡಿರುವ ಅರ್ಥವು ಬೇರೆ. ನಗಾರಿಯ ಶಬ್ದಗಳನ್ನು ನಗಾರಿಯ ಶಬ್ದವೆಂಬ ಸಾಮಾನ್ಯ ರೀತಿಯಿಂದ ಅರಿತುಕೊಳ್ಳುವದಕ್ಕಾಗುವದೇ ಹೊರತು ಸಾಮಾನ್ಯವನ್ನು ಬಿಟ್ಟು ಬರಿಯ ವಿಶೇಷರೂಪಗಳನ್ನೇ ಗ್ರಹಿಸುವದಕ್ಕೆ ಆಗುವದಿಲ್ಲ. ಇದರಂತೆ ಆತ್ಮ ಚೈತನ್ಯವಿಲ್ಲದೆ ಯಾವದೊಂದನ್ನೂ ಗ್ರಹಿಸುವದಕ್ಕಾಗುವದಿಲ್ಲವಾದ್ದರಿಂದ ಎಲ್ಲವೂ ಆತ್ಮನೇ, ಆತ್ಮನಿಗಿಂತ ಬೇರೆಯಿಲ್ಲ– ಎಂದು ನಿಶ್ಚಯಿಸಬೇಕು– ಎಂಬುದು ಭಾಷ್ಯದಂತೆ ಮಂತ್ರವಾಕ್ಯಾರ್ಥವು. ಎರಡು ವ್ಯಾಖ್ಯಾನಗಳಲ್ಲಿಯೂ ಆತ್ಮನನ್ನು ಅರಿತುಕೊಂಡರೇ ಮಿಕ್ಕದ್ದನ್ನು ಅರಿತುಕೊಂಡಂತಾಗುವದೆಂಬುದು ಒಟ್ಟರ್ಥವು.

✞ ಈ ಮಾತು ಹೆಚ್ಚಾಗಿ ಸೇರಿಕೊಂಡಿದೆ.

☞ ಇಲ್ಲಿರುವ ಋಗ್ವೇದಾದಿವಾಕ್ಯಪ್ರಪಂಚದ ವಿವರವನ್ನು ಸ್ವಾಮಿಗಳು ಬಿಟ್ಟುಬಿಟ್ಟಿರುತ್ತಾರೆ.

ವಿದ್ಯೆಗಳಿಗೆಲ್ಲ ಹೃದಯವೊಂದೇ ಮೂಲವಾಗಿರುವಂತೆಯೂ ಕರ್ಮಗಳಿಗೆಲ್ಲವೂ ಹಸ್ತವೇ ಮೂಲವಾಗಿರುವಂತೆಯೂ...........* ಸಮಸ್ತಭಾಷೆಗೂ ವಾಗಿಂದ್ರಿಯುವೇ ಮೂಲವಾಗಿರುವಂತೆಯೂ (ಆತ್ಮನು ಎಲ್ಲಕ್ಕೂ ಮೂಲವಾಗಿರುತ್ತಾನೆ.) ಒಂದು ಉಪ್ಪಿನ ಹರಳೊಂದನ್ನು ಸಮುದ್ರದ ನೀರಿನಲ್ಲಿ ಹಾಕಿದರೆ ಅದರಲ್ಲಿಯೇ ಕರಗಿ ಕೈಗೆ ಸಿಕ್ಕದೆ ಇರುವದಾದರೂ ಎಲ್ಲೆಲ್ಲಿಯೂ ನೀರಿನಲ್ಲಿದ್ದುಕೊಂಡೇ ಇರುವಂತೆ, ಎಲೆ ಮೈತ್ರೇಯಿ, ಈ ಆತ್ಮನು ಈ ಜಗತ್ತೆಲ್ಲವನ್ನೂ ವ್ಯಾಪಿಸಿದ್ದರೂ ಕಣ್ಣಿಗೆ ಗೋಚರವಾಗದೆ ಇರುತ್ತಾನೆ. ಆತನು ಎಲ್ಲವೂ ಆಗಿರುತ್ತಾನೆ, ಅವನು ವಿಜ್ಞಾನಘನನು, ಇಡಿಯ ವಿಶ್ವವೇ ಆತನಿಂದ ಹುಟ್ಟಿ ಆತನಲ್ಲಿಯೇ ಸೇರುವದು. ಆತನನ್ನು ಸೇರಿದರೆ ನಾವು ಎಲ್ಲಾ ಅರಿವನ್ನೂ ದಾಟಿದಂತೆ ಆಗುವದು." (ಬೃ. 2–4–7, 8, 9, 10, 11, 12,).✝ ನಾವು ಕಿಡಿಗಳಂತೆ ಆತನಿಂದ ಬಂದಿರುವೆವೆಂದೂ ಆತನನ್ನು ಅರಿಯುತ್ತಲೂ ಆತನಲ್ಲಿಯೇ ಐಕ್ಯವನ್ನು ಪಡೆಯುವೆವೆಂದೂ ಹೇಳುವ ಭಾವವಿಲ್ಲಿದೆ.

ಇದನ್ನು ಕೇಳಿ ಮೈತ್ರೇಯಿಗೆ ಅಂಜಿಕೆಯಾಯಿತು, ಇದನ್ನು ಕೇಳಿದರೆ ಎಲ್ಲೆಲ್ಲಿಯೂ ಜನರಿಗೆ ಅಂಜಿಕೆಯಾಗುತ್ತಿರುವದು. ಆಕೆಯು "ಪೂಜ್ಯರೇ, ಇಲ್ಲಿಯೇ ನನ್ನನ್ನು ತಾವು ಮೋಹಗೊಳಿಸುತ್ತಿರುವದು. ಇನ್ನು ಮೇಲೆ ಜ್ಞಾನವೇ ಇರುವದಿಲ್ಲವೆಂದು ನೀವು ಹೇಳಿದ್ದನ್ನು ಕೇಳಿ ನನಗೆ ಅಂಜಿಕೆಯಾಗಿರುತ್ತದೆ. ವ್ಯಕ್ತಿತ್ವವೆಲ್ಲ ಹೋಗಿಬಿಡುತ್ತದೆಯೆಂದಿರಲ್ಲ! ಆ ಸ್ಥಿತಿಯನ್ನು ಪಡೆದಾಗ ಆತ್ಮನನ್ನು ನಾನು ಅರಿಯುವದಕ್ಕಾಗುತ್ತದೆಯೆ? ಆಗ ಜ್ಞಾನವಿಲ್ಲದ ಸ್ಥಿತಿಯನ್ನು ಪಡೆದು ನನ್ನ ವ್ಯಕ್ತಿತ್ವವನ್ನೇ ಕಳೆದುಕೊಂಡುಬಿಡುವೆನೊ, ಅಥವಾ ಆತನನ್ನು ಅರಿತೆನೆಂಬ ಅರಿವೂ ಆಗ ಉಳಿದುಕೊಂಡಿರುವದೊ? ನೋಡಿ ಅರಿಯುವದಕ್ಕೆ ಆಗ ಯಾರೊಬ್ಬರೂ ಇರುವದಿಲ್ಲವೆ? ಅನುಭವಿಸುವದಕ್ಕಾಗಲಿ, ಪ್ರೀತಿಸುವದಕ್ಕಾಗಲಿ, ಹಗೆಮಾಡುವದಕ್ಕಾಗಲಿ ಯಾರೊಬ್ಬರೂ ಆಗ ಇರುವದೇ ಇಲ್ಲವೇನು? ಆಗ ನನ್ನ ಸ್ಥಿತಿ ಏನಾಗಿರುವದು?" ಎಂದು ಕೇಳಿದಳು. ಆಕೆಯ ಪತಿಯು "ಎಲೆ ಮೈತ್ರೇಯಿ, ನಾನು ಒಂದಾನೊಂದು ಅಜ್ಞಾನಸ್ಥಿತಿಯನ್ನು ಹೇಳುತ್ತಿರುವೆನೆಂದೆಣಿಸದಿರು, ಅಂಜಲೂಬೇಡ. ಈ ಆತ್ಮನು ಅವಿನಾಶಸ್ವಭಾವವುಳ್ಳವನು, ನಾಶವಾಗದವನು (ಬೃ. 4–5–14). ಎಲ್ಲಿ ದ್ವೈತವಿರುವದೋ ಅದು ಕೆಳಗಿನ ಭೂಮಿಕೆಯು. ಅಲ್ಲಿ ಒಬ್ಬನು ಮತ್ತೊಬ್ಬನನ್ನು ಮೂಸುತ್ತಾನೆ, ಒಬ್ಬನು ಮತ್ತೊಬ್ಬನನ್ನು ಕಾಣುತ್ತಾನೆ, ಒಬ್ಬನು ಮತ್ತೊಬ್ಬನನ್ನು ಕೇಳುತ್ತಾನೆ, ಒಬ್ಬನು ಮತ್ತೊಬ್ಬನನ್ನು ಮಾತನಾಡಿಸುತ್ತಾನೆ. ಒಬ್ಬನು ಮತ್ತೊಬ್ಬನನ್ನು

---

* ಇಲ್ಲಿರುವ ಕರ್ಮೇಂದ್ರಿಯಗಳನ್ನು ಸ್ವಾಮಿಗಳು ಬಿಟ್ಟುಬಿಟ್ಟಿರುತ್ತಾರೆ.

✝ ಕೊನೆಯ ಮಂತ್ರದ ಒಟ್ಟಭಿಪ್ರಾಯವುಮಾತ್ರ ಇಲ್ಲಿರುತ್ತದೆ, ಅಕ್ಷರಾರ್ಥವು ಬೇರೆಯಾಗಿರುತ್ತದೆ. "ಎಲೆ, ಈ ಅನಂತವೂ ಅಪಾರವೂ ಆದ ಮಹಾಭೂತವು, ಇದರಂತೆಯೇ ಈ ಭೂತಗಳಿಂದ ಮೇಲಕ್ಕೆದ್ದು ಅವುಗಳನ್ನನುಸರಿಸಿಯೇ ನಾಶವಾಗುವದು, ಅಲ್ಲಿಗೆ ಹೋದ ಮೇಲೆ ಜ್ಞಾನವು ಇರುವದಿಲ್ಲ."

'ದೇವತೆಗಳೇ' ಎಂಬ ಮಾತು ಲೇಖಕರ ಕೈತಪ್ಪಿನಿಂದ ಬಿದ್ದಿರಬೇಕೆಂದು ಮೂಲ ಉಪನಿಷತ್ತಿನಿಂದ ಗೊತ್ತಾಗುತ್ತದೆ.

ಕುರಿತು ಯೋಚಿಸುತ್ತಾನೆ, ಒಬ್ಬನು ಮತ್ತೊಬ್ಬನನ್ನು ಅರಿಯುತ್ತಾನೆ. ಆದರೆ ಯಾವಾಗ ಎಲ್ಲವೂ ಆತ್ಮನೇ ಆಗಿಬಿಡುವದೋ, ಯಾರಿಂದ * ಯಾರು ಮೂಸಲ್ಪಡಬೇಕು, ಯಾರಿಂದ ಯಾರು ಕೇಳಲ್ಪಡಬೇಕು, ಯಾರಿಂದ ಯಾರು ಮಾತನಾಡಿಸಲ್ಪಡಬೇಕು, ಯಾರಿಂದ ಯಾರು ಯೋಚಿಸಲ್ಪಡಬೇಕು, ಯಾರಿಂದ ಯಾರು ಅರಿಯಲ್ಪಡಬೇಕು? ಯಾವನಿಂದ ✞ ಎಲ್ಲವೂ ಅರಿಯಲ್ಪಡುವದೋ ಆತನನ್ನು ಯಾರು ಅರಿತಾರು? ಈ ಆತ್ಮನನ್ನು 'ನೇತಿ ನೇತಿ' (ಇದಲ್ಲ, ಇದಲ್ಲ) ಆತನು ಅಗ್ರಾಹ್ಯನು, ಏಕೆಂದರೆ ಆತನನ್ನು ಬುದ್ಧಿಯಿಂದ ಗ್ರಹಿಸುವದಕ್ಕೆ ಆಗುವದಿಲ್ಲ; ಅವಿಕಾರಿಯು, ಏಕೆಂದರೆ ಆತನು ಎಂದಿಗೂ ಸಡಿಲವಾಗುವದಿಲ್ಲ; ಅಸಂಗನು, ಏಕೆಂದರೆ ಆತನು ಎಂದಿಗೂ ಪ್ರಕೃತಿಯೊಡನೆ ಬೆರೆಯುವದಿಲ್ಲ; ಪರಿಪೂರ್ಣನು, ಏಕೆಂದರೆ ಆತನು ಸುಖದುಃಖಗಳನ್ನೆಲ್ಲಾ ಮೀರಿರುತ್ತಾನೆ. ಅರಿಯುವಾತನನ್ನು ಯಾರು ಅರಿತಾರು? ಆತನನ್ನು ಯಾವ ಸಾಧನದಿಂದ ಅರಿತೇವು? ಏತರಿಂದಲೂ ಅರಿಯಲಾರೆವು: ಮೈತ್ರೇಯಿ, ಇದೇ ಋಷಿಗಳ ಅನುಶಾಸನವು. ಜ್ಞಾನವನ್ನೆಲ್ಲ ಮೀರುವದೇ ಆತನನ್ನು ಪಡೆಯುವದು, ಅಮೃತತ್ವವನ್ನು ಪಡೆಯುವದು."☙

ಇಲ್ಲಿಯವರೆಗೆ ಏನು ಹೇಳಿದಂತಾಯಿತೆಂದರೆ, ಇದೆಲ್ಲವೂ ಒಂದೇ ಒಂದು ಅನಂತಸತ್ತೆಯು, ಅದರಲ್ಲಿಯೇ ನಿಜವಾದ ವ್ಯಕ್ತಿತ್ವವಿರುವದು. ಅಲ್ಲಿ ಇನ್ನು ವಿಭಾಗಮಾಡುವದಕ್ಕೆ ಆಗುವಹಾಗಿಲ್ಲ, ಇನ್ನು ಮತ್ತೆ ಅವಯವಾವಯ ವಿಭಾಗವನ್ನು ಮಾಡುವದಕ್ಕೆ ಬರುವಂತಿಲ್ಲ, ಇನ್ನು ಇಂಥ ಕೀಳುತರದ ಮಾಯಿಕವಾದ ಭಾವನೆಗಳೂ ಇರುವದಿಲ್ಲ. ಹೀಗಿದ್ದರೂ ಈ ಪರಿಚ್ಛಿನ್ನವಾದ ವ್ಯಕ್ತಿತ್ವದಲ್ಲಿಯೇ ಇದರಮೂಲಕವೇ ಆ ಅನಂತವಾದ ಪರಮಾರ್ಥವಾದ ವ್ಯಕ್ತಿತ್ವವೆಂಬುದು ಬೆಳಗುತ್ತಿರುವದು. ಅದನ್ನು ಪಡೆದುಕೊಳ್ಳುವದು ಹೇಗೆ? ಯಾಜ್ಞವಲ್ಕ್ಯನು ಮೊಟ್ಟಮೊದಲೇ ಹೇಳಿರುವಂತೆ 'ಈ ಆತ್ಮನನ್ನು ಶ್ರವಣಮಾಡಬೇಕು. ಆಮೇಲೆ ಮನನಮಾಡಬೇಕು. ಆಮೇಲೆ ನಿದಿಧ್ಯಾಸನಮಾಡಬೇಕು.' ಇಲ್ಲಿಯವರೆಗೆ ಆತ್ಮನು ಈ ಪ್ರಪಂಚದಲ್ಲಿರುವ ಪ್ರತಿಯೊಂದರ ತಿರುಳೂ ಆಗಿರುವನೆಂದು ಅವನು ತಿಳಿಸಿಕೊಟ್ಟಿರುತ್ತಾನೆ. ಆಮೇಲೆ ಆ ಆತ್ಮನು ಅನಂತಸ್ವಭಾವವನ್ನೂ ಮಾನವನ ಮನಸ್ಸಿನ ಪರಿಚ್ಛಿನ್ನ ಸ್ವಭಾವವನ್ನೂ ಲೆಕ್ಕಕ್ಕೆ ತಂದು ಮನನಮಾಡಿದಮೇಲೆ ಆತನು ಮಾಡಿರುವ ತೀರ್ಪೇನೆಂದರೆ ಪರಿಚ್ಛಿನ್ನವಾದ ಮನಸ್ಸು ಎಲ್ಲವನ್ನೂ ಅರಿಯುವಾತನಾಗಿರುವ ಆತ್ಮನನ್ನು ಅರಿಯುವದೆಂಬುದು ಅಸಾಧ್ಯವು.

---

* 'ಏತರಿಂದ' ಎಂಬುದು ಮೂಲಕ್ಕೆ ಅಕ್ಷರಾರ್ಥವು.

✞ 'ಯಾವನಿಂದ (ಅಂದರೆ ಯಾವ ಚೈತನ್ಯದ ಬಲದಿಂದ) ಇದೆಲ್ಲವನ್ನೂ ಅರಿಯುತ್ತಾರೋ ಎಂಬುದು ಮೂಲಕ್ಕೆ ಅಕ್ಷರಾರ್ಥವು. ಈ ಪ್ರಘಟಟ್ಟದಲ್ಲಿ ಮೈತ್ರೇಯೀಬ್ರಾಹ್ಮಣದ ಎರಡು ಭಾಗಗಳನ್ನೂ ಸ್ವಾಮಿಗಳು ಸೇರಿಸಿಕೊಂಡಿರುತ್ತಾರೆ; ಒಟ್ಟಿನಲ್ಲಿ 4–5 ಕ್ಕೇ ಇದು ಹೆಚ್ಚು ಹೊಂದುವಂತಿದೆ.

☙ ಇದು ಮೂಲದ ಸರಳಾರ್ಥವು, ಅಕ್ಷರಾರ್ಥವಲ್ಲ. ಆಲ್ಮೊರ ಸಂಸ್ಕರಣದಲ್ಲಿ ಇಲ್ಲಿ ಕೆಲವು ವಾಕ್ಯಗಳು ಹೆಚ್ಚಾಗಿರುವಂತೆ ತೋರುತ್ತದೆ; ಅವುಗಳನ್ನು ಇಲ್ಲಿ ಕನ್ನಡಿಸಿಲ್ಲ.

ಹೀಗೆ ಆತ್ಮನನ್ನು ಅರಿಯುವದೇ ಆಗುವದಿಲ್ಲವೆಂದಮೇಲೆ ಏನುಮಾಡಬೇಕು?–ಎಂದು ಕೇಳಬಹುದು. ಇದಕ್ಕೆ ಯಾಜ್ಞವಲ್ಕ್ಯನು ಮೈತ್ರೇಯಿಗೆ ಹೇಳಿರುವದೇನೆಂದರೆ, ಅದನ್ನು ವಿಷಯವಾಗಿ ಅರಿಯುವದಕ್ಕೆ ಆಗಲಾರದಾದರೂ ಅದನ್ನು ಸಾಕ್ಷಾತ್ಕರಿಸಿಕೊಳ್ಳುವದಕ್ಕೆ ಆಗುತ್ತದೆ. ಆದ್ದರಿಂದ ಅದನ್ನು ಹೇಗೆ ನಿದಿಧ್ಯಾಸನಮಾಡಬೇಕೆಂಬುದನ್ನು * ತಿಳಿಸುವದಕ್ಕೆ ಅವನು ಒಂದು ನಿರೂಪಣೆಯನ್ನು ಮಾಡಿರುತ್ತಾನೆ. "ಈ ಲೋಕವು ಸಕಲ ಪ್ರಾಣಿಗಳಿಗೂ ಸಹಾಯಕ (ಮಧು) ವಾಗಿರುತ್ತದೆ. ಪ್ರತಿಯೊಂದು ಪ್ರಾಣಿಯೂ ಇದಕ್ಕೆ ಸಹಾಯಕವಾಗಿರುತ್ತದೆ," ಏಕೆಂದರೆ ಇವೆರಡೂ ಒಂದಕ್ಕೊಂದು ಸೇರಿಕೊಂಡೇ ಇರುತ್ತದೆ. ಒಂದು ಬೆಳೆದುಕೊಂಡರೆ ಮತ್ತೊಂದು ಬೆಳೆಯುವದಕ್ಕೂ ಸಹಾಯುವಾಗುತ್ತದೆ. ಆದರೆ ಸ್ವಯಂಪ್ರಕಾಶನಾದ ಆತ್ಮನಿಗೆ ಯಾವದೊಂದೂ ಸಹಾಯಕವಾಗಲಾರದು, ಏಕೆಂದರೆ ಆತ್ಮನು ಪರಿಪೂರ್ಣನೂ ಅನಂತನೂ ಆಗಿರುತ್ತಾನೆ. ಒಳ್ಳೆಯದೆಂಬುದೆಲ್ಲವೂ ಆತ್ಮನ ಪ್ರತಿಬಿಂಬವು. ಆ ಪ್ರತಿಬಿಂಬವು ಸ್ವಲ್ಪ ಕಡಿಮೆಯಾಗಿ ತೋರಿಕೊಂಡಾಗ ಅದೇ ತಮಸ್ಸು– ಕೆಟ್ಟದ್ದು ಎನಿಸುತ್ತದೆ. ಅದು ಹೆಚ್ಚಾಗಿ ತೋರಿಕೊಂಡಾಗ ಅದೇ ಪ್ರಕಾಶ– ಒಳ್ಳೆಯದು ಎನಿಸುತ್ತದೆ. ಅಷ್ಟೆ. ಹೀಗೆ ಒಳ್ಳೆಯದು, ಕೆಟ್ಟದ್ದು– ಎರಡೂ ಎರಡು ಹಂತಗಳುಮಾತ್ರವಾಗಿವೆ. ಆತ್ಮನು ಹೆಚ್ಚಾಗಿ ಅಥವಾ ಕಡಿಮೆಯಾಗಿ ತೋರಿಕೊಳ್ಳುವ ಅಭಿವ್ಯಕ್ತಿಗಳು ಮಾತ್ರವಾಗಿವೆ. ನಮ್ಮ ಜೀವಮಾನವನ್ನೇ ಉದಾಹರಣೆಗೆ ತೆಗೆದುಕೊಳ್ಳೋಣ. ನಮ್ಮ ಬಾಲ್ಯದಲ್ಲಿ ನಾವು ಕಾಣುವ ಎಷ್ಟೊಂದು ವಿಷಯಗಳನ್ನು ಅವು ನಿಜವಾಗಿ ಕೆಟ್ಟದಾಗಿದ್ದರೂ ನಾವು ಒಳ್ಳೆಯದೆಂದು ಭಾವಿಸಿರುತ್ತೇವೆ! ಮತ್ತು ಎಷ್ಟೊಂದು ಒಳ್ಳೆಯ ವಿಷಯಗಳೇ ಆಗ ನಮಗೆ ಕೆಟ್ಟವಾಗಿ ತೋರುತ್ತಿರುತ್ತವೆ? ಆ ಭಾವನೆಗಳು ಹೇಗೆ ಮಾರ್ಪಡುತ್ತಾಹೋಗುತ್ತವೆ, ನೋಡಿ? ಒಂದೇ ಭಾವನೆಯು ಮೇಲು ಮೇಲಕ್ಕೆ ಏರುತ್ತಾಬರುವದಲ್ಲ! ಒಂದಾನೊಂದು ಕಾಲದಲ್ಲಿ ನಾವು ಬಲು ಒಳ್ಳೆಯದೆಂದು ಭಾವಿಸಿದ್ದದ್ದೇ ಈಗ ಹಾಗೆಂದು ತೋರುವದಿಲ್ಲವಲ್ಲ! ಈ ರೀತಿಯಲ್ಲಿ ಒಳ್ಳೆಯದು, ಕೆಟ್ಟದ್ದು– ಎರಡೂ ನಮ್ಮ ನಮ್ಮ ಮನಸ್ಸಿನ ಸ್ಥಿತಿಯನ್ನವಲಂಬಿಸಿರುವವೇ ಹೊರತು ಹೊರಗೆ ತಾವೇ ಸ್ವತಂತ್ರವಾಗಿದ್ದುಕೊಂಡಿರುವದಿಲ್ಲ. ಎಲ್ಲವೂ ಆ ಆತ್ಮನ ವಿಭೂತಿಯೇ. ಆತ್ಮನು ಎಲ್ಲದರಲ್ಲಿಯೂ ತೋರಿಕೊಳ್ಳುತ್ತಲಿದಾನೆ; ಆ ತೋರಿಕೆಯು ಬಹು ಸ್ವಲ್ಪವಾದರೆ ಅದನ್ನು ಕೆಟ್ಟದ್ದೆಂದೂ ಅದು ಮತ್ತಷ್ಟು ಸ್ಪಷ್ಟವಾಗಿ ತೋರಿಕೊಂಡರೆ ಅದನ್ನು ಒಳ್ಳೆಯದೆಂದೂ ನಾವು ಕರೆಯುತ್ತೇವೆ. ಅಷ್ಟೆ. ಆತ್ಮನು ಮಾತ್ರ ಒಳ್ಳೆಯದು, ಕೆಟ್ಟದ್ದು– ಎರಡನ್ನೂ ಮೀರಿರುತ್ತಾನೆ.

ಆದ್ದರಿಂದ ಈ ಪ್ರಪಂಚದಲ್ಲಿರುವದೆಲ್ಲವೂ ಒಳ್ಳೆಯದೆಂದೇ ನಾವು ಧ್ಯಾನ ಮಾಡಬೇಕು, ಏಕೆಂದರೆ ಅದೆಲ್ಲವೂ ಆ ಪರಿಪೂರ್ಣನ ವಿಭೂತಿಯೇ ಆಗಿರುತ್ತದೆ. ಆತನು ಒಳ್ಳೆಯವನೂ ಅಲ್ಲ, ಕೆಟ್ಟವನೂ ಅಲ್ಲ, ಆತನು ಪರಿಪೂರ್ಣನಾಗಿರುತ್ತಾನೆ. ಪರಿಪೂರ್ಣವಾದದ್ದು ಒಂದೇ

* ಈ ಮಧುಪ್ರಕರಣವು ನಿದಿಧ್ಯಾಸನವನ್ನು ವಿಧಿಸುವದಕ್ಕೆ ಬಂದಿದೆಯೆಂಬುದನ್ನು ವೃತ್ತಿಕಾರರು ಹೇಳಿದ್ದರು; ಆಚಾರ್ಯರು ಅದನ್ನು ಒಪ್ಪದಿದ್ದರೂ ಹಿಂದೆ ಹೇಳಿದರ್ಥವನ್ನು ಇಲ್ಲಿ ಉಪಸಂಹಾರಮಾಡಿದೆಯೆಂಬರ್ಥವು ಎಲ್ಲರಿಗೂ ಒಪ್ಪಾಗಿರುತ್ತದೆ.

ಆಗಿರಬಹುದೇ ಹೊರತು ಹೆಚ್ಚಾಗಲಾರದು. ಒಳ್ಳೆಯದು ಅನೇಕವಾಗಿರಬಹುದು, ಕೆಟ್ಟದ್ದೂ ಬಹಳವಾಗಿರಬಹುದು; ಒಳ್ಳೆಯದಕ್ಕೂ ಕೆಟ್ಟದ್ದಕ್ಕೂ ನಡುವೆ ಬೇರೆಬೇರೆಯ ಮೆಟ್ಟಿಲುಗಳಿರುತ್ತವೆ. ಆದರೆ ಪರಿಪೂರ್ಣವೆಂದರೆ ಒಂದೇ ಒಂದು, ಆ ಪರಿಪೂರ್ಣವಾದ ಒಂದನ್ನೇ ಕೆಲಕೆಲವು ಬಗೆಯ ಆವರಣಗಳ ಮೂಲಕ ನೋಡಿದಾಗ ಬೇರೆಬೇರೆಯ ತೆರದ ಒಳ್ಳೆಯದೆನಿಸುವದು, ಮತ್ತೆ ಕೆಲವು ಬಗೆಯ ಆವರಣಗಳಮೂಲಕ ನೋಡಿದಾಗ ಅವನ್ನೇ ನಾವು ಕೆಟ್ಟವೆಂದು ಕರೆಯುವೆವು. ಒಳ್ಳೆಯದು ಕೆಟ್ಟದ್ದು– ಇವೆರಡೂ ಬೇರೆ ಬೇರೆಯ ಪದಾರ್ಥಗಳೆಂದು ನಾವು ಭಾವಿಸಿರುವದು ಕೇವಲ ಮೂಢವಿಶ್ವಾಸವೇ. ನಿಜವಾಗಿ ನೋಡಿದರೆ ಒಳ್ಳೆಯದರಲ್ಲಿಯೇ ಹೆಚ್ಚು ಕಡಿಮೆಯಿರುತ್ತದೆ. ಕಡಿಮೆಯಾಗಿ ಒಳ್ಳೆಯದಾದ್ದನ್ನೇ ನಾವು ಕೆಟ್ಟದ್ದೆಂದು ಭಾವಿಸುತ್ತೇವೆ. ಈ ಒಳ್ಳೆಯದು ಕೆಟ್ಟದ್ದು– ಎಂಬ ವಿಷಯಕ್ಕೆ ಆಗಿರುವ ತಪ್ಪು ಅಭಿಪ್ರಾಯಗಳಿಂದಲೇ ಬಗೆಬಗೆಯ ದ್ವೈತಭ್ರಾಂತಿಗಳುಂಟಾಗಿರುತ್ತವೆ. ಇವು ಮಾನವಪ್ರಾಣಿಗಳ ಹೃದಯದೊಳಗೆ ಆಳವಾಗಿ ಹೊಕ್ಕು ಬಹುಕಾಲದಿಂದಲೂ ಪುರುಷರನ್ನೂ ಸ್ತ್ರೀಯರನ್ನೂ ಅಂಜಿಸುತ್ತಾ ಬಂದಿರುತ್ತವೆ. ಬಾಲ್ಯದಿಂದಲೂ ನಮಗೆ ಬಂದಿರುವ ಈ ಮೂಢಭಾವನೆಗಳಿಂದಲೇ ನಾವು ಮತ್ತೊಬ್ಬರನ್ನು ಹಗೆಮಾಡುವದಕ್ಕೆ ಬೇಕಾದ ದ್ವೇಷಭಾವನೆಯೆಲ್ಲ ಉಂಟಾಗಿರುತ್ತದೆ. ಮಾನವವರ್ಗದ ವಿಷಯವಾಗಿ ನಮಗೆ ಉಂಟಾಗಿರುವ ಭಾವನೆಯು ಸಂಪೂರ್ಣವಾಗಿ ತಪ್ಪಾಗಿರುತ್ತದೆ, ಈ ಸುಂದರವಾದ ಭೂಮಿಯನ್ನು ನಾವು ನರಕವಾಗಿ ಮಾಡಿಕೊಂಡುಬಿಟ್ಟಿರುತ್ತೇವೆ. ಆದರೆ ಈ ಒಳ್ಳೆಯದು ಕೆಟ್ಟದ್ದು– ಎಂಬ ಮಿಥ್ಯಾಭೇದಬುದ್ಧಿಯನ್ನು ನಾವು ಬಿಟ್ಟುಬಿಟ್ಟಕೂಡಲೆ ಇದೇ ಸ್ವರ್ಗವಾಗುವದು.

ಈ ಪೃಥ್ವಿಯು ಎಲ್ಲಾಪ್ರಾಣಿಗಳಿಗೂ ಆನಂದಕಾರಕವಾಗಿರುವದು (ಮಧು– ಸಿಹಿಯಾಗಿರುವದೆಂಬುದೇ ಅಕ್ಷರಾರ್ಥವು), ಈ ಭೂಮಿಗೆ ಎಲ್ಲಾ ಭೂತಗಳೂ ಮಧುವಾಗಿರುವವು.* ಈ ಮಧುತ್ವವೆಲ್ಲವೂ ತೇಜೋಮಯನಾದ ಅಮೃತಮಯನಾದ ಆತ್ಮನಿಂದ ಆಗಿರುತ್ತದೆ." ಆ ಒಂದು ಮಧುವೇ ಬಗೆಬಗೆಯಾಗಿ ತೋರಿಕೊಳ್ಳುತ್ತಲಿರುವದು. ಎಲ್ಲಿಯಾದರೂ ಒಂದಿಷ್ಟು ಪ್ರೇಮವಿದ್ದರೂ ಯಾವ ಮಾನವಪ್ರಾಣಿಯಲ್ಲಿ ಅವನು ಮಹಾತ್ಮನಾಗಿರಲಿ ಪಾಪಿಯಾಗಿರಲಿ, ದೇವತೆಯಾಗಿರಲಿ ಖೂನಿಮಾಡಿದವನಾಗಿರಲಿ, ದೇಹದಲ್ಲಿರಲಿ ಮನಸ್ಸಿನಲ್ಲಿರಲಿ ಇಂದ್ರಿಯಗಳಲ್ಲಿರಲಿ– ಅದೆಲ್ಲವೂ ಆತನೇ. ಆ ಒಂದು ತತ್ತ್ವವನ್ನು ಬಿಟ್ಟು ಮತ್ತೆ ಯಾವದಾದರೂ ಹೇಗೆ ಇದ್ದೀತು? ಅತ್ಯಂತ ಕೀಳಾದ ಭೌತಿಕಸುಖವೂ ಆತನೇ, ಅತ್ಯಂತ ಮೇಲ್ತರದ ಆಧ್ಯಾತ್ಮಿಕಸುಖವೂ ಆತನೇ. ಆತನನ್ನು ಬಿಟ್ಟರೆ ಮಾಧುರ್ಯವಿಲ್ಲ. ಹೀಗೆಂದು ಯಾಜ್ಞವಲ್ಕ್ಯನು ಹೇಳುತ್ತಿದಾನೆ.

---

* ಇಲ್ಲಿ ಸ್ವಾಮಿಗಳು ಮಧುವಾಕ್ಯಗಳಿಗೆ ಸ್ವತಂತ್ರವಾಗಿಯೇ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಈ ಪೃಥ್ವಿಯು ಎಲ್ಲಾ ಪ್ರಾಣಿಗಳಿಂದ ಆದ ಕಾರ್ಯವು, ಸರ್ವಭೂತಗಳೂ ಈ ಪೃಥ್ವಿಯ ಕಾರ್ಯವು. ಈ ಪೃಥ್ವಿಯಲ್ಲಿರುವ ತೇಜೋಮಯನಾದ ಅಮೃತಮಯನಾದ ಪುರುಷನೂ ಈ ಶರೀರದೊಳಗಿರುವ ತೇಜೋಮಯ ಅಮೃತಮಯನಾದ ಲಿಂಗಾಭಿಮಾನಿಪುರುಷನೂ, ಸಮಸ್ತಭೂತಗಳಿಗೂ ಉಪಕಾರಕನಾಗಿರುತ್ತಾನೆ; ಅವನಿಗೆ ಸರ್ವಭೂತಗಳೂ ಉಪಕಾರಕವಾಗಿವೆ. ಈ ನಾಲ್ಕೂ ಯಾವ ಒಂದು ಕಾರಣದಿಂದಾಗಿರುವದೋ ಅದೇ ಬ್ರಹ್ಮವು– ಎಂದು ಭಾಷ್ಯಕಾರರ ವ್ಯಾಖ್ಯಾನವು.

ನೀವು ಆ ಸ್ಥಿತಿಗೆ ಬಂದು ಎಲ್ಲಾ ಪದಾರ್ಥಗಳನ್ನೂ ಸಮದೃಷ್ಟಿಯಿಂದ ನೋಡಿದಾಗ ಕುಡುಕನ ಸಂತೋಷವಾದ ಕುಡಿತದಲ್ಲಿಯೂ ಮಹಾತ್ಮನೊಬ್ಬನ ಧ್ಯಾನದಲ್ಲಿಯೂ ಆ ಮಾಧುರ್ಯವನ್ನೇ ಕಂಡುಕೊಳ್ಳುವದಾದರೆ ಆಗ ನೀವು ತತ್ತ್ವವನ್ನು ಕಂಡುಕೊಂಡಂತಾಯಿತು. ಆಗಲೇ ಸುಖವೆಂದರೇನು, ಶಾಂತಿಯೆಂದರೇನು, ಪ್ರೇಮವೆಂದರೇನು– ಎಂಬುದು ನಿಮಗೆ ಗೊತ್ತಾಗುತ್ತದೆ. ಆದರೆ ಎಲ್ಲಿಯವರೆಗೆ ಈ ಒಣಭೇದಗಳನ್ನೂ ಅವಿವೇಕವಾದ ಬಾಲಭಾವದ ಮೂರ್ಖ ಭಾವನೆಗಳನ್ನೂ ಇಟ್ಟುಕೊಂಡಿರುವಿರೋ ಅಲ್ಲಿಯವರೆಗೂ ಎಲ್ಲಾ ವಿಧವಾದ ಸಂಕಟಗಳೂ ಬಂದೊದಗುತ್ತಿರುವವು. ಆ ಅಮೃತಮಯನಾದ, ತೇಜೋಮಯನಾದ ಆತ್ಮನೇ ಈ ಇಡಿಯ ವಿಶ್ವಕ್ಕೆ ಆಧಾರನು, ಇದೆಲ್ಲವೂ ಆತನ ಮಾಧುರ್ಯವೇ. ಈ ಶರೀರವೆಂಬುದೊಂದು ಸಣ್ಣ ಪ್ರಪಂಚದಂತೆ ಇರುವದು; ಈ ಶರೀರದ ಶಕ್ತಿವಿಶೇಷಗಳಲ್ಲೆಲ್ಲ, ಮನಸ್ಸಿನ ಭೋಗಗಳಲ್ಲೆಲ್ಲ ಆ ತೇಜೋಮಯನು ಬೆಳಗುತ್ತಿರುತ್ತಾನೆ. ಈ ಶರೀರದಲ್ಲಿರುವ ತೇಜೋಮಯನಿರುವನಲ್ಲ, ಅವನೇ ಆತ್ಮನು. "ಈ ಪೃಥ್ವಿಯು ಎಲ್ಲಾ ಭೂತಗಳಿಗೂ ಅಷ್ಟು ಮಧುರವಾಗಿರುತ್ತದೆ, ಎಲ್ಲಾ ಭೂತಗಳೂ ಅದಕ್ಕೆ ಅಷ್ಟು ಮಧುರವಾಗಿರುತ್ತವೆ?" ಏಕೆಂದರೆ ಸ್ವಯಂಪ್ರಕಾಶವಾದ ಅಮೃತಮಯವಾದ ಆತ್ಮನೇ ಈ ಲೋಕದಲ್ಲಿರುವ ಆತ್ಮನು; ನಮ್ಮಲ್ಲಿಯೂ ಆತನೇ ಆ ಆನಂದವಾಗಿರುತ್ತಾನೆ. ಆತನೇ ಬ್ರಹ್ಮವು. "ಈ ವಾಯುವು ಸರ್ವಭೂತಗಳಿಗೂ ಅಂಥ ಮಧುರವಾಗಿದೆ, ಎಲ್ಲಾ ಭೂತಗಳೂ ಈ ವಾಯುವಿಗೆ ಅಂಥ ಮಧುರವಾಗಿವೆ."– ಏಕೆಂದರೆ ಆ ತೇಜೋಮಯನಾದ ಅಮೃತಮಯನಾದ ಆತ್ಮನೇ ವಾಯುವಾಗಿರುತ್ತಾನೆ, ಆತನೇ ಈ ಶರೀರದಲ್ಲಿರುತ್ತಾನೆ. ಆತನೇ ಎಲ್ಲಾ ಪ್ರಾಣಿಗಳಲ್ಲಿಯೂ ಪ್ರಾಣವಾಗಿ ತೋರಿಕೊಳ್ಳುತ್ತಲಿರುತ್ತಾನೆ. "ಈ ಸೂರ್ಯನು ಎಲ್ಲಾ ಭೂತಗಳಿಗೂ ಅಷ್ಟು ಮಧುರವಾಗಿರುತ್ತಾನೆ, ಎಲ್ಲಾ ಭೂತಗಳೂ ಈ ಸೂರ್ಯನಿಗೆ ಅಷ್ಟು ಮಧುರವಾಗಿರುತ್ತವೆ." ಏಕೆಂದರೆ ತೇಜೋಮಯನ ಅಮೃತಮಯನೂ ಆದ ಆತನೇ ಸೂರ್ಯನಾಗಿರುತ್ತಾನೆ. ಆತನನ್ನೇ ನಾವು ಸಣ್ಣಸಣ್ಣ ಬೆಳಕುಗಳಾಗಿ ಪ್ರತಿಬಿಂಬಿಸಿರುತ್ತೇವೆ. ಆತನ ಪ್ರತಿಬಿಂಬವಲ್ಲದೆ ಮತ್ತೇನು ಇದ್ದೀತು? ಆತನು ಶರೀರದಲ್ಲಿರುತ್ತಾನೆ, ಆತನ ಪ್ರತಿಬಿಂಬದ ಬಲದಿಂದಲೇ ನಾವು ಬೆಳಕನ್ನು ನೋಡುತ್ತಿರುವದು. "ಈ ಚಂದ್ರನು ಎಲ್ಲಾ ಪ್ರಾಣಿಗಳಿಗೂ ಅಷ್ಟು ಮಧುರವಾಗಿರುತ್ತಾನೆ, ಎಲ್ಲಾ ಪ್ರಾಣಿಗಳೂ ಈ ಚಂದ್ರನಿಗೆ ಅಷ್ಟು ಮಧುರವಾಗಿರುತ್ತವೆ" ಏಕೆಂದರೆ ತೇಜೋಮಯನೂ ಅಮೃತಮಯನೂ ಆಗಿರುವ ಆತನೇ ಚಂದ್ರನ ಆತ್ಮನು. ಆತನೇ ನಮ್ಮಲ್ಲಿ ಮನಸ್ಸಾಗಿ ಕಾಣುತ್ತಿರುವಾತನು.* "ಈ ಮಿಂಚು ಎಲ್ಲಾ ಪ್ರಾಣಿಗಳಿಗೂ ಅಷ್ಟು ಮಧುರವಾಗಿರುವದು, ಎಲ್ಲಾ ಪ್ರಾಣಿಗಳೂ ಈ ಮಿಂಚಿಗೆ ಅಷ್ಟು ಮಧುರವಾಗಿರುತ್ತವೆ" ಏಕೆಂದರೆ ಆ ತೇಜೋಮಯನಾದ ಅಮೃತಮಯನಾದಾತನೇ ಈ ಮಿಂಚಿಗೆ ಆತ್ಮನು, ಆತನೇ ನಮ್ಮಲ್ಲಿರುವಾತನು. ಇದೆಲ್ಲವೂ ಬ್ರಹ್ಮವೇ, ಈ ಬ್ರಹ್ಮವು ಈ ಆತ್ಮನು–ಎಲ್ಲಾ ಭೂತಗಳಿಗೂ ರಾಜನು.

---

* ಮೂಲದಲ್ಲಿರುವ ಇನ್ನೂ ಕೆಲವು ಪರ್ಯಾಯಗಳನ್ನು ಸ್ವಾಮಿಗಳವರು ಬಿಟ್ಟು ಬಿಟ್ಟಿರುತ್ತಾರೆ. ಆಲ್ಮೊರ ಸಂಸ್ಕರಣದಲ್ಲಿ ಅಲ್ಲಲ್ಲಿ ಕಾಣುವ ಹೆಚ್ಚಿಗೆ ವಾಕ್ಯಗಳು ಆ ಪರ್ಯಾಯಗಳನ್ನು ಸೂಚಿಸುತ್ತವೆ.

ಈ ಭಾವನೆಗಳೆಲ್ಲ ಜನರಿಗೆ ತುಂಬ ಉಪಕಾರಕಗಳಾಗಿರುತ್ತವೆ. ಅವನ್ನು ನಿದಿಧ್ಯಾಸನಮಾಡಬೇಕು. ಉದಾಹರಣೆಗೆ ಪೃಥ್ವಿಯನ್ನು ಹೀಗೆಂದು ಧ್ಯಾನಮಾಡಬೇಕು. ನಮ್ಮಲ್ಲಿಯೂ ಪೃಥ್ವಿಯ ಅಂಶವಿರುವದೆಂದೂ ಈ ಎರಡೂ ಒಂದೇ ಎಂದೂ ಪೃಥ್ವಿಯನ್ನು ಚಿಂತಿಸಿಕೊಳ್ಳಬೇಕು. ಶರೀರವನ್ನು ಪೃಥ್ವಿಯೊಡನೆಯೂ ಆತ್ಮನನ್ನು ಆಧಾರಚೈತನ್ಯದೊಡನೆಯೂ ತಾದಾತ್ಮ್ಯವನ್ನು ಹೊಂದಿಸಿ ಧ್ಯಾನಮಾಡಬೇಕು. ಪ್ರಾಣವನ್ನು ವಾಯುವಿನೊಡನೆಯೂ, ಪ್ರಾಣದೊಳಗಿರುವ ಆತ್ಮನನ್ನು ವಾಯುವಿನೊಳಗೆ ಇರುವ ಆತ್ಮನೊಡನೆಯೂ ತಾದಾತ್ಮ್ಯವನ್ನು ಮಾಡಿಕೊಂಡು ಚಿಂತಿಸಬೇಕು.* ಇತ್ಯಾದಿ. ಇವುಗಳೆಲ್ಲವೂ ಒಂದೇ. ಒಬ್ಬ ಆತ್ಮನೇ ಬೇರೆಬೇರೆ ರೂಪಗಳಲ್ಲಿರುತ್ತಾನೆ. ಈ ಏಕತ್ವವನ್ನು ಸಾಕ್ಷಾತ್ಕಾರಮಾಡಿಕೊಳ್ಳುವದೇ ನಿದಿಧ್ಯಾಸನಕ್ಕೆ ಪರಮೋದ್ದೇಶವು. ✝ ಇದನ್ನೇ ಯಾಜ್ಞವಲ್ಕ್ಯನು ಮೈತ್ರೇಯಿಗೆ ತಿಳಿಸಿಕೊಡುವದಕ್ಕೆ ಪ್ರಯತ್ನಿಸಿರುವದು.

---

* ಈ ವಾಕ್ಯದ ಮೂಲವು ಸ್ವಲ್ಪ ಹೆಚ್ಚುಕಡಿಮೆಯಾಗುತ್ತದೆ.

✝ ಈ ನಿದಿಧ್ಯಾಸನವು ಬರಿಯ ಧ್ಯಾನದಲ್ಲಿಯೇ ಕೊನೆಗಾಣಬಾರದು. ನಮ್ಮ ಒಳಗೂ ಹೊರಗೂ ಇರುವ ಸ್ಥೂಲಸೂಕ್ಷ್ಮಭೂತಗಳೂ ಅವುಗಳ ಕಾರ್ಯವಾಗಿ ತೋರುತ್ತಿರುವ ಭೌತಿಕವಸ್ತುಗಳೂ ಪ್ರಾಣಿಶರೀರಗಳೂ ಎಲ್ಲವೂ ಪರಸ್ಪರೋಪಕಾರಕವಾಗಿರುತ್ತವೆ. ಇವುಗಳೆಲ್ಲಕ್ಕೂ ಬೇರೆಯಾಗಿ ಇವುಗಳ ಆಧಾರವಾಗಿ ಇವುಗಳ ಉತ್ಪತ್ತಿಗೆ ಕಾರಣನಾಗಿರುವ ಪರಮಾತ್ಮನೇ ಪರಮಾರ್ಥವು ಎಂಬ ತತ್ತ್ವದ ಸಾಕ್ಷಾತ್ಕಾರಕ್ಕೆ ಈ ಚಿಂತನವು ನೆರವಾಗಬೇಕು– ಎಂಬುದನ್ನು ಮರೆಯಬಾರದು. ಭಾಷ್ಯದಲ್ಲಿ ಇದನ್ನು ಸ್ಪಷ್ಟಗೊಳಿಸಿರುತ್ತದೆ.

# 16

# ಜ್ಞಾನಯೋಗದ ಸರ್ವೋತ್ಕೃಷ್ಟ ಆದರ್ಶ

ಈ ಪಾಠಗಳಲ್ಲಿ ಇದೇ ಕೊನೆಯದಾದ್ದರಿಂದ, ಇಲ್ಲಿಯವರೆಗೆ ನಾನು ಹೇಳುತ್ತಿದ್ದುದರ ಸಂಕ್ಷಿಪ್ತ ಸಾರಾಂಶವನ್ನು ಕೊಡುವದು ಮೇಲೆನಿಸುತ್ತದೆ. ವೇದಗಳಲ್ಲಿ ಮತ್ತು ಉಪನಿಷತ್ತುಗಳಲ್ಲಿ, ಹಿಂದುಗಳಲ್ಲಿ ಅತಿಪ್ರಾಚೀನ–ಎಂದರೆ ಪುರಾತನ ಮಹರ್ಷಿ ಕಪಿಲನಿಗಿಂತಲೂ ಬಹಳ ಹಿಂದಿನ–ಕಾಲದಿಂದಲೂ ಇದ್ದ ಕೆಲವು ಧಾರ್ಮಿಕ ಕಲ್ಪನೆಗಳ ದಾಖಲೆಗಳಿವೆ. ಕಪಿಲನು ಸಾಂಖ್ಯಯೋಗವನ್ನು ತನ್ನದೇ ಆದ ಹೊಸ ವಿಚಾರ ಸರಣಿ ಎಂದೇನೂ ಮುಂದಿಡಲಿಲ್ಲ. ಅವನ ಕಾಲದಲ್ಲೇ ಪ್ರಚಲಿತವಾಗಿದ್ದ ವಿಸ್ತಾರವಾದ ಧಾರ್ಮಿಕ ತತ್ತ್ವ ಸರಣಿಗಳನ್ನು ತನ್ನ ಪ್ರತಿಭೆಯ ಬೆಳಕಿನಲ್ಲಿ ಕಂಡು, ಅವುಗಳಿಂದ ಸುಸಂಗತವೂ ಯುಕ್ತವೂ ಆದ ವ್ಯವಸ್ಥಿತ ಪದ್ಧತಿಯನ್ನು ಆವಿಷ್ಕರಿಸುವದೇ ಅವನ ಧ್ಯೇಯವಾಗಿತ್ತು. ಈ ಕಾಲದಲ್ಲೂ ಹಿಂದುಗಳಲ್ಲಿ ಕಾಣುವ ಎಲ್ಲ ವಿಭಿನ್ನ ಮತ್ತು ಪರಸ್ಪರ ವಿರೋಧವೆನಿಸುವ ದರ್ಶನಗಳೂ ಒಪ್ಪುವ ಮನಶ್ಶಾಸ್ತ್ರಾನುಗುಣವಾದ ಒಂದು ತತ್ತ್ವಪದ್ಧತಿಯನ್ನು ನೀಡುವಲ್ಲಿ ಅವನು ಸಫಲನಾದನು. ಮಾನವನ ಮನಸ್ಸಿನ ಕಾರ್ಯ ವಿಧಾನಗಳ ನೈಪುಣ್ಯದ ವಿಶ್ಲೇಷಣೆಯಲ್ಲಿ ಮತ್ತು ವ್ಯಾಪಕ ನಿರೂಪಣೆಯಲ್ಲಿ ಅವನ ನಂತರದ ಯಾವ ದಾರ್ಶನಿಕನೂ ಇದುವರೆಗೂ ಅವನ್ನು ಮೀರಿಸಲಾಗಿಲ್ಲ. ಅವನ ನಿರ್ಣಯಗಳನ್ನು ಸಾಧ್ಯವಿದ್ದಷ್ಟು ಸ್ವೀಕರಿಸಿ ಅಲ್ಲಿಂದ ಒಂದು ಹೆಜ್ಜೆ ಮುಂದಕ್ಕೆ ತಳ್ಳಿ ಕೊನೆಗೆ ಸಾಂಖ್ಯರ ಕಡೆಯ ಮಾತೆನಿಸಿದ ದ್ವೈತವನ್ನೂ ದಾಟಿ ಅಂತಿಮವಾಗಿ ಏಕತೆಯನ್ನು ಮುಟ್ಟಿದ ಅದ್ವೈತ ದರ್ಶನಕ್ಕೆ ನಿಸ್ಸಂದೇಹವಾಗಿ ಕಪಿಲನದೇ ಭದ್ರ ಅಡಿಪಾಯ.

ಕಪಿಲನಿಗಿಂತ ಮೊದಲಿದ್ದ ಎಲ್ಲ ಧಾರ್ಮಿಕ ಭಾವನೆಗಳಲ್ಲೂ– ಅಂದರೆ, ಅಂಗೀಕೃತ ಧಾರ್ಮಿಕ ಕಲ್ಪನೆಗಳು ಮತ್ತು ಧರ್ಮದ ಹೆಸರನ್ನು ಧರಿಸಲು ಯೋಗ್ಯವಲ್ಲದ ಕೆಲವು ಅತಿ ಹೀನವಾದವುಗಳನ್ನೂ ಅವಲೋಕಿಸಿದಲ್ಲಿ ಮೊಟ್ಟ ಮೊದಲ ಸಮೂಹಗಳೂ ಸಹ ವಿಶಿಷ್ಟ ಸ್ಫುರಣೆ ಮತ್ತು ಯಾವದೋ ದೈವ ಪ್ರೇರಿತ ಗ್ರಂಥ ಮುಂತಾದವುಗಳನ್ನು ಒಳಗೊಂಡಿದ್ದವು. ಅತ್ಯಂತ ಪ್ರಾಚೀನ ಹಂತದಲ್ಲಿ ಸೃಷ್ಟಿಯ ಕಲ್ಪನೆ ಬಹಳ ವಿಚಿತ್ರವಾಗಿತ್ತು. ಇಡೀ ವಿಶ್ವವೇ ಭಗವಂತನ ಸಂಕಲ್ಪದಿಂದಾಗಿ ಶೂನ್ಯದಿಂದ ಉತ್ಪನ್ನವಾಯಿತು; ಮೊದಲು ಈ ವಿಶ್ವವಿರಲಿಲ್ಲ, ಕೇವಲ ಶೂನ್ಯದಿಂದ ಇವೆಲ್ಲ ಬಂತು– ಎಂದು; ಅದರ ಮುಂದಿನ ಹಂತದಲ್ಲಿ ಈ ನಿರ್ಣಯವನ್ನು ಪ್ರಶ್ನೆ ಮಾಡಲಾಯಿತು. ವೇದಾಂತವು ಮೊದಲ ಹೆಜ್ಜೆಯಲ್ಲಿಯೆ ಈ ಪ್ರಶ್ನೆಯನ್ನು ಕೇಳಿದೆ– ಈ ಅಸ್ತಿತ್ವ ಅಸತ್‌ನಿಂದ ಉತ್ಪನ್ನವಾಗುವದು ಹೇಗೆ? ಈ ವಿಶ್ವಕ್ಕೊಂದು ಇರುವಿಕೆ ಇದೆಯಾದರೆ ಅದು ಯಾವದರಿಂದಲೋ ಬಂದಿರಬೇಕು, ಏಕೆಂದರೆ ಶೂನ್ಯದಿಂದ ಹೊರಬರುವದು ಯಾವದೂ ಇಲ್ಲ, ಮಾನವನ ಯಾವ ಕೆಲಸಕ್ಕಾದರೂ ಸಾಮಗ್ರಿಗಳು ಬೇಕು–ಎನ್ನುವದನ್ನು ಆ ಹಳಬರು ಮನಗಂಡಿದ್ದರು. ಸಹಜವಾಗಿಯೇ, ಪುರಾತನ ಹಿಂದುಗಳು

ಶೂನ್ಯದಿಂದ ಪ್ರಪಂಚ ಬಂತೆಂಬ ಭಾವನೆಯನ್ನು ತ್ಯಜಿಸಿ, ಈ ಜಗತ್ತಿನ ಸೃಷ್ಟಿಗೆ ಕಾರಣವಾಗಿ ಯಾವದೋ ವಸ್ತು ಇರಬೇಕೆಂದು ತಿಳಿದರು. ಯಾವದರಿಂದ ಇದೆಲ್ಲವೂ ಉಂಟಾಯಿತು ಎಂಬ ಪ್ರಶ್ನೆಗೆ ಉತ್ತರ ಹೇಳುವ ನಮ್ಮ ಪ್ರಯತ್ನಗಳಲ್ಲಿ, ಈ ವಸ್ತುವಿನ ಅರಸುವಿಕೆಯೇ ನಿಜವಾಗಿ ಧರ್ಮದ ಸಂಪೂರ್ಣ ಚರಿತ್ರೆಯಾಗಿದೆ. ಸಮರ್ಥವಾದ ಕಾರಣ ಅಥಾ ದೇವರು ಎಂಬ ಪ್ರಶ್ನೆಯ ಜೊತೆಗೆ– ದೇವರು ಈ ವಿಶ್ವವನ್ನು ಸೃಷ್ಟಿಸಿದನೇ ಎಂಬ ಪ್ರಶ್ನೆಯ ಜೊತೆಗೆ, ಪ್ರಶ್ನೆಗಳಲ್ಲಿ ದೊಡ್ಡ ಪ್ರಶ್ನೆಯೆಂದರೆ ಯಾವದರಿಂದ ಭಗವಂತ ಸೃಷ್ಟಿಸಿದ ಎಂಬುದು. ಅದು ಇರುವ ರೀತಿಯಲ್ಲೇ ಈ ಪ್ರಶ್ನೆಯ ಸುತ್ತ ಎಲ್ಲ ದಾರ್ಶನಿಕರೂ ಪರಿಭ್ರಮಣ ಮಾಡುತ್ತಿದ್ದಾರೆ.

ಒಂದು ಪರಿಹಾರವೆಂದರೆ, ವಸ್ತು, ದೇವರು, ಆತ್ಮ ಇವುಗಳು ಶಾಶ್ವತ ಸ್ಥಿತಿಗಳು ಎಂಬ ಗ್ರಹಿಕೆ. ಒಂದರ ಮಗ್ಗುಲಲ್ಲಿ ಮತ್ತೊಂದು ಹಾದು ಹೋಗುತ್ತಿರುವ ನಿತ್ಯವಾದ ಮೂರು ಸಮಾನಾಂತರ ರೇಖೆಗಳು; ಇವುಗಳಲ್ಲಿ ಪ್ರಕೃತಿ ಮತ್ತು ಆತ್ಮಗಳು– ಅವರು ಹೆಸರಿಸಿದ– 'ಆಶ್ರಿತ'ವನ್ನು ಒಳಗೊಂಡಿವೆಯೆಂದರು, ದೇವರನ್ನು ಸ್ವತಂತ್ರನೆಂದರು. ಪ್ರತಿ ಆತ್ಮವೂ, ವಸ್ತುವಿನ ಪ್ರತಿ ಕಣದಂತೆ ಸಂಪೂರ್ಣವಾಗಿ ದೇವರ ಇಚ್ಛೆಯನ್ನವಲಂಬಿಸಿದೆ. ಈ ಮತ್ತು ಇತರ ಭಾವನೆಗಳು ಕಪಿಲನು ಸಾಂಖ್ಯಶಾಸ್ತ್ರವನ್ನು ಹೊರತರುವ ವೇಳೆಗಾಗಲೇ ನೆಲೆಗೊಂಡಿದ್ದುವು. ಇದರ ಪ್ರಕಾರ ಭಾವಸ್ಫುರಣೆಯ ಸಂವಹನದಿಂದ (ಸಂಪರ್ಕದಿಂದ?) ಗ್ರಹಣ ಶಕ್ತಿ ಬರುವದು. ಭಾವಸ್ಫುರಣೆಯು ಇಂದ್ರಿಯ ಕವಾಟಗಳನ್ನು ಪ್ರಚೋದಿಸುತ್ತದೆ. ಉದಾ: ಮೊದಲು ಗ್ರಾಹ್ಯವಾಗುವದು ಕಣ್ಣುಗಳಿಗೆ; ಕಣ್ಣು ಮೊದಲಾದವುಗಳಿಂದ ಇಂದ್ರಿಯಗಳಿಗೆ, ಇಂದ್ರಿಯಗಳಿಂದ ಮನಸ್ಸಿಗೆ, ಮನಸ್ಸಿನಿಂದ ಬುದ್ಧಿಗೆ, ಬುದ್ಧಿಯಿಂದ ಆತ್ಮನೆಂದು ಕರೆಯಲ್ಪಡುವ ಯಾವದೋ ಸಮಷ್ಟಿಗೆ. ಆಧುನಿಕ ಶರೀರ ವಿಜ್ಞಾನವು, ನಮಗೆ ತಿಳಿದಿರುವಂತೆ ಭಿನ್ನ ಸಂವೇದನೆಗಳಿಗೆಲ್ಲಾ ಕೇಂದ್ರಗಳನ್ನು ಕಂಡುಹಿಡಿದಿದೆ, ಮೊದಲು ಅಧಮ ಕೇಂದ್ರಗಳು, ಅನಂತರ ಉತ್ತಮ ಕೇಂದ್ರಗಳು, ಇವೆರಡೂ ಬುದ್ಧಿಯ ಮತ್ತು ಮನಸ್ಸಿನ ಕ್ರಿಯೆಗಳಿಗೆ ಅನುಸಾರವಾಗಿವೆ. ಆದರೆ, ಈ ಎಲ್ಲ ಇತರ ಕೇಂದ್ರಗಳನ್ನೂ ನಿಯಂತ್ರಿಸುವ ಒಂದೇ ಕೇಂದ್ರವನ್ನು ಕಂಡುಹಿಡಿಯಲಾಗಿಲ್ಲ. ಅದರಂತೆ, ತತ್ತ್ವ ಶಾಸ್ತ್ರವಾದರೂ ಈ ಎಲ್ಲ ಕೇಂದ್ರಗಳನ್ನು ಯಾವದು ಒಟ್ಟುಗೂಡಿಸುತ್ತದೆಯೆಂದು ಉತ್ತರಿಸಲಾರದು. ಎಲ್ಲಿ ಮತ್ತು ಹೇಗೆ ಈ ಕೇಂದ್ರಗಳು ಒಟ್ಟುಗೂಡುತ್ತವೆ? ಮೆದುಳಿನಲ್ಲಿರುವ ಕೇಂದ್ರಗಳೆಲ್ಲವೂ ವಿಭಿನ್ನವಾದವು, ಇವೆಲ್ಲವನ್ನೂ ನಿಯಂತ್ರಿಸುವ ಒಂದು ಕೇಂದ್ರವಿಲ್ಲ. ಆದುದರಿಂದ ಈ ವಿಷಯದಲ್ಲಿ, ಇದು ಇರುವಷ್ಟು ಮಟ್ಟಿಗೆ ಸಾಂಖ್ಯ ಮನಃಶಾಸ್ತ್ರ ನಿರಾಕ್ಷೇಪಣೀಯವಾಗಿದೆ. ಸಂವೇದನೆಯನ್ನು ಪ್ರತಿಬಿಂಬಿಸುವ ಒಂದೇ ಸಂಪೂರ್ಣತೆಯನ್ನು ಮೂಡಿಸಲು ಈ ಏಕೀಕರಣ ಬೇಕು. ಅದು ಸಿದ್ಧಪಡುವವರೆಗೆ ನನಗೆ ನಿಮ್ಮ ಇರುವಿಕೆ ಅಥವಾ ಚಿತ್ರ ಅಥವಾ ಬೇರೆ ಯಾವುದೂ ತಿಳಿಯಲಾರದು. ಅಂತಹ ಏಕೀಕೃತವಾದ್ದೊಂದಿಲ್ಲದಿದ್ದರೆ, ನಾವು ಕೇವಲ ನೋಡುತ್ತಿದ್ದೆವು ಮಾತ್ರ, ಅನಂತರದ ಕೆಲವು ಕ್ಷಣಗಳಲ್ಲಿ ಕೇಳುತ್ತಿದ್ದೆವು, ಮತ್ತು ಮನುಷ್ಯನೊಬ್ಬನು ಮಾತನಾಡುತ್ತಿರುವದನ್ನು ಕೇಳಿದಾಗ ಅವನನ್ನು ನೋಡಲೇ ಆಗುತ್ತಿರಲಿಲ್ಲ, ಏಕೆಂದರೆ ಎಲ್ಲ ಕೇಂದ್ರಗಳೂ ಭಿನ್ನವೇ ಆಗಿವೆ.

*** 1896 ಡಿಸೆಂಬರ್ 12 ರಂದು ನ್ಯೂಯಾರ್ಕ್‌ನಲ್ಲಿ ವೇದಾಂತ ತರಗತಿಯಲ್ಲಿ ನೀಡಿದ 'ಹಿಂದೂ ದರ್ಶನಗಳ ಮಜಲುಗಳು' ಎಂಬ ಉಪನ್ಯಾಸ. ಕೃತಿ ಶ್ರೇಣಿ (ಆಂಗ್ಲ ಆವೃತ್ತಿ, ಸಂಪುಟ 1, ಪುಟಗಳು 393–404.)**

ನಾವು ವಸ್ತುವೆಂದು ಕರೆಯುವ ಕಣಗಳಿಂದಾದ ಈ ದೇಹವು ಜಡ ಮತ್ತು ಅಚೇತನವಾಗಿದೆ. ಸೂಕ್ಷ್ಮ ದೇಹವೂ ಅಷ್ಟೆ. ಸಾಂಖ್ಯರ ಪ್ರಕಾರ ಈ ಸೂಕ್ಷ್ಮ ದೇಹವು ಯಾವ ಸೂಕ್ಷ್ಮದರ್ಶಕವೂ ಕಾಣದಂತಹ ಅತ್ಯಂತ ಸಣ್ಣ ಕಣಗಳಿಂದಾದ ತುಂಬಾ ಸಣ್ಣ ದೇಹ. ಇದರ ಉಪಯೋಗವೇನು? ಇದು ನಾವು ಮನಸ್ಸು ಎನ್ನುವದಕ್ಕೆ ಆಶ್ರಯಸ್ಥಾನ. ಸ್ಥೂಲ ಶರೀರವು ಹೇಗೆ ಸ್ಥೂಲ ಬಲಗಳಕೋಶವೋ, ಹಾಗೆ ಸೂಕ್ಷ್ಮ ಶರೀರವೂ ಸಹ ಸೂಕ್ಷ್ಮಬಲಗಳ ಕೋಶ. ಸ್ಥೂಲವಾದ ಶಕ್ತಿಯೇ ಸೂಕ್ಷ್ಮ ಆಕಾರ ತಳೆದಾಗ ಅದನ್ನು ನಾವು ಭಾವನೆ ಎಂದು ಕರೆಯುತ್ತೇವೆ, ಸ್ಥೂಲ ವಸ್ತು, ಸ್ಥೂಲ ಬಲಗಳ ಶರೀರ ಮೊದಲಿನದು, ವಸ್ತುವಿಲ್ಲದೆ ಬಲವಿಲ್ಲ, ಅಥವಾ ಬಲ ಕಾಣಿಸಿಕೊಳ್ಳುವದು ವಸ್ತುವಿನ ಮೂಲಕವೇ. ಹಾಗೆ ಸ್ಥೂಲ-ಬಲಗಳು ಶರೀರದ ಮೂಲಕ ಕ್ರಿಯಾತ್ಮಕವಾಗಿ, ಅಂತಿಮವಾಗಿ ಸೂಕ್ಷ್ಮವಾಗುತ್ತವೆ. ಸ್ಥೂಲ ರೂಪಿನಲ್ಲಿ ಕ್ರಿಯಾನಿರತವಾದ ಅದೇ ಬಲವೇ ಸೂಕ್ಷ್ಮರೂಪಿನಲ್ಲೂ ಉದ್ಯುಕ್ತವಾಗಿ ಭಾವನೆ-ಆಲೋಚನೆಯಾಗುತ್ತದೆ. ಇವೆರಡರಲ್ಲೂ, ತತ್ತ್ವಶಃ, ಯಾವದೇ ವ್ಯತ್ಯಾಸವಿಲ್ಲ. ಸರಳವಾಗಿ ಹೇಳುವದಾದರೆ, ಒಂದು ಸ್ಥೂಲ, ಮತ್ತೊಂದು ಅದೇ ಸ್ಥೂಲದ ಸೂಕ್ಷ್ಮರೂಪ. ಹಾಗೆಯೇ ಸ್ಥೂಲ, ಸೂಕ್ಷ್ಮರೂಪಗಳ ವಸ್ತುವಿನಲ್ಲೂ ಯಾವದೇ ವ್ಯತ್ಯಾಸವಿಲ್ಲ. ಸೂಕ್ಷ್ಮ ದೇಹವೂ ವಸ್ತುವೇ, ಆದರೆ ಅತಿ ಸೂಕ್ಷ್ಮವಸ್ತು.

ಈ ಎಲ್ಲ ಬಲಗಳೂ ಬರುವದಾದರೂ ಎಲ್ಲಿಂದ? ವೇದಾಂತ ಸಿದ್ಧಾಂತದಂತೆ ಪ್ರಕೃತಿಯ ರಚನೆ ಎರಡು ವಸ್ತುಗಳಿಂದಾಗುವದು. ಒಂದನ್ನು ಆಕಾಶವೆಂದರು, ಅದು ಸತ್ ಅಥವಾ ವಸ್ತು, ಸೂಕ್ಷ್ಮಾತಿ ಸೂಕ್ಷ್ಮವಾದದ್ದು. ಇನ್ನೊಂದನ್ನು ಪ್ರಾಣವೆಂದರು. ನೀವು ಏನನ್ನು ನೋಡುವಿರೋ, ಸ್ಪರ್ಶಿಸುವಿರೋ ಅಥವಾ ಕೇಳುವಿರೋ- ಗಾಳಿ, ಭೂಮಿ ಅಥವಾ ಏನಾದರೂ- ಅದೆಲ್ಲಾ ವಸ್ತು. ಈ ಪ್ರತಿಯೊಂದೂ ಆಕಾಶದ ರೂಪ. ಅದು ಸೂಕ್ಷ್ಮತರ ಮತ್ತೂ ಸೂಕ್ಷ್ಮತರವಾಗುತ್ತ ಹೋಗುತ್ತದೆ. ಅಥವಾ ಸ್ಥೂಲ ಮತ್ತೂ ಸ್ಥೂಲತರವಾಗುತ್ತದೆ. ಅದು ಸಾರ್ವಲೌಕಿಕ ಶಕ್ತಿಯಾದ ಪ್ರಾಣದ ಕ್ರಿಯೆಯಿಂದ ಬದಲಾಗುತ್ತದೆ. ಆಕಾಶದಂತೆ ಪ್ರಾಣವೂ ಪ್ರತಿಯೊಂದನ್ನೂ ವ್ಯಾಪಿಸಿಕೊಂಡಿರುತ್ತದೆ. ಆಕಾಶವಿರುವದು ನೀರಿನಂತೆ, ವಿಶ್ವದ ಉಳಿದೆಲ್ಲವೂ ಅದೇ ನೀರಿನಿಂದುಂಟಾಗಿ, ಅದರ ಮೇಲೆ ತೇಲುವ ಮಂಜುಗಡ್ಡೆಯಂತೆ. ಆಕಾಶವನ್ನು ವಿವಿಧ ರೂಪಾಂತರಗಳಿಗೆ ಮಾರ್ಪಾಡು ಮಾಡುವ ಶಕ್ತಿಯೇ ಪ್ರಾಣ. ಆಕಾಶದಿಂದ ಉಂಟಾಗಿರುವ ಈ ದೇಹವು, ಪ್ರಾಣವು ನಾನಾ ಸ್ಥೂಲ ರೂಪಗಳಲ್ಲಿ- ಮಾಂಸಖಂಡಗಳ ಚಲನೆ ಅಥವಾ ನಡೆಯುವ, ಕುಳಿತುಕೊಳ್ಳುವ, ಮಾತನಾಡುವ ತೋರ್ಪಡಿಸಿಕೊಳ್ಳುವದಕ್ಕೆ ಸಾಧನ. ಸೂಕ್ಷ್ಮಶರೀರವೂ ಕೂಡಾ ಆಕಾಶದಿಂದಲೇ ಉಂಟಾದದ್ದು, ಆಕಾಶದ ಸೂಕ್ಷ್ಮತರ ಸ್ವರೂಪ ಮತ್ತು ಅದೇ ಪ್ರಾಣವು ಇನ್ನೂ ಸೂಕ್ಷ್ಮತರ ಸ್ವರೂಪದ ಆಲೋಚನೆಂಬಾಗಿ ತೋರ್ಪಡಿಸಿಕೊಳ್ಳಲು ಸಾಧ್ಯಮಾಡಿಕೊಡುವಂತಹುದು. ತಾತ್ಪರ್ಯ ಇದು: ಮೊದಲು ಇರುವದು ಸ್ಥೂಲ ಶರೀರ,

ಅದರಿಂದಾಚೆ ಸೂಕ್ಷ್ಮಶರೀರ ಮತ್ತು ಅದರಾಚೆ ಇರುವದು ಜೀವ (ಆತ್ಮ)– ನಿಜವಾದ ಮಾನವ. ಹೇಗೆ ಬೆರಳ ಉಗುರುಗಳನ್ನು ವರ್ಷಕ್ಕೆ ನೂರು ಸಲ ಕತ್ತರಿಸಿದರೂ ಇನ್ನೂ ನಮ್ಮ ದೇಹಗಳ ಭಾಗಗಳೇ ಅಲ್ಲದೆ, ಬೇರೆಯಲ್ಲವೋ ಅದೇ ರೀತಿ ನಮಗೆ ಶರೀರಗಳು ಎರಡಿಲ್ಲ. ಮನುಷ್ಯನಿಗೆ ಸ್ಥೂಲ ಶರೀರವೊಂದು, ಸೂಕ್ಷ್ಮಶರೀರವೊಂದು ಇದೆಯೆಂದಲ್ಲ; ಇರುವದು ಒಂದೇ ಶರೀರ. ಅದು ಸೂಕ್ಷ್ಮಶರೀರವಾದಾಗ ಹೆಚ್ಚುಕಾಲವಿರುವದು, ಸ್ಥೂಲತರವಾದಷ್ಟೂ ಅದು ಬೇಗ ನಶಿಸುವದು. ನಾನು ಈ ಉಗುರನ್ನು ವರ್ಷಕ್ಕೆ ನೂರು ಬಾರಿ ಕತ್ತರಿಸುವಂತೆಯೇ, ಯುಗವೊಂದಕ್ಕೆ ನಾನು ಲಕ್ಷಾಂತರ ಬಾರಿ ಈ ದೇಹವನ್ನು ಬಿಡಬಹುದು, ಆದರೆ ಸೂಕ್ಷ್ಮಶರೀರವಿದ್ದೇ ಇರುತ್ತದೆ. ದ್ವೈತಿಗಳ ಪ್ರಕಾರ ಜೀವ ಅಥವಾ ನಿಜಮನುಷ್ಯ ಬಹುಸೂಕ್ಷ್ಮ, ಅತಿಸೂಕ್ಷ್ಮ.

ಇಲ್ಲಿಯವರೆಗೆ, ಮನುಷ್ಯನೊಬ್ಬ ಜೀವಿ, ಅವನಿಗೆ ಮೊದಲು ಇರುವದು ಬಹಳ ಬೇಗ ನಶಿಸಿಹೋಗುವ ಸ್ಥೂಲ ಶರೀರವೂ, ಅದರ ನಂತರ ಯುಗಾಂತರಗಳಲ್ಲೂ ನಿಲ್ಲುವ ಸೂಕ್ಷ್ಮಶರೀರ, ಮತ್ತು ಕೊನೆಯದಾಗಿ ಇರುವದು ಜೀವ ಎಂದು ತಿಳಿದೆವು. ವೇದಾಂತ ದರ್ಶನದಂತೆ, ದೇವರು ಹೇಗೆ ನಿತ್ಯನೋ, ಪ್ರಕೃತಿಯೂ ಸಹ ನಿತ್ಯವೇ, ಆದರೆ ಬದಲಾಗುತ್ತಿರುವ ನಿತ್ಯ, ಹಾಗೆ ಈ ಜೀವನೂ ನಿತ್ಯನು. ಪ್ರಕೃತಿಯ ವಸ್ತುಗಳಾದ ಪ್ರಾಣ ಮತ್ತು ಆಕಾಶಗಳು ಅನಂತವಾದರೂ ಸದಾಕಾಲವೂ ವಿವಿಧರೂಪಗಳನ್ನು ಹೊಂದುತ್ತಿರುವವು. ವಸ್ತು ಮತ್ತು ಬಲಗಳೆರಡೂ ನಿತ್ಯವೇ ಆದರೂ ಅವುಗಳ ಸಂಯೋಗ ಒಂದೇ ಸಮನೆ ಬದಲಾಗುತ್ತಿರುವದು. ಆಕಾಶದಿಂದಾಗಲೀ ಅಥವಾ ಪ್ರಾಣದಿಂದಾಗಲೀ ಜೀವನು ತಯಾರಿಯಾಗುವದಿಲ್ಲ; ಅದು ಅಮೂರ್ತ, ಆದುದರಿಂದ ಅದು ಎಂದೆಂದಿಗೂ ಉಳಿಯುವದು; ಅದು ಪ್ರಾಣ ಮತ್ತು ಆಕಾಶದ ಯಾವದೇ ಸಂಯೋಗದ ಪರಿಣಾಮವಲ್ಲ; ಹೀಗೆ ಸಂಯೋಗದ ಪರಿಣಾಮವಲ್ಲದ ಯಾವದೂ ಎಂದಿಗೂ ನಾಶವಾಗದು, ಏಕೆಂದರೆ ನಾಶವೆಂದರೆ ವಿಭಜನೆ. ಸ್ಥೂಲ ಶರೀರವು ಆಕಾಶ, ಪ್ರಾಣಗಳ ವಿವಿಧ ರೂಪಗಳ ಸಂಯೋಜನೆ. ಅದು ಪ್ರತ್ಯೇಕ ಭಾಗಗಳಾಗಿ ವಿಂಗಡಣೆ (ವಿಘಟನೆ) ಯಾಗುವದು. ಸೂಕ್ಷ್ಮ ಶರೀರವೂ ಕೂಡ ದೀರ್ಘಕಾಲದನಂತರ ವಿಘಟನೆಯಾಗುತ್ತದೆ, ಆದರೆ ಜೀವ ಅಸಂಯುಕ್ತವಾದುದು, ಸರಳ; ಎಂದಿಗೂ ನಾಶವಾಗದು. ಅದೇ ಕಾರಣಕ್ಕಾಗಿಯೇ, ನಾವು ಅದು ಎಂದಾದರೂ ಹುಟ್ಟಿತೆಂದೂ ಹೇಳಲಾಗುವದಿಲ್ಲ. ಅಸಂಯುಕ್ತವಾದದ್ದು ಯಾವದೂ ಹುಟ್ಟಲಾರದು; ಸಂಯುಕ್ತವಾದದ್ದು ಮಾತ್ರವೇ ಹುಟ್ಟಬಲ್ಲದು. ಹಲವು ದಶಲಕ್ಷಾಂತರ ರೂಪಗಳಲ್ಲಿ ಸೇರಿಕೊಂಡ ಇಡೀ ಪ್ರಕೃತಿಯು ಭಗವಂತನ ಇಚ್ಛೆಗೊಳಪಟ್ಟದ್ದು. ಭಗವಂತನು ಸರ್ವರಲ್ಲೂ ಅಂತರ್ಗತನು, ಸಂಪೂರ್ಣ ಪ್ರಜ್ಞ, ಅರೂಪನು ಮತ್ತು ಸರ್ವವ್ಯಾಪಿಯು, ಅವನು ಪ್ರಕೃತಿಯನ್ನು ಹಗಲೂ ರಾತ್ರಿಯೂ ನಿರ್ದೇಶಿಸುವವನು. ಅದೆಲ್ಲವೂ ಅವನ ನಿಯಂತ್ರಣದಲ್ಲಿದೆ. ಯಾವದೇ ಜೀವಿಗೂ ಸ್ವಾತಂತ್ರ್ಯವಿಲ್ಲ, ಅದು ಇರಲಾರದು. ಅವನೇ ಆಳುವವನು. ಇದು ದ್ವೈತ ವೇದಾಂತದ ಬೋಧನೆ.

ಈಗೊಂದು ಪ್ರಶ್ನೆ ಏಳುತ್ತದೆ– ಭಗವಂತನು ಈ ವಿಶ್ವವನ್ನೆಲ್ಲಾ ಆಳುವವನಾದರೆ, ಅವನೇಕೆ ಇಂತಹ ದುಷ್ಟ ವಿಶ್ವವನ್ನು ನಿರ್ಮಿಸಿದ, ನಾವೇಕೆ ಇಷ್ಟೊಂದು ನರಳಬೇಕು? ಅದಕ್ಕೆ ಉತ್ತರವೆಂದರೆ,

ಇದು ಭಗವಂತನ ತಪ್ಪಲ್ಲ. ನಮ್ಮದೇ ತಪ್ಪಿನಿಂದ ನಾವು ನರಳುವೆವು. ಏನು ಬಿತ್ತುವೆವೋ ಅದನ್ನೇ ಬೆಳೆಯುವೆವು. ದೇವರು ನಮ್ಮನ್ನು ಶಿಕ್ಷಿಸುವದಕ್ಕೆ ಏನೂ ಮಾಡುವದಿಲ್ಲ. ಒಬ್ಬಾತನು ಬಡವನಾಗಿ ಅಥವಾ ಕುರುಡನಾಗಿ ಅಥವಾ ಕುಂಟನಾಗಿ ಹುಟ್ಟಿದ್ದಕ್ಕೆ, ಅವನ ಹುಟ್ಟಿಗೆ ಮೊದಲೇ ಅವನು ಇಂತಹಾ ಪರಿಣಾಮವನ್ನುಂಟು ಮಾಡುವ ಏನನ್ನಾದರೂ ಮಾಡಿರುತ್ತಾನೆ. ಜೀವ ಎಲ್ಲ ಕಾಲದಲ್ಲಿಯೂ ಇದ್ದುಕೊಂಡಿರುವದು, – ಅದು ಎಂದೂ ಸೃಷ್ಟಿಯಾಗಲಿಲ್ಲ. ಎಲ್ಲ ಕಾಲದಲ್ಲೂ ಅನೇಕ ವಿಧವಾದ ಏನನ್ನಾದರೂ ಅದು ಮಾಡುತ್ತಲೇ ಇರುತ್ತದೆ. ನಾವು ಏನು ಮಾಡುವೆವೋ ಅದಕ್ಕಾಗಿ ನರಳುತ್ತೇವೆ. ನಾವು ಒಳ್ಳೆಯದನ್ನು ಮಾಡಿದರೆ ಸುಖ ದೊರಕುವದು, ಕೆಟ್ಟದಕ್ಕೆ ದುಃಖ, ಜೀವ ತನ್ನ ಸ್ವಭಾವದಿಂದ ಪರಿಶುದ್ಧ. ಆದರೆ ಅದರ ಸ್ವಭಾವವನ್ನು ಅಜ್ಞಾನ ಮುಸುಕಿರುತ್ತದೆ, ಎನ್ನುತ್ತಾನೆ ದ್ವೈತಿ. ದುಷ್ಟ ಕಾರ್ಯಗಳಿಂದಾಗಿ ಅದು ಅಜ್ಞಾನದ ಮುಸುಕು ಹಾಕಿಕೊಳ್ಳುತ್ತದೆ, ಆದರೆ ಒಳ್ಳೆಯ ಕೆಲಸಗಳಿಂದ ಅದು ಪುನಃ ತನ್ನ ಸ್ವಸ್ವರೂಪವನ್ನು ಅರಿಯುವದು. ಅದು ಶಾಶ್ವತ ಹೇಗೋ ಹಾಗೆ ಅದರ ಪ್ರಕೃತಿಯೂ ಶುದ್ಧವೇ. ಪ್ರತಿಯೊಂದು ಜೀವಿಯ ಪ್ರಕೃತಿಯೂ ಶುದ್ಧ. ಸುಕೃತಿಗಳಿಂದ ಅದರ ಎಲ್ಲ ಪಾಪಗಳೂ ದುಷ್ಕೃತಗಳೂ ತೊಳೆದು ಹೋದಾಗ, ಜೀವ ಪುನಃ ಶುದ್ಧವಾಗುತ್ತದೆ. ಹಾಗೆ ಅವನು ಶುದ್ಧವಾದಾಗ ಮರಣಾನಂತರ ದೇವಯಾನ (ದೇವತೆಗಳ ಮಾರ್ಗ) ದಿಂದ ಸ್ವರ್ಗಕ್ಕೆ ಅಥವಾ ದೇವತೆಗಳ ಲೋಕಕ್ಕೆ ಹೋಗುತ್ತಾನೆ. ಕೇವಲ ಸಾಮಾನ್ಯವಾದ ಒಳ್ಳೆಯ ಮನುಷ್ಯನಾದರೆ ಅವನು ಪಿತೃಲೋಕಕ್ಕೆ ಹೋಗುತ್ತಾನೆ.

ಸ್ಥೂಲ ಶರೀರ ಪತನವಾದಾಗ ಮಾತು ಮುಂತಾದ ಇಂದ್ರಿಯಗಳು ಮನಸ್ಸನ್ನು ಪ್ರವೇಶಿಸುತ್ತವೆ. ಪದಗಳ ವಿನಾ ಯೋಚನೆ ಮಾಡಲಾಗದು, ಪದಗಳಿದ್ದಲ್ಲಿ ಭಾವನೆಗಳು ಇರಬೇಕು. ಮನಸ್ಸು ಪ್ರಾಣವಾಗಿ, ಪ್ರಾಣ ಜೀವವಾಗಿ ರೂಪಾಂತರವಾಗುತ್ತದೆ. ಆಗ ಜೀವ ದೇಹವನ್ನು ಬಿಟ್ಟು, ತನ್ನ ಹಿಂದಿನ ಜನ್ಮದ ಗಳಿಕೆಗೆ ಅನುಗುಣವಾಗಿ ಪುರಸ್ಕಾರ ಅಥವಾ ಶಿಕ್ಷೆಯ ಸ್ಥಿತಿಗೆ ಹೋಗುತ್ತದೆ. ದೇವಲೋಕವು ದೇವತೆಗಳ ಸ್ಥಾನ(ಬೀಡು). ದೇವತೆ ಎಂದರೆ ಪ್ರಕಾಶಮಾನ ಅಥವಾ ಹೊಳೆಯುವದೆಂದು ಅರ್ಥ. ಕ್ರೈಸ್ತರು, ಮಹಮ್ಮದೀಯರು ಕರೆಯುವ 'ದೇವದೂತ ಅಥವಾ ದಿವ್ಯಪುರುಷ' ಎಂಬುದಕ್ಕೆ ಸಮಾನ ಅದು. ಈ ಬೋಧನೆಯಂತೆ, ದಾಂತೆ (Dante) ಯು ಬರೆದಿರುವ 'ಡಿವೈನ್ ಕಾಮೆಡಿ' ಕಾವ್ಯಗ್ರಂಥದಲ್ಲಿ ವಿವರಿಸಿರುವ ವಿವಿಧ ರೀತಿಯ ಸ್ವರ್ಗಗಳಿಗೆ ಸದೃಶವಾದ ಅನೇಕ ಸ್ವರ್ಗಲೋಕ (ಗೋಳಗಳು) ಗಳಿರುತ್ತವೆ– ಪಿತೃಲೋಕ (ಪಿತೃಗಳ ತಾಣ), ದೇವಲೋಕ, ಚಂದ್ರಲೋಕ, ವಿದ್ಯುಲ್ಲೋಕ ಮತ್ತು ಎಲ್ಲಕ್ಕೂ ಹೆಚ್ಚಿನ ಬ್ರಹ್ಮಲೋಕ (ಬ್ರಹ್ಮನ ಸ್ವರ್ಗ). ಕೆಳಗಿನ ಅಥವಾ ಹೀನ ಲೋಕಗಳಿಂದ ಜೀವ ಪುನಃ ಜನ್ಮತಾಳುತ್ತದೆ. ಆದರೆ ಬ್ರಹ್ಮಲೋಕಕ್ಕೆ ಹೋದವನು ಶಾಶ್ವತವಾಗಿ ಅಲ್ಲೇ ಇರುವನು. ಇವರು ಅತ್ಯಂತ ಶ್ರೇಷ್ಠ ಮಾನವರು, ಸಂಪೂರ್ಣ ನಿಃಸ್ವಾರ್ಥರು, ಪರಿಪೂರ್ಣ ಪರಿಶುದ್ಧರು, ಎಲ್ಲ ರಾಗದ್ವೇಷಗಳನ್ನು ಬಿಟ್ಟವರು, ಭಗವಂತನ ಆರಾಧನೆ ಮತ್ತು ಪ್ರೀತಿಯನ್ನು ಬಿಟ್ಟು ಬೇರೇನನ್ನೂ ಮಾಡಲಿಚ್ಛಿಸದವರು. ಒಳ್ಳೆಯ ಕೆಲಸಮಾಡಿ ಏನಾದರೂ ಪ್ರತಿಫಲವನ್ನಪೇಕ್ಷಿಸುವವರು, ಸ್ವರ್ಗೇಚ್ಛೆಯಿದ್ದು ಹಿಂದಿರುಗುವವರು ಎರಡನೆಯ ದರ್ಜೆಯವರು. ಅವರು ಮೃತರಾದಾಗ ಜಿವನು ಚಂದ್ರಲೋಕಕ್ಕೆ ಹೋಗಿ ದೇವತೆ (ದೇವದೂತ) ಯಾಗಿ

ಆನಂದಿಸುವರು. ಈ ದೇವತೆಗಳು, ದೇವರುಗಳು ಶಾಶ್ವತರಲ್ಲ, ಅವರೂ ಮೃತಿ ಹೊಂದಲೇಬೇಕು. ಸ್ವರ್ಗದಲ್ಲಿರುವ ಎಲ್ಲರೂ ಸಾಯುವರು. ಸಾವಿಲ್ಲದ ಒಂದೇ ಲೋಕವೆಂದರೆ ಅಮೃತಮಯ ಬ್ರಹ್ಮಲೋಕ, ಅಲ್ಲಿ ಜನನ ಮರಣಗಳಿಲ್ಲ. ನಮ್ಮ ಪುರಾಣಗಳಲ್ಲಿ ರಾಕ್ಷಸರು ಇರುತ್ತಾರೆ, ಅವರು ಕೆಲವೊಮ್ಮೆ ದೇವರುಗಳನ್ನು ಅಟ್ಟಿ ಬರುತ್ತಾರೆ ಎಂದಿದೆ. ಎಲ್ಲ ಪುರಾಣಗಳಲ್ಲೂ ಅಸುರರು ಅಥವಾ ದುಷ್ಟದೇವತೆಗಳು ಮತ್ತು ದೇವರುಗಳ ನಡುವಿನ ಯುದ್ಧವರ್ಣನೆಯನ್ನು ಓದುತ್ತೇವೆ. ಕೆಲವು ಬಾರಿ ಅಸುರರು ದೇವತೆಗಳ ಮೇಲೆ ವಿಜಯವನ್ನು ಸಾಧಿಸುವರು. ಎಲ್ಲ ಪುರಾಣಗಳಲ್ಲೂ ಸಹಿತ, ದೇವತೆಗಳಿಗೆ ಮಾನವರ ಸುಂದರ ಕುಮಾರಿಯರನ್ನು ಕಂಡರೆ ಮೋಹ ಎಂಬುದು ಕಾಣಿಸಿದೆ. ದೇವತೆಯಾಗಿ, ಜೀವನು ತನ್ನ ಹಿಂದಿನ ಕರ್ಮಗಳ ಫಲವನ್ನನುಭವಿಸುತ್ತಾನೆಯೇ ಹೊರತು ಹೊಸಕರ್ಮಗಳನ್ನು ಮಾಡುವದಿಲ್ಲ. ಕರ್ಮ ಎಂದರೆ ಪರಿಣಾಮವನ್ನುಂಟು ಮಾಡುವ ಕಾರ್ಯಗಳು, ಹಾಗೂ ಆ ಪರಿಣಾಮಗಳು ಅಥವಾ ಫಲಗಳು. ಮನುಷ್ಯ ಸತ್ತು ದೇವನಾದಾಗ ಅವನಿಗೊಂದು ಸುಖಾನುಭವದ ಅವಧಿಯಿರುತ್ತದೆ. ಆ ಕಾಲಕ್ಕೆ ಯಾವ ಹೊಸಕರ್ಮವನ್ನೂ ಮಾಡುವದಿಲ್ಲ. ತನ್ನ ಹಿಂದಿನ ಕರ್ಮಗಳ ಒಳ್ಳೆಯ ಕೆಲಸಗಳ ಫಲವನ್ನು ಸಂತೋಷದಿಂದ ಉಣುವನು. ಆದರೆ, ಸುಕೃತವೆಲ್ಲಾ ಮುಗಿದ ಮೇಲೆ ಉಳಿದ ಫಲಗಳು ಬರತೊಡಗುತ್ತವೆ.

ವೇದಗಳಲ್ಲಿ ನರಕದ ಉಲ್ಲೇಖವಿಲ್ಲ. ಆದರೆ, ಅನಂತರದ ಕಾಲದಲ್ಲಿ ನಮ್ಮ ಧರ್ಮಶಾಸ್ತ್ರಗಳ ಕೊನೆಯ ಗ್ರಂಥಗಳಾದ ಪುರಾಣಗಳು ನರಕಗಳ ಸರಿಯಾದ ಲೇಪನವಿಲ್ಲದೆ ಯಾವ ಧರ್ಮವೂ ಪೂರ್ಣವಾಗುವದಿಲ್ಲ ಎಂದು ಭಾವಿಸಿದುವು, ಹಾಗಾಗಿ, ಅನೇಕ ಬಗೆಯ ನರಕಗಳು ಮತ್ತು ದಾಂತೆ ತನ್ನ Inferno (ನರಕ) ದಲ್ಲಿ ಕಾಣಿಸಿದ, ಅದಕ್ಕಿಂತ ಹೆಚ್ಚಲ್ಲದಿದ್ದರೂ, ಅಷ್ಟೇ ಬಗೆಯ ಶಿಕ್ಷೆಗಳನ್ನು ವರ್ಣಿಸಿವೆ; ಆದರೆ ನಮ್ಮ ಗ್ರಂಥಗಳು ಇವು ಕೇವಲ ಒಂದು ಅವಧಿಯ ವರೆಗೆ ಮಾತ್ರ ಎಂಬ ಕರುಣೆಯನ್ನು ಹರಿಸಿವೆ. ಈ ಸ್ಥಿತಿಯಲ್ಲಿ ಕೆಟ್ಟಕರ್ಮಗಳೆಲ್ಲ ಪೂರೈಸಿದ ಮೇಲೆ ಆತ್ಮಗಳು ಭೂಮಿಗೆ ಹಿಂತಿರುಗಿ ಮತ್ತೊಂದು ಅವಕಾಶವನ್ನು ಪಡೆಯುತ್ತವೆ. ಈ ಮಾನವಾವಸ್ಥೆಯೇ ಹಿರಿದಾದ ಅವಕಾಶ. ಇದನ್ನು ಕರ್ಮಶರೀರ ಎನ್ನುವರು. ಅದರಲ್ಲಿ ನಮ್ಮ ಪ್ರಗತಿ–ಅಪಗತಿಯನ್ನು ನಿರ್ಣಯಿಸುವೆವು. ನಾವು ದೊಡ್ಡವೃತ್ತವೊಂದರಲ್ಲಿ ಓಡುತ್ತಿರುವೆವು. ಅದರಲ್ಲಿ ನಮ್ಮ ಭವಿಷ್ಯವನ್ನು ನಿರ್ಧಾರಮಾಡುವದು ವೃಕ್ಷದ ಈ ನಿರ್ದಿಷ್ಟ ಬಿಂದುವಿನಲ್ಲಿಯೇ. ಹೀಗೆ ಮನುಷ್ಯ ಶರೀರವೇ ಇರುವ ಶರೀರಗಳಲ್ಲೆಲ್ಲ ಅತ್ಯಂತ ದೊಡ್ಡದು, ಮಾನವನು ದೇವತೆಗಳಿಗಿಂತ ದೊಡ್ಡವನು ಎಂದು ಪರಿಗಣನೆಯಿದೆ. ಇದಿಷ್ಟೂ ದ್ವೈತ ವೇದಾಂತ.

ಇಲ್ಲಿಂದ ಮುಂದೆ ವೇದಾಂತ ಶಾಸ್ತ್ರದ ಹೆಚ್ಚಿನ ಕಲ್ಪನೆ ಬರುವದು. ಅದರಂತೆ ಮೇಲಣ ಭಾವನೆಗಳೆಲ್ಲ ಅಪಕ್ವವಾದುವು. ಅನಂತನಾದ ಭಗವಂತನೊಬ್ಬನಿರುವನು, ಅನಂತವಾದ ಆತ್ಮವೂ, ಅನಂತವಾದ ಪ್ರಕೃತಿಯೂ ಎಂದು ಹೇಳಹೊರಟಾಗ ಈ ಅನಂತಗಳನ್ನು ಅನಿರ್ದಿಷ್ಟವಾಗಿ ಗುಣಿಸುತ್ತಾ, ಹೆಚ್ಚಿಸುತ್ತಾ ಹೋಗಬಹುದು, ಎಂದು ನೀವು ಹೇಳುವಿರಾದರೆ ಇದು ತರ್ಕಬದ್ಧವಲ್ಲ, ಏಕೆಂದರೆ ಪ್ರತಿಯೊಂದೂ ಇನ್ನೊಂದನ್ನು ಮಿತಿಗೊಳಿಸುವುದರಿಂದ ನಿಜವಾದ ಅಮಿತ–ಅನಂತವಾದದ್ದು ಇರುವದಿಲ್ಲ. ಭಗವಂತನು ಸಾರಭೂತವೂ, ಸಮರ್ಥನೂ ಆದ ವಿಶ್ವಕಾರಣನು;

ತನ್ನಿಂದಲೇ ಅವನು ಈ ವಿಶ್ವವನ್ನು ಹೊರಹೊಮ್ಮಿಸಿರುವನು. ಹಾಗೆಂದರೆ, ಭಗವಂತನೇ ಈ ಎಲ್ಲ ಗೋಡೆಗಳು, ಮೇಜು ಆಗಿದ್ದಾನೆ, ಅವನು ಪ್ರಾಣಿ, ಕೊಲೆಗಾರ ಮತ್ತು ಪ್ರಪಂಚದ ಎಲ್ಲ ಪಾತಕಗಳೂ ಆಗಿದ್ದಾನೆ ಎಂದು ಅರ್ಥವೇ? ಭಗವಂತನು ಪರಿಶುದ್ಧ–ಹೇಗೆ ಅವನು ಈ ಎಲ್ಲ ಅವನತಿಗಳಾಗಬಲ್ಲನು? ಅವನು ಹಾಗಾಗಲಾರ. ಭಗವಂತನು ನಿರ್ವಿಕಾರನು, ಈ ಎಲ್ಲ ವಿಕಾರಗಳೂ ಪ್ರಕೃತಿಯಲ್ಲಿವೆ – ಹೇಗೆ ನಾನು ಒಬ್ಬ ಆತ್ಮ, ನನಗೊಂದು ಶರೀರವಿದೆಯೋ ಹಾಗೆ. ಈ ಶರೀರ, ಒಂದು ಅರ್ಥದಲ್ಲಿ ನನಗಿಂತ ಬೇರೆಯಲ್ಲ, ಆದರೂ ನಿಜವಾದ 'ನಾನು' ಸತ್ಯಾಂಶವಾಗಿ, ವಾಸ್ತವಿಕವಾಗಿ ಈ ಶರೀರವಲ್ಲ. ಉದಾಹರಣೆಗೆ, ನಾನು ಮಗು, ತರುಣನಾಗುತ್ತೇನೆ, ಮುದುಕನಾಗುತ್ತೇನೆ, ಆದರೆ ನನ್ನ ಆತ್ಮ ಬದಲಾಗಲಿಲ್ಲ– ಅದು ಮೊದಲಿನ ಆತ್ಮವೇ– ಹಾಗೆಯೇ ಪ್ರಕೃತಿ ಮತ್ತು ಅನಂತಸಂಖ್ಯೆಯ ಆತ್ಮಗಳನ್ನೊಳಗೊಂಡ ವಿಶ್ವವು, ಅದು ಇರುವಂತೆ, ಭಗವಂತನ ಅನಂತವಾದ ಶರೀರ. ಅವನು ಅದರೊಳಗೆಲ್ಲ ಒಳಹೊಕ್ಕಿದ್ದಾನೆ. ಅವನೊಬ್ಬನೇ ಬದಲಾಗದವನು, ಆದರೆ ಪ್ರಕೃತಿ ಬದಲಾಗುತ್ತದೆ, ಆತ್ಮಗಳೂ ಕೂಡ ಬದಲಾಗುತ್ತವೆ– ಪ್ರಕೃತಿ ಯಾವ ರೀತಿ ಮಾರ್ಪಾಡಾಗುತ್ತದೆ?– ಅದರ ರೂಪಗಳಲ್ಲಿ– ಅದು ನವನವೀನ ಆಕಾರಗಳನ್ನು ಪಡೆಯುತ್ತದೆ. ಆದರೆ ಆತ್ಮಗಳು ಆ ರೀತಿ ಪರಿವರ್ತನೆಯಾಗುವದಿಲ್ಲ. ಅವು ಜ್ಞಾನದಲ್ಲಿ ಕುಗ್ಗುವದು, ಹಿಗ್ಗುವದು, ಪ್ರತಿ ಆತ್ಮವೂ ದುಷ್ಟಕಾರ್ಯಗಳಿಂದ ಕುಗ್ಗುತ್ತದೆ. ಯಾವ ಕೆಲಸಗಳಿಂದ ಆತ್ಮದ ಸ್ವಾಭಾವಿಕ ಜ್ಞಾನ ಮತ್ತು ಪರಿಶುದ್ಧತೆ ಕುಗ್ಗುತ್ತದೆಯೋ ಅವು ದುಷ್ಟಕಾರ್ಯಗಳೆನಿಸುತ್ತವೆ; ಆತ್ಮದ ಸಹಜ ವೈಭವವನ್ನು ಹೊರತರುವಂತಹವು ಉತ್ತಮ ಕಾರ್ಯಗಳೆನಿಸುತ್ತವೆ. ಎಲ್ಲ ಆತ್ಮಗಳೂ ಪರಿಶುದ್ಧವಾಗಿದ್ದುವು; ಆದರೆ ತಮ್ಮದೇ ಕಾರ್ಯಗಳಿಂದ ಕುಗ್ಗಿರುತ್ತವೆ. ಆದರೂ, ಭಗವಂತನ ಕರುಣೆಯಿಂದ ಮತ್ತು ಸತ್ಕಾರ್ಯಗಳಿಂದ ಅವು ಹಿಗ್ಗಿ ಪುನಃ ಪರಿಶುದ್ಧವಾಗುತ್ತವೆ. ಪ್ರತಿ ಆತ್ಮಕ್ಕೂ ಒಂದೇ ರೀತಿಯ ಅವಕಾಶವಿರುತ್ತದೆ, ದೀರ್ಘಕಾಲದಲ್ಲಿ ಪರಿಶುದ್ಧರಾಗಿ ಪ್ರಕೃತಿಯಿಂದ ಬಿಡಿಸಿಕೊಳ್ಳಬಹುದು. ಆದರೆ ವಿಶ್ವವು ಅಪರಿಮಿತವಾದ್ದರಿಂದ ಅದು ಕೊನೆ ಮುಟ್ಟುವದಿಲ್ಲ. ಇದು ಎರಡನೆಯ ಮತ. ಮೊದಲಿನದನ್ನು ದ್ವೈತ ವೇದಾಂತವೆನ್ನುವರು. ದೇವರಿದ್ದಾನೆ, ಆತ್ಮವಿದೆ, ಪ್ರಕೃತಿ ಇದೆ, ಆತ್ಮ ಪ್ರಕೃತಿಗಳೆರಡೂ ಸೇರಿ ಭಗವಂತನ ಶರೀರವಾಗುತ್ತದೆ ಮತ್ತು ಇವು ಮೂರೂ ಸೇರಿ ಏಕತೆಯಾಗುತ್ತದೆ– ಎಂದು ಬೋಧಿಸುವ ಎರಡನೆಯದು ವಿಶಿಷ್ಟಾದ್ವೈತ ಮತವೆನಿಸುವದು. ಈ ಮತವನ್ನು ಅಂಗೀಕರಿಸಿದವರು ವಿಶಿಷ್ಟಾದ್ವೈತಿಗಳೆನಿಸುತ್ತಾರೆ.

ಕೊನೆಯದೂ ಮತ್ತು ಉತ್ಕೃಷ್ಟವೂ ಆದ ಮತವೆಂದರೆ ಶುದ್ಧಾದ್ವೈತವು, ಅಥವಾ ಭಾರತದಲ್ಲಿ ಪರಿಚಿತವಾಗಿ ತಿಳಿದಿರುವ ಅದ್ವೈತ. ಭಗವಂತನು ವಿಶ್ವದ ವಸ್ತು ಮತ್ತು ಸಮರ್ಥ ಕಾರಣವೆರಡೂ ಆಗಿರುವನೆಂದು ಈ ಮತ ಬೋಧಿಸುತ್ತದೆ. ಆ ರೀತಿಯಲ್ಲಿ ಭಗವಂತನೇ ಇಡೀ ವಿಶ್ವವಾಗಿದ್ದಾನೆ. ದೇವರೇ ಆತ್ಮ, ವಿಶ್ವವೇ ಶರೀರ, ಮತ್ತು ಶರೀರ ಬದಲಾಗುತ್ತದೆ ಎಂಬುದನ್ನು ಇದು ಅಲ್ಲಗಳೆಯುತ್ತದೆ. ಹಾಗಿದ್ದ ಪಕ್ಷದಲ್ಲಿ ಭಗವಂತನನ್ನು ವಿಶ್ವದ ವಸ್ತು ಕಾರಣನೆನ್ನುವುದರ ಉಪಯೋಗವೇನು? ಈ ವಸ್ತು ಕಾರಣವೇ ಪರಿಣಾಮವಾಗುವ ಕಾರಣವು; ಪರಿಣಾಮವು ಇನ್ನೊಂದು ರೂಪದ ಕಾರಣವಲ್ಲದೆ ಬೇರೆಯಲ್ಲ. ಎಲ್ಲೆಲ್ಲಿ ಪರಿಣಾಮ ಕಾಣುವದೋ ಅದೆಲ್ಲ ಕಾರಣದ ಪುನರ್ನಿರ್ಮಿತಿ. ವಿಶ್ವವು

ಪರಿಣಾಮವಾದರೆ, ಭಗವಂತನು ಕಾರಣವಾದರೆ, ಇದು ಭಗವಂತನ ಪುನರುತ್ಪನ್ನವೆಂದಾಗಬೇಕು. ವಿಶ್ವವೇ ಭಗವಂತನ ಶರೀರವು, ಆ ಶರೀರವು ಕುಗ್ಗಿ ಸೂಕ್ಷ್ಮವಾಗಿ ಕಾರಣವಾಗುತ್ತದೆ. ಮತ್ತು ಅದರಿಂದ ವಿಶ್ವವು ವಿಕಾಸವಾಗುತ್ತದೆ ಎಂದು ವಾದಿಸುವುದಾದರೆ, ಆಗ ಅದ್ವೈತಿಯು ಭಗವಂತನೇ ಈ ವಿಶ್ವವಾಗಿದ್ದಾನೆ ಎನ್ನುತ್ತಾನೆ. ಇಲ್ಲೊಂದು ಸೂಕ್ಷ್ಮಪ್ರಶ್ನೆ ಏಳುತ್ತದೆ– ಭಗವಂತನು ಈ ವಿಶ್ವವಾದರೆ, ಆಗ ಎಲ್ಲವೂ ಭಗವಂತನೇ. ಖಂಡಿತವಾಗಿಯೂ– ಪ್ರತಿಯೊಂದೂ ಭಗವಂತನೇ. ನನ್ನ ಶರೀರ ಭಗವಂತ, ನನ್ನ ಮನಸ್ಸು ಭಗವಂತ, ನನ್ನ ಆತ್ಮ ಭಗವಂತ. ಹಾಗಾದರೆ ಅಷ್ಟೊಂದು ಜೀವರು ಇರುವದೇಕೆ? ಭಗವಂತನು ತಾನೇ ಮಿಲಿಯ, ಮಿಲಿಯಾಂತರ ಜೀವಗಳಾಗಿ ವಿಭಜಿಸಿಕೊಂಡಿರುವನೆ? ಆ ಅನಂತ ಶಕ್ತನು ಮತ್ತು ವಸ್ತುವು– ವಿಶ್ವದ ಒಂದು ಪರವಸ್ತುವೇ– ವಿಭಜನೆಯಾಗುವದು ಹೇಗೆ. ಅಪರಿಮಿತವಾದದ್ದನ್ನು, ಅನಂತವಾದದ್ದನ್ನು ವಿಭಜಿಸುವದೆನ್ನುವುದು ಅಸಾಧ್ಯ. ಪರಿಶುದ್ಧ ಪರಮಾತ್ಮನೇ ಈ ವಿಶ್ವವಾಗುವದು ಹೇಗೆ? ಅವನು ವಿಶ್ವವಾಗುವದಾದರೆ, ಅವನು ಮಾರ್ಪಾಡಾಗಬಲ್ಲವನಾದರೆ, ಆಗ ಅವನು ಪ್ರಕೃತಿಯಲ್ಲಿರುವನು, ಪ್ರಕೃತಿಯಲ್ಲಿ ಏನಿದೆಯೋ ಅದು ಹುಟ್ಟುವದು, ಸಾಯುವದು. ಭಗವಂತನು ಮಾರ್ಪಾಡಾಗುವನಾದರೆ, ಅವನು ಎಂದಾದರೊಂದು ದಿನ ಸಾಯಲೇಬೇಕು; ಇದು ನೆನಪಿರಲಿ. ಮತ್ತೆ, ಭಗವಂತನ ಎಷ್ಟು ಭಾಗ ಈ ವಿಶ್ವವಾಗಿದೆ? ಆ ಭಾಗ (ಆಲ್ಜೀಬ್ರಾ) ಬೀಜಗಣಿತದ ತಿಳಿಯದ ಪರಿಮಾಣ X ಎಂದರೆ, ಭಗವಂತನು ಈಗ X ನ್ನು ಕಳೆದುಕೊಂಡ ಭಗವಂತ (ಭಗವಂತನ–X) ನಾಗುತ್ತಾನೆ, ಆದ್ದರಿಂದ ಅವನು ಈ ಸೃಷ್ಟಿಗೆ ಮೊದಲಿನ ಭಗವಂತನಲ್ಲ, ಏಕೆದರೆ ಅವನಲ್ಲಿನ ಇಷ್ಟು ಭಾಗ ಕಳಚಿ ವಿಶ್ವವಾಗಿದೆ. ಅದ್ವೈತಿಯ ಉತ್ತರ ಹೀಗೆ– ಈ ವಿಶ್ವಕ್ಕೆ ನಿಜವಾದ ಅಸ್ತಿತ್ವವಿಲ್ಲ, ಅದು ಕೇವಲ ತೋರಿಕೆಯಲ್ಲಿರುವದು. ಹುಟ್ಟಿ ಸಾಯುವ ಈ ದೇವ ದೇವತೆಗಳು ದೇವದೂತರು ಮತ್ತು ಬಂದು ಹೋಗುವ ಈ ಎಲ್ಲ ಅಗಣಿತ ಸಂಖ್ಯೆಯ ಆತ್ಮಗಳು– ಈ ಎಲ್ಲ ಕೇವಲ ಕನಸುಗಳು. ಎಲ್ಲವೂ ಒಂದೇ ಅನಂತ. ಒಂದೇ ಸೂರ್ಯನು ನೀರಿನ ಅನೇಕ ಹನಿಗಳಿಂದ ಪ್ರತಿಬಿಂಬಿತನಾಗಿ ಹಲವಾಗಿ ಕಾಣುತ್ತಾನೆ. ಮಿಲಿಯಾಂತರ ನೀರಿನ ಹನಿಗಳು, ಅನೇಕ ಮಿಲಿಯ ಸೂರ್ಯಗಳನ್ನು ಪ್ರತಿಫಲಿಸುತ್ತವೆ, ಪ್ರತಿಯೊಂದು ಹನಿಯಲ್ಲಿಯೂ ಸೂರ್ಯನ ಪರಿಪೂರ್ಣ ಪ್ರತೀಕವೇ ಇದೆ, ಆದರೂ ಇರುವವನು ಒಬ್ಬನೇ ಸೂರ್ಯ– ಅದರಂತೆಯೇ, ಈ ಜೀವರ ವಿಷಯಗಳೂ ಸಹ, ಅವರೆಲ್ಲರೂ ಒಬ್ಬನೇ ಅನಂತ ಪರಮಾತ್ಮನ ಕೇವಲ ಪ್ರತಿಫಲಿತ ಬಿಂಬಗಳು. ಒಂದು ಕನಸು ಒಂದು ಸತ್ಯವಿಲ್ಲದೆ ಇರಲಾರದು, ಆ ಸತ್ಯವೇ ಒಂದೇ ಆದ ಅನಂತ ಇರವು. ಶರೀರ, ಮನಸ್ಸು ಅಥವಾ ಆತ್ಮವಾಗಿ ನೀವೊಂದು ಕನಸು, ಆದರೆ ನಿಜವಾಗಿ ನೀವು ಯಾರು ಎಂದರೆ ಸತ್, ಚಿತ್, ಆನಂದ ಪರಿಪೂರ್ಣ. ಹೀಗೆ ಅದ್ವೈತಿಯು ಹೇಳುತ್ತಾನೆ. ಈ ಎಲ್ಲ ಜನನಗಳು, ಪುನರ್‌ಜನನಗಳು, ಬರುವದು, ಹೋಗುವದು ಎಲ್ಲಾ ಕನಸಿನ ಭಾಗಗಳು– ನೀವು ಅನಂತ– ನೀವು ಹೋಗುವಿರೆಲ್ಲಿಗೆ? ಸೂರ್ಯ, ಚಂದ್ರ ಮತ್ತು ಇಡೀ ವಿಶ್ವವೇ ನಿಮ್ಮ ಪ್ರಕೃತಿಯ ಒಂದು ಹನಿ. ನೀವು ಹುಟ್ಟುವದು, ಸಾಯುವದು ಹೇಗೆ? ಆತ್ಮನು– ಪರಮಾತ್ಮನು– ಎಂದೂ ಹುಟ್ಟಲಿಲ್ಲ, ಎಂದೂ ಹುಟ್ಟಲಾರನು, ಎಂದೂ ತಂದೆ ಅಥವಾ ತಾಯಿ, ಸ್ನೇಹಿತರು ಅಥವಾ ಹಗೆಗಳಿಲ್ಲದವನು, ಏಕೆಂದರೆ ಅದು ಸತ್–ಚಿತ್–ಪರಮಾನಂದ.

ಈ ದರ್ಶನ ಹೇಳುವ ಗುರಿ ಏನು? ಈ ಜ್ಞಾನವನ್ನು ಪಡೆದು ವಿಶ್ವದೊಡನೆ ಒಂದಾಗುವದು. ಇದನ್ನು ಸಾಧಿಸಿದವರಿಗೆ, ಎಲ್ಲ ಸ್ವರ್ಗಗಳು, ಬ್ರಹ್ಮಲೋಕವೂ ಕೂಡ ನಾಶವಾಗುವದು, ಸಂಪೂರ್ಣ ಕನಸು ಮಾಯವಾಗುವದು, ತಮ್ಮನ್ನು ತಾವೇ ವಿಶ್ವದ ಶಾಶ್ವತ ಭಗವಂತನಾಗಿ ಕಾಣುವರು. ನಾವು ಈಗ ಇಷ್ಟೊಂದು ಮುಖ್ಯವೆಂದು ಯೋಚಿಸುವ ಸಣ್ಣ ಜರಡಿಗಳಿಂದ ಲೆಕ್ಕವಿಲ್ಲದಷ್ಟು ಆಚೆ ಅವರ ವ್ಯಕ್ತಿತ್ವವನ್ನು ಪಡೆಯುವರು. ಯಾವ ವ್ಯಕ್ತಿತ್ವವೂ ನಷ್ಟವಾಗುವದಿಲ್ಲ; ಅನಂತವಾದ ಶಾಶ್ವತ ವ್ಯಕ್ತಿತ್ವ ಮೇಲೆ ಬರುತ್ತದೆ. ಅಲ್ಪ ವಿಷಯಗಳಲ್ಲಿ ಸಂತೋಷ ಉಂಟಾಗುವದಿಲ್ಲ. ನಾವು ಈ ಸಣ್ಣ ಶರೀರದಲ್ಲಿ, ಸಣ್ಣ ವ್ಯಕ್ತಿತ್ವದಲ್ಲಿ ಸಂತೋಷವನ್ನು ಕಾಣುತ್ತೇವೆ, ಆದರೆ ಇಡೀ ವಿಶ್ವವೇ ನಮ್ಮದೇ ಸ್ವಂತ ಶರೀರವಾಗುವದಾದರೆ ಸಂತೋಷ ಎಷ್ಟು ಅತಿಯಾಗುತ್ತದೆ? ಈ ಬೇರೆ ಬೇರೆ ಶರೀರಗಳಲ್ಲಿ ಸಂತೋಷವಿರುವದಾದರೆ, ಎಲ್ಲವೂ ಒಂದೇ ಆದರೆ, ಆಗ ಅದರ ಆನಂದವೆಷ್ಟಿರಬೇಡ? ಇದನ್ನರಿತವನು ಸ್ವಾತಂತ್ರ್ಯಕ್ಕೇರುತ್ತಾನೆ, ಕನಸಿನಾಚೆಗೆ ಹೋಗಿ ತನ್ನನ್ನೇ ತನ್ನ ನಿಜಸ್ವರೂಪದಲ್ಲಿ ಅರಿಯುತ್ತಾನೆ. ಇದು ಅದ್ವೈತದ–ದ್ವೈತವಲ್ಲದ–ಬೋಧನೆ.

ಇವು ವೇದಾಂತ ಸಿದ್ಧಾಂತದ ಮೂರು ಮಜಲುಗಳು. ಇದರಿಂದಾಚೆ ನಾವು ಹೋಗಲಾರೆವು, ಏಕೆಂದರೆ ಏಕತ್ವವನ್ನು ದಾಟಿ ನಾವು ಹೋಗಲಾರೆವು. ಯಾವದೇ ವಿಜ್ಞಾನ ನಿರ್ದ್ವಂದ್ವ ಸ್ಥಿತಿಯನ್ನು ಮುಟ್ಟಿದರೆ, ಅದು ಇನ್ನೂ ಮುಂದೆ ಸಾಗಲು ಸಾಧ್ಯವಾಗಲಾದು. ನೀವು ಪರತತ್ತ್ವದ ಪರಿಪೂರ್ಣಭಾವವನ್ನು, ಯಾವದರಿಂದ ಈ ವಿಶ್ವದ ಪ್ರತಿಯೊಂದೂ ಉಗಮವಾಗಿದೆಯೋ, ಆ ಏಕತೆಯ ಭಾವವನ್ನು ಮೀರಿಹೋಗಲಾರಿರಿ. ಎಲ್ಲ ಜನಗಳೂ ಅದ್ವೈತ ಸಿದ್ಧಾಂತವನ್ನು ಸ್ವೀಕರಿಸಲಾರರು. ಅದು ಬಹಳವೇ ಕಠಿಣ. ಮೊಟ್ಟಮೊದಲಿಗೆ, ಅದನ್ನು ಪ್ರಜ್ಞಾಪೂರ್ವಕವಾಗಿ ತಿಳಿಯುವದೇ ಕಷ್ಟ. ಎರಡನೆಯದಾಗಿ, ಅದು ಅಧಿಕಾಂಶದ ಜನರಿಗೆ ಹಿಡಿಸದು.

ಈ ಮೂರು ಮಜಲುಗಳಲ್ಲಿ ಮೊದಲನೆಯದರಿಂದ ಪ್ರಾರಂಭಿಸುವದು ಒಳ್ಳೆಯದು. ಅನಂತರ ಅದರ ಮಥನ ಮತ್ತು ಅರಿವಿನಿಂದ ಎರಡನೆಯದು ತಾನೇ ತೆರೆದುಕೊಳ್ಳುತ್ತದೆ. ಒಂದು ಜನಾಂಗದ ಪಯಣದಂತೆ, ವ್ಯಕ್ತಿಗಳೂ ಪ್ರಯಾಣಿಸಬೇಕು. ಮಾನವ ಕುಲ ಧರ್ಮದ ಭಾವನೆಗಳ ಪರಾಕಾಷ್ಠೆಯನ್ನು ಮುಟ್ಟಲು ತೆಗೆದುಕೊಂಡ ಹೆಜ್ಜೆಗಳನ್ನು, ಪ್ರತಿವ್ಯಕ್ತಿಯೂ ಹಾಕಬೇಕು. ಒಂದು ಹೆಜ್ಜೆಯಿಂದ ಮತ್ತೊಂದಕ್ಕೆ ಹೋಗಲು ಮಾನವಕುಲ ಮಿಲಿಯಾಂತರ ವರ್ಷಗಳನ್ನು ತೆಗೆದುಕೊಂಡರೆ, ಪ್ರತ್ಯೇಕ ವ್ಯಕ್ತಿಗಳು ಮಾನವ ಕುಲದ ಇಡೀ ಜೀವನವನ್ನು ಕೆಲವೇ ವರ್ಷಗಳು, ಅಥವ ಹೆಚ್ಚು ಶೀಘ್ರವೇ– ಬಹುಶಃ ಆರು ತಿಂಗಳಲ್ಲೇ ಜೀವಿಸಬಹುದು. ಆದರೆ ನಮ್ಮಲ್ಲಿ ಪ್ರತಿಯೊಬ್ಬನೂ ಈ ಹೆಜ್ಜೆಗಳ ಮೂಲಕವೇ ಹಾದುಹೋಗಬೇಕು. ನಿಮ್ಮಲ್ಲಿ ದ್ವೈತಿಗಳಲ್ಲದವರು, ಸಂದೇಹವಿಲ್ಲದೆ ನೀವು ಕಟ್ಟಾ ದ್ವೈತಿಗಳಾಗಿದ್ದ ನಿಮ್ಮ ಜೀವಿತಾವಧಿಯನ್ನು ಹಿಂದಿರುಗಿ ಅವಲೋಕಿಸಬಹುದು. ನೀವೊಂದು ಶರೀರ ಮತ್ತು ಮನಸ್ಸು, ಎಂದು ನೀವು ಆಲೋಚನೆ ಮಾಡಿದೊಡನೆಯೇ, ಈ ಇಡೀ ಕನಸನ್ನು ನೀವು ಒಪ್ಪಿಕೊಳ್ಳಬೇಕು. ನೀವು ಒಂದು ತುಂಡನ್ನು ಹೊಂದಿದ್ದರೆ, ಇಡಿಯನ್ನೇ ನೀವು ತೆಗೆದುಕೊಳ್ಳಲೇಬೇಕು. ಇಲ್ಲಿ ಪ್ರಪಂಚವಿದೆ ಆದರೆ ಭಗವಂತನಿಲ್ಲ ಎನ್ನು ಮನುಷ್ಯ ಮೂರ್ಖ, ಏಕೆಂದರೆ ಪ್ರಪಂಚವಿರುವದಾದರೆ, ಅದಕ್ಕೊಂದು ಕಾರಣವಿರಬೇಕು,

ಅದನ್ನೇ ಭಗವಂತನೆನ್ನುವದು. ಕಾರಣವೊಂದಿದೆ ಎಂಬುದನ್ನು ಅರಿಯದೆ ನೀವು ಪರಿಣಾಮವನ್ನು ಹೊಂದಲಾರಿರಿ. ಪ್ರಪಂಚ ಮಾಯವಾದಾಗ ಮಾತ್ರವೇ ಭಗವಂತನೂ ಮಾಯವಾಗುತ್ತಾನೆ. ನೀವು ಭಗವಂತನೊಡನೆ ನಿಮ್ಮ ಐಕ್ಯವನ್ನು ಸಾಧಿಸಿದಾಗ ಅಲ್ಲಿಂದ ಮುಂದೆ ಈ ಪ್ರಪಂಚವು ನಿಮಗಾಗಿ ಅಲ್ಲ. ಹೇಗಾದರೂ, ಎಲ್ಲಿಯವರೆಗೆ ಈ ಕನಸಿರುವದೋ ಅಲ್ಲಿಯವರೆಗೆ ನಮ್ಮನ್ನು ನಾವೇ ಹುಟ್ಟುವವರು, ಸಾಯುವವರು ಎಂದು ಕಾಣಲು ನಾವು ಬದ್ಧರು, ಆದರೆ ನಾವು ಶರೀರಿಗಳು ಎಂಬ ಕನಸು ಮಾಯವಾದಾಗ, ನಾವು ಹುಟ್ಟುತ್ತಿರುವೆವು ಮತ್ತು ಸಾಯುತ್ತಿರುವೆವು, ಎಂಬ ಕನಸೂ ಮಾಯವಾಗುವದು, ಜೊತೆಗೆ ವಿಶ್ವವೊಂದಿದೆ ಎಂಬ ಮತ್ತೊಂದು ಕನಸೂ ಮಾಯವಾಗುವದು. ಯಾವದನ್ನು ನಾವು ಈಗ ವಿಶ್ವವೆಂದು ನೋಡುತ್ತಿರುವೆವೋ ಅದು ಭಗವಂತನಂತೆ ತೋರಿಕೊಳ್ಳುವದು, ಮತ್ತು ಅದೇ ಭಗವಂತನೇ, ಈ ವರೆಗೂ ಬಹುಕಾಲ ಹೊರಗೇ ಇದ್ದವನು, ನಮ್ಮೊಳಗಿನ ಅಂತರಾತ್ಮನಾಗಿ ತೋರುವನು. ಅದ್ವೈತದ ಅಂತಿಮ ತೀರ್ಮಾನವೇ- ತತ್-ತ್ವಂ-ಅಸಿ, ಇರುವ ಆ ಅದು ನೀನೇ.

(From : The Science & Philosophy of religion, topic 8).

# 17

# ಕರ್ಮವೂ ಅದರ ರಹಸ್ಯವೂ

ಕರ್ಮದ ಗುರಿಗೆ ಹೇಗೋ, ಅಷ್ಟೇ ಗಮನವನ್ನು ಅದರ ಸಾಧನಕ್ಕೂ ಕೊಡಬೇಕೆನ್ನುವದು ನನ್ನ ಜೀವನದಲ್ಲಿ ಕಲಿತ ಉತ್ಕೃಷ್ಟ ಪಾಠಗಳಲ್ಲೊಂದು. ಇದನ್ನು ಕಲಿತದ್ದು ಮಹಾಪುರುಷರೊಬ್ಬರಿಂದ; ಅವರ ಜೀವನವೇ ಈ ಮಹಾತತ್ತ್ವದ ಪ್ರತ್ಯಕ್ಷಸಾಧನೆಯ ನಿದರ್ಶನ. ಅದೊಂದೇ ತತ್ತ್ವದಿಂದ ನಾನು ಶ್ರೇಷ್ಠನೀತಿಗಳನ್ನು ಕಲಿಯುತ್ತಲೇ ಇದ್ದೇನೆ. ಕಾರ್ಯಸಾಫಲ್ಯದ ಎಲ್ಲ ರಹಸ್ಯಗಳಿರುವದೂ ಅಲ್ಲೇ; ಗುರಿಗೆ ಕೊಟ್ಟಷ್ಟೇ ಗಮನವನ್ನು ಸಾಧನಕ್ಕೆ ಕೊಡಬೇಕೆನ್ನುವದು ಮುಖ್ಯ ಎಂದು ನನಗೆ ತೋರುತ್ತದೆ.

ಜೀವನದಲ್ಲಿ ನಮ್ಮ ದೊಡ್ಡ ಕೊರತೆಯೆಂದರೆ, ನಾವು ಎಷ್ಟರ ಮಟ್ಟಿಗೆ ಆದರ್ಶದ ಕಡೆ ಆಕರ್ಷಿತರಾಗುತ್ತೇವೋ, ಅದಕ್ಕೂ ಹೆಚ್ಚಾಗಿ ಅಂತಿಮ ಗುರಿಯು ಮೋಹಕವಾಗಿ, ಅಷ್ಟೇ ಹೆಚ್ಚಾಗಿ ನಮ್ಮನ್ನು ಮರುಳುಮಾಡಿ, ಅಷ್ಟೇ ಮಟ್ಟಿಗೆ ನಮ್ಮ ಮಾನಸಿಕ ಕ್ಷಿತಿಜದಲ್ಲಿ ದೊಡ್ಡದಾಗಿ ಕಾಣುವದರಿಂದ, ಗುರಿಯನ್ನು ಪಡೆಯುವ ವಿಧಾನಗಳೆಲ್ಲಾ ಪೂರ್ಣವಾಗಿ ನಮ್ಮ ದೃಷ್ಟಿಯಿಂದ ಮಾಯವಾಗುವವು.

ಆದರೆ, ಸೋಲುಂಟಾದಾಗ ವಿಮರ್ಶಾತ್ಮಕವಾಗಿ ಸೂಕ್ಷ್ಮವಾಗಿ ವಿಶ್ಲೇಷಿಸಿದರೆ, ನೂರಕ್ಕೆ ತೊಂಬತ್ತೊಂಬತ್ತರಷ್ಟು ವಿಷಯಗಳಲ್ಲಿ, ನಾವು ಸಾಧನಗಳಿಗೆ ಗಮನ ಕೊಡದಿರುವದೇ ಅದಕ್ಕೆ ಕಾರಣವೆಂದು ಕಂಡು ಬರುವದು. ಸಾಧನಗಳ ಗುಣ ಪರಿಷ್ಕಾರ ಮತ್ತು ಸಾಮರ್ಥ್ಯ ಹೆಚ್ಚಿಸುವದರ ಕಡೆ ಸೂಕ್ತ ಗಮನ ಕೊಡುವದೇ ನಮಗೆ ಬೇಕಾಗಿರುವದು. ಸಾಧನ ಸರಿಯಾಗಿದ್ದರೆ, ಸರಿಯಾದ ಪರಿಣಾಮ ಬರಲೇಬೇಕು. ಕಾರಣವೇ ಪರಿಣಾಮವನ್ನುಂಟು ಮಾಡುವದೆಂಬುದನ್ನು ನಾವು ಮರೆತಿದ್ದೇವೆ; ಪರಿಣಾಮ ತನ್ನಷ್ಟಕ್ಕೆ ಬರುವದಿಲ್ಲ; ಕಾರಣಗಳು ನಿಖರವಾಗಿ, ಸೂಕ್ತವಾಗಿ, ಬಲಿಶಾಲಿಯಾಗಿದ್ದ ಹೊರತು ಯೋಗ್ಯ ಪರಿಣಾಮ ಪ್ರತಿಫಲ ಉಂಟಾಗುವದಿಲ್ಲ. ಧ್ಯೇಯವನ್ನು ಆಯ್ಕೆಮಾಡಿ, ಸಾಧನವನ್ನು ನಿಷ್ಕರ್ಷಿಸಿದ ಮೇಲೆ, ನಾವು ಬಹುಮಟ್ಟಿಗೆ ಧ್ಯೇಯವನ್ನು ಕೈ ಬಿಡಬಹುದು; ಏಕೆಂದರೆ ಸಾಧನಗಳನ್ನು ನಿಷ್ಕೃಷ್ಟವನ್ನಾಗಿಸಿದ್ದರೆ ಅದು ಬರುವದು ಎಂದು ನಾವು ದೃಢವಾಗಿರಬಹುದು. ಕಾರಣವಿದ್ದಾಗ, ಪರಿಣಾಮದ ಬಗ್ಗೆ ಮತ್ತೆ ಯಾವ ತೊಂದರೆಯೂ ಇರದು, ಪರಿಣಾಮ ಬರಲೇಬೇಕು. ಕಾರಣದ ಬಗ್ಗೆ ನಾವು ಎಚ್ಚರವಹಿಸಿದರೆ, ಪರಿಣಾಮ ತನ್ನಷ್ಟಕ್ಕೇ ಬರುವದು. ಧ್ಯೇಯದ ಸಿದ್ಧಿಯೇ ಪರಿಣಾಮ, ಅದು ಆದರ್ಶದ ಸಾಕ್ಷಾತ್ಕಾರ. ಸಾಧನೆಗಳೇ ಕಾರಣ; ಆದುದರಿಂದ ಸಾಧನಗಳಿಗೆ ಗಮನವೇ ಜೀವನದ ಹೆಚ್ಚಿನ ರಹಸ್ಯ. ನಾವು ಕರ್ಮವನ್ನಾಚರಿಸಬೇಕು ಎಂದು ಗೀತೆಯಲ್ಲಿ ಓದಿದ್ದೇವೆ; ನಮ್ಮ ಪೂರ್ಣ ಶಕ್ತಿಯೊಡನೆ ಒಂದೇ ಸಮನೆ ಕರ್ಮ ನಡೆಸಬೇಕು ಎಂದೂ ಅರಿತಿದ್ದೇವೆ. ನಮ್ಮ ಸಂಪೂರ್ಣ ಮನಸ್ಸನ್ನು ನಾವು ಮಾಡುತ್ತಿರುವ ಕರ್ಮಕ್ಕೆ, ಅದು ಯಾವದಾದರೂ ಸರಿ ತೊಡಗಿಸಿಕೊಳ್ಳಬೇಕು. ಆದರೆ, ನಾವು

ಅದಕ್ಕೆ ಅಂಟಿಕೊಂಡಿರಬಾರದು. ಅಂದರೆ, ನಾವು ಇತರ ಯಾವದರಿಂದಲೂ ಕರ್ಮದಿಂದ ವಿಮುಖರಾಗಬಾರದು; ಆದರೂ, ನಮಗಿಷ್ಟ ಬಂದಾಗ ಕರ್ಮವನ್ನು ಬಿಡಲೂ ಶಕ್ತರಾಗಿರಬೇಕು.

ನಮ್ಮ ಜೀವನವನ್ನೇ ನಾವು ಪರೀಕ್ಷಿಸಿಕೊಂಡರೆ, ದುಃಖದ ಮಹತ್ತರ ಕಾರಣವೇ ಇದು: ನಾವು ಯಾವದನ್ನಾದರೂ ಕೈಗೊಳ್ಳುತ್ತೇವೆ, ಅದಕ್ಕೆ ನಮ್ಮ ಸಂಪೂರ್ಣ ಶಕ್ತಿಯನ್ನು ವಿನಿಯೋಗಿಸುತ್ತೇವೆ– ಬಹುಶಃ ಅದು ವ್ಯರ್ಥವಾಗುವದು; ಆದರೂ ನಾವು ಅದನ್ನು ಬಿಡಲಾರೆವು. ಅದು ನಮಗೆ ಹಾನಿಯುಂಟು ಮಾಡುತ್ತದೆ; ಇನ್ನೂ ಮುಂದೆ ಅದಕ್ಕೆ ಆಸಕ್ತರಾಗಿ ಅಂಟಿಕೊಂಡರೆ, ಅದು ಸಂಕಟವನ್ನು ತಂದೊಡ್ಡುವದು ಎಂದು ನಮಗೆ ಗೊತ್ತಿರುತ್ತದೆ; ಇಷ್ಟಾದರೂ ನಾವು ಅದನ್ನು ತೊರೆದು ದೂರ ಸರಿಯಲಾರೆವು. ಜೇನುನೊಣವು ಜೇನು ಕುಡಿಯಲು ಬರುತ್ತದೆ. ಆದರೆ ಅದರ ಕಾಲುಗಳು ಜೇನಿನ ಮಡಕೆಯ ಜೇನಿನಲ್ಲಿ ಸಿಕ್ಕಿಹಾಕಿಕೊಳ್ಳುತ್ತವೆ, ಅದು ಅಲ್ಲಿಂದಾಚೆ ಹೋಗಲಾರದು. ಮತ್ತೆ ಮತ್ತೆ ನಾವು ಅದೇ ಸ್ಥಿತಿಯಲ್ಲಿರುತ್ತೇವೆ. ಅದೇ ನಮ್ಮ ಇರವಿನ ಪೂರ್ಣ ರಹಸ್ಯ. ನಾವು ಇಲ್ಲೇಕೆ ಇದ್ದೇವೆ? ನಾವು ಇಲ್ಲಿಗೆ ಬಂದದ್ದು ಜೇನನ್ನು ಹೀರುವದಕ್ಕೆ, ನಮ್ಮ ಕೈಕಾಲುಗಳು ಅದರಲ್ಲಿ ಅಂಟಿಕೊಂಡಿರುವದನ್ನು ಕಾಣುತ್ತೇವೆ. ನಾವು ಹಿಡಿಯಲು ಬಂದದ್ದಾದರೂ, ನಾವೇ ಸಿಕ್ಕಿಕೊಂಡಿದ್ದೇವೆ. ನಾವು ಬಂದಿದ್ದು ಸುಖಾನುಭವಕ್ಕೆ, ನಾವೇ ಅನುಭೋಗಿಸಲ್ಪಡುವವರು. ಆಳಲು ಬಂದವರು ನಾವು; ಆಳಿಸಿಕೊಳ್ಳುತ್ತಿರುವವರು ನಾವೇ. ಕಾಯಕ ನಡೆಸಲು ಬಂದೆವು, ನಾವೇ ಕಾಯಕದ ವಸ್ತುವಾದೆವು. ಎಲ್ಲ ಕಾಲಕ್ಕೂ ಅದನ್ನೆ ನಾವು ಕಾಣುತ್ತೇವೆ. ಇದು ನಮ್ಮ ಜೀವನದ ಎಲ್ಲ ವಿವರಗಳಲ್ಲೂ ಬರುವದು. ಇತರ ಮನಗಳು ನಮ್ಮ ಮೇಲೆ ಕೆಲಸಮಾಡುತ್ತವೆ, ನಾವು ಯಾವಾಗಲೂ ಇತರ ಮನಗಳ ಮೇಲೆ ಕೆಲಸ ಮಾಡಲು ಹೆಣಗುತ್ತಿರುತ್ತೇವೆ. ನಾವು ಜೀವನದ ಸುಖ ಸಂತೋಷಗಳನ್ನು ಅನುಭವಿಸಲು ಇಚ್ಛಿಸುತ್ತೇವೆ, ಅವು ನಮ್ಮ ಜೀವನಾಧಾರಗಳನ್ನೇ ಕೊರೆಯುತ್ತವೆ. ಪ್ರಕೃತಿಯಿಂದ ಪ್ರತಿಯೊಂದನ್ನೂ ಪಡೆಯಲು ನಾವು ಬಯಸುವೆವು, ಆದರೆ ದೀರ್ಘಕಾಲಾನಂತರ ಪ್ರಕೃತಿಯೇ ನಮ್ಮಿಂದ ಎಲ್ಲವನ್ನು ಕಸಿದುಕೊಳ್ಳುತ್ತದೆ, ನಮ್ಮನ್ನು ಬರಿದುಮಾಡಿ, ಪಕ್ಕಕ್ಕೆಸೆಯುತ್ತದೆ.

ಇದಲ್ಲದಿದ್ದರೆ, ಜೀವನ ಪೂರ್ತ ಉಲ್ಲಾಸವೇ ಇರುತ್ತಿತ್ತು. ಚಿಂತೆಯಿಲ್ಲ, ಅದನ್ನು ಬಿಡಿ! ಎಲ್ಲ ಜಯಾಪಜಯಗಳಲ್ಲೂ, ಸುಖದುಃಖಗಳಲ್ಲೂ, ನಾವು ಸಿಕ್ಕಿ ಹಾಕಿಕೊಳ್ಳದಿದ್ದರೆ ಮಾತ್ರವೇ, ಅದೊಂದು ಉಲ್ಲಾಸದ ಪರಂಪರೆಯೇ ಆಗಿರುತ್ತಿತ್ತು.

ನಮ್ಮ ಸಂಕಟಕ್ಕೆ ಇದೊಂದು ಕಾರಣ; ನಾವು ಅಂಟಿಕೊಂಡಿದ್ದೇವೆ, ಆಸಕ್ತರು ನಾವು ಸಿಕ್ಕಿಹಾಕಿಕೊಳ್ಳುತ್ತಿದ್ದೇವೆ. ಆದುದರಿಂದ ಗೀತೆಯು ಹೇಳುತ್ತದೆ; ನಿರಂತರವಾಗಿ ಕರ್ಮಮಾಡು, ಕರ್ಮಮಾಡು ಆದರೆ ಅಂಟಿಕೊಳ್ಳಬೇಡ, ಸಿಕ್ಕಿಕೊಳ್ಳಬೇಡ. ಪ್ರತಿಯೊಂದರಿಂದಲೂ ನಿರ್ಲಿಪ್ತನಾಗಿರುವ ಶಕ್ತಿಯನ್ನು ನಿನ್ನಲ್ಲೇ ಕಾದಿರಿಸಿಕೋ, ಎಷ್ಟೇ ಪ್ರಿಯಕರವಾಗಿರಲಿ, ಎಷ್ಟೇ ಮನಸ್ಸಿನ ಹಂಬಲಿಕೆಯಿರಲಿ, ಅದನ್ನು ಕಳಚಿಕೊಳ್ಳುವೆನೆಂದಾಗ; ಎಷ್ಟೇ ಬೃಹತ್ತಾದ ಸಂಕಟದ ಯಾತನೆಯನ್ನು ಅನುಭವಿಸುತ್ತಿರಲಿ, ಆದರೂ ಯಾವಾಗ ಬೇಕೆಂದರೆ ಆಗ ಅದನ್ನು ತೊರೆಯುವ ಶಕ್ತಿಯನ್ನು

ಉಳಿಸಿಕೋ. ದುರ್ಬಲರಿಗೆ ಇಲ್ಲಾಗಲೀ, ಈ ಜೀವನದಲ್ಲಾಗಲೀ ಅಥವಾ ಬೇರೊಂದು ಜೀವನದಲ್ಲಾಗಲೀ ಜಾಗವಿಲ್ಲ. ದೌರ್ಬಲ್ಯವು ದಾಸ್ಯಕ್ಕೆ ತಳ್ಳುತ್ತದೆ. ದೌರ್ಬಲ್ಯವು ಎಲ್ಲ ತರಹದ ಭೌತಿಕ, ಮಾನಸಿಕ ಸಂಕಟಗಳಿಗೆ ಒಯ್ಯುತ್ತದೆ. ದೌರ್ಬಲ್ಯವು ಮೃತ್ಯು. ನಮ್ಮ ಸುತ್ತ ನೂರಾರು ಸಾವಿರಗಟ್ಟಲೆಯ ಸೂಕ್ಷ್ಮದೃಷ್ಟಿಗೆ ಮಾತ್ರ ಕಾಣಬಲ್ಲ ಜೀವಿಗಳಿವೆ, ನಾವು ದುರ್ಬಲರಾಗುವವರೆಗೆ, ದೇಹಸ್ಥಿತಿ ಅವುಗಳನ್ನು ಸ್ವೀಕರಿಸಲು ತಯಾರಾಗುವವರೆಗೆ, ಅವು ನಮಗೆ ತೊಂದರೆ ಮಾಡಲಾರವು. ನಮ್ಮ ಸುತ್ತ ಸಂಕಟಗಳ ದಶಲಕ್ಷಾಂತರ ಸೂಕ್ಷ್ಮ ಜೀವಾಣುಗಳು ತೇಲುತ್ತಿರಬಹುದು, ಪರವಾಗಿಲ್ಲ; ನಮ್ಮ ಮನಸ್ಸು ದುರ್ಬಲವಾಗುವವರೆಗೆ, ನಮ್ಮೆಡೆಗೆ ಬರಲು ಅವುಗಳಿಗೆ ಧೈರ್ಯವಿಲ್ಲ, ನಮ್ಮನ್ನು ತಮ್ಮ ಮುಷ್ಟಿಯೊಳಗಿಡುವ ಶಕ್ತಿ ಅವಕ್ಕಿಲ್ಲ, ಇದೊಂದು ದೊಡ್ಡ ಸಂಗತಿ: ಶಕ್ತಿಯೇ ಜೀವನ, ನಿತ್ರಾಣವೇ ಸಾವು. ಶಕ್ತಿಯೇ ಸೌಭಾಗ್ಯ, ಜೀವನ ಶಾಶ್ವತ, ಅಮರ: ನಿತ್ರಾಣವು ಸತತ ಪ್ರಯಾಸ ಮತ್ತು ಸಂಕಟ, ನಿತ್ರಾಣವೇ ಸಾವು.

ಅನುರಕ್ತಿಯು ಈಗಿನ ನಮ್ಮೆಲ್ಲರ ಸಂತೋಷದ ಮೂಲ. ನಮ್ಮ ಸ್ನೇಹಿತರಲ್ಲಿ, ನಮ್ಮ ಬಂಧುಗಳಲ್ಲಿ ನಾವು ಆಸಕ್ತರಾಗಿದ್ದೇವೆ; ನಮ್ಮ ಬೌದ್ಧಿಕ, ಆಧ್ಯಾತ್ಮಿಕ ವಿಚಾರಗಳಲ್ಲಿ ಅನುರಕ್ತರಾಗಿದ್ದೇವೆ, ಅವುಗಳಿಂದ ನಮಗೆ ಸಂತೋಷ ಸಿಗಲಿ ಎಂದು ಹೊರಗಿನ ವಸ್ತುಗಳಿಗೆ ಅಂಟಿದ್ದೇವೆ. ಮತ್ತೆ, ಈ ಅನುರಕ್ತಿಯಲ್ಲದೆ ಬೇರೆ ಯಾವದು ದುಃಖವನ್ನು ತರುವದು? ಸಂತೋಷ ಬೇಕಾದರೆ ನಾವು ನಮ್ಮ ಬಗ್ಗೆ ನಿರ್ಲಿಪ್ತರಾಗಿರಬೇಕು. ಮನಸೋ ಇಚ್ಛೆಯಿಂದ ಆಸಕ್ತರಹಿತರಾಗುವ ಶಕ್ತಿ ನಮಗಿದ್ದ ಪಕ್ಷದಲ್ಲಿ, ಯಾವ ದುಃಖವೂ ಇರುತ್ತಿರಲಿಲ್ಲ. ಒಂದು ವಸ್ತುವಿನೊಡನೆ ತನ್ನೆಲ್ಲ ಶಕ್ತಿಯೊಡನೆ ಅಂಟಿಕೊಳ್ಳಬಲ್ಲ ಸಾಮರ್ಥ್ಯವಿದ್ದೂ, ಹಾಗೆ ಮಾಡಿಕೊಳ್ಳಬೇಕಾದಾಗ ಬಿಡಿಸಿಕೊಳ್ಳುವ ಸಾಮರ್ಥ್ಯವೂ ಇದ್ದ ಮನುಷ್ಯನೊಬ್ಬನೇ ಪ್ರಕೃತಿಯಿಂದ ಸರ್ವೋತ್ಕೃಷ್ಟವಾದದ್ದನ್ನು ಪಡೆಯುವನು. ಎಷ್ಟರ ಮಟ್ಟಿಗೆ ಆಸಕ್ತನಾಗಲು ಸಮರ್ಥನಾಗಿರುವನೋ ಅಷ್ಟೇ ಮಟ್ಟಿಗೆ ನಿರ್ಲಿಪ್ತನಾಗಿರುವ ಸಮರ್ಥನಾಗಿ ಇರಬೇಕೆಂಬುದು ಸಾಧ್ಯವಿಲ್ಲ ಎಂಬುದು ಕಷ್ಟದ ವಿಷಯವಾಗಿದೆ. ಯಾವದರಿಂದಲೂ ಎಂದೆಂದೂ ಆಕರ್ಷಿತರಾಗದ ಜನರಿದ್ದಾರೆ. ಅವರು ಎಂದೂ ಪ್ರೀತಿಸಲಾರರು, ಅವರು ಕಠಿಣ ಹೃದಯಿಗಳು, ನಿರುತ್ಸಾಹದ ಜಡ ಮನುಷ್ಯರು; ಅವರು ಜೀವನದ ಬಹು ಭಾಗದ ಸಂಕಟಗಳನ್ನು ತಪ್ಪಿಸಿಕೊಳ್ಳುವರು. ಆದರೆ ಗೋಡೆಗೆ ಸಂಕಟದ ಅನುಭವವೇ ಇರದು, ಗೋಡೆಯು ಎಂದೂ ಪ್ರೀತಿಸದು, ಎಂದೂ ವ್ಯಥೆ ಪಡದು; ಆದರೆ ಎಷ್ಟಾಗಲೀ ಅದು ಗೋಡೆಯೇ. ಖಂಡಿತವಾಗಿಯೂ, ಅಂಟಿಕೊಂಡಿರುವದು, ಮತ್ತು ಸಿಕ್ಕಿಕೊಳ್ಳುವದು, ಗೋಡೆಯಾಗಿರುವದಕ್ಕಿಂತ ಉತ್ತಮ. ಆದುದರಿಂದ ಎಂದೂ ಪ್ರೀತಿಸದ, ಕಲ್ಲೊ ಆದವನು, ಜೀವನದ ಬಹುಭಾಗ ವೇದನೆಗಳಿಂದಲೂ ಅದರ ಸಂತೋಷದಿಂದಲೂ ಪಾರಾಗುವನು. ಅಂತಹದು ನಮಗೆ ಬೇಡ. ಅದೇ ದೌರ್ಬಲ್ಯ, ಅದೇ ಸಾವು. ದುರ್ಬಲತೆಯನ್ನು ಎಂದೂ ಅನುಭವಿಸದ, ಸಂಕಟವನ್ನು ಎಂದೂ ಕಾಣದ ಆತ್ಮವು ಎಚ್ಚೆತ್ತಿರುವ ಆತ್ಮನೇ ಅಲ್ಲ. ಅದೊಂದು ಜಡ್ಡುಗಟ್ಟಿದ ಔದಾಸೀನ್ಯದ ಸ್ಥಿತಿ. ಅದು ನಮಗೆ ಬೇಡ.

ಅದೇ ಕಾಲದಲ್ಲಿ, ನಮಗೆ ಬೇಕಾಗಿರುವದು ಪ್ರೀತಿಯ ಅಸಾಧಾರಣ ಶಕ್ತಿ, ಆಸಕ್ತಿಯ ಪ್ರಚಂಡ

ಬಲ, ಪೂರ್ಣ ವ್ಯಕ್ತಿತ್ವವನ್ನೇ ಒಂದೇ ವಸ್ತುವಿನ ಮೇಲೆ ಕೇಂದ್ರೀಕರಿಸುವ ಶಕ್ತಿ, ತನ್ಮೂಲಕ ನಮ್ಮ ತನವನ್ನೇ ಕಳೆದುಕೊಂಡು– ಒಂದು ರೀತಿಯಲ್ಲಿ ನಮ್ಮ ತನವನ್ನೇ ನಿರ್ಮೂಲ ಮಾಡಿಕೊಳ್ಳುವದು ಇತರ ವ್ಯಕ್ತಿತ್ವಗಳಿಗಾಗಿ– ಅಂದರೆ ದೇವತೆಗಳ ಶಕ್ತಿಗಾಗಿ, ಎಂಬುವುದು ಮಾತ್ರವೇ ಅಲ್ಲ, ಆ ದೇವತೆಗಳಿಗಿಂತಲೂ ಹೆಚ್ಚಿನ ಶಕ್ತಿವಂತರಾಗಬೇಕು. ಪರಿಪೂರ್ಣನಾದ ಮನುಷ್ಯನು ತನ್ನ ಇಡಿಯ ವ್ಯಕ್ತಿತ್ವವನ್ನೆ ಆ ಪ್ರೀತಿಯ ಬಿಂದುವೊಂದರ ಮೇಲಿಟ್ಟರೂ, ಅದರಲ್ಲಿ ಆಸಕ್ತನಾಗದಂತಿರುವವನು. ಇದು ಹೇಗೆ ಸಾಧ್ಯ? ಕಲಿಯಲು ಇನ್ನೊಂದು ರಹಸ್ಯವಿದೆ.

ಭಿಕ್ಷುಕನು ಎಂದೂ ಸುಖಿಯಲ್ಲ, ಭಿಕ್ಷುಕನು ಪಡೆಯುವದು ಭಿಕ್ಷೆಯನ್ನು ಮಾತ್ರ– ಅದರ ಹಿಂದೆ ಅನುಕಂಪ ಮತ್ತು ತಿರಸ್ಕಾರವಿದೆ; ಕನಿಷ್ಠ ಪ್ರಮಾಣದಲ್ಲಿಯಾದರೂ ಭಿಕ್ಷುಕನು ಕೀಳು ವಸ್ತು ಎಂಬ ಭಾವನೆ ಅದರ ಹಿಂದೆ ಇದೆ. ಅವನು ತಾನು ಪಡೆದದ್ದನ್ನು ಎಂದೂ ನಿಜವಾಗಿ ಸಂತೋಷದಿಂದ ಅನುಭವಿಸಲಾರ.

ನಾವೆಲ್ಲರೂ ಭಿಕ್ಷುಕರೇ. ನಾವೇನೂ ಮಾಡಿದರೂ, ಅದಕ್ಕೆ ಪ್ರತಿಫಲ ಬೇಕು. ನಾವೆಲ್ಲರೂ ಜೀವನದಲ್ಲಿ ವ್ಯಾಪಾರಿಗಳು, ನಾವು ಪುಣ್ಯದಲ್ಲಿ ವ್ಯಾಪಾರಿಗಳು, ನಾವು ಧರ್ಮದಲ್ಲಿ ವ್ಯಾಪಾರಿಗಳು. ಅಯ್ಯೋ! ನಾವು ಪ್ರೀತಿಯಲ್ಲೂ ವ್ಯಾಪಾರಿಗಳು.

ನೀವು ವ್ಯಾಪಾರಕ್ಕೆ ಬಂದಿರಾದರೆ, ಕೊಡುಕೊಳ್ಳುವ ಪ್ರಶ್ನೆಯಾದರೆ, ಕೊಂಡು–ಮಾರುವ ಪ್ರಶ್ನೆಯಾದರೆ, ಮಾರಾಟ ನಿಯಮಗಳಿಗೆ ಬದ್ಧರಾಗಿರಿ. ಒಂದು ವಿಷ ಘಳಿಗೆ ಇರುತ್ತದೆ, ಒಂದು ಉತ್ತಮ ಘಳಿಗೆ ಇರುತ್ತದೆ; ಬೆಲೆಗಳಲ್ಲಿ ಏರು ಮತ್ತು ಬೀಳುಗಳಿರುತ್ತವೆ; ಯಾವಾಗಲೂ ಹೊಡೆತ ಬರುವದನ್ನು ನಿರೀಕ್ಷಿಸುವಿರಿ. ಅದು ಕನ್ನಡಿಯಲ್ಲಿ ನೋಡಿಕೊಂಡಂತೆ. ನಿಮ್ಮ ಮುಖಪ್ರತಿಫಲನವಾಗುತ್ತದೆ; ನೀವು ಕಪಿಮೋರೆ ಮಾಡಿ– ಆ ಕಪಿಮೋರೆ ಕನ್ನಡಿಯಲ್ಲೂ ಇದೆ; ನೀವು ನಕ್ಕರೆ, ಕನ್ನಡಿ ನಗುತ್ತದೆ. ಇದು ಕೊಳ್ಳುವದು ಮತ್ತು ಮಾರುವದು, ಕೊಡುವದು ಮತ್ತು ತೆಗೆದುಕೊಳ್ಳುವದು.

ನಾವು ಸಿಕ್ಕಿಕೊಳ್ಳುತ್ತೇವೆ, ಹೇಗೆ? ನಾವು ಏನು ಕೊಡುತ್ತೇವೋ ಅದರಿಂದಲ್ಲ, ಆದರೆ ನಾವು ಏನು ನಿರೀಕ್ಷೆ ಮಾಡುವೆವೋ ಅದರಿಂದ. ನಮ್ಮ ಪ್ರೀತಿಗೆ ಬದಲಾಗಿ ನಾವು ಸಂಕಟವನ್ನು ಪಡೆಯುತ್ತೇವೆ; ನಾವು ಪ್ರೀತಿಸಿದೆವು ಎಂಬ ಸಂಗತಿಯಿಂದಲ್ಲ. ಆದರೆ ಪ್ರತಿಯಾಗಿ ನಮಗೆ ಪ್ರೀತಿ ಬೇಕು ಎಂಬ ಸಂಗತಿಯಿಂದ. ಅಪೇಕ್ಷೆ ಇಲ್ಲದಲ್ಲಿ ಸಂಕಟವಿಲ್ಲ. ಆಸೆ, ಅಪೇಕ್ಷೆಯು ಎಲ್ಲ ಸಂಕಟಗಳ ಜನಕ. ಆಸೆಗಳು, ಜಯ ಮತ್ತು ಅಪಜಯದ ನಿಯಮಗಳ ಕಟ್ಟಿಗೊಳಗಾಗಿವೆ. ಆಸೆಗಳು ಸಂಕಟವನ್ನು ತಂದೇತರುತ್ತದೆ.

ನಿಜವಾದ ಜಯ, ನಿಜವಾದ ಸುಖದ ಪ್ರಧಾನ ರಹಸ್ಯವಿದು: ಪ್ರತಿಫಲವಾಗಿ ಹಿಂದೇನೂ ಪಡೆಯಲಿಚ್ಛಿಸದವನು, ಪರಿಪೂರ್ಣನಾದ ನಿಸ್ವಾರ್ಥ ಮನುಷ್ಯನು ಅತ್ಯಂತ ಜಯಶೀಲನು. ಇದು ವಿರೋಧಾಭಾಸದಂತೆ ಕಾಣುತ್ತದೆ; ಪ್ರತಿಯೊಬ್ಬ ನಿಸ್ವಾರ್ಥ ಮನುಷ್ಯನೂ ಜೀವನದಲ್ಲಿ ಮೋಸ

ಹೋಗುತ್ತಾನೆ, ಪೆಟ್ಟುತಿನ್ನುತ್ತಾನೆ ಎಂಬುದು ನಮಗೆ ಗೊತ್ತಿಲ್ಲವೇ? ಕಣ್ಣಿಗೆ ಕಾಣುವಂತೆ, ಹೌದು. "ಕ್ರಿಸ್ತನು ನಿಸ್ವಾರ್ಥಿಯಾಗಿದ್ದನು ಆದರೂ ಅವನನ್ನು ಶಿಲುಬೆಗೇರಿಸಲಾಯಿತು". ನಿಜ, ಆದರೆ ಅವನ ನಿಸ್ವಾರ್ಥತೆಯೇ, ಕೋಟ್ಯಂತರ ಜೀವಿಗಳ ಮೇಲೆ ನಿಜ ಗೆಲವಿನ ಹರಕೆಗಳೊಡನೆ ನೀಡಿದ ನಿಜವಾದ ಶಾಂತಿ, ಮಂಗಳದ ಮತ್ತೊಂದು ಮಹಾ ವಿಜಯದ ಕಾರಣ ಎಂದು ನಮಗೆ ಗೊತ್ತಿದೆ.

ಏನನ್ನೂ ಕೇಳದಿರಿ: ಪ್ರತಿಯಾಗಿ ಏನನ್ನೂ ಅಪೇಕ್ಷಿಸದಿರಿ– ನೀವು ಏನನ್ನು ಕೊಡಬೇಕೋ ಅದನ್ನು ಕೊಡಿ: ಅದು ನಿಮಗೆ ಹಿಂದಿರುಗಿ ಬರುತ್ತದೆ– ಆದರೆ ಈಗ ಅದರ ವಿಷಯ ಚಿಂತಿಸದಿರಿ, ಅದು ಸಾವಿರ ಮಡಿ ಹೆಚ್ಚಿಕೊಂಡು ಹಿಂದೆ ಬರುತ್ತದೆ–ಆದರೆ ನಿಮ್ಮ ಗಮನ ಅದರ ಮೇಲಿರಬಾರದು. ಆದಾಗ್ಯೂ ನೀಡುವ ಶಕ್ತಿಯನ್ನು ಹೊಂದಿರಿ; ನೀಡಿ, ಅಲ್ಲಿಗೆ ಅದು ಮುಗಿಯುತ್ತದೆ.

ಇಡೀ ಜೀವನವೇ ಕೊಡುವದಕ್ಕಿದೆ, ಪ್ರಕೃತಿಯು ಕೊಡುವಂತೆ ನಿಮ್ಮನ್ನು ಬಲಾತ್ಕರಿಸುತ್ತದೆ ಎಂಬುದನ್ನು ತಿಳಿಯಿರಿ. ಅದರಿಂದ, ಇಚ್ಛಾಪೂರ್ವಕವಾಗಿ ಕೊಡಿ; ಬೇಗನೆ ಅಥವಾ ನಿಧಾನವಾಗಿ ನೀವು ತ್ಯಜಿಸಬೇಕಾಗುವದು. ನೀವು ಜೀವನಕ್ಕೆ ಬರುವದೇ ಕೂಡಿಡುವದಕ್ಕೆ. ಬಿಗಿ ಹಿಡಿದ ಕೈಗಳಿಂದ ನೀವು ತೆಗೆದುಕೊಳ್ಳಲು ಅಪೇಕ್ಷಿಸುವಿರಿ. ಆದರೆ ಪ್ರಕೃತಿ ಕೈಯೊಂದನ್ನು ನಿಮ್ಮ ಗಂಟಲಿಗೆ ಒತ್ತಿ ನಿಮ್ಮ ಕೈಗಳನ್ನು ತೆರೆಸುತ್ತದೆ. ನೀವು ಇಚ್ಛಿಸುವಿರೋ ಇಲ್ಲವೋ, ನೀವು ಕೊಡಲೇ ಬೇಕಾಗಿರುವದು. 'ನಾನು ಕೊಡುವದಿಲ್ಲ' ಎಂದು ಹೇಳಿದಾಕ್ಷಣ, ಒಂದು ಗುದ್ದು ಬೀಳುವದು; ನಿಮಗೆ ನೋವಾಗುವದು. ದೀರ್ಘಕಾಲಾವಧಿಯಲ್ಲಿ ಪ್ರತಿಯೊಂದನ್ನೂ ಕೈ ಬಿಡುವಂತೆ ಬಲಾತ್ಕಾರಕ್ಕೊಳಗಾಗದವನೊಬ್ಬನೂ ಇಲ್ಲ. ಈ ನಿಯಮದ ವಿರುದ್ಧ ಹೆಚ್ಚು ಹೆಚ್ಚು ಹೆಣಗಾಡಿದಂತೆಲ್ಲ, ಹೆಚ್ಚು ಹೆಚ್ಚು ಸಂಕಟವನ್ನನುಭವಿಸುವನು. ನಾವು ಕೊಡಲು ಧೈರ್ಯ ಮಾಡಲಾರೆವೆಂದೇ, ಪ್ರಕೃತಿಯ ಈ ಮಹತ್ವದ ಬಲಾಪೇಕ್ಷೆಗೆ ಒಪ್ಪಿಕೊಳ್ಳಲು ನಾವು ಸಾಕಷ್ಟು ಮನಸ್ಸು ಗಟ್ಟಿಮಾಡಿಕೊಳ್ಳದೆ ಇರುವದರಿಂದಲೇ, ನಾವು ಸಂಕಟಪಡುವೆವು. ಕಾಡು ಹೋಯಿತು ಆದರೆ ಬದಲಿಗೆ ನಮಗೆ ಶಾಖ ಬಂದಿತು. ಸೂರ್ಯನು ಸಾಗರದಿಂದ ನೀರನ್ನು ತೆಗೆಯುತ್ತಿರುವನು, ಅದನ್ನು ಮಳೆಯಾಗಿ ಸುರಿಸುವನು. ತೆಗೆದುಕೊಳ್ಳಲು, ಕೊಡಲು ನೀವೊಂದು ಯಂತ್ರ; ಕೊಡಲೆಂದೇ ನೀವು ತೆಗೆದುಕೊಳ್ಳುವಿರಿ. ಆದುದರಿಂದ ಏನನ್ನೂ ಪ್ರತಿಯಾಗಿ ಕೇಳಬೇಡಿ; ಆದರೆ ನೀವು ಹೆಚ್ಚು ಕೊಟ್ಟಷ್ಟೂ, ಹೆಚ್ಚು ನಿಮಗೆ ಬರುತ್ತದೆ. ಶೀಘ್ರತರವಾಗಿ ಗಾಳಿಯನ್ನು ಈ ಕೊಠಡಿಯಿಂದ ತೆರವು ಮಾಡಿದರೆ, ಅಷ್ಟೇ ಶೀಘ್ರತರವಾಗಿ ಹೊರಗಿನ ಗಾಳಿಯು ಅಲ್ಲಿ ತುಂಬಿಕೊಳ್ಳುತ್ತದೆ; ಎಲ್ಲ ಬಾಗಿಲುಗಳನ್ನೂ ಪ್ರತಿಯೊಂದು ಕಿಂಡಿಯನ್ನೂ ಮುಚ್ಚಿದರೆ, ಒಳಗಿರುವದು ಉಳಿಯುತ್ತದೆ, ಆದರೆ ಹೊರಗಿರುವದು ಎಂದೂ ಬರುವದಿಲ್ಲ; ಒಳಗಿರುವದು ನಿಂತು ನಾರಾಗಿ, ಕುಲಗೆಟ್ಟು ವಿಷಪೂರಿತವಾಗುತ್ತದೆ. ಜೀವನವೆಂಬ ನದಿಯೊಂದು ಸತತವಾಗಿ ಸಾಗರಕ್ಕೆ ಹರಿದು ಹೋಗುತ್ತದೆ, ಪುನಃ ಸತತವಾಗಿ ತುಂಬಿಕೊಳ್ಳುತ್ತಿರುತ್ತದೆ. ಸಾಗರಕ್ಕೆ ಹೋಗುವದನ್ನು ತಡೆಯಬಾರದು. ಹಾಗೆ ಜೀವನದಿಯನ್ನು ತಡೆದರೆ ಆ ಕ್ಷಣ ಸಾವು ನಿಮ್ಮನ್ನು ಹಿಡಿಯುತ್ತದೆ.

ಆದುದರಿಂದ, ಭಿಕ್ಷುಕರಾಗಬೇಡಿರಿ; ಅನಾಸಕ್ತರಾಗಿ. ಆದರೆ, ಇದೇ ಜೀವನದ ಅತ್ಯಂತ ದುಸ್ಸಾಧ್ಯವಾದ ಕಾರ್ಯ! ಏಕೆಂದರೆ, ದಾರಿಯಲ್ಲಿನ ಅಪಾಯಗಳನ್ನು ನೀವು ಎಣಿಕೆಮಾಡಿರುವದಿಲ್ಲ. ಇರುವ ತೊಂದರೆಗಳನ್ನು ಬುದ್ಧಿಶಕ್ತಿಯಿಂದ ಕಂಡರೂ, ಅದನ್ನು ನಾವು ಅನುಭವಿಸುವವರೆಗೂ ಅವು ಏನೆಂಬುದು ನಮಗೆ ನಿಜವಾಗಿ ಗೊತ್ತಿರುವದಿಲ್ಲ. ದೂರದಿಂದ ನಮಗೆ ಉದ್ಯಾನವೊಂದರ ಸಾಮಾನ್ಯ ನೋಟ ಸಿಗಬಹುದು; ಸರಿ, ಅದರಿಂದೇನು? ಅದರೊಳಗಿದ್ದಾಗ ಮಾತ್ರವೇ ನಾವು ಅದನ್ನು ಅನುಭವಿಸಿ ಸತ್ಯವನ್ನು ತಿಳಿಯುತ್ತೇವೆ. ಮುಂದುವರೆಯುವ ನಮ್ಮ ಪ್ರತಿಯೊಂದು ಯತ್ನವೂ ಸೋತರೂ, ನಾವು ರಕ್ತ ಸುರಿದು ಶ್ರಮಿಸಿದರೂ, ಇವೆಲ್ಲವುಗಳಲ್ಲೂ ನಮ್ಮ ಗುಂಡಿಗೆಯನ್ನು ರಕ್ಷಿಸಿರಬೇಕು– ಈ ಎಲ್ಲ ಸಂಕಷ್ಟಗಳ ನಡುವೆಯೂ ನಮ್ಮ ದೇವತ್ವದಲ್ಲಿ ದೈವೀಶಕ್ತಿಯಲ್ಲಿ ನಮಗೆ ದೃಢತೆಯಿರಬೇಕು. ನಮ್ಮ ಪ್ರಕೃತಿ ಸ್ವಭಾವ ನಾವು ಪ್ರತಿಕ್ರಿಯಿಸುವದನ್ನು ಅಪೇಕ್ಷಿಸುತ್ತದೆ. ಗುದ್ದಿಗೆ ಗುದ್ದು ವಾಪಸ್, ಮೋಸಕ್ಕೆ ಮೋಸ, ಸುಳ್ಳಿಗೆ ಸುಳ್ಳು, ನಮ್ಮೆಲ್ಲ ಬಲದಿಂದ ಎದಿರೇಟು ಹಾಕುವದು ಬೇಕು ಎನ್ನುತ್ತದೆ. ಆಗ, ನಾವು ಹಿಂದೆ ಹೊಡೆಯದಿರಲು ಸಂಯಮವನ್ನಿಟ್ಟುಕೊಳ್ಳಲು, ಅನಾಸಕ್ತರಾಗಿರಲು ನಮಗೆ ದೇವತಾತೀತ ಶಕ್ತಿಯು ಅವಶ್ಯಕವಾಗುತ್ತದೆ.

ಪ್ರತಿದಿನವೂ ನಾವು ಅನಾಸಕ್ತರಾಗಿರುವ ನಿರ್ಧಾರವನ್ನು ನವೀಕರಿಸುತ್ತೇವೆ. ನಮ್ಮ ದೃಷ್ಟಿಯನ್ನು ಹಿಂದಕ್ಕೆ ಹಾಯಿಸಿ, ನಮ್ಮ ಪ್ರೀತಿ, ಅನುರಾಗದ ಹಿಂದಿನ ವಸ್ತುಗಳನ್ನು ನೋಡುತ್ತೇವೆ, ಅವು ಪ್ರತಿಯೊಂದೂ ಹೇಗೆ ನಮ್ಮನ್ನು ದುಃಖಕ್ಕೀಡುಮಾಡಿದವು ಎಂದು ಮನಸ್ಸಿಗೆ ತಂದುಕೊಳ್ಳುತ್ತೇವೆ. ನಮ್ಮ "ಪ್ರೀತಿ"ಯ ಕಾರಣದಿಂದ ನಾವು ವಿಷಣ್ಣತೆಯ ಪ್ರಪಾತಕ್ಕೆ ಇಳಿದೆವು! ಇತರರ ಕೈಯಲ್ಲಿ ಕೇವಲ ದಾಸರಾಗಿದ್ದೇವೆಂಬುದನ್ನು ಕಂಡೆವು, ನಮ್ಮನ್ನು ಕೆಳಕ್ಕೆ, ಮತ್ತಷ್ಟು ಕೆಳಕ್ಕೆ ದೂಡಿದರು! ನಾವೊಂದು ಹೊಸ ಸಂಕಲ್ಪವನ್ನು ಮಾಡಿದೆವು: "ಇನ್ನು ಮುಂದೆ ನನ್ನ ಒಡೆಯ ನಾನೇ, ಇನ್ನು ಮುಂದೆ ನನ್ನ ಮೇಲೆ ನನಗೆ ಹತೋಟಿ ಇರುತ್ತದೆ". ಆದರೆ ಕಾಲ ಬಂದಂತೆ, ಪುನಃ ಹಳೆಯ ಕಥೆಯೇ. ಮತ್ತೆ ವ್ಯಕ್ತಿತ್ವ ಸಿಕ್ಕಿಕೊಳ್ಳುತ್ತದೆ, ತಪ್ಪಿಸಿಕೊಳ್ಳಲಾರದು. ಹಕ್ಕಿ ಹೆಣಗುತ್ತಾ, ರೆಕ್ಕೆ ಬಡಿಯುತ್ತಾ ಬಲೆಯೊಳಗಿದೆ– ಇದು ನಮ್ಮ ಜೀವನ.

ಕ್ಲೇಶಗಳನ್ನು ನಾನು ಬಲ್ಲೆ. ಅವು ನಡುಕ ಹುಟ್ಟಿಸುವಂತಿವೆ, ನಮ್ಮಲ್ಲಿ ಶೇಕಡಾ ತೊಂಬತ್ತರಷ್ಟು ಹತಾಶರಾಗಿ ಎದೆಗುಂದುತ್ತಾರೆ, ನಮ್ಮ ಸರದಿಯಲ್ಲಿ ನಾವು ನಿರಾಶಾವಾದಿಗಳಾಗಿ, ಪ್ರಾಮಾಣಿಕತೆ, ಪ್ರೀತಿ ಮತ್ತು ಯಾವದೆಲ್ಲವೂ ಮಹತ್ತರವೂ, ಉದಾತ್ತವೂ ಆಗಿವೆಯೋ ಅವುಗಳಲ್ಲಿ ನಂಬಿಕೆಯನ್ನಿಡಲಾರೆವು. ಹೀಗೆ ತಮ್ಮ ಜೀವನದ ಹೊಸತರಲ್ಲಿ ಕ್ಷಮಾಶೀಲರೂ, ಕರುಣಿಗಳೂ, ಸರಳರೂ, ಕಪಟರಹಿತರೂ ಆಗಿದ್ದವರು, ವೃದ್ಧಾಪ್ಯದಲ್ಲಿ ಮಾನವನ ವಂಚನೆಯ ಮುಖವಾಡಗಳನ್ನು ಹಾಕಿಕೊಂಡಿರುವದನ್ನು ನಾವು ಕಾಣುತ್ತೇವೆ. ಅವರ ಮನಸ್ಸು ಜಟಿಲವಾದ ಮುದ್ದೆಯಾಗಿರುತ್ತದೆ. ಹೊರಗಿನ ವ್ಯವಹಾರ ಚಾತುರ್ಯ ಸಾಕಷ್ಟಿರಬಹುದು. ಅವರು ಬೇಗ ಉದ್ರೇಕಿತರಾಗುವ ತಲೆತಿರುಕರಲ್ಲ, ಮಾತನಾಡುವದಿಲ್ಲ, ಆದರೆ ಹಾಗಿರುವದೇ ಅವರಿಗೆ ಒಳ್ಳೆಯದು; ಅವರ ಹೃದಯಗಳು ನಿಶ್ಶೇಷವಾಗಿವೆ, ಆದುದರಿಂದ ಅವರು ಮಾತನಾಡುವದಿಲ್ಲ. ಅವರು

ಶಪಿಸುವದಿಲ್ಲ, ಸಿಟ್ಟು ಮಾಡಿಕೊಳ್ಳುವದಿಲ್ಲ; ಆದರೆ ಸಿಟ್ಟಾಗಲು ಶಕ್ತರಾಗುವದು ಅವರಿಗೆ ಒಳ್ಳೆಯದು, ಶಪಿಸಬಲ್ಲವರಾಗುವದು ಸಾವಿರ ಪಾಲು ವಾಸಿ. ಅವರಿಗೆ ಸಾಧ್ಯವಿಲ್ಲ. ಕೊರೆವ ಕೈಗಳು ಅವರ ಹೃದಯವನ್ನು ಹಿಡಿದು ಅದನ್ನು ಅಚೇತನವಾಗಿಸಿದೆ; ಅದು ಇನ್ನು ಕೆಲಸಮಾಡಲಾರದು, ಶಪಿಸುವದಕ್ಕೂ ಆಗದು, ಬಿರುಸು ನುಡಿಯಾಡುವದೂ ಆಗದು.

ಇವೆಲ್ಲವನ್ನು ನಾವು ತೊರೆಯಬೇಕು; ಆದುದರಿಂದ ನಮಗೆ ಅತಿ ದೈವಿಕ ಶಕ್ತಿಬೇಕು ಎಂದು ನಾನನ್ನುತ್ತೇನೆ. ಅತಿ ಮಾನವ ಶಕ್ತಿ ಸಾಕಷ್ಟು ಬಲವಲ್ಲ. ಅತಿ ದೈವಿಕ ಶಕ್ತಿಯೊಂದೇ ದಾರಿ, ಅವುಗಳಿಂದ ಹೊರಗೆ ಬರಲು ದಾರಿ. ಅದೊಂದರಿಂದಲೇ ನಾವು ಈ ಎಲ್ಲ ಅತಿತೊಡರುಗಳ, ಸಂಕಟಗಳ ಸುರಿಮಳೆಯ ಮೂಲಕ ಪೆಟ್ಟು ಬೀಳದಂತೆ ದಾಟಿ ಹೋಗಬಹುದು. ನಮ್ಮನ್ನು ತುಂಡುಗಳಾಗಿ ಕತ್ತರಿಸಬಹುದು, ಛಿದ್ರಛಿದ್ರವಾಗಿ ಹರಿಯಬಹುದು, ಆದರೂ ನಮ್ಮ ಹೃದಯಗಳು ಉದ್ದಕ್ಕೂ ಹೆಚ್ಚು ಉದಾತ್ತವಾಗಿ ಮತ್ತೂ ಹೆಚ್ಚು ಉದಾತ್ತವಾಗಿ ಬೆಳೆಯಲೇಬೇಕು.

ಇದು ಬಹಳ ಕಷ್ಟತರವಾದದ್ದು, ಆದರೆ ಸತತ ಅಭ್ಯಾಸದಿಂದ ನಾವು ಕಷ್ಟವನ್ನು ದಾಟಬಹುದು. ನಮ್ಮಷ್ಟಕ್ಕೆ ನಾವೇ ಅದಕ್ಕೆ ಈಡಾಗದಿದ್ದ ಹೊರತು ನಮಗೆ ಏನೂ ಆಗುವದಿಲ್ಲ ಎಂಬುದನ್ನು ಕಲಿಯಲೇಬೇಕು. ನಾನು ಈಗಾಗಲೇ ಹೇಳಿದ್ದೇನೆ, ದೇಹ ಅದಕ್ಕೆ ತಯಾರಾದ ಹೊರತು, ನನಗೆ ಯಾವ ರೋಗವೂ ಬರಲಾರದು; ರೋಗವು ಜೀವಾಣುಗಳನ್ನು ಮಾತ್ರವೇ ಅಲ್ಲ, ಆದರೆ ಆಗಲೇ ಇರುವ ಕೆಲವೊಂದು ಅನುಕೂಲ ದೇಹಸ್ಥಿತಿಯನ್ನೂ ಅವಲಂಬಿಸಿದೆ. ನಾವು ಯಾವದಕ್ಕೆ ಅಳವಡಿಸಿಕೊಂಡಿದ್ದೇವೋ ಅದನ್ನು ಮಾತ್ರ ಪಡೆಯುವೆವು. ನಮ್ಮ ಹೆಮ್ಮೆಯನ್ನು ಬಿಟ್ಟು, ಇದನ್ನು ತಿಳಿಯೋಣ; ಬರುವ ಸಂಕಟ ಅಪಾತ್ರವಾದುದಲ್ಲ. ಅರ್ಹವಲ್ಲದ ಯಾವ ಹೊಡೆತವೂ ಎಂದಿಗೂ ಇಲ್ಲ; ನನ್ನ ಕೈಯಿಂದ ನಾನೇ ದಾರಿಮಾಡಿಕೊಡದ ಕೆಡುಕು ಎಂದಿಗೂ ಇಲ್ಲ. ನಮಗೆ ಅದು ಗೊತ್ತಿರಬೇಕು. ನಿಮ್ಮನ್ನೇ ಪರೀಕ್ಷಿಸಿಕೊಳ್ಳಿ, ನೀವು ತಿಂದ ಪ್ರತಿ ಪೆಟ್ಟೂ ನೀವು ನಿಮ್ಮನ್ನು ತಯಾರಿ ಮಾಡಿಕೊಂಡಿದ್ದಿರೆಂದೇ ಬಂದಿದ್ದು. ನೀವು ಅರ್ಧ ಮಾಡಿದಿರಿ, ಉಳಿದರ್ಧವನ್ನು ಹೊರಗಿನ ಪ್ರಪಂಚ ಮಾಡಿತು; ಹಾಗಾಗಿ ಹೊಡೆತ ಬಂತು. ಅದು ನಮ್ಮನ್ನು ಸ್ತಿಮಿತಕ್ಕೆ ತರುತ್ತದೆ. ಅದೇ ಕಾಲದಲ್ಲಿ, ಇದೇ ಪರಿಶೀಲನೆಯಿಂದ ಭರವಸೆಯ ಟೀಕೊಂದು ಬರುತ್ತದೆ, ಆ ಭರವಸೆಯ ಚೀಟಿ ಇದು: "ನನಗೆ ಹೊರಗಿನ ಪ್ರಪಂಚದ ಮೇಲೆ ಹತೋಟಿಯಿಲ್ಲ, ಆದರೆ ನನ್ನೊಳಗಿರುವದು, ನನಗೆ ಹತ್ತಿರವಿರುವದು, ನನ್ನದೇ ಸ್ವಂತ ಪ್ರಪಂಚ ನನ್ನ ಸ್ವಾಧೀನದಲ್ಲಿದೆ. ಈ ಎರಡೂ ಸೇರಿಕೊಳ್ಳುವದು ಸೋಲಿಗೆ ಅವಶ್ಯವಾದರೆ, ಈ ಎರಡೂ ಒಟ್ಟಾಗಿರುವದು ನನಗೆ ಹೊಡೆತ ಕೊಡಲು ಅಗತ್ಯವಾದರೆ, ನನ್ನ ವಶದಲ್ಲಿರುವ ಒಂದನ್ನು ನಾನು ಒದಗಿಸುವದಿಲ್ಲ, ಆಗ ಹೊಡೆತ ಹೇಗೆ ಬಂದೀತು? ನನ್ನ ಮೇಲೆ ನನಗೆ ನಿಜವಾದ ಹಿಡಿತ ಬಂದರೆ ಹೊಡೆತ ಎಂದಿಗೂ ಬರಲಾರದು".

ನಮ್ಮ ಬಾಲ್ಯದಿಂದಲೂ, ಎಲ್ಲ ಕಾಲದಲ್ಲೂ ನಮಗಿಂತ ಹೊರಗಿನ ಯಾವದಾದರೊಂದರ ಮೇಲೆ ದೂಷಣೆಯನ್ನು ಹೊರಿಸುತ್ತೇವೆ. ಬೇರೆಯವರನ್ನು ಸರಿಪಡಿಸಲು ನಾವು ಯಾವಾಗಲೂ

ಎದ್ದು ನಿಲ್ಲುತ್ತೇವೆ, ಆದರೆ ನಮ್ಮನ್ನೇ ಅಲ್ಲ. ನಮಗೆ ದುಃಖವಾದರೆ, "ಪ್ರಪಂಚವು ಸೈತಾನನ ಪ್ರಪಂಚ" ಅನ್ನುತ್ತೇವೆ. ಇತರರನ್ನು 'ಎಂತಹ ತಿಳಿಗೇಡಿ ಮೂರ್ಖರು' ಎಂದು ಶಪಿಸುತ್ತೇವೆ. ನಾವು ನಿಜವಾಗಿಯೂ ಅಷ್ಟು ಒಳ್ಳೆಯವರಾದರೆ ನಾವೇಕೆ ಇಂತಹ ಪ್ರಪಂಚದಲ್ಲಿರಬೇಕು? ಇದು ಸೈತಾನನ ಪ್ರಪಂಚವಾದರೆ, ನಾವೂ ಕೂಡ ಸೈತಾನರಾಗಿರಲೇಬೇಕು, ಹಾಗಿಲ್ಲದಿದ್ದರೆ ನಾವಿಲ್ಲೇಕೆ ಇರಬೇಕು? 'ಓ, ಪ್ರಪಂಚದ ಜನರು ಎಷ್ಟು ಸ್ವಾರ್ಥಿಗಳು!' ನಿಜ ಹೌದು, ಆದರೆ ನಾವು ಉತ್ತಮರಾದರೆ ನಾವೇಕೆ ಇಂತಹ ಸಹವಾಸದಲ್ಲಿರಬೇಕು? – ಸ್ವಲ್ಪ ಈ ಬಗೆಗೆ ಯೋಚಿಸಿ.

ನಾವು ಯಾವದಕ್ಕೆ ಅರ್ಹರೋ ಅದನ್ನೇ ಪಡೆಯುತ್ತೇವೆ– ಈ ಪ್ರಪಂಚ ಕೆಟ್ಟದ್ದು ನಾವು ಒಳ್ಳೆಯವರು ಎನ್ನುವಾಗ, ಅದೊಂದು ಸುಳ್ಳು. ಅದು ಹಾಗಾಗಲೇ ಆರದು. ಅದು ನಮಗೆ ನಾವೇ ಹೇಳಿಕೊಳ್ಳುವ ಭಾರಿ ಸುಳ್ಳು.

ಇದು ಕಲಿಯಬೇಕಾದ ಮೊದಲ ಪಾಠ: ಹೊರಗಿನ ಯಾವದನ್ನೂ ಶಪಿಸದಿರಲು, ಹೊರಗಿನ ಯಾರ ಮೇಲೂ ದೋಷವನ್ನು ಹೊರಿಸದಿರಲು, ನಿರ್ಧಾರಮಾಡಿ; ಮಾನವನಾಗಿ ಎದ್ದು ನಿಲ್ಲಿ, ದೋಷವನ್ನು ನಿಮ್ಮ ಮೇಲೇ ಹಾಕಿಕೊಳ್ಳಿ. ಇದು ಯಾವಾಗಲೂ ಸತ್ಯವೆಂದು ನೀವು ಕಾಣುವಿರಿ. ನಿಮ್ಮನ್ನು ನೀವು ನಿಯಂತ್ರಣದಲ್ಲಿಟ್ಟುಕೊಳ್ಳಿ.

ಇದು ನಾಚಿಕೆಯಲ್ಲವೇ– ಒಂದು ಕ್ಷಣ ನಾವು ನಮ್ಮ ಗಂಡಸುತನದ ವಿಷಯ ಅಷ್ಟೊಂದು ಮಾತನಾಡುತ್ತೇವೆ, ನಾವು ದೇವರುಗಳಾಗಿರುವದನ್ನು, ನಮಗೆಲ್ಲವೂ ತಿಳಿದಿದೆ, ಪ್ರತಿಯೊಂದನ್ನೂ ನಾವು ಮಾಡಬಲ್ಲೆವು, ನಾವು ದೋಷರಹಿತರು, ಕಳಂಕರಹಿತರು, ಪ್ರಪಂಚದಲ್ಲಿನ ಅತ್ಯಂತ ನಿಸ್ವಾರ್ಥಿಗಳು ಎಂದು ಮಾತನಾಡುತ್ತೇವೆ; ಮರುಕ್ಷಣವೇ, ಒಂದು ಸಣ್ಣ ಕಲ್ಲೂ ನಮಗೆ ನೋವುಂಟುಮಾಡುವದು, ಯಾರೊಬ್ಬ ಚಿಲ್ಲರೆ ಮನುಷ್ಯನ (ಜಾಕ್) ಸಿಟ್ಟು ನಮಗೆ ಗಾಸಿಮಾಡುತ್ತದೆ,– ಬೀದಿಯ ಯಾವದೇ ಮೂರ್ಖನೂ "ಈ ದೇವರುಗಳನ್ನು" ಸಂಕಟಗೊಳಿಸುವನು! ನಾವು ಇಂತಹ ದೇವರುಗಳಾದರೆ, ಹೀಗಾಗಬಹುದೆ? ಪ್ರಪಂಚವೇ ದೋಷಾರ್ಹ ಎನ್ನುವದು ಸತ್ಯವೇ? ನಮ್ಮ ಯಾವದೇ ತಂತ್ರಗಳು ಪರಮಶುದ್ಧನೂ, ಪರಮಶ್ರೇಷ್ಠನೂ ಆದ ಪರಮಾತ್ಮನನ್ನು ಸಂಕಟಕ್ಕೀಡುಮಾಡಬಲ್ಲವೇ? ನೀವು ಅಷ್ಟೊಂದು ನಿಸ್ವಾರ್ಥಿಗಳಾಗಿದ್ದರೆ, ನೀವು ಪರಮಾತ್ಮನ ಸಮಾನರು. ಯಾವ ಪ್ರಪಂಚ ನಿಮ್ಮನ್ನು ಘಾಸಿಗೊಳಿಸಬಹುದು? ಏಳನೆಯ ನರಕವನ್ನು ನೀವು ಪೆಟ್ಟು ತಾಗದಂತೆ ಸ್ಪರ್ಶವಿಲ್ಲದಂತೆ ದಾಟಬಲ್ಲಿರಿ. ಆದರೆ ನೀವು ಗೊಣಗಿಕೊಂಡು, ಹೊರ ಪ್ರಪಂಚದ ಮೇಲೆ ದೋಷವನ್ನು ಹೊರಿಸಬೇಕೆಂಬ ಸಂಗತಿಯೇ ನೀವು ಹೊರ ಪ್ರಪಂಚವನ್ನು ಶೋಧಿಸ ಹೊರಟಿರುವಿರಿ ಎಂದು ತೋರಿಸುತ್ತದೆ– ನೀವು ಅದನ್ನು ಅನುಭವಿಸುವಿರೆಂಬ ಸತ್ಯವೇ ನಿಮ್ಮನ್ನು ನೀವು ಏನೆಂದು ಕರೆದುಕೊಳ್ಳುವಿರೋ ನೀವು ಅದಲ್ಲ ಎಂದು ತೋರಿಸುತ್ತದೆ. ಹೊರ ಪ್ರಪಂಚವು ನಿಮ್ಮನ್ನು ತೊಂದರೆ ಮಾಡುತ್ತಿದೆ, ಎಂದು ಕಲ್ಪಿಸಿಕೊಂಡು "ಓ, ಸೈತಾನನ ಪ್ರಪಂಚ! ಈ ಮನುಷ್ಯ ನನಗೆ ತೊಂದರೆ ಮಾಡುತ್ತಾನೆ, ಆ ಮನುಷ್ಯ ನನಗೆ ತೊಂದರೆ ಮಾಡುತ್ತಾನೆ" ಹೀಗೆಯೇ ಇನ್ನೂ

ಮುಂತಾಗಿ ಕೂಗುತ್ತಾ ಸಂಕಟದ ಮೇಲೆ ಸಂಕಟವನ್ನು ರಾಶಿ ಹಾಕಿಕೊಳ್ಳುತ್ತಾ, ನಿಮ್ಮ ಅಪರಾಧವನ್ನು, ಕಿರಿಕಿರಿಯನ್ನು, ಹೆಚ್ಚಿಸಿಕೊಳ್ಳುವದನ್ನೇ ಮಾಡುತ್ತಿರುವಿರಿ. ಇದು ಸಂಕಟಕ್ಕೆ ಸುಳ್ಳಿನ ಕಂತೆಯನ್ನು ಸೇರಿಸುತ್ತದೆ.

ನಮ್ಮ ಪಾಲನೆಯನ್ನು ನಾವು ಮಾಡಿಕೊಳ್ಳಬೇಕು– ಇದಷ್ಟೇ ನಾವು ಮಾಡುವದಕ್ಕಾಗುವದು– ಇತರರ ಮೇಲಿನ ಗಮನವನ್ನು ಸ್ವಲ್ಪ ಕಾಲ ಬಿಡಬೇಕು. ನಾವು ಸಾಧನವನ್ನು ಪರಿಪೂರ್ಣಗೊಳಿಸೋಣ; ಗುರಿಯು ತನ್ನ ರಕ್ಷಣೆಯನ್ನು ತಾನೇ ಮಾಡಿಕೊಳ್ಳುತ್ತದೆ. ನಮ್ಮ ಜೀವನ ಒಳಿತಾಗಿ ಶುದ್ಧವಾಗಿರುವದಾದರೆ ಮಾತ್ರವೇ, ಪ್ರಪಂಚವೂ ಒಳಿತಾಗಿ ಶುದ್ಧವಾಗಿರಬಲ್ಲುದು. ಅದು ಪರಿಣಾಮ, ನಾವು ಅದರ ಸಾಧನ. ಆದುದರಿಂದ ಮೊದಲು ನಮ್ಮ ಶುದ್ಧೀಕರಣವನ್ನು ಮಾಡಿಕೊಳ್ಳೋಣ. ನಮ್ಮನ್ನು ನಾವು ಪರಿಪೂರ್ಣರನ್ನಾಗಿ ಮಾಡಿಕೊಳ್ಳೋಣ.

(ಜನವರಿ 4, 1900 ರಂದು ಕ್ಯಾಲಿಫೋರ್ನಿಯಾದ ಲಾಸ್ ಏಂಜಲೀಸ್ ನಲ್ಲಿ ನೀಡಿದ ಉಪನ್ಯಾಸ : From : Complete Works , Vol. II : Work and its secret : P.1)

# 18

# ಮನಸ್ಸಿನ ಶಕ್ತಿಗಳು

ಜಗತ್ತಿನಲ್ಲೆಲ್ಲಾ ಅನಾದಿಕಾಲದಿಂದಲೂ ಪ್ರಕೃತಿಯ ಶಕ್ತಿಗಳಿಗೆ ಮೀರಿದ ಅತಿಮಾನುಷ ಶಕ್ತಿಯ ವಿಷಯದಲ್ಲಿ ಮಾನವನಿಗೆ ನಂಬಿಕೆಯಿದೆ. ನಾವೆಲ್ಲರೂ ಅಸಾಧಾರಣ ಘಟನೆಗಳನ್ನು ಕೇಳಿದ್ದೇವೆ, ಮತ್ತು ನಮ್ಮಲ್ಲಿ ಅನೇಕರಿಗೆ ಅವುಗಳಲ್ಲಿ ಕೆಲವು ವೈಯಕ್ತಿಕ ಅನುಭವಗಳೂ ಆಗಿವೆ. ನನ್ನ ಸ್ವಂತ ಅನುಭವದ ಪರಿಧಿಯೊಳಗೇ ಬಂದ ಕೆಲವೊಂದು ಘಟನೆಗಳನ್ನು ಹೇಳಿ ಈ ವಿಷಯವನ್ನು ಪರಿಚಯಮಾಡಿಕೊಡುವದು ಯುಕ್ತವೆಂದು ಕಾಣುತ್ತದೆ. ಯಾರಾದರೂ ತನ್ನ ಮನಸ್ಸಿನಲ್ಲಿ ಪ್ರಶ್ನೆಗಳನ್ನಿಟ್ಟುಕೊಂಡು ಹೋದರೆ ತಕ್ಷಣವೇ ಅವುಗಳಿಗೆ ಉತ್ತರ ಕೊಡುವಂತಹ ವ್ಯಕ್ತಿಯೊಬ್ಬನ ವಿಚಾರ ಒಮ್ಮೆ ತಿಳಿದು ಬಂತು. ಅವನು ಭವಿಷ್ಯದ ಸಂಗತಿಗಳನ್ನೂ ಹೇಳಬಲ್ಲವನೆಂದು ನನಗೆ ಗೊತ್ತಾಯಿತು. ಆತನ ಬಗ್ಗೆ ಕುತೂಹಲವುಂಟಾಗಿ, ನನ್ನ ಕೆಲವು ಸ್ನೇಹಿತರೊಡನೆ ಆತನನ್ನು ನೋಡಲು ಹೋಗಿದ್ದೆನು. ನಮ್ಮಲ್ಲಿ ಪ್ರತಿಯೊಬ್ಬನಿಗೂ ಕೇಳಲು ಮನಸ್ಸಿನಲ್ಲಿ ಕೆಲವು ಪ್ರಶ್ನೆಗಳಿದ್ದವು. ಪ್ರಶ್ನೆಗಳನ್ನು ಕೇಳುವುದರಲ್ಲಿ ದೋಷಗಳನ್ನು ತಪ್ಪಿಸುವ ಸಲುವಾಗಿ ನಮ್ಮ ಪ್ರಶ್ನೆಗಳನ್ನು ಬರೆದು ನಮ್ಮ ಜೇಬಿನಲ್ಲಿಟ್ಟುಕೊಂಡಿದ್ದೆವು. ಆ ಮನುಷ್ಯನು ನಮ್ಮಲ್ಲಿ ಒಬ್ಬನನ್ನು ನೋಡಿದ ಕೂಡಲೇ ನಮ್ಮ ಪ್ರಶ್ನೆಗಳನ್ನು ಅವನೇ ಹೇಳಿ ಅವುಗಳಿಗೆ ಉತ್ತರವನ್ನು ಕೊಟ್ಟನು. ಅನಂತರ ಕಾಗದದಲ್ಲಿ ಏನನ್ನೋ ಬರೆದು, ಅದನ್ನು ಮಡಚಿ, ಅದರ ಹಿಂಭಾಗದಲ್ಲಿ ಸಹಿ ಹಾಕುವಂತೆ ಹೇಳಿ ನನಗೆ ಕೊಟ್ಟನು "ಇದನ್ನು ನೋಡಬೇಡ, ಇದನ್ನು ನಿನ್ನ ಜೇಬಿನಲ್ಲಿಡು, ಅದನ್ನು ನಾನು ಪುನಃ ಕೇಳುವವರೆಗೂ ಅದನ್ನು ಅಲ್ಲೇ ಇಟ್ಟುಕೊಂಡಿರಿ" ಎಂದನು. ಹೀಗೆಯೇ ನಮ್ಮಲ್ಲಿ ಪ್ರತಿಯೊಬ್ಬನಿಗೂ ಹೇಳಿಮಾಡಿಸಿದನು. ಅನಂತರದಲ್ಲಿ, ಭವಿಷ್ಯದಲ್ಲಿ ನಮಗೆ ಸಂಭವಿಸಬಹುದಾದ ಕೆಲ ಘಟನೆಗಳ ವಿಷಯವನ್ನು ಹೇಳಿದನು. ಆಮೇಲೆ, "ಈಗ, ನೀವು ಇಷ್ಟಪಡುವ ಯಾವದೇ ಭಾಷೆಯಿಂದ ಒಂದು ಪದವನ್ನೋ, ಅಥವಾ ಒಂದು ವಾಕ್ಯವನ್ನೋ ಯೋಚಿಸಿ" ಎಂದು ನನಗೆ ಹೇಳಿದನು. ಅವನಿಗೆ ಪೂರ್ಣವಾಗಿ ತಿಳಿಯದ ಸಂಸ್ಕೃತ ಭಾಷೆಯ ದೀರ್ಘವಾಕ್ಯವೊಂದನ್ನು ನಾನು ಯೋಚಿಸಿಟ್ಟುಕೊಂಡೆನು. "ಈಗ, ನಿನ್ನ ಜೇಬಿನಲ್ಲಿರುವ ಕಾಗದವನ್ನು ತೆಗೆ" ಎಂದನು. ಆ ಸಂಸ್ಕೃತದ ವಾಕ್ಯ ಅದರಲ್ಲಿ ಬರೆದಿತ್ತು. ಅದನ್ನು ಅವನು ಒಂದು ಗಂಟೆಯ ಮೊದಲು ಬರೆದು, "ನಾನು ಏನು ಬರೆದಿರುವೆನೋ ಅದನ್ನು ಪುಷ್ಟೀಕರಿಸುವಂತೆ, ಈ ಮನುಷ್ಯನು ಅದೇ ವಾಕ್ಯವನ್ನು ಯೋಚಿಸುವನು" ಎಂದೂ ಹೇಳಿದ್ದನು. ಅದು ಸರಿಯಾಗಿದ್ದಿತು. ನಮ್ಮಲ್ಲಿ ಮತ್ತೊಬ್ಬನಿಗೂ ಇದೇ ತರಹೆಯ ಕಾಗದವನ್ನು ಕೊಟ್ಟು ಹೆಸರು ಬರೆದು ಜೇಬಿನಲ್ಲಿಟ್ಟುಕೊಂಡವನನ್ನೂ ಒಂದು ವಾಕ್ಯವನ್ನು ಯೋಚಿಸಲು ಹೇಳಿದನು. ಅವನು ಅರೇಬಿಕ್‌ನ ವಾಕ್ಯವೊಂದನ್ನು ಯೋಚಿಸಿದ್ದನು. ಭಾಷೆ ಆ ಮನುಷ್ಯನಿಗೆ ಗೊತ್ತಿರಲು ಇನ್ನೂ ಕಡಿಮೆಯ ಸಾಧ್ಯತೆಯಿತ್ತು; ಅದು ಕುರಾನ್‌ನಿಂದ ಒಂದು ಉದ್ಧೃತ ಭಾಗ. ನಮ್ಮ ಸ್ನೇಹಿತನೂ ಇದನ್ನೇ ಕಾಗದದಲ್ಲಿ ಬರೆದದ್ದನ್ನು ಕಂಡನು.

ನಮ್ಮಲ್ಲಿಯ ಇನ್ನೊಬ್ಬನು ವೈದ್ಯನು. ಅವನು ಜರ್ಮನ್ ಭಾಷೆಯ ವೈದ್ಯಕೀಯ ಗ್ರಂಥದಿಂದ ಒಂದು ವಾಕ್ಯವನ್ನು ಚಿಂತಿಸಿದ್ದನು. ಅವನ ಕಾಗದದಲ್ಲಿ ಅದೇ ಬರೆದಿದ್ದಿತು.

ಕೆಲವು ದಿನಗಳ ಅನಂತರ, ಮುಂಚೆ ನನ್ನನ್ನು ಹೇಗೋ ಆತ ಮರುಳು ಮಾಡಿದ್ದ ಸಾಧ್ಯತೆಯನ್ನು ಚಿಂತಿಸಿ, ಆ ಮನುಷ್ಯನೆಡೆಗೆ ಪುನಃ ಹೋದೆನು. ನನ್ನೊಡನೆ ಕೆಲವು ಸ್ನೇಹಿತರನ್ನೂ ಕರೆದುಕೊಂಡು ಹೋಗಿದ್ದೆನು. ಈ ಸಂದರ್ಭದಲ್ಲೂ ಅವನು ಅದ್ಭುತವಾದ ವಿಜಯವನ್ನು ನಮ್ಮ ಮೇಲೆ ಸಾಧಿಸಿದನು.

ಮತ್ತೊಂದು ಸಮಯದಲ್ಲಿ ನಾನು ಭಾರತದ ಹೈದರಾಬಾದ್ ಪಟ್ಟಣದಲ್ಲಿದ್ದೆನು, ಎಲ್ಲಿಂದ ಎಂಬುದು ಯಾರಿಗೂ ಗೊತ್ತಿರದಂತೆ ಅನೇಕ ಸಂಖ್ಯೆಗಳ ವಸ್ತುಗಳನ್ನು ಕಣ್ಣೆದುರಿಗೆ ತಂದಿರಿಸುತ್ತಿದ್ದ ಬ್ರಾಹ್ಮಣನೊಬ್ಬ ಅಲ್ಲಿದ್ದನೆಂದು ನಾನು ಕೇಳಿದ್ದೆ. ಅವನು ವ್ಯವಹಾರಿಯಾಗಿದ್ದನು, ಆದರೆ, ಅವನೊಬ್ಬ ಗೌರವಾನ್ವಿತ ಸಂಭಾವಿತನಾಗಿದ್ದನು. ನಾನು ಅವನ ಬಳಿ ಹೋಗಿ ತನ್ನ ಪವಾಡ ಸದೃಶ ಕೌಶಲಗಳನ್ನು ತೋರಿಸಲು ಕೇಳಿಕೊಂಡೆನು. ಆಗ ಅವನಿಗೆ ಜ್ವರವಿತ್ತು, ಪೂಜ್ಯಪುರುಷನೊಬ್ಬನು ತನ್ನ ಕೈಯನ್ನು ರೋಗಿಷ್ಠ ಮನುಷ್ಯನ ಮೇಲಿಟ್ಟರೆ ಆ ರೋಗಿ ಗುಣವಾಗುತ್ತಾನೆ ಎಂಬ ಒಂದು ನಂಬಿಕೆ ಭಾರತದಲ್ಲಿದೆ. ಈ ಬ್ರಾಹ್ಮಣನು ನನ್ನೆಡೆ ಬಂದು "ಸ್ವಾಮೀ, ನಿಮ್ಮ ಕೈಯನ್ನು ನನ್ನ ತಲೆಯ ಮೇಲಿಡಿರಿ, ಹಾಗಾದರೆ ನನ್ನ ಜ್ವರ ಗುಣವಾಗುವದು" ಎಂದನು. "ಒಳ್ಳೆಯದು ಆಗಲಿ, ಆದರೆ ನಿನ್ನ ಚಮತ್ಕೃತಿಯನ್ನು ನನಗೆ ತೋರಿಸಬೇಕು" ಎಂದೆನು. ಅವನು ಹಾಗೆ ಆಗಲಿ ಎಂದು ಮಾತುಕೊಟ್ಟನು. ಅವನ ಅಪೇಕ್ಷೆಯಂತೆ ನಾನು ನನ್ನ ಕೈಯನ್ನು ಅವನ ತಲೆಯ ಮೇಲಿಟ್ಟೆ ಅದಾದಮೇಲೆ ಅವನು ತಾನು ಕೊಟ್ಟ ಮಾತಿನ ಪ್ರಕಾರ ಚಮತ್ಕಾರನ್ನು ತೋರಿಸಲು ಬಂದನು; ಅವನ ಮೈ ಮೇಲಿನ ವಸ್ತ್ರಗಳನ್ನು ತೆಗೆದು ನಮಗೆ ಕೊಟ್ಟನು. ಅವನ ಸೊಂಟದಲ್ಲಿ ಕೌಪೀನ ಮಾತ್ರವಿತ್ತು. ಆಗ ಥಂಡಿ ಇದ್ದದ್ದರಿಂದ, ಹೊದೆಯಲು ಅವನಿಗೆ ನನ್ನಲ್ಲಿದ್ದ ಕಂಬಳಿಯನ್ನು ಕೊಟ್ಟೆನು, ಒಂದು ಮೂಲೆಯಲ್ಲಿ ಅವನನ್ನು ಕೂರಿಸಿದೆವು. ಇಪ್ಪತ್ತೈದು ಜೋಡಿ ಕಣ್ಣುಗಳು ಅವನನ್ನೇ ನೋಡುತ್ತಿದ್ದವು. "ಈಗ ನೋಡಿ, ನಿಮಗೆ ಬೇಕಾದ ಏನನ್ನಾದರೂ ಬರೆಯಿರಿ" ಅವನೆಂದನು. ನಾವೆಲ್ಲರೂ ಆ ಪ್ರಾಂತ್ಯದಲ್ಲಿ ಬೆಳೆಯದ ದ್ರಾಕ್ಷಿ ಹಣ್ಣುಗಳು, ಕಿತ್ತಲೆ ಹಣ್ಣುಗಳು, ಹೀಗೆಯೇ ಅನೇಕ ಹಣ್ಣುಗಳ ಹೆಸರುಗಳನ್ನು ಬರೆದೆವು. ಹಾಗೆ ಬರೆದ ತುಂಡು ಕಾಗದಗಳನ್ನೆಲ್ಲಾ ಅವನಿಗೆ ನೀಡಿದೆವು. ಅವನ ಕಂಬಳಿಯೊಳಗಿನಿಂದ ಕೊಳಗಟ್ಟಲೆ ದ್ರಾಕ್ಷಿ, ಕಿತ್ತಳೆ ಹೀಗೆಯೇ ಇತರ ಹಣ್ಣುಗಳು ಬಂದವು, ಎಷ್ಟೆಂದರೆ ಆ ಹಣ್ಣುಗಳನ್ನೆಲ್ಲಾ ತೂಕ ಹಾಕಿದ್ದರೆ ಆತನ ತೂಕದ ದುಪ್ಪಟ್ಟಾಗುತ್ತಿತ್ತು. ಅದನ್ನು ತಿನ್ನಲು ಅವನು ನಮಗೆ ಹೇಳಿದನು. ಇದೆಲ್ಲ ಸಂಮೋಹನೀ ವಿದ್ಯೆಯ ಭ್ರಮೆ ಎಂದು ನಮ್ಮಲ್ಲಿ ಕೆಲವರು ದೂರ ತೊಡಗಿದರು. ಆಗ ಇದು ಭ್ರಮೆ ಅಲ್ಲವೆಂದು ಆ ವ್ಯಕ್ತಿ ತಾನೇ ತಿನ್ನಲು ತೊಡಗಿದ ಮೇಲೆ ನಾವೆಲ್ಲ ತಿನ್ನ ತೊಡಗಿದೆವು. ಆ ಎಲ್ಲಾ ಹಣ್ಣುಗಳು ರುಚಿಕರವಾಗಿದ್ದುವು.

ಕೊನೆಯಲ್ಲಿ ಒಂದು ರಾಶಿ ಗುಲಾಬಿ ಹೂವುಗಳನ್ನು ನಮ್ಮೆದುರಿಗೆ ಪ್ರತ್ಯಕ್ಷಗೊಳಿಸಿ ತನ್ನ ಚಮತ್ಕಾರ ಪ್ರದರ್ಶನಕ್ಕೆ ಮಂಗಳ ಹಾಡಿದನು. ಆ ಗುಲಾಬಿ ಹೂಗಳಲ್ಲಿ ಪ್ರತಿ ಹೂವೂ ಹೊಚ್ಚ ಹೊಸತಾಗಿತ್ತು, ಪೂರ್ಣವಾಗಿ ಅರಳಿತ್ತು, ಒಂದು ದಳವಾದರೂ ಸುಕ್ಕಾಗಿರಲಿಲ್ಲ, ಛಿದ್ರವಾಗಿರಲಿಲ್ಲ. ಅದರ ದಳಗಳ ಮೇಲೆ ಇಬ್ಬನಿಯ ಹನಿಗಳು ಮಿನುಗುತ್ತಿದ್ದುವು. ಇಂಥ ಹೂವುಗಳ ರಾಶಿಯೇ

ನಮ್ಮೆದುರಿಗಿತ್ತು. ಇವುಗಳೆಲ್ಲ ಹೇಗೆ ಸಾಧ್ಯವಾಯಿತು, ವಿವರಿಸಿ ಎಂದಾಗ ಆತ ಹೇಳಿದ 'ಇದೆಲ್ಲ ಕೈ ಚಳಕ ಅಷ್ಟೆ'. ಅದು ಏನೇ ಆಗಿರಲಿ, ಅವನು ಹೇಳಿದಂತೆ ಕೇವಲ ಕೈ ಚಳಕ ಎಂಬುದನ್ನು ನಂಬಲು ಸಾಧ್ಯವಿರಲಿಲ್ಲ. ಆದರೆ, ಇಷ್ಟೊಂದು ಅಪಾರ ಪ್ರಮಾಣದ ಹೂ ರಾಶಿಗಳನ್ನು ಆಗ ಎಲ್ಲಿಂದ ಹೇಗೆ ತರಲು ಸಾಧ್ಯ?

ಸರಿ, ಈ ತರಹದ ಎಷ್ಟನ್ನೋ ನಾನು ನೋಡಿರುವೆ. ಭಾರತದಾದ್ಯಂತ ಸಂಚರಿಸಿದರೆ ನಾನಾ ಭಾಗಗಳಲ್ಲಿ ಇಂತಹ ನೂರಾರು ವಿಸ್ಮಯಕರವಾದ ಅತಿಮಾನುಷ ಸಂಗತಿಗಳನ್ನು ನೀವೂ ಕಾಣಬಹುದು. ಪ್ರತಿಯೊಂದು ದೇಶದಲ್ಲೂ ಇಂತಹ ಸಂಗತಿಗಳು ಸಾಕಷ್ಟಿವೆ. ಈ ದೇಶದಲ್ಲೂ (ಅಮೆರಿಕ) ನೀವು ಕೆಲವು ಈ ಬಗೆಯ ಹಲವು ತೆರನಾದ ಅದ್ಭುತ ಸಂಗತಿಗಳನ್ನು ನೋಡಬಹುದು. ಆದರೆ ಇಂಥ ಸಂಗತಿಗಳಲ್ಲಿ ಬಹುಮಟ್ಟಿಗೆ ನಿಸ್ಸಂಶಯವಾಗಿ ಮೋಸದ ವ್ಯವಹಾರವಿರುತ್ತದೆ. ಆದರೆ ನೀವು ಇಂಥ ಕಪಟವನ್ನು ನೋಡಿದಲ್ಲೆಲ್ಲಾ, ಅದು ಕುತಂತ್ರವೇ, ಅನುಕರಣೆಯೇ ಎಂದೂ ಯೋಚಿಸಬೇಕಾಗುತ್ತದೆ. ಎಲ್ಲಾದರೂ ಒಂದು ಕಡೆ ಯಾವದೋ ಸತ್ಯ ಅಡಗಿರಲೇಬೇಕು, ಅದರದೇ ಅನುಕರಣೆಯಾಗಿರುತ್ತದೆ; ಏಕೆಂದರೆ ಇಲ್ಲದ್ದೇನನ್ನೂ ಅನುಕರಿಸಲಾಗದು. ಅನುಕರಿಸಬೇಕಾದರೆ, ಯಾವದಾದರೂ ಬಹುಮಟ್ಟಿಗೆ ಸತ್ವಪೂರ್ಣವಾದದ್ದು ಅದಕ್ಕೆ ಆಧಾರವಾಗಿ ಇರಲೇ ಬೇಕು.

ಬಹಳ ಹಿಂದಿನ ಕಾಲದಲ್ಲಿ, ಸಾವಿರಾರು ವರ್ಷಗಳ ಹಿಂದೆ, ಭಾರತದಲ್ಲಿ ಇಂತಹ ಘಟನೆಗಳು ಇವತ್ತು ನಡೆಯುವದಕ್ಕಿಂತಲೂ ಹೆಚ್ಚಾಗಿ ಆಗುತ್ತಿದ್ದುವು. ಒಂದು ದೇಶದಲ್ಲಿ ಹೆಚ್ಚಿನ ಜನಸಾಂದ್ರತೆಯಿದ್ದಾಗ ಇಂಥ ಅತೀಂದ್ರಿಯ ಶಕ್ತಿಗಳು ಕ್ಷೀಣಿಸುತ್ತವೆ ಎಂದು ನನಗನಿಸುತ್ತದೆ. ಸಾಂದ್ರತೆ ಇರದ ವಿಸ್ತಾರ ದೇಶದಲ್ಲಿ ಬಹುಶಃ ಅತೀಂದ್ರಿಯ ಶಕ್ತಿ ಹೆಚ್ಚಾಗಿರುತ್ತದೆ. ಈ ಸಂಗತಿಗಳನ್ನು ವಿಶ್ಲೇಷಣಾ ಮನೋಭಾವದ ಹಿಂದೂಗಳು ಪರೀಕ್ಷಿಸಿದರು. ಅವರು ಕೆಲವು ನಿಶ್ಚಿತ ಗಮನಾರ್ಹ ಸಿದ್ಧಾಂತಗಳನ್ನು ಮಾಡಿದರು; ಅಂದರೆ ಇದನ್ನು ವಿಜ್ಞಾನವೆನಿಸಿದರು. ಅಸಾಮಾನ್ಯವಾಗಿದ್ದರೂ ಇವೆಲ್ಲವೂ ಸಹಜವೂ ಆಗಿರುವದೆಂದು ಅವರು ಕಂಡರು; ಅತಿ ಭೌತಿಕವಾದುದು ಯಾವದೂ ಇಲ್ಲ. ಯಾವದೇ ಇತರ ಭೌತಿಕ ಘಟನೆಯಂತೆ ಇವುಗಳೂ ಸಹ ನಿಯಮಬದ್ಧವಾಗಿವೆ. ಮನುಷ್ಯನು ಇಂತಹ ಶಕ್ತಿಗಳೊಡನೆ ಜನಿಸುವದು ಪ್ರಕೃತಿ ವೈಲಕ್ಷಣವೇನಲ್ಲ. ಅವುಗಳನ್ನು ಕ್ರಮಬದ್ಧವಾಗಿ ಅಧ್ಯಯನ, ಅಭ್ಯಾಸ ಮಾಡಿ ಗಳಿಸಬಹುದು. ಈ ವಿಜ್ಞಾನವನ್ನು ಅವರು ರಾಜಯೋಗ ವಿಜ್ಞಾನವೆಂದು ಕರೆದರು. ಈ ವಿಜ್ಞಾನದ ಅಭ್ಯಾಸವನ್ನು ಅಧ್ಯಯನವನ್ನು ಅಭ್ಯಾಸಮಾಡುತ್ತಿರುವವರು ಸಾವಿರಾರು ಜನರಿದ್ದಾರೆ. ಇಡಿಯ ರಾಷ್ಟ್ರಕ್ಕೆ ಇದೊಂದು ನಿತ್ಯಾರಾಧನೆಯ ಅಂಗವಾಗಿದೆ.

ಈ ಎಲ್ಲ ಅಸಾಧಾರಣ ಶಕ್ತಿಗಳ ನೆಲೆ ಮನುಷ್ಯನ ಮನಸ್ಸಿನಲ್ಲಿವೆ ಎಂಬ ನಿರ್ಧಾರಕ್ಕೆ ಅವರು ಬಂದರು. ಈ ಮನಸ್ಸು ವಿಶ್ವ ಮನದ ಒಂದು ಭಾಗ. ಪ್ರತಿ ಮನಸ್ಸೂ ಇನ್ನೊಂದು ಮನಸ್ಸಿನೊಡನೆ ಸಂಬಂಧ ಹೊಂದಿದೆ. ಪ್ರತಿ ಮನಸ್ಸೂ, ಅದು ಎಲ್ಲಾದರೂ ಇರಲಿ, ಇಡೀ ಪ್ರಪಂಚದೊಡನೆ ಸಾಕ್ಷಾತ್ ಸಂಸರ್ಗದಲ್ಲಿರುತ್ತದೆ.

ನೀವು ಆಲೋಚನೆಯ ವರ್ಗಾವಣೆ ಎಂಬ ಘಟನೆಯನ್ನು ಎಂದಾದರೂ ಗಮನಿಸಿದ್ದೀರಾ? ಇಲ್ಲಿರುವ ಒಬ್ಬಾತನು ಏನನ್ನೋ ಯೋಚಿಸುತ್ತಿದ್ದಾನೆ, ಆ ಯೋಚನೆ ಯಾವುದೋ ಸ್ಥಳದಲ್ಲಿರುವ ಮತ್ತೊಬ್ಬನಲ್ಲಿ ವ್ಯಕ್ತವಾಗುತ್ತದೆ. ತಯಾರಿಯೊಡನೆ, ಆಕಸ್ಮಿಕದಿಂದಲ್ಲ– ಒಬ್ಬನು ದೂರದಲ್ಲಿರುವ ಮತ್ತೊಂದು ಮನಸ್ಸಿಗೆ ಯೋಚನೆಯನ್ನು ಕಳಿಸಬೇಕೆಂದುಕೊಂಡರೆ, ಆ ಮತ್ತೊಂದು ಮನಸ್ಸು ಯೋಚನೆಯೊಂದು ಬರುತ್ತಿದೆ ಎಂದು ತಿಳಿದಾಗ, ಅವನು ಅದನ್ನು ಹೇಗೆ ಕಳಿಸಿದೆಯೋ ಹಾಗೆಯೇ ಪಡೆಯುತ್ತಾನೆ. ಯೋಚನೆ ಹೊರಟು ಮತ್ತೊಬ್ಬನನ್ನು ಮುಟ್ಟುತ್ತದೆ, ಅವನಿಗೆ ಅದು ಅರ್ಥವಾಗುತ್ತದೆ. ಈ ಇಬ್ಬರ ನಡುವಿನ ದೂರದಿಂದ ಏನೂ ವ್ಯತ್ಯಾಸವಿರುವದಿಲ್ಲ; ದೂರ ಗಣನೆಗೆ ಬಾರದು. ನಿಮ್ಮ ಮನಸ್ಸು ಒಂಟಿಯಾದ ಯಾವದಾದರೊಂದಾಗಿ ಇಲ್ಲಿದ್ದು, ನನ್ನ ಮನಸ್ಸು ಒಂಟಿಯಾದ ಯಾವದೋ ಒಂದಾಗಿ ಅಲ್ಲಿದ್ದರೆ, ಈ ಎರಡರ ನಡುವೆ ಸಂಪರ್ಕವಿಲ್ಲದಿದ್ದರೆ, ನನ್ನ ಯೋಚನೆ ನಿಮಗೆ ಮುಟ್ಟಲು ಹೇಗೆ ಸಾಧ್ಯ? ಸಾಮಾನ್ಯ ಪಕ್ಷಗಳಲ್ಲಿ ನಿಮ್ಮಲ್ಲಿಗೆ ನೇರಾಗಿ ಮುಟ್ಟುವದು ನನ್ನ ಯೋಚನೆಯಲ್ಲ; ಆದರೆ ನನ್ನ ಯೋಚನೆ ಅಭೌತ ಕಂಪನಗಳಾಗಿ ಕರಗಬೇಕು, ಈ ಕಂಪನಗಳು ನಿಮ್ಮ ಮೆದುಳಿನೊಳಗೆ ಪ್ರವೇಶಿಸಿದಾಗ, ಈ ಕಂಪನಗಳು ಪುನಃ ನಿಮ್ಮದೇ ಯೋಚನೆಗಳಾಗಿ ರೂಪಾಂತರವಾಗ ಬೇಕಾಗುತ್ತದೆ. ಇಲ್ಲಿ ಆಗುವದು ಯೋಚನೆಯ ವಿಲೀನತೆ, ಅಲ್ಲಿ ಆಗುವದು ಯೋಚನೆಯ ವಿಭಜನೆ. ಇದು ಸುತ್ತು ಬಳಸಿನ ಪ್ರಕ್ರಿಯೆ. ಆದರೆ ಭಾವ ಪ್ರೇಷಣೆಯಲ್ಲಿ (ಟೆಲಿಪತಿ) ಇಂಥದ್ದೇನೂ ಇಲ್ಲ, ಅದು ನೇರ.

ಯೋಗಿಗಳು ಕರೆಯುವಂತೆ ಮನಸ್ಸಿನ ಅವಿಚ್ಛಿನ್ನತೆ ಇದೆ ಎಂದು ಇದು ತೋರಿಸುತ್ತದೆ. ಮನಸ್ಸು ವಿಶ್ವವ್ಯಾಪಿ. ನಿಮ್ಮ ಮನಸ್ಸು, ನನ್ನ ಮನಸ್ಸು, ಈ ಎಲ್ಲ ಚಿಕ್ಕ ಮನಸ್ಸುಗಳು, ವಿಶ್ವ ಮನಸ್ಸಿನ ತುಣುಕುಗಳು, ಸಾಗರದ ಸಣ್ಣ ಅಲೆಗಳಂತೆ; ಅವಿಚ್ಛಿನ್ನತೆಯಿಂದಾಗಿ, ನಮ್ಮ ಯೋಚನೆಗಳನ್ನು ಒಂದರಿಂದ ಮತ್ತೊಂದಕ್ಕೆ ನೇರವಾಗಿ, ಪ್ರತ್ಯಕ್ಷವಾಗಿ ಸಾಗಿಸಬಹುದು.

ನಮ್ಮ ಸುತ್ತ ಏನಾಗುತ್ತಿದೆ ಎಂಬುದನ್ನು ನೀವು ನೋಡಿರಿ, ಪ್ರಪಂಚವು ಪ್ರಭಾವ ಬೀರುವ ಒಂದು ವಸ್ತು. ನಮ್ಮ ದೇಹ ಸಂರಕ್ಷಣೆಗಾಗಿ ನಮ್ಮ ಶಕ್ತಿಯು ಒಂದು ಭಾಗ ಉಪಯೋಗವಾಗುತ್ತದೆ. ಅದರಾಚೆಗೆ, ಉಳಿದ ನಮ್ಮ ಶಕ್ತಿಯ ಪ್ರತಿಕಣವೂ ಇತರರ ಮೇಲೆ ಪ್ರಭಾವ ಬೀರಲು ಹಗಲೂ ರಾತ್ರಿ ಉಪಯೋಗವಾಗುತ್ತಿದೆ. ನಮ್ಮ ದೇಹಗಳು, ನಮ್ಮ ಸದ್ಗುಣಗಳು, ನಮ್ಮ ಬುದ್ಧಿಮತ್ತೆ ಮತ್ತು ನಮ್ಮ ಧಾರ್ಮಿಕತೆ ಇವುಗಳೆಲ್ಲವೂ ಒಂದೇ ಸಮನೆ ಇತರರನ್ನು ಪ್ರಭಾವಗೊಳಿಸುತ್ತಿರುತ್ತಿವೆ, ಮತ್ತು ಅದರಂತೆ, ವಿರುದ್ಧವಾಗಿ, ನಾವು ಅವುಗಳ ಪ್ರಭಾವಕ್ಕೊಳಗಾಗುತ್ತಿರುತ್ತೇವೆ. ಇದು ನಮ್ಮ ಸುತ್ತಲೂ ನಡೆಯುತ್ತಲೇ ಇದೆ. ಈಗೊಂದು ವಾಸ್ತವಿಕ ಉದಾಹರಣೆಯನ್ನು ನೋಡೋಣ: ಒಬ್ಬಾತನು ಬರುವನು; ಅವನು ಬಹಳ ತಿಳಿದ ಜ್ಞಾನಿ, ಅವನ ಭಾಷೆ ಸುಂದರ, ಮತ್ತು ಅವನು ನಿಮ್ಮೊಡನೆ ಗಂಟೆಗಟ್ಟಲೆ ಮಾತನಾಡುತ್ತಾನೆ; ಆದರೆ ಅವನು ಯಾವದೇ ಪರಿಣಾಮವನ್ನು ಬೀರುವದಿಲ್ಲ. ಮತ್ತೊಬ್ಬನು ಬರುವನು, ಕೆಲವೇ ಮಾತು ಆಡುವನು, ಅದೂ ಸರಿಯಾಗಿ ಜೋಡಿಸಿದುದಲ್ಲ, ಬಹುಶಃ ವ್ಯಾಕರಣಬದ್ಧವೂ ಅಲ್ಲ; ಹಾಗಿದ್ದೂ ಅವನು ಅಪಾರವಾದ ಪರಿಣಾಮವನ್ನುಂಟುಮಾಡುತ್ತಾನೆ. ಇದನ್ನು ನಿಮ್ಮಲ್ಲಿ ಅನೇಕರು

ನೋಡಿದ್ದೀರಿ. ಆದುದರಿಂದ ಮಾತುಗಳು ಮಾತ್ರವೇ ಯಾವಾಗಲೂ ಪ್ರಭಾವವನ್ನು ಬೀರಲಾರವು. ಮಾತು, ಯೋಚನೆಗಳೂ ಸಹ ಪರಿಣಾಮವನ್ನುಂಟುಮಾಡುವ ಪ್ರಭಾವಕ್ಕೆ ಒದಗಿಸುವದು ಕೇವಲ ಮೂರನೇ ಒಂದು ಭಾಗ ಮಾತ್ರ, ವ್ಯಕ್ತಿ ನೀಡುವದು ಮೂರನೇ ಎರಡುಭಾಗ. ಒಬ್ಬನ ವೈಯಕ್ತಿಕ ಅಯಸ್ಕಾಂತತೆ ಎಂದು ನೀವು ಏನನ್ನು ಕರೆಯುತ್ತೀರೋ– ಅದೇ ಹೊರಹೊರಟು ಪರಿಣಾಮವನ್ನು ಮಾಡುವದು.

ನಮ್ಮ ಕುಟುಂಬಗಳಲ್ಲಿ ಯಜಮಾನರು ಇರುತ್ತಾರೆ. ಅವರಲ್ಲಿ ಕೆಲವರು ಜಯಶೀಲರಾಗಿರುತ್ತಾರೆ, ಇತರರಿಲ್ಲ. ಏಕೆ? ನಮ್ಮ ಸೋಲಿಗೆ ಇತರರನ್ನು ದೂಷಿಸುತ್ತೇವೆ, ನಾವು ಅಪಜಯ ಹೊಂದಿದ ಕ್ಷಣದಲ್ಲೇ, ಇಂಥಿಂಥವನು ಸೋಲಿಗೆ ಕಾರಣನು ಎನ್ನುತ್ತೇವೆ. ಸೋಲಿನಲ್ಲಿ ಒಬ್ಬನು ತನ್ನ ತಪ್ಪುಗಳನ್ನು, ದೌರ್ಬಲ್ಯಗಳನ್ನು ಒಪ್ಪಿಕೊಳ್ಳಲು ಇಷ್ಟಪಡುವದಿಲ್ಲ. ಪ್ರತಿಯೊಬ್ಬನೂ ತಾನು ದೋಷರಹಿತನು ಎಂದು ಜಗ್ಗದೆ ಇರಲು ಪ್ರಯತ್ನಿಸುತ್ತಾನೆ, ಆ ದೋಷವನ್ನು ಬೇರೊಬ್ಬನ ಮೇಲೋ, ಬೇರಾವುದರ ಮೇಲೋ ಅಥವಾ ದುರದೃಷ್ಟದ ಮೇಲೋ ಹೊರಿಸುತ್ತಾನೆ. ಕುಟುಂಬಗಳ ಯಜಮಾನರು ಸೋತಾಗ, ಬೇರೆ ಕೆಲವು ವ್ಯಕ್ತಿಗಳು ಸಂಸಾರವನ್ನು ಎಷ್ಟು ಚೆನ್ನಾಗಿ ಸರಿದೂಗಿಸುತ್ತಾರೆ, ಇತರರಲ್ಲ ಏಕೆ ಎಂದು ತಮ್ಮನ್ನು ತಾವೇ ಕೇಳಿಕೊಳ್ಳಬೇಕು. ಇರುವ ವ್ಯತ್ಯಾಸ ಮನುಷ್ಯನಿಂದಲೇ, ಅವನ ಇರುವಿಕೆ ಅವನ ವ್ಯಕ್ತಿತ್ವದಿಂದಲೇ ಎಂದು ಆಗ ಅರ್ಥವಾಗುತ್ತದೆ.

ಮಾನವಕೋಟಿಯ ಮಹಾನಾಯಕರ ವಿಷಯಕ್ಕೆ ಬಂದಾಗ, ಯಾವಾಗಲೂ ಮನುಷ್ಯನ ವ್ಯಕ್ತಿತ್ವವೇ ಲೆಕ್ಕಕ್ಕೆ ಸಿಗುವದು ಎನ್ನುವದನ್ನೂ ಕಾಣುತ್ತೇವೆ. ಈಗ ಈ ಹಿಂದಿನ ಎಲ್ಲ ಮಹಾ ಗ್ರಂಥಕರ್ತರನ್ನು, ಮಹಾ ಚಿಂತಕರನ್ನು ತೆಗೆದುಕೊಳ್ಳಿ. ನಿಜವಾಗಿ ಹೇಳುವದಾದರೆ, ಎಷ್ಟು ಯೋಚನೆಗಳನ್ನು ಅವರು ಯೋಚಿಸಿದ್ದಾರು? ಮಾನವಕುಲದ ಹಿಂದಿನ ಅಗ್ರಜರು ಬಿಟ್ಟುಹೋಗಿರುವ ಎಲ್ಲ ಬರವಣಿಗೆಗಳನ್ನು ಗಮನಿಸಿ; ಅವರ ಪ್ರತಿಯೊಂದು ಗ್ರಂಥವನ್ನೂ ತೆಗೆದುಕೊಂಡು, ಬೆಲೆಕಟ್ಟಿರಿ. ಹೊಸದು ಮತ್ತು ಅಪ್ಪಟವಾದ, ನಿಜ ಯೋಚನೆಗಳನ್ನು ಈವರೆಗೆ ಪ್ರಪಂಚದಲ್ಲಿ ಯೋಚಿಸಿರುವವು ಒಂದು ಕೈಹಿಡಿ ಮಾತ್ರವಾಗಿರುವವು. ಅವರ ಗ್ರಂಥಗಳಲ್ಲಿ ಅವರು ನಮಗೆ ಬಿಟ್ಟಿರುವ ಚಿಂತನೆಗಳನ್ನು ಓದಿರಿ. ಗ್ರಂಥಕರ್ತರು ನಮಗೆ ಅದ್ಭುತ ವ್ಯಕ್ತಿಗಳೆಂದೇನೂ ಕಾಣರು, ಆದರೂ ಅವರ ಕಾಲದಲ್ಲಿ ಅವರು ಪ್ರಚಂಡ ಪುರುಷರಾಗಿದ್ದರೆಂದು ನಾವು ಬಲ್ಲೆವು. ಅವರನ್ನು ಹಾಗೆ ಮಾಡಿದ್ದು ಯಾವದು? ಕೇವಲ ಅವರು ಚಿಂತಿಸಿದ ಚಿಂತನೆಗಳಾಗಲೀ, ಅಲ್ಲ, ಅಥವಾ ಅವರು ರಚಿಸಿದ ಗ್ರಂಥಗಳೂ ಅಲ್ಲ, ಅವರು ಮಾಡಿದ ಭಾಷಣಗಳೂ ಅಲ್ಲ, ಅದು ಈಗ ಕಳೆದುಹೋದ ಇನ್ನೇನೋ ಬೇರೊಂದು, ಅದು ಅವರ ವ್ಯಕ್ತಿತ್ವ. ನಾನು ಈಗಾಗಲೇ ಹೇಳಿದಂತೆ, ವ್ಯಕ್ತಿತ್ವ ಮೂರನೇ ಎರಡು ಭಾಗ, ಅವನ ಬುದ್ಧಿ, ಅವನ ಮಾತುಗಳು ಮೂರನೇ ಒಂದು ಭಾಗ. ಆ ನಿಜವಾದ ಮನುಷ್ಯ, ಮತ್ತು ವ್ಯಕ್ತಿತ್ವ, ನಮ್ಮ ಮೂಲಕವೂ ಹರಿಯುತ್ತಿದೆ. ನಮ್ಮ ಕಾರ್ಯಗಳೆಲ್ಲ ಕೇವಲ ಪರಿಣಾಮಗಳು. ಮನುಷ್ಯನಿದ್ದಾಗ ಕಾರ್ಯಗಳು ಬರಲೇಬೇಕು; ಪರಿಣಾಮವು ಕಾರಣದ ಹಿಂದೋಡಿ ಬರಲೇಬೇಕು.

ಎಲ್ಲ ಶಿಕ್ಷಣದ, ಎಲ್ಲ ತರಬೇತಿಯ ಆದರ್ಶವು ಇದೇ– ಮನುಷ್ಯತ್ವವನ್ನು ತರುವದು. ಆದರೆ, ಅದರ ಬದಲಿಗೆ, ನಾವು ಯಾವಾಗಲೂ ಹೊರಗನ್ನು ಹೊಳಪು ಮಾಡುವದಕ್ಕೇ ಪ್ರಯತ್ನಮಾಡುತ್ತಿರುವೆವು. ಒಳಗೆ ಹೊಳಪು ಎಂಬುದಿಲ್ಲದಿದ್ದರೆ, ಹೊರಗನ್ನು ಹೊಳಪು ಮಾಡುವದರಿಂದೇನು ಪ್ರಯೋಜನ? ಎಲ್ಲ ತರಬೇತಿಯ ಅಂತಿಮ ಗುರಿಯೂ ಮನುಷ್ಯನು ಬೆಳೆಯುವಂತೆ ಮಾಡುವದು. ತನ್ನ ಸಂಗಾತಿಗಳ ಮೇಲೆ, ಅದಿರುವಂತೆ ಮೋಡಿ ಎನ್ನುವ ರೀತಿ ಪ್ರಭಾವ ಬೀರುವವನು ಶಕ್ತಿಯನ್ನು ಕೊಡುವ ವಿದ್ಯುತ್‌ಯಂತ್ರ, ಅಂತಹ ಮನುಷ್ಯ ಸಿದ್ಧನಾದಾಗ ಅವನು ಏನನ್ನಾದರೂ ಮಾಡಬಲ್ಲನು, ತನಗಿಷ್ಟ ಬಂದ ಪ್ರತಿಯೊಂದನ್ನೂ ಮಾಡಬಲ್ಲನು; ಯಾವುದರ ಮೇಲಾದರೂ ಅಂತಹ ವ್ಯಕ್ತಿತ್ವದ ಪ್ರಭಾವ ಬಿದ್ದರೆ ಅದನ್ನು ಕೆಲಸಕ್ಕೆ ಹಚ್ಚುವದು.

ಈಗ, ಇದು ಸತ್ಯವೆಂದು ನಾವು ಕಂಡರೂ, ನಮಗೆ ಗೊತ್ತಿರುವ ಯಾವ ಭೌತಿಕ ನಿಯಮಗಳೂ ಇದನ್ನು ವಿವರಿಸಲಾರದು. ರಾಸಾಯನಿಕ, ಭೌತಿಕ ಜ್ಞಾನದಿಂದ ಅದನ್ನು ನಾವು ಹೇಗೆ ವಿವರಿಸಬಲ್ಲೆವು? ಎಷ್ಟು ಆಮ್ಲಜನಕ, ಜಲಜನಕ, ಇಂಗಾಲ, ವಿವಿಧ ಸ್ಥಾನಗಳಲ್ಲಿ ಎಷ್ಟು ಸಂಖ್ಯೆಯ ಅಣುಗಳು, ಮತ್ತು ಎಷ್ಟು ಜೀವಕೋಶಗಳು ಇತ್ಯಾದಿ, ಇತ್ಯಾದಿ ಇಂತಹ ನಿಗೂಢ ವ್ಯಕ್ತಿತ್ವವನ್ನು ವಿಶದಪಡಿಸಬಹುದು? ಇದೊಂದು ಸತ್ಯಾಂಶ ಎಂದು ಈಗಲೂ ನಾವು ಕಾಣುತ್ತೇವೆ, ಅಷ್ಟೇ ಅಲ್ಲ, ಅದೇ ನಿಜವಾದ ಮನುಷ್ಯ; ಆ ಮನುಷ್ಯನೇ ಜೀವಿಸುವನು, ಚಲಿಸುವನು, ಕೆಲಸ ಮಾಡುವನು, ಆ ಮನುಷ್ಯನೇ ಪ್ರಭಾವಿಸುವನು, ತನ್ನ ಸಂಗಾತಿಗಳನ್ನು ಪ್ರೇರೇಪಿಸುವನು, ಗತಿಸಿಹೋಗುವನು; ಅವನ ಬುದ್ಧಿ, ಗ್ರಂಥಗಳು ಮತ್ತು ಕೆಲಸಗಳು ಅವನು ಹಿಂದೆ ಬಿಟ್ಟಿರುವ ಕುರುಹುಗಳು ಮಾತ್ರ. ಇದನ್ನು ಚಿಂತಿಸಿ. ಧರ್ಮದ ಶ್ರೇಷ್ಠ ಬೋಧಕರನ್ನು ಶ್ರೇಷ್ಠ ದಾರ್ಶನಿಕರೊಡನೆ ಹೋಲಿಸಿರಿ. ದಾರ್ಶನಿಕರು ಯಾರ ಅಂತರಂಗದ ಮನುಷ್ಯನನ್ನೂ ಪ್ರಭಾವಿಸಿರುವದು ಅಪರೂಪ, ಆದರೂ ಅತ್ಯದ್ಭುತ ಗ್ರಂಥಗಳನ್ನು ಅವರು ಬರೆದರು. ಇತ್ತ ಕಡೆ, ಧಾರ್ಮಿಕ ಬೋಧಕರು ತಮ್ಮ ಜೀವನಕಾಲದಲ್ಲಿ ದೇಶದೇಶಗಳನ್ನೇ ಪ್ರೇರೇಪಿಸಿದರು. ವ್ಯತ್ಯಾಸವನ್ನು ಉಂಟುಮಾಡಿದ್ದೆಲ್ಲಾ ವ್ಯಕ್ತಿತ್ವವೇ. ದಾರ್ಶನಿಕರಲ್ಲಿ ಪ್ರಭಾವಗೊಳಿಸುವದು ಬಲಹೀನ ವ್ಯಕ್ತಿತ್ವ; ಶ್ರೇಷ್ಠ ಪ್ರವಾದಿಗಳಲ್ಲಿ ಅದು ಮಹತ್ತರವಾದದ್ದು. ಮೊದಲಿನವರಲ್ಲಿ, ಅಂದರೆ ದಾರ್ಶನಿಕರಲ್ಲಿ ನಾವು ಮಿಡಿಯುವದು ಅವರ ಬುದ್ಧಿಶಕ್ತಿಯನ್ನು ಎರಡನೆಯವರಲ್ಲಿ ಜೀವನವನ್ನೇ ನಾವು ಮಿಡಿಯುತ್ತೇವೆ, ಒಂದು ವಿಷಯದಲ್ಲಿ, ಅದು ರಾಸಾಯನಿಕ ಕ್ರಿಯೆ, ಕೆಲವು ರಾಸಾಯನಿಕ ವಸ್ತುಗಳನ್ನು ಮಿಶ್ರಮಾಡಿಡುವದು, ಕ್ರಮೇಣ ಅವೆಲ್ಲಾ ಒಟ್ಟಾಗಿ ಸೂಕ್ತ ಸಂದರ್ಭಗಳಲ್ಲಿ ಬೆಳಕಿನ ಮಿಂಚನ್ನು ಹೊರತರಬಹುದು, ಅಥವಾ ತರದಿರಬಹುದು. ಇನ್ನೊಂದರಲ್ಲಿ ಅದು ಕ್ಷಿಪ್ರದಲ್ಲಿ ಸುತ್ತ ತಿರುಗುವ ಇತರರನ್ನು ಬೆಳಕಿಗೆ ಹಿಡಿಯುವ ಪಂಜಿನಂತಿರುವದು.

ಈ ವ್ಯಕ್ತಿತ್ವ ವಿಕಸನದ ನಿಯಮಗಳನ್ನು ಕಂಡುಹಿಡಿದಿರುವೆನೆಂದು, ಯೋಗವಿಜ್ಞಾನವು, ಯೋಗಶಾಸ್ತ್ರವು ಒತ್ತಿ ಹೇಳುತ್ತದೆ; ಈ ನಿಯಮಗಳು ಮತ್ತು ವಿಧಾನಗಳಿಗೆ ಸೂಕ್ತ ಗಮನ ಕೊಡುವದರಿಂದ ಪ್ರತಿಯೊಬ್ಬನೂ ತನ್ನ ವ್ಯಕ್ತಿತ್ವವನ್ನು ಬೆಳೆಸಿ ಶಕ್ತಿಯುತನನ್ನಾಗಿ ಮಾಡಬಹುದು. ದೊಡ್ಡ ಪ್ರಾಯೋಗಿಕ ವಿಷಯಗಳಲ್ಲಿ ಇದೂ ಒಂದು, ಇದೇ ಎಲ್ಲ ಶಿಕ್ಷಣದ ರಹಸ್ಯ. ಅವಕ್ಕೆ

ವಿಶ್ವವ್ಯಾಪಕ ಉಪಯೋಗವಿದೆ. ಗೃಹಸ್ಥನ ಜೀವನದಲ್ಲಿ, ಬಡವನ ಜೀವನದಲ್ಲಿ, ಶ್ರೀಮಂತ, ವ್ಯಾಪಾರೀ ಮನುಷ್ಯ, ಧಾರ್ಮಿಕ ಮನುಷ್ಯ. ಇವರಲ್ಲಿ ಪ್ರತಿಯೊಬ್ಬರ ಜೀವನದಲ್ಲಿಯೂ ಅದು ಮಹತ್ತರವಾದುದು, ಅದು ವ್ಯಕ್ತಿತ್ವವನ್ನು ಬಲಗೊಳಿಸುವದು. ನಮಗೆ ತಿಳಿದಂತಹ ಭೌತಿಕ ನಿಯಮಗಳ ಹಿಂದೆ ತುಂಬ ಸೂಕ್ಷ್ಮವಾದ ನಿಯಮಗಳೂ ಇವೆ. ಹಾಗೆಂದರೆ, ಭೌತಿಕ ಪ್ರಪಂಚ, ಮಾನಸಿಕ ಪ್ರಪಂಚ, ಧಾರ್ಮಿಕ ಪ್ರಪಂಚ ಎನ್ನುವಂತಹ ಅಸ್ತಿತ್ವಗಳಿಲ್ಲ. ಏನಿದೆಯೋ ಅದು ಒಂದೇ. ಅದು ಕ್ರಮೇಣ ಸಣ್ಣದಾಗುತ್ತಾ ಹೋಗುವ ಇರವು, ಎನ್ನೋಣ; ಅತಿ ದಪ್ಪದ ಭಾಗ ಇಲ್ಲಿದೆ, ಅದು ಸಣ್ಣದಾಗುತ್ತಾ ಸೂಕ್ಷ್ಮತರ, ಇನ್ನೂ ಸೂಕ್ಷ್ಮತರವಾಗುತ್ತದೆ. ಅತ್ಯಂತ ಸೂಕ್ಷ್ಮವಾದದ್ದು ನಾವು ಕರೆಯುವ, ಚೇತನ; ಅತಿಸ್ಥೂಲವಾದದ್ದು ದೇಹ. ಈ ಪಿಂಡಾಂಡದಲ್ಲಿರುವಂತೆಯೇ, ಅದೇ ರೀತಿ ತದ್ವತ್ತಾಗಿ ಬ್ರಹ್ಮಾಂಡದಲ್ಲೂ ಇದೆ. ನಮ್ಮ ವಿಶ್ವವು ನಿಖರವಾಗಿ ಹಾಗಿದೆ; ಅದು ಸಾಂದ್ರ ಹೊರಗಿನ ಸ್ಥೂಲ ರೂಪ; ಅದು ಯಾವದೋ ಸೂಕ್ಷ್ಮರೂಪಕ್ಕೆ ಸಣ್ಣದಾಗುತ್ತಾ, ಇನ್ನೂ ಸೂಕ್ಷ್ಮವಾಗುತ್ತದೆ, ಕೊನೆಗೆ ದೇವರು ಎಂದಾಗುತ್ತದೆ.

ನಮಗೂ ಸಹ ಗೊತ್ತಿದೆ– ಅತ್ಯಂತ ಶಕ್ತಿ ಸೂಕ್ಷ್ಮದಲ್ಲಿದೆ, ಸ್ಥೂಲದಲ್ಲಲ್ಲ. ದೊಡ್ಡ ಭಾರವೊಂದನ್ನು ಎತ್ತುವ ಮನುಷ್ಯನನ್ನು ನೋಡುತ್ತೇವೆ, ಅವನ ಮಾಂಸಖಂಡಗಳು ಉಬ್ಬುತ್ತವೆ, ಅವನ ಮೈ ಮೇಲೆಲ್ಲಾ ಪ್ರಯಾಸದ ಕುರುಹುಗಳನ್ನು ಕಾಣುತ್ತೇವೆ, ಆಗ ಮಾಂಸಖಂಡಗಳೇ ಶಕ್ತಿಶಾಲಿಗಳೆಂದು ತಿಳಿಯುತ್ತೇವೆ. ಆದರೆ, ಅದು ನವಿರಾದ ಎಳೆಯಂತಹ ವಸ್ತುಗಳು,–ನರಗಳು, ಮಾಂಸಖಂಡಗಳಿಗೆ ಶಕ್ತಿಯನ್ನು ಒದಗಿಸುವದು. ಇವುಗಳಲ್ಲಿ ಯಾವದಾದರೊಂದು ಎಳೆ ಮಾಂಸಖಂಡಗಳಿಗೆ ಮುಟ್ಟದಂತೆ ತುಂಡಾದರೆ, ಅವುಗಳು (ಮಾಂಸಖಂಡಗಳು) ಕೆಲಸ ಮಾಡಲು ಆಗುವದೇ ಇಲ್ಲ. ಈ ತೆಳ್ಳನೆಯ ನರಗಳು, ಇನ್ನೂ ಸೂಕ್ಷ್ಮವಾದ ಬೇರೊಂದರಿಂದ ಶಕ್ತಿಯನ್ನು ತರುತ್ತವೆ, ಆ ಸೂಕ್ಷ್ಮವಾದದ್ದು ತನ್ನ ಸರದಿಯಲ್ಲಿ ಅದಕ್ಕಿಂತಲೂ ಸೂಕ್ಷ್ಮತರವಾದ ಮತ್ತೊಂದರಿಂದ– ಆಲೋಚನೆಯಿಂದ ತರುತ್ತದೆ, ಮತ್ತು ಇದು ಹೀಗೇ ಮುಂದುವರಿಯುತ್ತದೆ. ಅಂದರೆ, ಬಲು ಸೂಕ್ಷ್ಮವಾದದ್ದೇ ಶಕ್ತಿಯ ನಿಜ ಮೂಲಸ್ಥಾನ. ಸಾಮಾನ್ಯವಾಗಿ ಸ್ಥೂಲವಾದ ಚಲನೆಗಳನ್ನು ನಾವು ಕಾಣಬಹುದು; ಸೂಕ್ಷ್ಮ ಚಲನೆಗಳು ಶುರುವಾದಾಗ, ನಾವು ಅವುಗಳನ್ನು ನೋಡಲಾರೆವು. ಸ್ಥೂಲ ವಸ್ತು ಚಲಿಸುವಾಗ, ನಾವು ಅದನ್ನು ಹಿಡಿಯುತ್ತೇವೆ, ಈ ರೀತಿ ಸಹಜವಾಗಿ ಸ್ಥೂಲ ವಸ್ತುಗಳ ಚಲನೆಯನ್ನು ಗೊತ್ತುಪಡಿಸಿಕೊಳ್ಳಬಹುದು. ಆದರೆ ಎಲ್ಲ ಶಕ್ತಿಯೂ ನಿಜವಾಗಿ ಇರುವದು ಸೂಕ್ಷ್ಮದಲ್ಲಿ. ಸೂಕ್ಷ್ಮದಲ್ಲಿ ಯಾವ ಚಲನೆಯನ್ನೂ ನಾವು ಕಾಣಲಾರೆವು. ಬಹುಶಃ ಆ ಚಲನೆ ಅತಿಶಯ ತೀಕ್ಷ್ಣವಾಗಿರುವದರಿಂದ ನಾವು ಅದನ್ನು ಗ್ರಹಿಸಲಾರೆವು. ಆದರೆ ಯಾವದಾದರೂ ವಿಜ್ಞಾನದಿಂದ, ಯಾವದಾದರೂ ತನಿಖೆಯಿಂದ, ಅಭಿವ್ಯಕ್ತತೆಗೆ ಕಾರಣವಾದ ಈ ಸೂಕ್ಷ್ಮತರ ಬಲಗಳನ್ನು ಸ್ವಾಧೀನಪಡಿಸಿಕೊಳ್ಳಲು ಸಹಾಯ ಒದಗಿದರೆ, ಈ ಅಭಿವ್ಯಕ್ತಿಯೇ ಹತೋಟಿಗೆ ಬರುತ್ತದೆ. ಸರೋವರದ ತಳದಿಂದ ಸಣ್ಣದೊಂದು ನೀರಗುಳ್ಳೆ ಬರುತ್ತದೆ; ಅದನ್ನು ಎಲ್ಲ ಕಾಲದಲ್ಲೂ ನಾವು ನೋಡಲಾರೆವು, ಮೇಲ್ಭಾಗಕ್ಕೆ ಬಂದು ಅದು ಒಡೆದಾಗಲೇ ನಾವು ಅದನ್ನು ಕಾಣುವದು. ಹಾಗೆಯೇ, ಆಲೋಚನೆಗಳು ಬಹಳಷ್ಟು ಬೆಳೆದ ಮೇಲೆಯೇ ಅಥವಾ ಅವು ಕ್ರಿಯೆಗಳಾದ ಮೇಲೆ, ನಾವು

ಅವನ್ನು ಗ್ರಹಿಸಬಲ್ಲೆವು. ನಮ್ಮ ಕ್ರಿಯೆ, ನಡತೆಗಳ ಮೇಲೆ, ನಮ್ಮ ಆಲೋಚನೆಗಳ ಮೇಲೆ ನಮಗೆ ನಿಯಂತ್ರಣವೇ ಇಲ್ಲ ಎಂದು ನಾವು ಸತತವಾಗಿ ದೂರುವೆವು. ಆದರೆ ಅದನ್ನು ನಾವು ಹೇಗೆ ಹೊಂದಬಲ್ಲೆವು? ಆಲೋಚನೆಗಳಾಗಿ ಮೂಡುವ ಮೊದಲು, ಕ್ರಿಯೆಯಾಗಿ ಬರುವ ಮೊದಲು, ಆಲೋಚನಾ ಮೂಲದಲ್ಲೇ ಹಿಡಿತವನ್ನಿಡಬಲ್ಲೆವಾದರೆ, ಅದರ ಮೊದಲಿನ ಸೂಕ್ಷ್ಮಚಲನೆಗಳ ಮೇಲೆ ನಿಯಂತ್ರಣವನ್ನು ಹೊಂದಬಲ್ಲೆವಾದರೆ, ಆಗ ಆ ಇಡಿಯನ್ನೂ ಹತೋಟಿಯಲ್ಲಿಡಲು ನಮಗೆ ಸಾಧ್ಯವಾಗಬಹುದು. ಈಗ, ಆ ಸೂಕ್ಷ್ಮತರ ಶಕ್ತಿಗಳನ್ನು ವಿಶ್ಲೇಷಿಸಿ, ಪರೀಕ್ಷಿಸಿ, ಅರ್ಥ ಮಾಡಿಕೊಂಡು, ಕೊನೆಗೆ ಅವನ್ನು ಜಯಗಳಿಸುವದರ ವಿಧಾನವೊಂದಿದ್ದರೆ, ಆಗ ಮಾತ್ರವೇ, ನಮಗೆ ನಮ್ಮ ಮೇಲೆ ಹತೋಟಿಯನ್ನಿಡಲು ಸಾಧ್ಯವಾಗುವದು; ತನ್ನ ಸ್ವಂತ ಮನಸ್ಸಿನ ಮೇಲೆ ನಿಯಂತ್ರಣವಿರುವ ಮನುಷ್ಯನು ಖಂಡಿತವಾಗಿಯೂ ಇತರರೆಲ್ಲರ ಮನಸ್ಸಿನ ಮೇಲೆ ಹತೋಟಿಯನ್ನು ಗಳಿಸುವನು. ಅದಕ್ಕಾಗಿಯೇ, ಪರಿಶುದ್ಧತೆ ಮತ್ತು ಸನ್ನಡತೆಗಳು ಯಾವಾಗಲೂ ಧರ್ಮದ ಗುರಿಯಾಗಿವೆ. ಒಬ್ಬ ಪರಿಶುದ್ಧನಾದ, ಸದ್ಧರ್ಮಿಯಾದ ಮನುಷ್ಯನು ತನ್ನ ಮೇಲೆ ನಿಯಂತ್ರಣವನ್ನಿಟ್ಟುಕೊಂಡಿರುವನು. ಎಲ್ಲ ಮನಸ್ಸುಗಳೂ ಒಂದೇ, ಒಂದು ಬೃಹತ್‌ಮನದ ವಿವಿಧ ಭಾಗಗಳು. ಜೇಡಿ ಮಣ್ಣಿನ ಒಂದು ಮುದ್ದೆಯನ್ನು ಬಲ್ಲವನು ವಿಶ್ವದಲ್ಲಿರುವ ಎಲ್ಲ ಜೇಡಿಮಣ್ಣನ್ನೂ ಅರಿತಿರುವನು. ಯಾರಿಗೆ ತನ್ನ ಸ್ವಂತ ಮನಸ್ಸಿನ ಅರಿವು, ನಿಯಂತ್ರಣವಿರುವದೋ ಅವನು ಪ್ರತಿಯೊಬ್ಬರ ಮನಸ್ಸಿನ ರಹಸ್ಯವನ್ನೂ ಬಲ್ಲವನು, ಪ್ರತಿಯೊಬ್ಬರ ಮನಸ್ಸಿನ ಮೇಲೂ ಅವನ ನಿಯಂತ್ರಣ ಇರುವದು.

ನಮ್ಮ ಭೌತಿಕ ದುಷ್ಟತನದ ಬಹಳ ಪಾಲನ್ನು ನಾವು ಕಳೆದುಕೊಳ್ಳಬಹದು, ನಮಗೆ ಅದರ ಸೂಕ್ಷ್ಮಭಾಗಗಳ ಮೇಲೆ ಒಡೆತನವಿದ್ದರೆ; ಸೂಕ್ಷ್ಮಚಲನೆಯ ಮೇಲೆ ನಿಯಂತ್ರಣವಿದ್ದರೆ ಎಷ್ಟೋ ಚಿಂತೆಗಳನ್ನು ತೊರೆಯಬಲ್ಲೆವು, ಸೂಕ್ಷ್ಮಶಕ್ತಿಗಳ ಹತೋಟಿಯಿಂದ ಅನೇಕ ಸೋಲುಗಳನ್ನು ತಪ್ಪಿಸಿಕೊಳ್ಳಬಹದು. ಇಲ್ಲಿಯವರೆಗೆ, ಉಪಯುಕ್ತವೆನಿಸಿದರೂ, ಇದರಾಚೆಗೆ ಇನ್ನೂ ಹೆಚ್ಚಿನದಾದದ್ದೊಂದಿದೆ ಎಂದು ತಿಳಿಯಬೇಕು.

ಈಗ ನಾನು ನಿಮಗೊಂದು ಪ್ರಮೇಯವನ್ನು ಹೇಳುತ್ತೇನೆ, ಅದರ ವಿಷಯ ಈಗ ವಾದ ಮಾಡುವದಿಲ್ಲ, ಆದರೆ ಸುಮ್ಮನೆ ನಿಮ್ಮ ಮುಂದೆ ತೀರ್ಮಾನವನ್ನು ಇಡುತ್ತೇನೆ. ಪ್ರತಿ ಮನುಷ್ಯನೂ ತನ್ನ ಬಾಲ್ಯದಲ್ಲಿ ತನ್ನ ಕುಲ ಹೇಗೆ ಬಂದಿತೋ ಆ ಹಂತಗಳ ಮೂಲಕ ಹಾದು ಬರುತ್ತಾನೆ. ಆದರೆ ಮಗುವು ಕೆಲವೇ ವರ್ಷಗಳನ್ನು ತೆಗೆದುಕೊಂಡರೆ, ಹೀಗೆ ಹಾದು ಬರಲು ಕುಲವು ಸಾವಿರಾರು ವರ್ಷಗಳನ್ನು ತೆಗೆದುಕೊಂಡಿರುತ್ತದೆ. ಮಗುವು ಮೊದಲು ಹಿಂದಿನ ಅನಾಗರಿಕ ಮನುಷ್ಯ, ತನ್ನ ಕಾಲ ಕೆಳಗೆ ಚಿಟ್ಟೆಯನ್ನು ತುಳಿದು ಹಾಕುತ್ತದೆ. ಮೊದಲಿಗೆ ಅದು ತನ್ನ ಕುಲದ ಆದ್ಯ ವಂಶಜರಂತಿರುತ್ತದೆ. ಅವನು ಬೆಳೆದಂತೆ, ಅವನು ಅನೇಕ ಹಂತಗಳನ್ನು ದಾಟಿ ತನ್ನ ಕುಲದ ಅಭಿವೃದ್ಧಿಯ ಹಂತದವರೆಗೆ ಬರುತ್ತಾನೆ. ಒಂದೇ, ಅದನ್ನವನು ಚುರುಕಾಗಿ ವೇಗವಾಗಿ ಮಾಡುತ್ತಾನೆ. ಈಗ ಇಡಿ ಮಾನವ ವಂಶವನ್ನೇ ಒಂದು ಕುಲವಾಗಿಟ್ಟುಕೊಳ್ಳಿ, ಅಥವಾ ಸಂಪೂರ್ಣವಾಗಿ ಪ್ರಾಣಿ ಸೃಷ್ಟಿಯನ್ನೇ– ಮನುಷ್ಯ ಮತ್ತು ಕೆಳವರ್ಗದ ಪ್ರಾಣಿಗಳೂ ಸೇರಿದಂತೆ–

ಒಂದು ಸಮಷ್ಟಿಯಾಗಿಗಿ ತೆಗೆದುಕೊಳ್ಳಿ. ಈ ಸೃಷ್ಟಿ ಸಮಸ್ತವೆಲ್ಲಾ ಒಂದು ಗುರಿಯ ಕಡೆ ಚಲಿಸುತ್ತದೆ. ಅದನ್ನು ಪರಿಪೂರ್ಣತೆಯೆನ್ನೋಣ. ಮಾನವ ಕುಲದ ಸಂಪೂರ್ಣ ಪ್ರಗತಿಯನ್ನು ಮುಂದಾಗಿಯೇ ತಿಳಿದಂತಹ ಕೆಲವರು ಗಂಡಸರು ಹೆಂಗಸರು ಜನ್ಮ ತಾಳುತ್ತಾರೆ. ಅವರು ಇಡೀ ಮಾನವಕುಲ ಪರಿಪೂರ್ಣತೆ ಪಡೆಯುವವರೆಗೂ ಕಾಯುವ ಬದಲು, ಮತ್ತೆ ಮತ್ತೆ ಪುನರ್ಜನ್ಮ ತಳೆಯುವ ಬದಲು, ಅದಿರುವಂತೆಯೇ, ಅಲ್ಪ ವರ್ಷಗಳ ತಮ್ಮ ಜೀವನದ ಮೂಲಕ ರಭಸದಿಂದ ಹಾದುಹೋಗುತ್ತಾರೆ. ನಮ್ಮ ವಿಷಯಕ್ಕೆ ನಾವೇ ಪ್ರಾಮಾಣಿಕರಾಗಿದ್ದರೆ, ಈ ಪರಂಪರೆಗಳನ್ನು ತ್ವರೆಗೊಳಿಸಬಹುದು ಎಂಬುದು ನಮಗೆ ಗೊತ್ತಿದೆ. ಸಂಸ್ಕೃತಿಯೇ ಇಲ್ಲದ ಕೆಲವೇ ಜನರನ್ನು ನಡುಗಡ್ಡೆಯೊಂದರಲ್ಲಿ ಜೀವಿಸುವಂತೆ ಬಿಟ್ಟುಬಿಟ್ಟರೆ, ಹೊಟ್ಟೆ, ಬಟ್ಟೆ, ನೆರಳನ್ನು ಸಾಕು ಸಾಲದಂತೆ ಕೊಟ್ಟಿದ್ದರೆ, ಕ್ರಮೇಣ ಅವರು ಹಾಗೇ ಮುಂದೆ ಬಂದು ನಾಗರಿಕತೆಯ ಮೇಲು ಮೇಲಿನ ಹಂತಗಳಿಗೆ ವಿಕಾಸವಾಗುವರು. ಅಧಿಕವಾಗಿ ಸೇರಿಸಿದ ಸಾಧನಗಳಿಂದ ಈ ಬೆಳವಣಿಗೆಯನ್ನು ತ್ವರೆಗೊಳಿಸಬಹುದು ಎಂದೂ ನಾವು ಬಲ್ಲೆವು. ಮರಗಳ ಬೆಳವಣಿಗೆಗೆ ನಾವು ಸಹಾಯಮಾಡುವೆವು, ಅಲ್ಲವೇ? ಪ್ರಕೃತಿಗೇ ಬಿಟ್ಟಿದ್ದರೆ ಅವು ಹೆಚ್ಚು ಕಾಲವನ್ನು ತೆಗೆದುಕೊಳ್ಳುತ್ತಿದ್ದುವು; ಬೇರೆಯಂತೆ ಅವು ತೆಗೆದುಕೊಳ್ಳುತ್ತಿದ್ದದ್ದಕ್ಕಿಂತ ಕಡಿಮೆಯ ಅವಧಿಯಲ್ಲಿ ಬೆಳೆಯುವಂತೆ ನಾವು ಸಹಾಯ ಮಾಡುವೆವು. ವಸ್ತುಗಳ ಬೆಳವಣಿಗೆಯನ್ನು ಕೃತಕ ಸಾಧನಗಳಿಂದ ತ್ವರೆ ಮಾಡುವದನ್ನೇ, ಯಾವಾಗಲೂ, ಎಲ್ಲ ಕಾಲದಲ್ಲೂ ಮಾಡುತ್ತಿರುವೆವು. ಮನುಷ್ಯನ ಬೆಳವಣಿಗೆಯನ್ನು ಏಕೆ ನಾವು ತ್ವರೆ ಮಾಡಬಾರದು? ಒಂದು ಜನಾಂಗದಂತೆ ಅದನ್ನು ಮಾಡಬಹುದು. ಉಪಾಧ್ಯಾಯರನ್ನು ಹೊರದೇಶಗಳಿಗೆ ಕಳಿಸುವದೇಕೆ? ಏಕೆಂದರೆ, ಈ ಸಾಧನಗಳಿಂದ ಕುಲಗಳ ಬೆಳವಣಿಗೆಯನ್ನು ತ್ವರೆ ಮಾಡಬಲ್ಲೆವು. ಈಗ, ವ್ಯಕ್ತಿಗಳ ಬೆಳವಣಿಗೆಯನ್ನು ನಾವು ತ್ವರೆ ಮಾಡಲು ಸಾಧ್ಯವಿಲ್ಲವೇ? ನಮಗೆ ಸಾಧ್ಯ. ನಾವು ಈ ಆತುರತೆಗೆ ಒಂದು ಮಿತಿ ಹಾಕಬಲ್ಲವೇ? ಒಬ್ಬ ಮನುಷ್ಯ ತನ್ನ ಜೀವನಕಾಲದಲ್ಲಿ ಎಷ್ಟು ಬೆಳೆಯುವನೆಂಬುದನ್ನು ನಮಗೆ ಹೇಳಲು ಆಗುವದಿಲ್ಲ. ಮನುಷ್ಯ ಇಷ್ಟು ಮಾತ್ರ ಮಾಡಬಲ್ಲ, ಹೆಚ್ಚಿಗೆ ಇಲ್ಲ ಎಂದು ಹೇಳಲು ನಮಗೆ ಯಾವ ಕಾರಣವೂ ಇಲ್ಲ. ಬೆರಗುಗೊಳಿಸುವ ರೀತಿಯಲ್ಲಿ ಸಂದರ್ಭಗಳು ಅವನನ್ನು ತ್ವರೆಗೊಳಿಸಬಹುದು. ನೀವು ಪರಿಪೂರ್ಣತೆಗೆ ಬರುವವರೆಗೆ ಏನಾದರೂ ಮಿತಿ ಇರಬಲ್ಲುದೇ? ಆದರೆ, ಅದರಿಂದೇನು ಬರುವದು?–ಅದನ್ನು ಹೇಳುವದಾದರೆ, ಪರಿಪೂರ್ಣ ಮನುಷ್ಯನು–ಬಹುಶಃ ಈಗಿನಿಂದ ಮಿಲಿಯಾಂತರ ವರ್ಷಗಳನಂತರ ಬರುವ ಆದರ್ಶ ಮನುಷ್ಯನು–ಈಗಲೇ ಬರಬಲ್ಲನು. ಹೀಗೆಂದು ಯೋಗಿಗಳು ಹೇಳುವರು–ಎಲ್ಲ ಮಹಾ ಅವತಾರಗಳೂ ಪ್ರವಾದಿಗಳೂ ಇಂತಹ ಮಾನವರೆಂದು ಅವರು ಹೇಳುತ್ತಾರೆ; ಅವರು ಈ ಒಂದೇ ಜೀವನದಲ್ಲಿ ಪರಿಪೂರ್ಣತೆಯನ್ನು ಮುಟ್ಟಿದರು. ಇತ್ತೀಚೆಗೆ ಇಂಥವರೊಬ್ಬರು ಇಡಿ ಮಾನವಕುಲದ ಬಾಳನ್ನು ಜೀವಿಸಿದರು, ಈ ಜೀವನದಲ್ಲೇ ಮುಕ್ತಿಯನ್ನೂ ಪಡೆದರು. ಹೀಗೆ ಬೆಳವಣಿಗೆಯನ್ನು ತ್ವರೆಗೊಳಿಸುವದು ಕೂಡಾ ನಿಯಮಗಳ ಚೌಕಟ್ಟಿನಲ್ಲೇ ಆಗಬೇಕು. ಈ ನಿಯಮಗಳನ್ನು ಪರೀಕ್ಷಿಸಿ, ಅವುಗಳ ರಹಸ್ಯವನ್ನು ಅರ್ಥಮಾಡಿಕೊಂಡು, ಅವುಗಳನ್ನು ನಮ್ಮ ಅವಶ್ಯಕತೆಗಳಿಗೆ ಅನ್ವಯಮಾಡಿಕೊಳ್ಳುತ್ತೇವೆ ಎನ್ನೋಣ; ಆಗ ನಾವೂ ಬೆಳೆಯುತ್ತೇವೆ ಎಂಬುದು ಅನುಗತವಾಗಿ ಬರುತ್ತದೆ. ನಮ್ಮ ಬೆಳವಣಿಗೆಯನ್ನು ತ್ವರಿತಗೊಳಿಸಿಕೊಳ್ಳುತ್ತೇವೆ, ನಮ್ಮ ಅಭಿವೃದ್ಧಿಯನ್ನು ಶೀಘ್ರಗೊಳಿಸಿಕೊಳ್ಳುತ್ತೇವೆ, ಈ ಜನ್ಮದಲ್ಲಿಯೇ ಪರಿಪೂರ್ಣರೂ ಆಗುತ್ತೇವೆ. ಇದು ನಮ್ಮ ಜೀವನದ

ಮೇಲ್ತರದ ಭಾಗ, ಮನಸ್ಸಿನ ಅಧ್ಯಯನದ ವಿಜ್ಞಾನ ಮತ್ತು ಅದರ ಶಕ್ತಿಗಳು ಈ ಪರಿಪೂರ್ಣತೆಯನ್ನೇ ತಮ್ಮ ಗುರಿಯಾಗಿಟ್ಟುಕೊಂಡಿವೆ. ಇತರರಿಗೆ ಹಣ ಮತ್ತು ಪ್ರಾಪಂಚಿಕ ವಸ್ತುಗಳನ್ನು ನೀಡಿ ಸಹಾಯಮಾಡುವದು, ದೈನಂದಿನ ಜೀವನದಲ್ಲಿ ಹೇಗೆ ಸುಲಭವಾಗಿ ಮುಂದುವರೆಯುವಂತೆ ಹೇಳಿಕೊಡುವದು ಇವು ಕೇವಲ ವಿವರಗಳಷ್ಟೆ.

ಈ ವಿಜ್ಞಾನದ ಉಪಯೋಗವು ಪರಿಪೂರ್ಣ ಮನುಷ್ಯನನ್ನು ಹೊರತರುವದೇ ಆಗಿದೆ, ಭೌತಿಕ ಪ್ರಪಂಚದ ಕೈಗಳಲ್ಲಿ, ಅಲೆಯಿಂದ ಅಲೆಗೆ ಸಾಗಿಸಿ, ಸಾಗರದ ಮೇಲೆ ಹೊಯ್ದಾಡುವ ತೇಲು-ದಿಮ್ಮಿಯಂತೆ, ಬರೀ ಆಟಿಕೆಯಾಗದಂತೆ, ಅವನನ್ನು ದೀರ್ಘಕಾಲ ಕಾಯಿಸುತ್ತಾ ಕಾಯುತ್ತಿರುವಂತೆ ಬಿಡುವದಿಲ್ಲ. ನಿಮ್ಮ ಗುರಿಯನ್ನು ಮುಟ್ಟುವ ಕೆಲಸವನ್ನು ನಿಮ್ಮ ಕೈಗೇ ತೆಗೆದುಕೊಂಡು, ಅದನ್ನು ಪ್ರಕೃತಿಯ ಕೈಗೆ ಬಿಡದೆ, ಈ ಅಲ್ಪ ಜೀವನದ ಆಚೆ ಹೋಗಲು ನೀವು ಬಲವಾಗಿರಬೇಕು ಎಂದು ಈ ವಿಜ್ಞಾನವು ಬಯಸುತ್ತದೆ. ಅದೇ ದೊಡ್ಡ ವಿಷಯ.

ಮನುಷ್ಯನು ಜ್ಞಾನದಲ್ಲಿ, ಶಕ್ತಿಯಲ್ಲಿ, ಸುಖದಲ್ಲಿ ಅಭಿವೃದ್ಧಿಯಾಗುತ್ತಲಿದ್ದಾನೆ. ಒಂದು ಕುಲದವರಾಗಿ ನಾವು ಒಂದೇ ಸಮನೆ ಬೆಳೆಯುತ್ತಲಿದ್ದೇವೆ. ಅದು ಸತ್ಯ, ಪೂರ್ಣ ಸತ್ಯ. ಆದರೆ, ಅದು ವ್ಯಕ್ತಿಗಳ ವಿಷಯದಲ್ಲಿ ಸತ್ಯವೇ? ಸ್ವಲ್ಪ ಮಟ್ಟಿಗೆ, ಹೌದು ಎನ್ನಬಹುದು. ಆದರೂ ಹೀಗೊಂದು ಪ್ರಶ್ನೆ ಪುನಃ ಬರುತ್ತದೆ- ಅದಕ್ಕೆ ಮಿತಿಯನ್ನು ಎಲ್ಲಿ ಗೊತ್ತುಮಾಡುವಿರಿ? ನಾನು ಕೆಲವು ಅಡಿಗಳಷ್ಟು ದೂರವನ್ನು ಮಾತ್ರ ನೋಡಬಲ್ಲೆ. ಆದರೆ ತನ್ನ ಕಣ್ಣನ್ನು ಮುಚ್ಚಿ ಇನ್ನೊಬ್ಬನ ಕೊಠಡಿಯಲ್ಲಿ ಏನಾಗುತ್ತಿದೆಯೆಂದು ಕಾಣುವ ಒಬ್ಬನನ್ನು ನೋಡಿದ್ದೇನೆ. ನೀವು ಅದನ್ನು ನಂಬುವದಿಲ್ಲವೆಂದು ಹೇಳುವಿರಾದರೆ, ಬಹುಶಃ ಮೂರುವಾರದಲ್ಲಿ ಆ ಮನುಷ್ಯನು ನೀವು ಅದನ್ನು ಸಾಧಿಸುವಂತೆ ಮಾಡಬಲ್ಲನು. ಅದನ್ನು ಯಾರಿಗಾದರೂ ಕಲಿಸಬಹುದು. ಕೆಲವು ವ್ಯಕ್ತಿಗಳು, ಐದೇ ನಿಮಿಷಗಳಲ್ಲಿ ಕೂಡ ಇನ್ನೊಬ್ಬ ಮನುಷ್ಯನ ಮನಸ್ಸಿನಲ್ಲಿ ಏನು ನಡೆಯುತ್ತಿದೆ ಎಂಬುದನ್ನು ತಿಳಿಯುವಂತೆ ಮಾಡಬಹುದು. ಈ ಸಂಗತಿಗಳನ್ನು ಪ್ರಾತ್ಯಕ್ಷಿಕೆ ಮಾಡಿ ತೋರಿಸಬಹುದು.

ಈಗ ಇಂತಹ ವಿಷಯಗಳೆಲ್ಲಾ ನಿಜವಾದರೆ ನಾವು ಮಿತಿಯನ್ನು ಎಲ್ಲಿ ಹಾಕಬಹುದು? ಒಬ್ಬ ಮನುಷ್ಯನು ಇಲ್ಲಿಯ ಕೊಠಡಿಯ ಮೂಲೆಯಲ್ಲಿರುವವನ ಮನಸ್ಸಿನಲ್ಲಿ ಏನು ನಡೆಯುತ್ತಿರುವದೆಂದು ತಿಳಿಯಲಾದರೆ, ಮುಂದಿನ ಕೊಠಡಿಯಲ್ಲಿ ಏಕಾಗಬಾರದು? ಎಲ್ಲಾದರೂ ಏಕಾಗಬಾರದು? ಏಕಲ್ಲ ಎಂಬುದನ್ನು ನಾವು ಹೇಳಲಾರೆವು. ಅದು ಸಾಧ್ಯವಿಲ್ಲ ಎಂದು ಧೈರ್ಯದಿಂದ ಹೇಳಲಾರೆವು. ಅದು ಹೇಗಾಗುತ್ತದೆ ಎಂಬುದನ್ನು ತಿಳಿಯೆವು ಎಂದಷ್ಟೇ ಹೇಳಬಹುದು. ಭೌತ ವಿಜ್ಞಾನಿಗಳು ಇಂತಹ ಘಟನೆಗಳು ಸಾಧ್ಯವಿಲ್ಲ ಎಂದು ಹೇಳುವ ಹಕ್ಕಿಲ್ಲ; 'ನಮಗೆ ಗೊತ್ತಿಲ್ಲ' ಎಂದು ಮಾತ್ರ ಅವರು ಹೇಳಬಹುದು. ವಿಜ್ಞಾನವು ವಾಸ್ತವಾಂಶಗಳನ್ನು ಕಲೆಹಾಕಬೇಕು, ಅವುಗಳನ್ನು ಸಾಮಾನ್ಯೀಕರಿಸಬೇಕು, ಅನುಮಿತಿಯಿಂದ ತತ್ತ್ವಗಳನ್ನು ಪಡೆಯಬೇಕು, ಆಮೇಲೆ ನಿಜವನ್ನು ನಿರೂಪಿಸಬಹುದು- ಎಲ್ಲವೂ ಇದಷ್ಟೇ. ಆದರೆ ವಾಸ್ತವಗಳನ್ನು ನಿರಾಕರಿಸಹೊರಟರೆ, ವಿಜ್ಞಾನವು ಹೇಗಿರಬಲ್ಲದು?

ಒಬ್ಬ ಮನುಷ್ಯನು ಪಡೆಯಬಲ್ಲ ಶಕ್ತಿಗೆ ಕೊನೆಯೇ ಇಲ್ಲ. ಭಾರತೀಯ ಮನಸ್ಸಿನ ವಿಶಿಷ್ಟತೆಯೇ ಇದು: ಯಾವದಾದರೂ ಅದನ್ನು ಆಸಕ್ತಗೊಳಿಸಿದರೆ, ಅದು ಆ ವಿಷಯದಲ್ಲೇ ಮುಳುಗುತ್ತದೆ, ಇತರ ಎಲ್ಲವನ್ನು ಕಡೆಗಾಣಿಸುತ್ತದೆ. ಎಷ್ಟೊಂದು ವಿಜ್ಞಾನಗಳ ಉಗಮ ಭಾರತದಲ್ಲಿ ಆಗಿದೆ ಎಂಬುದು ನಿಮಗೆ ತಿಳಿದಿದೆ. ಗಣಿತಶಾಸ್ತ್ರ ಶುರುವಾದದ್ದು ಅಲ್ಲಿ (ಭಾರತ). ಇವತ್ತಿಗೂ ನೀವು 1,2,3 ಇತ್ಯಾದಿಯಿಂದ ಸೊನ್ನೆಯವರೆಗೆ ಎಣಿಸುವದು ಸಂಸ್ಕೃತದ ಅಂಕಿಗಳಂತೆ; ರೇಖಾಗಣಿತ ಹುಟ್ಟಿದ್ದೂ ಭಾರತದಲ್ಲೇ ಎಂದು ನಿಮಗೆಲ್ಲರಿಗೂ ಗೊತ್ತಿದೆ, ಭಾರತೀಯರಿಗೆ ಗುರುತ್ವಾಕರ್ಷಣವು ನ್ಯೂಟನ್ ಹುಟ್ಟುವ ಸಾವಿರ ವರ್ಷಗಳ ಮೊದಲೇ ತಿಳಿದಿತ್ತು.

ಇಲ್ಲಿ ನೀವು ವೈಶಿಷ್ಟ್ಯವನ್ನು ನೋಡಿ. ಭಾರತೀಯ ಚರಿತ್ರೆಯ ಒಂದಾನೊಂದು ಅವಧಿಯಲ್ಲಿ, ಮನುಷ್ಯ ಮತ್ತು ಅವನ ಮನಸ್ಸು ಎಂಬ ಒಂದೇ ವಿಷಯ ಅವರ ಆಸಕ್ತಿಯನ್ನೆಲ್ಲಾ ಹೀರಿಕೊಂಡಿತ್ತು. ಅದು ತಮ್ಮ ಗುರಿಗಳನ್ನು ಸಾಧಿಸುವ ಅತ್ಯಂತ ಸುಲಭ ಮಾರ್ಗ ಎಂದು ತೋರಿದ ಕಾರಣ, ಅದು ಬಹಳ ಆಕರ್ಷಣೀಯ ಸೆಳೆತವಾಯಿತು. ಮನಸ್ಸು ಯಾವದನ್ನೂ, ಪ್ರತಿಯೊಂದನ್ನೂ ನಿಯಮಕ್ಕನುಸಾರವಾಗಿ ಸಾಧಿಸಬಲ್ಲುದೆಂದು ಭಾರತೀಯ ಮನಸ್ಸಿಗೆ ಸಂಪೂರ್ಣವಾಗಿ ದೃಢನಂಬಿಕೆಗೊಳಿಸಿದ್ದೇ ಸರಿ, ಅದರ ಶಕ್ತಿಗಳು ಅಧ್ಯಯನದ ಮಹಾ ವಿಷಯವಾಯಿತು. ತಾಯಿತಿ–ಮಂತ್ರಗಳು, ಪ್ರಕೃತಿ ಭೂತಪಿಶಾಚಿಗಳನ್ನು ಅಧೀನದಲ್ಲಿಟ್ಟುಕೊಳ್ಳುವದು, ಇಂದ್ರಜಾಲ ಮತ್ತಿತರ ಶಕ್ತಿಗಳು– ಇವೆಲ್ಲಾ ಅಸಾಧಾರಣವಾದದ್ದಲ್ಲ, ಆದರೆ ಇದಕ್ಕೆ ಮೊದಲು ಬೋಧಿಸುತ್ತಿದ್ದ ವಸ್ತು ವಿಜ್ಞಾನಗಳಂತೆ ಇವು ವ್ಯವಸ್ಥಿತವಾಗಿ ಹೇಳಿಕೊಡುತ್ತಿದ್ದ ವಿಜ್ಞಾನ. ಈ ವಿಷಯಗಳಲ್ಲಿ ಇಲ್ಲಿಯ ಕುಲಕ್ಕೆ ಎಷ್ಟೊಂದು ದೃಢನಂಬಿಕೆ ಬಂತೆಂದರೆ, ಇವುಗಳಿಗಿಂತ ಮೊದಲೇ ಬಂದಿದ್ದ ಭೌತ ವಿಜ್ಞಾನಗಳು, ಸುಮಾರಾಗಿ ನಶಿಸಿಯೇ ಹೋದವು. ವಿವಿಧ ಯೋಗಿಗಳ ಪಂಥಗಳು ಎಲ್ಲ ತೆರನ ಪ್ರಯೋಗಗಳನ್ನೂ ಮಾಡಲಾರಂಭಿಸಿದರು. ವಿವಿಧ ಬಣ್ಣಗಳ ಬೆಳಕು ಹೇಗೆ ದೇಹದಲ್ಲಿ ಬದಲಾವಣೆಗಳನ್ನುಂಟುಮಾಡುತ್ತವೆ, ಎಂದು ಕಂಡು ಹಿಡಿಯುವ ಪ್ರಯತ್ನದಿಂದ, ಕೆಲವರು ಬೆಳಕಿನೊಡನೆ ಪ್ರಯೋಗಗಳನ್ನು ಮಾಡಿದರು; ವಿಶಿಷ್ಟವಾದ ಬಣ್ಣದ ಬಟ್ಟೆಯನ್ನು ಧರಿಸಿದರು; ವಿಶಿಷ್ಟವಾದ ಬೆಳಕಿನಲ್ಲಿ ಜೀವಿಸಿದರು; ಕೆಲವೊಂದು ಬಣ್ಣದ ಆಹಾರಗಳನ್ನು ಸೇವಿಸಿದರು; ಈ ರೀತಿಯಲ್ಲಿ ಎಲ್ಲ ತರಹದ ಪ್ರಯೋಗಗಳನ್ನೂ ಮಾಡಿದರು. ಕಿವಿಯನ್ನು ಮುಚ್ಚಿ ತೆರೆದು ಶಬ್ದದ ಮೇಲೆ ಕೆಲವರು ಪ್ರಯೋಗಗಳನ್ನು ಮಾಡಿದರು. ಇನ್ನೂ ಕೆಲವರು ಘ್ರಾಣೇಂದ್ರಿಯದ ವಿಷಯದಲ್ಲಿ, ಹೀಗೆ ಇನ್ನೂ ಏನೇನೋ ಪ್ರಯೋಗಗಳನ್ನು ಮಾಡಿದರು.

ಇದೆಲ್ಲದರ ಅಂತರಾರ್ಥ ಎಂದರೆ ಮೂಲದ ಸಂಶೋಧನೆ, ವಸ್ತುವಿನ ಸೂಕ್ಷ್ಮ ಭಾಗಗಳನ್ನು ತಿಳಿಯುವದು. ಅವರಲ್ಲಿ ಕೆಲವರು ನಿಜಕ್ಕೂ ಅತ್ಯದ್ಭುತ ಶಕ್ತಿಗಳನ್ನು ತೋರಿಸಿದರು. ಅನೇಕರು ಗಾಳಿಯಲ್ಲಿ ತೇಲುವ ಅಥವಾ ಅದರ ಮೂಲಕ ಹಾದುಹೋಗುವ ಪ್ರಯತ್ನ ಮಾಡಿದರು. ಪಾಶ್ಚಿಮಾತ್ಯ ಮಹಾಪಂಡಿತನೊಬ್ಬನಿಂದ ನಾನು ಕೇಳಿದ ಕಥೆಯನ್ನು ಹೇಳುತ್ತೇನೆ. ತಾನು ಕಂಡ ಸಾಹಸ ಪ್ರದರ್ಶನವನ್ನು ಸಿಲೋನಿನ ಪ್ರಾಂತಾಧಿಪತಿಯು ಅವನಿಗೆ ಹೇಳಿದ್ದನು. ಅಡ್ಡಪಟ್ಟಿಗಳಿಂದ ಮಾಡಿದ ನಾಗಾಲಿಯ ಮೇಲೆ, ಹುಡುಗಿಯೊಬ್ಬಳನ್ನು ಮುಂದೆತಂದು ಪದ್ಮಾಸನದಲ್ಲಿ

ಕೂರಿಸಿದನು. ಅವಳು ಸ್ವಲ್ಪ ಹೊತ್ತು ಕುಳಿತಮೇಲೆ, ಪ್ರದರ್ಶನಕಾರನು ಒಂದಾದಮೇಲೊಂದರಂತೆ ಅಡ್ಡಪಟ್ಟಿಗಳನ್ನೆಲ್ಲಾ ತೆಗೆದುಹಾಕಿದನು; ಹುಡುಗಿಯು ಹಾಗೆಯೇ ಗಾಳಿಯಲ್ಲಿ ತೇಲುತ್ತಿದ್ದಳು. ಪ್ರಾಂತಾಧಿಕಾರಿಯು ಇದರಲ್ಲೇನೋ ಮೋಸವಿರಬಹುದೆಂದೆಣಿಸಿದನು. ಹಾಗಾಗಿ ತನ್ನ ಕತ್ತಿಯನ್ನು ಹುಡುಗಿಯ ಕೆಳಗೆ ರಭಸದಿಂದ ಎಳೆದನು, ಅಲ್ಲಿ ಏನೂ ಇರಲಿಲ್ಲ. ಇಲ್ಲಿ, ಅದು ಏನು? ಅದು ಇಂದ್ರಜಾಲ ಅಥವಾ ಅಸಾಮಾನ್ಯವಾದ ಯಾವದೋ ಅಲ್ಲ. ಇದು ವೈಶಿಷ್ಟ್ಯ. ಭಾರತದಲ್ಲಿ ಯಾವನೊಬ್ಬನೂ ಇಂತಹ ವಿಷಯಗಳು/ವಸ್ತುಗಳು ನಡೆಯುವದಿಲ್ಲ ಎಂದು ಹೇಳುವದಿಲ್ಲ. ಹಿಂದುವಿಗೆ ಇದೊಂದು ಸಹಜವಾದ ವಿಷಯ. ತಮ್ಮ ಶತ್ರುವಿನೊಡನೆ ಯುದ್ಧ ಮಾಡುವಾಗ ಹಿಂದುಗಳು ಆಗಾಗ ಏನು ಹೇಳುತ್ತಾರೆ ಎಂಬುದು ನಿಮಗೆ ತಿಳಿದಿದೆ– "ಓ, ನಮ್ಮಲ್ಲಿನ ಯೋಗಿಗಳಲ್ಲೊಬ್ಬ ಬಂದು ಇವರ ಇಡೀ ಗುಂಪನ್ನು ಓಡಿಸುತ್ತಾನೆ", ಇದು ಈ ಕುಲದ ಅತ್ಯಂತ ಪರಮಾವಧಿಯ ನಂಬಿಕೆ. ಕೈಯಲ್ಲಾಗಲೀ, ಕತ್ತಿಯಲ್ಲಾಗಲೀ ಏನು ಶಕ್ತಿಯಿದೆ? ಶಕ್ತಿ ಇರುವದೆಲ್ಲಾ ಅಂತರ್ಗತ ಚೇತನದಲ್ಲಿ. ಇದು ನಿಜವಾದರೆ, ತನ್ನ ಗರಿಷ್ಠತೆಯಲ್ಲಿ ಶ್ರಮಿಸಲು ಮನಸ್ಸಿಗೆ ಸಾಕಷ್ಟು ಪ್ರಲೋಭನೆಯಾಗಿದೆ. ಆದರೆ ಇತರ ಪ್ರತಿಯೊಂದು ವಿಜ್ಞಾನದಲ್ಲಿಯಂತೆ ಹೆಚ್ಚಿನ ಯಾವದೇ ಸಾಧನೆಯನ್ನು ಮಾಡಲು ಬಹು ದುಸ್ತರ, ಇದರ ವಿಷಯದಲ್ಲೂ ಹೀಗೇ,– ಅಲ್ಲ ಇನ್ನೂ ಹೆಚ್ಚುಕಷ್ಟ. ಆದರೂ, ಬಹುಮಂದಿ ಈ ಶಕ್ತಿಗಳನ್ನು ಸುಲಭವಾಗಿ ಸಾಧಿಸಬಹುದು ಎಂದು ಎಣಿಸುತ್ತಾರೆ. ಸಂಪತ್ತು ಗಳಿಸಲು ನೀವು ಎಷ್ಟು ವರ್ಷಗಳನ್ನು ತೆಗೆದುಕೊಳ್ಳುವಿರಿ? ಅದನ್ನು ಯೋಚಿಸಿ! ಮೊದಲು ವಿದ್ಯುತ್ ವಿಜ್ಞಾನ ಅಥವಾ ಇಂಜಿನಿಯರಿಂಗ್ (ಜನೋಪಕಾರ್ಯ ಸಂವಿಧಾನ) ಕಲಿಯಲು ಎಷ್ಟು ವರ್ಷಗಳನ್ನು ತೆಗೆದುಕೊಳ್ಳುವಿರಿ? ಆದಾದಮೇಲೆ ನಿಮ್ಮ ಜೀವಮಾನವಿಡೀ ನೀವು ದುಡಿಯಬೇಕಾಗುವದು.

ಹಾಗೆಯೇ, ಇತರ ವಿಜ್ಞಾನಗಳಲ್ಲಿ ಬಹುಪಾಲು ವಿಜ್ಞಾನಗಳು ಚಲಿಸದ, ಸ್ಥಿರವಾಗಿರುವ ವಸ್ತುಗಳಲ್ಲಿ ತೊಡಗಿರುತ್ತವೆ. ನೀವು ಕುರ್ಚಿಯನ್ನು ವಿಭಜಿಸಿನೋಡಬಹುದು, ಕುರ್ಚಿಯು ನಿಮ್ಮಿಂದ ಹಾರಿಹೋಗುವದಿಲ್ಲ. ಆದರೆ ಈ ವಿಜ್ಞಾನ, ಎಲ್ಲ ಕಾಲದಲ್ಲೂ ಸಂಚರಿಸುತ್ತಿರುವ ನಿಮ್ಮ ಮನಸ್ಸಿನೊಡನೆ ಪ್ರವೃತ್ತವಾಗಿದೆ; ನೀವು ಅದನ್ನು ಅಧ್ಯಯನಮಾಡಬೇಕೆಂಬ ಕ್ಷಣದಲ್ಲಿ ಅದು ಜಾರಿಹೋಗುತ್ತದೆ. ಈಗ ಮನಸ್ಸು ಒಂದು ಭಾವದಲ್ಲಿರುತ್ತದೆ, ಮರುಕ್ಷಣ, ಬಹುಶಃ, ಅದು ಬೇರೆಯೇ, ಬದಲಾಗುತ್ತಾ ಎಲ್ಲ ಕಾಲದಲ್ಲೂ ಬದಲಾಗುತ್ತಾ ಇರುವದು. ಈ ಎಲ್ಲ ಬದಲಾವಣೆಗಳ ಮಧ್ಯದಲ್ಲಿ, ಅದನ್ನು ಅಧ್ಯಯನ ಮಾಡಬೇಕು. ಅರ್ಥಮಾಡಿಕೊಳ್ಳಬೇಕು, ಮನದಟ್ಟು ಮಾಡಿಕೊಳ್ಳಬೇಕು, ಮತ್ತು ನಿಯಂತ್ರಿಸಬೇಕು. ಹಾಗೆಂದರೆ, ಈ ವಿಜ್ಞಾನವು ಇನ್ನಷ್ಟು ಹೆಚ್ಚು ಕಷ್ಟ! ಅದಕ್ಕೆ ನಿಷ್ಠುರದ ತರಬೇತಿಬೇಕು. ಪ್ರಾಯೋಗಿಕ ಪಾಠಗಳನ್ನೇಕೆ ನಾನು ಅವರಿಗೆ ಹೇಳುವದಿಲ್ಲ ಎಂದು ಜನರು ನನ್ನನ್ನು ಕೇಳುತ್ತಾರೆ. ಏಕೆಂದರೆ, ಇದು ಪರಿಹಾಸವಲ್ಲ– ನಿಮ್ಮೊಡನೆ ಮಾತನಾಡುತ್ತಾ ನಾನು ಈ ವೇದಿಕೆಯ ಮೇಲೆ ನಿಂತಿದ್ದೇನೆ, ನೀವು ಮನೆಗೆ ಹೋಗುವಿರಿ, ಯಾವ ಪ್ರಯೋಜನವನ್ನೂ ಕಾಣುವದಿಲ್ಲ, ನಾನಾದರೂ ಅಷ್ಟೇ. ಆಗ ನೀವು ಹೇಳುತ್ತೀರಿ 'ಇದೆಲ್ಲಾ ಬುರುಡೆ'! ಅದೇಕೆಂದರೆ ನೀವು ಅದನ್ನು ಪೊಳ್ಳುಮಾಡಬೇಕೆಂದಿರುವಿರಿ. ಈ ವಿಜ್ಞಾನದ

ಬಹಳ ಸ್ವಲ್ಪವನ್ನು ಮಾತ್ರ ನಾನು ತಿಳಿದಿದ್ದೇನೆ, ಆದರೆ ಆ ಸ್ವಲ್ಪವನ್ನು ಗಳಿಸಲೇ ನನ್ನ ಜೀವನದ ಮೂವತ್ತು ವರ್ಷಗಳು ಶ್ರಮಿಸಿದ್ದೇನೆ, ಮತ್ತು ಆರು ವರ್ಷಗಳಿಂದ ನನಗೆ ಗೊತ್ತಿರುವ ಸ್ವಲ್ಪವನ್ನೇ ಜನಗಳಿಗೆ ಹೇಳುತ್ತಿದ್ದೇನೆ. ಅದನ್ನು ಕಲಿಯಲು ನನಗೆ ಮೂವತ್ತು ವರ್ಷಗಳು ಬೇಕಾದುವು– ಮೂವತ್ತು ವರ್ಷಗಳ ಕಠಿಣ ಹೋರಾಟ ಕೆಲವು ಕಾಲ ಅದಕ್ಕಾಗಿ ಇಪ್ಪತ್ತು ನಾಲ್ಕರ ಅವಧಿಯಲ್ಲಿ ಇಪ್ಪತ್ತು ಗಂಟೆಗಳು ಶ್ರಮಿಸಿದ್ದೇನೆ; ಕೆಲವು ಕಾಲ ರಾತ್ರಿಯಲ್ಲಿ ಒಂದೇ ಒಂದು ಗಂಟೆ ನಿದ್ದೆ ಮಾಡಿದ್ದೇನೆ; ಕೆಲವು ಕಾಲ ಇಡೀ ರಾತ್ರಿಗಳಲ್ಲಿ ಶ್ರಮಿಸಿದ್ದೇನೆ; ಕೆಲವು ಕಾಲ ಒಂದು ಶಬ್ದವಾಗಲೀ, ಉಸಿರಾಗಲೀ ಇಲ್ಲದ ಸ್ಥಳಗಳಲ್ಲಿ ಜೀವಿಸಿದ್ದೇನೆ; ಕೆಲವು ಸಾರಿ ಗುಹೆಗಳಲ್ಲಿರಬೇಕಾಯಿತು. ಅದನ್ನು ಯೋಚಿಸಿ. ಅಷ್ಟಾದರೂ ನನಗೆ ತಿಳಿದಿರುವದು ಸ್ವಲ್ಪವೇ ಅಥವಾ ಏನೂ ಇಲ್ಲ. ಈ ವಿಜ್ಞಾನದ ನಿಲುವಂಗಿಯ ಅಂಚನ್ನು ಸಹಿತ ನಾನು ಸ್ವಲ್ಪ ಮುಟ್ಟಿರುವುದು ಅತ್ಯಲ್ಪ ಎನ್ನಬಹುದು. ಆದರೆ, ಅದು ಸತ್ಯ, ವಿಸ್ತಾರ ಮತ್ತು ಆಶ್ಚರ್ಯಕರ ಎಂದು ಅರ್ಥಮಾಡಿಕೊಳ್ಳ ಬಲ್ಲೆ.

ಈಗ ನಿಮ್ಮಲ್ಲಿ ಯಾರೊಬ್ಬರಿಗಾದರೂ ನಿಜವಾಗಿಯೂ ಈ ವಿಜ್ಞಾನವನ್ನು ಕಲಿಯಬೇಕೆಂದಿದ್ದರೆ, ಜೀವನದ ವ್ಯವಹಾರದಲ್ಲಿ ಆತ ಇಡುವಷ್ಟೇ, ಅಲ್ಲ ಅದಕ್ಕೂ ಹೆಚ್ಚಿನ ತರಹದ ನಿಶ್ಚಯ ಒಲವಿನೊಡನೆ ಆಗ ಪ್ರಾರಂಭಿಸಬೇಕು.

ವ್ಯವಹಾರವು ಎಷ್ಟುಮಟ್ಟಿನ ಗಮನವನ್ನು ಕೋರುತ್ತದೆ, ಯಾವ ರೀತಿಯ ಕಠಿಣ ಯಜಮಾನ ಅದು! ತಂದೆ, ತಾಯಿ, ಹೆಂಡತಿ ಅಥವಾ ಮಗು ಮರಣವಾದರೂ ವ್ಯವಹಾರ ನಿಲ್ಲಲಾರದು! ಎದೆ ತುಂಡರಿಯುತ್ತಿದ್ದರೂ ಪ್ರತಿಗಂಟೆಯೂ ತೀವ್ರ ಯಾತನಾಮಯವೇ ಆದರೂ ನಾವು ವ್ಯವಹಾರ ಸ್ಥಳಕ್ಕೆ ಹೋಗಲೇಬೇಕು. ಅದು ವ್ಯವಹಾರ ಮತ್ತು, ನಾವು ಅದನ್ನು ನ್ಯಾಯ, ಅದು ಸರಿ ಎಂದು ಚಿಂತನೆಮಾಡುತ್ತೇವೆ.

ಯಾವದೇ ವ್ಯವಹಾರ ಎಂದಾದರೂ ಅಗತ್ಯವೆಂದು ಕೇಳುವದಕ್ಕಿಂತ ಹೆಚ್ಚಿನ ಶ್ರದ್ಧೆಯನ್ನು ಈ ವಿಜ್ಞಾನ ಬೇಕೆನ್ನುತ್ತದೆ. ಅನೇಕ ಜನ ವ್ಯವಹಾರದಲ್ಲಿ ಜಯಶೀಲರಾಗುವರು. ಆದರೆ, ಇದರಲ್ಲಿ ಪ್ರಗತಿಯಾಗುವರು ಕೆಲವರೇ. ಏಕೆಂದರೆ, ಇದನ್ನು ಅಧ್ಯಯನ ಮಾಡುವ ವ್ಯಕ್ತಿಯ ವಿಶಿಷ್ಟ ಮನಃಪ್ರಕೃತಿಯ ಮೇಲೆ ಇದು ಅವಲಂಬಿಸಿದೆ. ವ್ಯವಹಾರದಲ್ಲಿ ಎಲ್ಲರೂ ಸಂಪತ್ತನ್ನು ಗಳಿಸಲಾರರು, ಆದರೆ ಪ್ರತಿಯೊಬ್ಬನೂ ಸ್ವಲ್ಪವನ್ನಾದರೂ ಗಳಿಸುವನು; ಅದರಂತೆಯೇ ಈ ವಿಜ್ಞಾನದ ಅಧ್ಯಯನದಲ್ಲೂ ಪ್ರತಿಯೊಬ್ಬನೂ ಅದರ ಸತ್ಯದ ಬಗ್ಗೆ ಮನದಟ್ಟು ಮಾಡಿಕೊಡುವ ಮಿನುಗನ್ನು, ಮತ್ತು ಇದನ್ನು ಪೂರ್ಣವಾಗಿ ಸಿದ್ಧಿ ಪಡೆದ ಮನುಷ್ಯರೂ ಇರುವರೆಂಬ ಸಂಗತಿಯನ್ನು ಕಾಣಬಲ್ಲನು.

ಇದು ಈ ವಿಜ್ಞಾನದ ರೂಪರೇಖೆ. ಅದು ತನ್ನ ಕಾಲಮೇಲೇ ತನ್ನ ಸ್ವಂತ ಬೆಳಕಿನಲ್ಲೇ ನಿಂತಿದೆ, ಇತರ ಯಾವದೇ ವಿಜ್ಞಾನದೊಡನೆ ಹೋಲಿಕೆಗೂ ಸವಾಲಾಗಿದೆ. ಬೇರೆ ಕ್ಷೇತ್ರಗಳಲ್ಲಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಇಲ್ಲಿ ಬೂಟಾಟಿಗರು ಇದ್ದಾರೆ, ಜಾದೂಗಾರರು ಇದ್ದಾರೆ, ಮೋಸಗಾರರು

ಇದ್ದಾರೆ. ಏಕೆ? ವ್ಯವಹಾರ ಹೆಚ್ಚು ಲಾಭಕರವಾದಷ್ಟೂ ಬೂಟಾಟಿಗರ, ಮೋಸಗಾರರ ಸಂಖ್ಯೆಯೂ ಹೆಚ್ಚಾಗಿಯೇ ಇರುತ್ತದೆ ಎಂಬುದೇ ಕಾರಣವೇ! ಆದರೆ ವ್ಯವಹಾರ ಏಕೆ ಉತ್ತಮವಾಗಿರಬಾರದು ಎನ್ನುವದಕ್ಕೆ ಅದು ಕಾರಣವೇ ಅಲ್ಲ. ಇನ್ನೊಂದು ಹೆಚ್ಚಿನ ವಿಷಯ: ಎಲ್ಲ ವಾದಗಳನ್ನೂ ಕೇಳಲು ಅದು ಉತ್ತಮ ಬೌದ್ಧಿಕ ಕಸರತ್ತಾಗಬಹುದು, ಮತ್ತು ಆಶ್ಚರ್ಯಕರ ವಿಷಯಗಳನ್ನು ಕೇಳುವದು ಬೌದ್ಧಿಕ ತೃಪ್ತಿ ತರಬಹುದು. ಆದರೆ, ನಿಮ್ಮಲ್ಲಿ ಯಾರೊಬ್ಬನಾದರೂ ನಿಜವಾಗಿಯೂ ಅದಕ್ಕಿಂತ ಹೆಚ್ಚಿನದು ಯಾವದನ್ನಾದರೂ ಕಲಿಯಬೇಕಾದರೆ, ಬರೇ ಉಪನ್ಯಾಸಗಳಿಗೆ ಹೋಗಿಬರುವದು ಸಾಲದು. ಅದನ್ನು ಉಪನ್ಯಾಸಗಳಲ್ಲಿ ಬೋಧಿಸಲಾಗದು, ಏಕೆಂದರೆ ಅದೇ ಜೀವನ, ಮತ್ತು ಜೀವನ ಮಾತ್ರ ಜೀವನವನ್ನು ವರ್ಗಾಯಿಸಬಹುದು. ನಿಮ್ಮಗಳಲ್ಲಿ ಯಾರಾದರೂ ಅದನ್ನು ಕಲಿಯಲು ದೃಢ ನಿರ್ಧಾರ ಮಾಡಿದವರಿದ್ದರೆ, ಅವರಿಗೆ ಸಹಾಯ ಮಾಡಲು ನನಗೆ ತುಂಬಾ ಸಂತೋಷವೆನಿಸುತ್ತದೆ.

*(ಜನವರಿ 8, 1900 ರಲ್ಲಿ ಕ್ಯಾಲಿಫೋರ್ನಿಯಾದ ಲಾಸ್‌ಏಂಜಲೀಸ್‌ನಲ್ಲಿ ನೀಡಿದ ಉಪನ್ಯಾಸ)*
(ಆಕರ : The Powers of the Mind, (The Complete works of Swami Vivekananda, Vol-II, P-10)

# 19

# ಭಕ್ತಿ ಅಥವಾ ದೈವನಿಷ್ಠೆ

'ವೈಯಕ್ತಿಕ ಪರಮೇಶ್ವರ' ಎನ್ನುವ ಮನೋಭಾವ, ಕೆಲವೇ ವಿನಾಯಿತಿಗಳನ್ನು ಬಿಟ್ಟರೆ, ಬಹುಮಟ್ಟಿಗೆ ಪ್ರತಿಯೊಂದು ಧರ್ಮದಲ್ಲಿಯೂ ಬಳಕೆಯಲ್ಲಿದೆ. ಬೌದ್ಧರು ಮತ್ತು ಜೈನರನ್ನು ಬಿಟ್ಟರೆ, ಬಹುಶಃ ಪ್ರಪಂಚದ ಎಲ್ಲ ಧರ್ಮಗಳೂ 'ವೈಯಕ್ತಿಕ ಪರಮೇಶ್ವರ'ನ ಮನೋಭಾವವನ್ನು ಹೊಂದಿವೆ, ಅದರೊಡನೆ ಭಕ್ತಿ ಮತ್ತು ದೈವನಿಷ್ಠೆಯ ಮನೋಭಾವವೂ ಬರುತ್ತದೆ. ಬೌದ್ಧರು ಮತ್ತು ಜೈನರು, 'ವೈಯಕ್ತಿಕ ಪರಮೇಶ್ವರ'ನನ್ನು ಇಟ್ಟುಕೊಳ್ಳದಿದ್ದಾಗ್ಯೂ, ಬೇರೆಯವರು ತಮ್ಮ ವೈಯಕ್ತಿಕ ಪರಮೇಶ್ವರನನ್ನು ಆರಾಧಿಸುವ ಅದೇ ರೀತಿಯಲ್ಲೇ ತಮ್ಮ ಧರ್ಮ ಪ್ರವರ್ತಕರನ್ನು ಆರಾಧಿಸುತ್ತಾರೆ. ಪ್ರೀತಿಯನ್ನು ಮನುಷ್ಯನಿಗೆ ಪ್ರತಿಬಿಂಬಿಸಬಲ್ಲ ಯಾವದೋ ಮೇಲ್ತರದ ಸ್ವರೂಪಕ್ಕೆ ದೈವನಿಷ್ಠೆ ಮತ್ತು ಆರಾಧನೆ ಎಂಬ ಮನೋಭಾವವು ವಿಶ್ವವ್ಯಾಪಿಯಾಗಿದೆ. ವಿವಿಧ ಧರ್ಮಗಳಲ್ಲಿ, ಈ ಪ್ರೀತಿ ಮತ್ತು ದೈವನಿಷ್ಠೆ ವಿವಿಧ ಮಜಲುಗಳಲ್ಲಿ, ಬಗೆಬಗೆಯ ಹಂತಗಳಲ್ಲಿ ಮೈದೋರಿಕೊಳ್ಳುತ್ತವೆ. ಸೂಕ್ಷ್ಮಭಾವನೆಗಳು ಬಹುಮಟ್ಟಿಗೆ ಅಸಾಧ್ಯವಾಗಿ, ಅತ್ಯಂತ ಕೆಳಗಿನ ಮಟ್ಟಕ್ಕೆ ಸೆಳೆದು ಗಟ್ಟಿಯಾಗಿರುವ, ಅತ್ಯಂತ ಕೆಳ ಹಂತವೇ ಕರ್ಮಪದ್ಧತಿ. ಆಕಾರಗಳು, ಅವುಗಳ ಜೊತೆಗೆ ಸಂಕೇತಗಳು ಕಾರ್ಯಾಚರಣೆಗೆ ಬರುತ್ತವೆ. ಭಾವನಾರೂಪಗಳು ಅಥವಾ ಸಂಕೇತಗಳ ಮೂಲಕ ಅಮೂರ್ತವನ್ನು ಹಿಡಿಯಲು ಮನುಷ್ಯನು ಪ್ರಯತ್ನಿಸುತ್ತಿರುವದನ್ನು ಪ್ರಪಂಚದ ಇತಿಹಾಸದುದ್ದಕ್ಕೂ ನಾವು ಕಾಣುತ್ತೇವೆ. ಧರ್ಮದ ಎಲ್ಲ ಹೊರ ತೋರಿಕೆಗಳೂ– ಗಂಟೆಗಳು, ಸಂಗೀತ, ಮತ ಆಚರಣೆಗಳು, ಗ್ರಂಥಗಳು, ಪ್ರತೀಕಗಳು– ಈ ಶೀರ್ಷಿಕೆಯಡಿ ಬರುತ್ತವೆ. ಇಂದ್ರಿಯಗಳಿಗೆ ರುಚಿಸುವ ಯಾವದಾದರೂ, ಕೇವಲ ಭಾವನಾರೂಪದ ಚಿನ್ಮಾತ್ರ, ಅಮೂರ್ತದ ಮೂರ್ತ ಪ್ರತೀಕ ಮಾಡಲು ಸಹಾಯಕವಾದ ಯಾವದನ್ನಾದರೂ ಹಿಡಿದು, ಆರಾಧಿಸುವದಾಗಿದೆ.

ಕಾಲದಿಂದ ಕಾಲಕ್ಕೆ, ಎಲ್ಲ ಧರ್ಮಗಳಲ್ಲೂ ಪ್ರತೀಕಗಳು, ಕರ್ಮಗಳ ವಿರುದ್ಧ ಎದ್ದು ನಿಂತ ಸುಧಾರಕರು ಆಗಿದ್ದಾರೆ. ಆದರೆ ಅವರ ವಿರೋಧ ನಿಷ್ಫಲವಾಗಿದೆ, ಏಕೆಂದರೆ ಎಲ್ಲಿಯವರೆಗೆ ಮನುಷ್ಯನು ತಾನಿರುವಂತೆಯೇ ಉಳಿಯುತ್ತಾನೋ, ಅಲ್ಲಿಯವರೆಗೆ ಅಪಾರ ಅಧಿಕಾಂಶದವರಿಗೆ ಹಿಡಿಯಲು ಯಾವದಾದರೊಂದು ಮೂರ್ತರೂಪ ಯಾವಾಗಲೂ ಬೇಕು; ಅದರ ಸುತ್ತ, ಅದಿರುವಂತೆ ತಮ್ಮ ಭಾವನೆಗಳನ್ನು ಹೆಣೆಯಲಾಗುವ ಯಾವದಾದರೊಂದು, ತಮ್ಮ ಮನಸ್ಸಿನಲ್ಲಿರುವ ಭಾವರೂಪಗಳ ಕೇಂದ್ರವಾಗುವ ಯಾವದಾದರೊಂದು ಬೇಕು. ಮಹಮ್ಮದೀಯರ ಮತ್ತು ಪ್ರಾಟೆಸ್ಟೆಂಟ್ ಮತದವರ ಮಹಾಪ್ರಯತ್ನಗಳೆಲ್ಲಾ ಈ ಕರ್ಮಪದ್ಧತಿಗಳನ್ನು ಮತಾಚರಣೆಗಳನ್ನು ಪೂರ್ಣ ಬಿಟ್ಟುಬಿಡುವ ಕಡೆಗೇ ಇದ್ದವು, ಆದರೂ ಅವರಲ್ಲಿಯೂ ಸಹ

ಕರ್ಮಾಚರಣೆಗಳು ನುಸುಳಿ ಬಂದಿವೆ ಎಂಬುದನ್ನು ನಾವು ಕಾಣುತ್ತೇವೆ. ಇವುಗಳನ್ನು ಹೊರಗಿಡಲಾಗುವದಿಲ್ಲ; ದೀರ್ಘ ಹೋರಾಟದನಂತರ, ಜನರು ಸುಲಭವಾಗಿ ಒಂದು ಪ್ರತೀಕವನ್ನು ಬೇರೊಂದಕ್ಕಾಗಿ ಬದಲಿಸುವರು. ಮುಸಲ್ಮಾನೇತರನು ಬಳಸುವ ಪ್ರತಿಕರ್ಮವೂ, ಪ್ರತಿರೂಪ, ಪ್ರತಿಮೆ ಅಥವಾ ವ್ರತಾಚರಣೆಯನ್ನೂ ಮುಸಲ್ಮಾನನು ಪಾಪಕೃತ್ಯವೆಂದೆಣಿಸುವನು, ಆದರೆ ಅವನದೇ ಪವಿತ್ರ ಕಾಬಕ್ಕೆ ಬಂದಾಗ ಅವನಿಗೆ ಹಾಗೆ ಯೋಚನೆ ಬರುವದಿಲ್ಲ. ಪ್ರತಿ ಆಸ್ತಿಕ ಮಹಮ್ಮದೀಯನೂ, ಅವನು ಎಲ್ಲೇ ಪ್ರಾರ್ಥನೆ ಮಾಡಲಿ, ತಾನು ಕಾಬದ ಮುಂದೆಯೇ ನಿಂತಿದ್ದಾನೆಂದು ಭಾವಿಸಲೇ ಬೇಕು. ಅಲ್ಲಿಗೆ ಯಾತ್ರೆ ಹೋದಾಗ, ಆ ಪವಿತ್ರ ಸ್ಥಳದ ಗೋಡೆಯಲ್ಲಿರುವ ಕಪ್ಪು ಶಿಲೆಯನ್ನು ಚುಂಬಿಸಲೇ ಬೇಕು. ಮಿಲಿಯ, ಮಿಲಿಯಾಂತರ ಯಾತ್ರಿಗಳು ಅಲ್ಲಿ ಅಚ್ಚೊತ್ತಿರುವ ಎಲ್ಲ ಚುಂಬನಗಳೂ ಅಂತಿಮ ಮಹಾ ವಿಚಾರಣೆಯ ಕೊನೆಯದಿನ ನಿಜವಾದ ಭಕ್ತನ ಉಪಕಾರಕ್ಕಾಗಿ ಸಾಕ್ಷಿಗಳಾಗಿ ನಿಲ್ಲುತ್ತವೆ. ಅನಂತರ, ಅಲ್ಲಿ ಜೆಂಜೆಂನ ಭಾವಿ ಇದೆ. ಆ ಭಾವಿಯಿಂದ ಸ್ವಲ್ಪ ನೀರನ್ನು ಸೇದುವ ಪ್ರತಿಯೊಬ್ಬನಿಗೂ ಅವನ ಪಾಪಗಳು ಕ್ಷಮಿಸಲ್ಪಡುತ್ತವೆ, ಮತ್ತು ಪುನರುಜ್ಜೀವನದ ದಿನದನಂತರ ಅವನು ಹೊಸ ಶರೀರವನ್ನು ಧರಿಸಿ, ಎಂದೆಂದಿಗೂ ಜೀವಿಸುವನು ಎಂದು ಮಹಮ್ಮದೀಯರ ನಂಬಿಕೆ. ಇನ್ನು ಕೆಲವರಲ್ಲಿ, ಪ್ರತೀಕಗಳು ಕಟ್ಟಡಗಳ ರೂಪದಲ್ಲಿ ಬರುವವು. ಪ್ರಾಟೆಸ್ಟೆಂಟ್ ಮತದವರು ದೇವಮಂದಿರಗಳು (ಚರ್ಚ್) ಇತರ ಸ್ಥಳಗಳಿಗಿಂತ ಹೆಚ್ಚು ಪವಿತ್ರ ಎಂದು ಎಣಿಸುತ್ತಾರೆ. ದೇವಮಂದಿರವು ತಾನು ಇರುವಂತೆಯೇ, ಪ್ರತೀಕವಾಗಿ ನಿಂತಿದೆ, ಅಥವಾ ಗ್ರಂಥವೂ ಪ್ರತೀಕವೇ. ಅವರಿಗೆ ಗ್ರಂಥದ ಭಾವನೆಯು ಬೇರೆ ಎಲ್ಲ ಸಂಕೇತಗಳಿಗಿಂತ ಹೆಚ್ಚು ಪವಿತ್ರ.

ಸಂಕೇತಗಳು ಉಪಯೋಗದ ವಿರುದ್ಧ ಬೋಧನೆ ಮಾಡುವದು ವ್ಯರ್ಥ; ಅಷ್ಟಕ್ಕೂ ಅವುಗಳ ವಿರುದ್ಧ ನಾವೇಕೆ ಬೋಧಿಸಬೇಕು? ಮನುಷ್ಯನು ಏಕೆ ಪ್ರತೀಕಗಳನ್ನು ಬಳಸಬಾರದು ಎಂಬುದಕ್ಕೆ ಕಾರಣವಿಲ್ಲ. ಅವುಗಳ ಹಿಂದಿರುವ ಭಾವನೆಗಳನ್ನು ಸೂಚಿಸುವ ಪ್ರತಿನಿಧಿಯಾಗಿರುವಂತೆ ಅವುಗಳನ್ನು ಇಟ್ಟುಕೊಂಡಿದ್ದಾರೆ. ಈ ವಿಶ್ವವು ಒಂದು ಪ್ರತೀಕ; ಅದರಲ್ಲಿ, ಅದರ ಮೂಲಕ ಅದರ ಹಿಂದೆ, ಆಚೆಗಿರುವ ಅದು ಸಂಕೇತಿಸುವ ವಸ್ತುವನ್ನು ಮನಸ್ಸಿಗೆ ತಂದುಕೊಳ್ಳುವ ಪ್ರಯತ್ನ ಮಾಡುತ್ತಿದ್ದೇವೆ. ಚೇತನವೇ ಗುರಿ, ಭೌತವಸ್ತುವಲ್ಲ. ರೂಪಗಳು, ಪ್ರತಿಮೆಗಳು, ಗಂಟೆಗಳು, ದೀಪಗಳು, ಗ್ರಂಥಗಳು, ಚರ್ಚ್‌ಗಳು, ದೇವಸ್ಥಾನಗಳು ಮತ್ತು ಎಲ್ಲಾ ಪವಿತ್ರ ಸಂಕೇತಗಳು ತುಂಬಾ ಒಳ್ಳೆಯದು, ಆಧ್ಯಾತ್ಮಿಕ ಸಸಿಯ ಬೆಳವಣಿಗೆಗೆ ಬಹಳ ಸಹಕಾರಿ; ಆದರೆ ಇಲ್ಲಿಯವರೆಗೆ ಮಾತ್ರ ಮುಂದಕ್ಕಿಲ್ಲ. ಅಧಿಕಾಂಶದ ಬಹುಮತದ ವಿಷಯಗಳಲ್ಲಿ ಈ ಸಸಿ ಬೆಳೆಯದಿರುವದನ್ನು ನಾವು ನೋಡುತ್ತೇವೆ. ಚರ್ಚ್‌ನಲ್ಲಿ ಹುಟ್ಟುವದು ಬಹಳ ಒಳ್ಳೆಯದು. ಆದರೆ ಚರ್ಚ್‌ನಲ್ಲಿ ಸಾಯುವದು ಬಹು ಕೆಟ್ಟದು. ಆಧ್ಯಾತ್ಮಿಕತೆಯ ಸಣ್ಣ ಸಸಿ ಬೆಳೆಯುವಲ್ಲಿ ಸಹಾಯಕವಾಗಿರುವ ಕೆಲವು ರೂಪಗಳ ಮಿತಿಯಲ್ಲಿ ಹುಟ್ಟುವದು ಬಹಳ ಒಳ್ಳೆಯದು, ಆದರೆ ಮನುಷ್ಯನೊಬ್ಬ ಈ ಪ್ರತೀಕಗಳ ಎಲ್ಲೆಗಳೊಳಗೆ ಸಾಯುವದು ಅವನು ಬೆಳೆಯಲಿಲ್ಲ, ಅಲ್ಲಿ ಆತ್ಮದ ಪಕ್ವತೆಯಾಗಲಿಲ್ಲ ಎಂದು ತೋರಿಸುವದು.

ಆದುದರಿಂದ, ಯಾರಾದರೊಬ್ಬನು ಪ್ರತೀಕಗಳು, ಮತಾಚರಣೆಗಳು ಮತ್ತು ಆಕಾರಗಳನ್ನು

ಎಂದೆಂದೂ ಇಟ್ಟುಕೊಳ್ಳಬೇಕು ಎಂದು ಹೇಳಿದರೆ, ಅವನು ತಪ್ಪಿರುವನು; ಆದರೆ ಜೀವಾತ್ಮನ ಕೆಳಮಟ್ಟದ, ಸ್ಫುಟಗೊಳಿಸದ ಸ್ಥಿತಿಯಲ್ಲಿ ಈ ಪ್ರತೀಕಗಳು, ಮತಾಚರಣೆಗಳು ಜೀವಾತ್ಮನ ಬೆಳವಣಿಗೆ ಸಹಾಯಕ ಎಂದು ಅವನೆಂದರೆ, ಅದು ಸರಿ. ಆದರೆ ಜೀವಾತ್ಮನ ಬೆಳವಣಿಗೆಯನ್ನು ಯಾವದಾದರೂ ಬೌದ್ಧಿಕ ವಿಷಯ ಎಂದು ನೀವು ತಪ್ಪು ತಿಳಿಯಬಾರದು. ಒಬ್ಬಾತನು ಅದ್ಭುತ ಬುದ್ಧಿಶಾಲಿಯಾಗಿರಬಹುದು, ಆದರೂ ಆಧ್ಯಾತ್ಮಿಕವಾಗಿ ಎಳೆಯನಾಗಿರಬಹುದು. ಅದನ್ನು ನೀವು ಈ ಕ್ಷಣವೇ ಪರೀಕ್ಷಿಸಿ ನೋಡಬಹುದು. ಸರ್ವವ್ಯಾಪಿ ಭಗವಂತನನ್ನು ನಂಬಲು ನಿಮ್ಮೆಲ್ಲರಿಗೂ ಹೇಳಿಕೊಡಲಾಗಿದೆ. ಅದನ್ನು ಚಿಂತಿಸಿ. ಸರ್ವತ್ರ ಗೋಚರನೆಂಬ ಅಭಿಪ್ರಾಯವನ್ನೇನಾದರೂ ನಿಮ್ಮಲ್ಲಿ ಕೆಲವರಾದರೂ ಬಲ್ಲಿರಾ? ನೀವು ಬಹಳವಾಗಿ ತಿಣುಕಿದರೆ, ಸಾಗರ ಅಥವಾ ಆಗಸ, ಅಥವಾ ವಿಶಾಲ ಹಬ್ಬಿನ ಹಸಿರು ಭೂಮಿ ಅಥವಾ ಮರಳುಗಾಡು, ಎನ್ನುವದಕ್ಕೆ ಸಮನಾದಂತಹ ಭಾವನೆ ಬರಬಹುದು. ಇವೆಲ್ಲಾ ವಸ್ತುರೂಪಗಳು; ಅಮೂರ್ತವನ್ನು ಅಮೂರ್ತವೆಂದು, ಆದರ್ಶವನ್ನು ಆದರ್ಶವೆಂದು ಗ್ರಹಿಸಲು ಸಾಧ್ಯವಾಗದಿರುವವರೆಗೂ, ಈ ತೆರನ ಆಕಾರಗಳ, ಈ ವಸ್ತುರೂಪಗಳ ಮರೆಹೋಗಬೇಕು. ಈ ಆಕಾರಗಳು ಮನಸ್ಸಿನೊಳಗಿರುವದೋ, ಹೊರಗೋ ಎನ್ನುವದು ವಿಶೇಷ ವ್ಯತ್ಯಾಸವನ್ನುಂಟುಮಾಡದು. ನಾವೆಲ್ಲರೂ ಹುಟ್ಟಾ ವಿಗ್ರಹಾರಾಧಕರು, ಅದು ಮನುಷ್ಯನ ಪ್ರಕೃತಿಯಲ್ಲಿರುವದರಿಂದ ವಿಗ್ರಹಾರಾಧನೆ ಒಳ್ಳೆಯದು. ಅದನ್ನು ದಾಟಿ ಹೋಗುವವರು ಯಾರು? – ಪರಿಪೂರ್ಣ ಮಾನವ, ದೇವ ಮಾನವ ಮಾತ್ರ. ಉಳಿದ ಎಲ್ಲರೂ ವಿಗ್ರಹಾರಾಧಕರು. ಎಲ್ಲಿಯವರೆಗೆ ನಾವು ನಮ್ಮೆದುರಿಗಿನ ಈ ವಿಶ್ವವನ್ನು ಅದರ ರೂಪ, ಆಕಾರಗಳೊಡನೆ ನೋಡುವೆವೋ, ಆಗ ನಾವೆಲ್ಲರೂ ವಿಗ್ರಹಾರಾಧಕರು. ನಾವು ಆರಾಧಿಸುತ್ತಿರುವದು ಒಂದು ಅದ್ಭುತ ಪ್ರತೀಕವನ್ನು. ಯಾರು ತಾನು ದೇಹವೆನ್ನುವನೋ ಅವನು ಹುಟ್ಟಾ ವಿಗ್ರಹಾರಾಧಕ. ನಾವೊಂದು ಚೇತನ, ರೂಪ–ಆಕಾರವಿಲ್ಲದ ಚೇತನ, ಅನಂತ ಚೈತನ್ಯ, ವಸ್ತುವಲ್ಲ. ಆದುದರಿಂದ, ಯಾರೊಬ್ಬನು ಕೇವಲ ಭಾವನಾರೂಪವನ್ನು ಗ್ರಹಿಸಲಾರನೋ, ಯಾರು ತನ್ನನ್ನು ದೇಹವೆಂದುಕೊಳ್ಳುವ ವಸ್ತುವಿನಲ್ಲಿ, ಅದರ ಮೂಲಕ ವಿನಾ ತಾನಿರುವಂತೆಯೇ ತನ್ನನ್ನು ಚಿಂತಿಸಿಕೊಳ್ಳಲಾರನೋ, ಅವನು ವಿಗ್ರಹಾರಾಧಕ. ಆದಾಗ್ಯೂ ಎಷ್ಟು ಜನರು ತಮ್ಮ ತಮ್ಮಲ್ಲೇ, ಒಬ್ಬನು ಮತ್ತೊಬ್ಬನನ್ನು ವಿಗ್ರಹಾರಾಧಕನೆಂದು ಕರೆದು ಜಗಳಾಡುವರು! ಪ್ರತಿ ಮಾತುಗಳಲ್ಲಿ, ಪ್ರತಿಯೊಬ್ಬನೂ ತನ್ನ ವಿಗ್ರಹ ಸರಿ, ಇತರರು ತಪ್ಪು ಎನ್ನುವನು.

ಆದುದರಿಂದ, ನಾವು ಈ ಬಾಲಿಶ ಭಾವನೆಗಳನ್ನು ತೊಲಗಿಸಿಕೊಳ್ಳಬೇಕು. ಧರ್ಮವು ಕೇವಲ ನೊರೆಗಟ್ಟಿದ ಪದಗಳ ಮಡು, ಅದೊಂದು ಸಿದ್ಧಾಂತಗಳ ಪದ್ಧತಿ ಎಂದು ಬಡಬಡಿಸುವ ಜನಗಳನ್ನೂ ದಾಟಿ ನಿಲ್ಲಬೇಕು; ಅವರಿಗೆ ಧರ್ಮವು ಕೇವಲ ಸ್ವಲ್ಪ ಮಟ್ಟಿನ ಬೌದ್ಧಿಕ ಸಮ್ಮತಿ ಅಥವಾ ಅಸಮ್ಮತಿ; ಅವರ ಪೂಜಾರಿಗಳು ಅವರಿಗೆ ಹೇಳುವ ಕೆಲವು ಪದಗಳನ್ನು ನಂಬುವದೇ ಧರ್ಮ ಅವರಿಗೆ; ಧರ್ಮವೆಂಬುದು ಅವರಿಗೆ ಅವರ ಪೂರ್ವಜರು ನಂಬಿಕೆ ಇಟ್ಟಿದ್ದ ಯಾವದೋ ಒಂದು; ಅವರಿಗೆ ಕೆಲವು ಭಾವನಾತ್ಮಕ ರೂಪಗಳು ಅಥವಾ ಮೂಢ ಆಚರಣೆಗಳೇ ಧರ್ಮ,

ಏಕೆಂದರೆ ಅವೆಲ್ಲಾ ಅವರು ಭದ್ರವಾಗಿ ಅಂಟಿ ಹಿಡಿದಿರುವ ರಾಷ್ಟ್ರೀಯ ಮೂಢನಂಬಿಕೆಗಳು. ಇವುಗಳೆಲ್ಲವನ್ನೂ ದಾಟಿ ನಾವು ಮುಂದೆ ಹೋಗಬೇಕು; ಮಾನವ ಕುಲವನ್ನು ವಿಶಾಲವಾದ ವ್ಯವಸ್ಥಿತ ದೇಹವೆಂದು ನಿಧಾನವಾಗಿ ಬೆಳಕಿನೆಡೆ ಬರುತ್ತಿರುವ, ನಿಧಾನವಾಗಿ ದೇವದೇವನೆಂದು ಕರೆಯಲ್ಪಡುತ್ತಿರುವ ಆಶ್ಚರ್ಯಕರ ಸತ್ಯದೆಡೆಗೆ ತನ್ನನ್ನು ತೆರೆದುಕೊಳ್ಳುತ್ತಿರುವ ವಿಸ್ಮಯದ ಸಸಿ ಎಂದು ಕಾಣಬೇಕು, ಮತ್ತು ಇದರ ಕಡೆಗಿನ ಮೊದಲ ಪರಿಭ್ರಮಣೆಗಳು, ಮೊದಲ ಚಲನಗಳು ಯಾವಾಗಲೂ ವಸ್ತುಗಳ ಮೂಲಕವೇ, ಮತಾಚರಣೆಗಳ ಮೂಲಕವೇ ಆಗಿವೆ.

ಈ ಎಲ್ಲ ಮತಾಚರಣೆಗಳ ಹೃದಯ ಭಾಗದಲ್ಲಿ, ಮಿಕ್ಕೆಲ್ಲವುಗಳಿಗಿಂತ ಒಂದು ಪ್ರಧಾನವಾಗಿ ನಿಂತಿದೆ, ಅದು ನಾಮರೂಪಾತ್ಮಕ ಆರಾಧನೆ. ನಿಮ್ಮಲ್ಲಿ ಕ್ರೈಸ್ತ ಮತದ ಹಳೆಯ ರೂಪಗಳನ್ನು ಅಧ್ಯಯನ ಮಾಡಿದಂತಹವರು, ಪ್ರಪಂಚದ ಇತರ ಧರ್ಮಗಳನ್ನು ಅಧ್ಯಯನ ಮಾಡಿದಂತಹವರು, ಅವರೆಲ್ಲರಲ್ಲೂ ನಾಮಾರ್ಚನೆಯ ಮನೋಗತವಿದೆಯೆಂಬುದನ್ನು ಬಹುಶಃ ಗಮನಿಸಿರುತ್ತಾರೆ. ನಾಮವೊಂದು ಬಹಳ ಪವಿತ್ರವೆಂದು ಹೇಳುತ್ತಾರೆ. ದೇವರ ಪಾವನ ನಾಮವು ಎಣೆಯಿಲ್ಲದ ಪರಿಶುದ್ಧವು, ಪ್ರತಿಯೊಂದಕ್ಕೂ ಮಿಗಿಲಾದ ಪೂಜ್ಯತೆಯಿರುವಂತಹುದು ಎಂದು ಪರಿಗಣಿಸಿರುವದನ್ನು ಬೈಬಲ್ಲಿನಲ್ಲಿ ನಾವು ಓದುತ್ತೇವೆ. ಅದು ಎಲ್ಲ ಹೆಸರುಗಳಿಗಿಂತ ಪುಣ್ಯೋಪೇತವಾದುದು, ಸಾಕ್ಷಾತ್ತಾಗಿ ಈ 'ಪದ'ವೇ (ನಾಮವೇ) ಪರಮಾತ್ಮ ಎಂದು ಚಿಂತಿತವಾಗಿದೆ. ಇದು ಸರ್ವಥಾ ಸತ್ಯ. ಈ ವಿಶ್ವವು ನಾಮ, ರೂಪವಲ್ಲದೆ ಬೇರೆ ಏನು? ಪದಗಳಿಲ್ಲದೆ ನೀವು ಆಲೋಚನೆ ಮಾಡಬಲ್ಲಿರಾ? ಪದ ಮತ್ತು ಚಿಂತನೆ (ವಾಕ್, ಅರ್ಥ) ಗಳು ಪ್ರತ್ಯೇಕಿಸಲಾಗದವುಗಳು. ನಿಮ್ಮಲ್ಲಿ ಯಾರಿಗಾದರೂ ಇವೆರಡನ್ನು ಬೇರೆ ಮಾಡಲಾಗುವದೇ, ಪ್ರಯತ್ನಿಸಿ. ನೀವು ಯೋಚನೆ ಮಾಡಿದಾಗಲೆಲ್ಲ, ಪದ ಮತ್ತು ರೂಪಗಳ ಮೂಲಕವೇ ಮಾಡಬೇಕು. ಒಂದು ಮತ್ತೊಂದನ್ನು ತರುತ್ತದೆ; ಆಲೋಚನೆ ಪದವನ್ನು ತರುತ್ತದೆ, ಪದ ಆಲೋಚನೆಯನ್ನು ತರುತ್ತದೆ. ಹೀಗಿರುವಂತೆ, ಈ ರೀತಿ ಇಡಿಯ ವಿಶ್ವವೆ ಭಗವಂತನ ಹೊರಪ್ರತೀಕವಾಗಿದೆ, ಅದರ ಹಿಂದೆ 'ಅವನ' ಉದಾತ್ತ ನಾಮವಿದೆ. ಪ್ರತಿಯೊಂದು ವಿಶಿಷ್ಟ ದೇಹವೂ ಒಂದು ರೂಪ, ಆ ವಿಶಿಷ್ಟ ರೂಪದ ಹಿಂದೆ ಅದರ ಹೆಸರಿದೆ. ನಮ್ಮ ಸ್ನೇಹಿತ ಇಂಥ-ಇಂಥವನೆಂದು ನೀವು ಯೋಚಿಸಿದ ಕೂಡಲೆ, ಅವನ ದೇಹದ ಕಲ್ಪನೆ ಬರುತ್ತದೆ, ಮತ್ತು ನಿಮ್ಮ ಸ್ನೇಹಿತನ ಶರೀರದ ಯೋಚನೆ ಮಾಡಿದ ಕೂಡಲೆ ಅವನ ಹೆಸರಿನ ಭಾವನೆಯೂ ಬರುತ್ತದೆ. ಇದು ಮನುಷ್ಯನ ರಚನೆಯಲ್ಲೇ ಇದೆ. ಅಂದರೆ, ಮನಃಶಾಸ್ತ್ರದಂತೆ, ಮನುಷ್ಯನ ಮನೋದ್ರವ್ಯದಲ್ಲಿ, ರೂಪದ ಭಾವನೆಯಿಲ್ಲದೆ ಹೆಸರಿನ ಭಾವನೆ ಬರಲಾರದು, ಹೆಸರಿನ ಭಾವನೆಯಿಲ್ಲದೆ ರೂಪದ ಭಾವನೆ ಬರಲಾರದು. ಅವೆರಡೂ ಪ್ರತ್ಯೇಕಿಸಲಾಗದವು, ಅವು ಒಂದೇ ಅಲೆಯ ಹೊರಗಣ ಮತ್ತು ಒಳಗಣ ಪಕ್ಕಗಳು. ಹಾಗಿರುವದರಿಂದ, ಪ್ರಪಂಚದಾದ್ಯಂತ ನಾಮಗಳನ್ನು ಔನ್ನತ್ಯಕ್ಕೇರಿಸಿ ಆರಾಧನೆ ಮಾಡುವರು- ಅರಿತೋ ಅರಿಯದೆಯೋ ಮಾನವನು ನಾಮಗಳ ಮಹಿಮೆಯನ್ನು ಕಂಡಿರುವನು.

ಮತ್ತೆ, ಅನೇಕ ವಿವಿಧ ಮತಗಳಲ್ಲಿ ಪುಣ್ಯಾತ್ಮ ಮಹನೀಯರನ್ನು ಅರ್ಚಿಸುವರು. ಕೃಷ್ಣನನ್ನು ಅವರು ಪೂಜೆ ಮಾಡುವರು, ಬುದ್ಧನನ್ನು, ಜೀಸಸ್‌ನನ್ನು, ಹೀಗೆಯೇ ಇನ್ನೂ ಮುಂತಾಗಿ

ಪೂಜೆ ಮಾಡುವರು. ಹಾಗೆಯೇ ಸಂತರ ಪೂಜೆಯೂ ಇದೆ, ಪ್ರಪಂಚದಾದ್ಯಂತ ಅಂತಹ ನೂರಾರು ಪೂಜ್ಯರನ್ನು ಅರ್ಚಿಸುವರು– ಏಕಾಗಬಾರದು? ಬೆಳಕಿನ ಕಂಪನಗಳು ಎಲ್ಲೆಡೆಯೂ ಇವೆ. ಗೂಬೆ ಅದನ್ನು ಕತ್ತಲಿನಲ್ಲಿ ನೋಡುತ್ತದೆ. ಮನುಷ್ಯನು ನೋಡದಿದ್ದರೂ, ಅದು ಬೆಳಕಿದೆ ಎಂದು ತೋರಿಸುತ್ತದೆ. ಮನುಷ್ಯನಿಗೆ ಆ ಕಂಪನ ದೀಪದಲ್ಲಿ, ಸೂರ್ಯ, ಚಂದ್ರ ಇತ್ಯಾದಿಗಳಲ್ಲಿ ಮಾತ್ರ ಕಾಣುತ್ತದೆ. ಭಗವಂತನು ಸರ್ವತ್ರವ್ಯಾಪಿ. ಅವನು ಎಲ್ಲ ಜೀವಿಗಳಲ್ಲೂ ಮೈದೋರಿಕೊಳ್ಳುತ್ತಿರುವನು; ಆದರೆ ಮಾನವನಿಗೆ, ಮಾನವನಲ್ಲಿ ಮಾತ್ರವೇ 'ಅವನು' ತೋರಿಕೊಳ್ಳುವನು, ಗ್ರಹಿಕೆಗೆ ಬರುವನು. 'ಅವನ' ಬೆಳಕು, 'ಅವನ' ಇರವು, 'ಅವನ' ಚೈತನ್ಯ, ಮಾನವ ಮುಖದ ಮೂಲಕ ಹೊಳೆಯುತ್ತದೆ, ಆಗ, ಆಗ ಮಾತ್ರವೇ ಮನುಷ್ಯನು 'ಅವನ'ನ್ನು ಅರ್ಥಮಾಡಿಕೊಳ್ಳಬಲ್ಲನು. ಹೀಗೆ, ಮನುಷ್ಯನು ಭಗವಂತನನ್ನು ಎಲ್ಲ ಕಾಲದಲ್ಲೂ ಮಾನವರ ಮೂಲಕವೇ ಪೂಜಿಸುತ್ತಿರುವನು, ಅವನು ಎಲ್ಲಿಯವರೆಗೆ ಮನುಷ್ಯನಾಗಿರುವನೋ ಅಲ್ಲಿಯವರೆಗೂ ಹೀಗೆ ಮಾಡಲೇಬೇಕು. ಅವನು ಅದರ ವಿರುದ್ಧ ಅಳಬಹುದು, ಹೆಣಗಬಹುದು, ಆದರೆ ಭಗವಂತನನ್ನು ಸಿದ್ಧಿಸಿಕೊಳ್ಳುವ ಪ್ರಯತ್ನಗಳನ್ನು ಮಾಡತೊಡಗಿದಕೂಡಲೇ, 'ಅವನ'ನ್ನು ಮಾನವನೆಂದು ಚಿಂತಿಸುವ ಸ್ವಭಾವಜನ್ಯ ಅವಶ್ಯಕತೆಯನ್ನು ಕಾಣುವನು.

ಹೀಗೆ, ಬಹುಮಟ್ಟಿಗೆ ಪ್ರತಿಯೊಂದು ಧರ್ಮದಲ್ಲಿಯೂ ಭಗವಂತನ ಆರಾಧನೆಯಲ್ಲಿ ಈ ಮೂರು ಪ್ರಧಾನ ವಿಷಯಗಳು– ರೂಪಗಳು ಅಥವ ಸಂಕೇತಗಳು, ನಾಮಗಳು, ಮತ್ತು ದೇವಪುರುಷರು– ಇವೆ ಎಂಬುದನ್ನು ಕಾಣುತ್ತೇವೆ. ಎಲ್ಲ ಧರ್ಮಗಳಲ್ಲೂ ಇವು ಇದ್ದೇ ಇವೆ. ಆದರೆ ಅವರವರಲ್ಲೇ ಅವರು ಹೊಡೆದಾಡಬೇಕೆನ್ನುವದನ್ನು ನೋಡುತ್ತೇವೆ. ಒಬ್ಬನು ಹೇಳುತ್ತಾನೆ: "ನನ್ನ ಹೆಸರೊಂದೇ ಹೆಸರು, ನನ್ನ ರೂಪವು ಒಂದೇ ರೂಪ, ನನ್ನ ದೇವ ಪುರುಷರು ಒಬ್ಬರೇ ದೇವ ಪುರುಷರು ಈ ಪ್ರಪಂಚದಲ್ಲಿ; ನಿಮ್ಮದೆಲ್ಲಾ ಸುಮ್ಮನೆ ಪುರಾಣ ಕಥೆ". ಆಧುನಿಕ ಕಾಲಗಳಲ್ಲಿ, ಕ್ರೈಸ್ತ ಪಾದ್ರಿಗಳು ಸ್ವಲ್ಪ ಕರುಣಾಳುಗಳಾಗಿದ್ದಾರೆ, ಹಿಂದಿನ ಧರ್ಮಗಳ ವಿವಿಧ ಅರ್ಚನಾರೂಪಗಳು ಕ್ರೈಸ್ತ ಮತದ ಪೂರ್ವ ನೆರಳುಗಳು ಎಂದು ಒಪ್ಪಿಗೆ ಕೊಡುತ್ತಾರೆ, ಅವರು ಸಹಜವಾಗಿ ಕ್ರೈಸ್ತಮತದ ರೂಪಗಳು ಮಾತ್ರವೇ ಸತ್ಯದ ರೂಪ ಎಂದು ಗಣಿಸುತ್ತಾರೆ. ಭಗವಂತನು ಹಿಂದಿನಕಾಲಗಳಲ್ಲಿ 'ತನ್ನನ್ನೇ' ಪರೀಕ್ಷಿಸಿಕೊಂಡನು, ಈ ವಿಷಯಗಳನ್ನೆಲ್ಲಾ ಒಂದು ಆಕಾರಕ್ಕೆ ತರುವಲ್ಲಿ 'ತನ್ನ' ಶಕ್ತಿಗಳನ್ನು ಪರೀಕ್ಷಿಸಿಕೊಂಡನು. ಅವೇ ಕ್ರೈಸ್ತಮತದಲ್ಲಿ ಅತ್ಯುನ್ನತ ಸ್ಥಿತಿಗೇರಿದುವು. ಕನಿಷ್ಠ, ಇದೊಂದು ದೊಡ್ಡ ಪ್ರಗತಿ. ಐವತ್ತು ವರ್ಷಗಳ ಕೆಳಗೆ ಅವರು ಅಷ್ಟನ್ನೂ ಹೇಳುತ್ತಿರಲಿಲ್ಲ: ಅವರ ಧರ್ಮದ ವಿನಾ ಯಾವದೂ ಸತ್ಯವಾಗಿರಲಿಲ್ಲ. ಈ ಭಾವನೆ ಯಾವದೇ ಧರ್ಮಕ್ಕೆ, ರಾಷ್ಟ್ರಕ್ಕೆ ಅಥವಾ ವ್ಯಕ್ತಿಗಳ ಸಮಾಜ ಶ್ರೇಣಿಗೆ ಸೀಮಿತವಾಗಿರಲಿಲ್ಲ; ಇತರರು ಮಾಡಬೇಕಾದ ಒಂದೇ ನ್ಯಾಯ ವಿಷಯವೆಂದರೆ ತಾವು ಸ್ವತಃ ಏನು ಮಾಡುತ್ತಿದ್ದೆವೋ ಅದನ್ನೇ ಮಾಡುವದು ಎಂದು ಜನರು ಯಾವಾಗಲೂ ಭಾವಿಸುತ್ತಿರುತ್ತಾರೆ. ಇದು ಇಲ್ಲೇ, ಬೇರೆ ಬೇರೆ ಧರ್ಮಗಳ ಅಧ್ಯಯನ ನಮಗೆ ಸಹಾಯ ಮಾಡುವದು. ನಾವು ನಮ್ಮದೆಂದು, ನಮ್ಮದು ಮಾತ್ರ ಎಂದು ಕರೆದುಕೊಳ್ಳುತ್ತಿರುವ, ಅದೇ ಸಮನಾದ ಭಾವನೆಗಳು ನೂರಾರು ವರ್ಷಗಳ ಹಿಂದೆ ಇತರರಲ್ಲಿ ಇದ್ದವು, ಮತ್ತು ಕೆಲವು

ಸಮಯಗಳಲ್ಲಿ ನಮ್ಮದಕ್ಕಿಂತ ಉತ್ತಮವಾದ, ಸ್ಪಷ್ಟವಾದ ವಾಕ್ಸರಣಿಯ ರೂಪದಲ್ಲಿಯೂ ಇದ್ದವು ಎಂಬುದನ್ನು ಅದು ನಮಗೆ ತೋರಿಸುವದು.

ಮಾನವನು ಹಾದು ಹೋಗಬೇಕಾಗಿರುವ ದೈವನಿಷ್ಠೆಯ ಬಾಹ್ಯರೂಪಗಳು ಇವು; ಆದರೆ ಅವನು ಪ್ರಾಮಾಣಿಕನಾಗಿದ್ದರೆ, ಅವನು ಸತ್ಯವನ್ನು ಸಾಧಿಸಲು ನಿಜವಾಗಿಯೂ ಬೇಕೆಂದಿದ್ದರೆ, ಅವನು ಇದಕ್ಕಿಂತ ಹೆಜ್ಜೆಸ ಮಟ್ಟಕ್ಕೆ, ರೂಪಗಳು ಶೂನ್ಯವಾಗಿರುವಲ್ಲಿಗೆ ಏರಬೇಕು. ದೇವಸ್ಥಾನಗಳು, ಅಥವಾ ಇಗರ್ಜಿಗಳು, ಗ್ರಂಥಗಳು ಅಥವಾ ರೂಪಗಳು, ಧರ್ಮದ ಕೇವಲ ಚಿಕ್ಕಮಕ್ಕಳಾಟಿಕೆಗಳು (ಕಿಂಡರ್‌ಗಾರ್ಟನ್), ಆಧ್ಯಾತ್ಮಿಕ ಮಗುವನ್ನು ಮೇಲಿನ ಮೆಟ್ಟಲುಗಳನ್ನೇರಬಲ್ಲಂತೆ ಸಾಕಷ್ಟು ಶಕ್ತಿಯುತರನ್ನಾಗಿ ಮಾಡಲು; ಧರ್ಮ ಬೇಕೆಂದವನಿಗೆ, ಈ ಮೊದಲ ಹೆಜ್ಜೆಗಳು ಅವಶ್ಯಕ. ಈ ಬಾಯಾರಿಕೆಯಿಂದ, ಭಗವಂತನ ಹಂಬಲಿಕೆಯಿಂದ ನಿಜವಾದ ದೈವನಿಷ್ಠೆ, ನಿಜಭಕ್ತಿ ಬರುತ್ತದೆ. ಹಂಬಲಿಕೆ ಯಾರಿಗಿದೆ? ಅದೇ ಪ್ರಶ್ನೆ. ಧರ್ಮವು ಸಿದ್ಧಾಂತದಲ್ಲಿಲ್ಲ, ಶಾಸ್ತ್ರಾಂಧತೆಯಲ್ಲಿಲ್ಲ, ಅಥವಾ ಬುದ್ಧಿವಂತಿಕೆಯ ವಾದವಿವಾದಗಳಲ್ಲಿಲ್ಲ; ಅದು ಅಸ್ತಿತ್ವ, ಉಂಟಾಗುವದು ಮತ್ತು ಅದು ಸಿದ್ಧಿಸಿಕೊಳ್ಳುವದು. ಅನೇಕರು ಭಗವಂತ, ಮತ್ತು ಆತ್ಮ ಮತ್ತು ವಿಶ್ವದ ಎಲ್ಲ ರಹಸ್ಯಗಳನ್ನೂ ಕುರಿತು ಮಾತನಾಡುವದನ್ನು ಕೇಳುತ್ತೇವೆ; ಆದರೆ ಅವರಲ್ಲಿ ಒಬ್ಬನಾದ ಮೇಲೆ ಮತ್ತೊಬ್ಬನಂತೆ ಆರಿಸಿ, 'ನೀವು ಭಗವಂತನನ್ನು ಸಾಕ್ಷಾತ್ಕಾರಮಾಡಿಕೊಂಡಿದ್ದೀರಾ? ನೀವು ನಿಮ್ಮ ಆತ್ಮವನ್ನು ನೋಡಿದ್ದೀರಾ' ಎಂದು ಅವರನ್ನು ಕೇಳಿದರೆ, ಆತ್ಮ ಸಾಕ್ಷಾತ್ಕಾರ ಮಾಡಿಕೊಂಡಿದ್ದೇವೆ ಎಂದು ಎಷ್ಟು ಜನರು ಹೇಳಬಲ್ಲರು? ಹಾಗಿದ್ದರೂ ಅವರೆಲ್ಲರೂ ಒಬ್ಬರೊಡನೆ ಮತ್ತೊಬ್ಬರು ಗುದ್ದಾಡುತ್ತಿರುವರು! ಒಂದು ಕಾಲದಲ್ಲಿ, ಭಾರತದಲ್ಲಿ, ವಿವಿಧ ಪಂಥಗಳ ಪ್ರತಿನಿಧಿಗಳು ಒಟ್ಟಿಗೆ ಸೇರಿ, ವಿವಾದ ಮಾಡಿದರು. ಒಬ್ಬನೇ ಭಗವಂತ ಶಿವ ಎಂದು ಒಬ್ಬನೆಂದ; ಮತ್ತೊಬ್ಬನು ಒಬ್ಬನೇ ಭಗವಂತ ವಿಷ್ಣು ಎಂದ– ಹೀಗೆಯೇ ನಡೆಯಿತು, ಮತ್ತು ಅವರ ಈ ಚರ್ಚೆಗೆ ಕೊನೆಯೇ ಇರಲಿಲ್ಲ. ಆ ಮಾರ್ಗದಲ್ಲೊಬ್ಬ ಜ್ಞಾನಿಯು ಹೋಗುತ್ತಿದ್ದವನನ್ನು ವಿಷಯದ ನಿರ್ಣಯ ಮಾಡಿಕೊಡಲು ವಿವಾದಕಾರರು ಕರೆದರು. ಅವನು, ಶಿವನೇ ಅತ್ಯಂತ ಶ್ರೇಷ್ಠ ಭಗವಂತನೆಂದು ಸಾಧಿಸುತ್ತಿದ್ದವನನ್ನು ಕೇಳಿದ "ನೀನು ಶಿವನನ್ನು ನೋಡಿದ್ದೀಯಾ?", ಅನಂತರ ವಿಷ್ಣುವಿನ ಅರ್ಚನೆ ಮಾಡುತ್ತಿದ್ದವನ ಕಡೆ ತಿರುಗಿ, ಕೇಳಿದನು "ನೀನು ವಿಷ್ಣುವನ್ನು ನೋಡಿದ್ದೀಯಾ?", ಈ ಪ್ರಶ್ನೆಯನ್ನು ಅವರೆಲ್ಲರಿಗೂ ಕೇಳಿದ ಮೇಲೆ ಅವರಲ್ಲಿ ಒಬ್ಬನಿಗಾದರೂ ಭಗವಂತನ ವಿಷಯ ಏನೂ ತಿಳಿದಿರಲಿಲ್ಲ ಎಂದು ಗೊತ್ತು ಮಾಡಿಕೊಂಡನು. ಅದರಿಂದಲೇ ಅವರು ಇಷ್ಟೊಂದು ಚರ್ಚೆ ನಡೆಸಿದ್ದರು, ಏಕೆಂದರೆ ಅವರು ನಿಜವಾಗಿಯೂ ತಿಳಿದಿದ್ದರೆ ವಾದ ಮಾಡುತ್ತಲೇ ಇರಲಿಲ್ಲ. ಜಾಡಿಗೆ ನೀರು ತುಂಬುತ್ತಿರುವಾಗ ಅದು ಸದ್ದು ಮಾಡುತ್ತದೆ; ಅದು ತುಂಬಿದಾಗ ಸದ್ದು ಇರುವದಿಲ್ಲ. ಅದರಿಂದ, ಪಂಥಗಳ ನಡುವಿನ ಈ ವಿವಾದಗಳ, ಬಡಿದಾಟಗಳ ಅಚ್ಚ ಸಂಗತಿಯೇ ಅವರಿಗೆ ಧರ್ಮದ ಬಗ್ಗೆ ಏನೂ ತಿಳಿದಿಲ್ಲ ಎಂಬುದನ್ನು ತೋರಿಸುತ್ತದೆ. ಅವರಿಗೆ ಧರ್ಮವು ಪುಸ್ತಕಗಳಲ್ಲಿ ಬರೆದಿಡುವ ಕೇವಲ ನೊರೆಗಟ್ಟಿದ ಮಾತುಗಳ ಮಡು. ಪ್ರತಿಯೊಬ್ಬನೂ ದೊಡ್ಡ ಗ್ರಂಥವನ್ನು ಬರೆಯಲು ಅವಸರ ಪಡುತ್ತಾನೆ, ಅವನ ವಸ್ತುಗಳನ್ನು ಕೈಗೆ ಸಿಗುವ ಪ್ರತಿ ಗ್ರಂಥದಿಂದಲೂ ಕದ್ದು, ಅವನ

ಉಪಕೃತಿಯನ್ನು ಸೂಚಿಸದೆ ಎಷ್ಟು ಸಾಧ್ಯವೋ ಅಷ್ಟು ಬೃಹತ್ತಾದ ಗ್ರಂಥ ಮಾಡಲು ಹವಣಿಸುವನು. ಅನಂತರ ಈಗಾಗಲೇ ಅಲ್ಲಿರುವ ದಾಂಧಲೆಯನ್ನು ಹೆಚ್ಚಿಸುವಂತೆ, ಈ ಗ್ರಂಥವನ್ನು ಪ್ರಪಂಚದ ಮುಂದಿಡುವನು.

ವಿಶಾಲ ಅಧಿಕಮತದ ಜನರು ನಾಸ್ತಿಕರು. ಆಧುನಿಕ ಕಾಲಗಳಲ್ಲಿ ಇನ್ನೊಂದು ಬಗೆಯ ನಾಸ್ತಿಕರು ಪಾಶ್ಚಿಮಾತ್ಯ ಪ್ರಪಂಚದಲ್ಲಿ ಹುಟ್ಟಿಕೊಂಡಿದ್ದಾರೆಂಬುದು ನನಗೆ ಸಂತೋಷ– ನಾನು ಹೇಳುವದು ದೇಹಾತ್ಮವಾದಿಗಳನ್ನು. ಅವರು ಪ್ರಾಮಾಣಿಕ ನಾಸ್ತಿಕರು. ಇವರು, ಅಪ್ರಾಮಾಣಿಕರಾದ, ಧರ್ಮದ ವಿಷಯದಲ್ಲಿ ಬಡಿದಾಟ, ಮಾತನಾಡುವ ಆದರೂ ಅದು ಬೇಡವಾದ, ಅದನ್ನು ಎಂದೂ ತಿಳಿದುಕೊಳ್ಳದ, ಎಂದೂ ಅರ್ಥಮಾಡಿಕೊಳ್ಳಲು ಪ್ರಯತ್ನಮಾಡದ ಧಾರ್ಮಿಕ ನಾಸ್ತಿಕರಿಗಿಂತ ಉತ್ತಮರು. ಕ್ರಿಸ್ತನ ಮಾತುಗಳನ್ನು ನೆನಪಿಸಿಕೊಳ್ಳಿ: "ಕೇಳಿ, ಅದು ನಿಮಗೆ ಕೊಡಲ್ಪಡುತ್ತದೆ; ಅರಸಿ, ನೀವು ಅದನ್ನು ಕಾಣುವಿರಿ; ಬಾಗಿಲುತಟ್ಟಿ ಅದು ನಿಮಗಾಗಿ ತೆರೆಯುತ್ತದೆ". ಈ ಮಾತುಗಳು ಅಕ್ಷರಶಃ ನಿಜವಾದವು, ಬರಿಯ ಅಂಕಿಗಳಲ್ಲ, ಅಥವಾ ಕಟ್ಟುಕಥೆಯಲ್ಲ. ಈ ನಮ್ಮ ಪ್ರಪಂಚಕ್ಕೆ ಎಂದೋ ಒಂದು ದಿನ ಬಂದ, ಭಗವಂತನ ಶ್ರೇಷ್ಠ ಮಕ್ಕಳಲ್ಲಿ ಒಬ್ಬನಾದವನಿಂದ ಹೊರಬಂದ ಹೃದಯ ರಕ್ತದ ಹೊರಹರಿವಿನ ಮಾತುಗಳು; ಸಾಕ್ಷಾತ್ ಭಗವಂತನನ್ನು ಸ್ಪರ್ಶಿಸಿ, ಕಂಡುಕೊಂಡ ಮಾನವನಿಂದ ಸಾಕ್ಷಾತ್ಕಾರದ ಫಲವಾಗಿ ಬಂದ ಮಾತುಗಳು, ಭಗವಂತನೊಡನೆ ಮಾತನಾಡಿದವನು, ಭಗವಂತನೊಡನೆ ಜೀವಿಸಿದವನು, ನೀವು ನಾನು ಈ ಕಟ್ಟಡವನ್ನು ನೋಡುವ ನೂರರಪಾಲಿನಷ್ಟು ತೀಕ್ಷ್ಣವಾಗಿ ಕಂಡವನು ಆಡಿದ ಮಾತುಗಳು. ಭಗವಂತ ಯಾರಿಗೆ ಬೇಕು? ಅದು ಪ್ರಶ್ನೆ. ಪ್ರಪಂಚದಲ್ಲಿರುವ ಈ ಎಲ್ಲ ಜನರ ಗುಂಪಿಗೆ ಭಗವಂತನು ಬೇಕು, ಆದರೆ 'ಅವನ'ನ್ನು ಪಡೆಯಲಾಗದವರು ಎಂದು ನೀವು ಯೋಚಿಸುವಿರಾ? ಅದು ಸಾಧ್ಯವಿಲ್ಲ– ಹೊರಗಿನ ವಸ್ತುವನ್ನು ಬಿಟ್ಟು ಬೇಕಾದದ್ದು ಬೇರೆ ಏನಿದೆ? ಮನುಷ್ಯನು ಉಸಿರಾಡಬೇಕೆನ್ನುತ್ತಾನೆ, ಉಸಿರಾಡಲು ಗಾಳಿ ಇದೆ. ಮನುಷ್ಯನು ತಿನ್ನಬೇಕೆನ್ನುತ್ತಾನೆ, ತಿನ್ನಲು ಆಹಾರವಿದೆ. ಈ ಎಲ್ಲ ಆಸೆಗಳನ್ನು ಉಂಟುಮಾಡುವದು ಯಾವದು? ಹೊರಗಣ ವಸ್ತುಗಳ ಇರುವಿಕೆ. ಕಣ್ಣುಗಳನ್ನು ಮಾಡಿದ್ದು ಬೆಳಕು; ಕಿವಿಗಳನ್ನು ಮಾಡಿದ್ದು ಶಬ್ದ. ಹೀಗೆ ಮಾನವ ಜೀವಿಗಳ ಪ್ರತಿಯೊಂದು ಆಸೆಯನ್ನೂ ಸೃಷ್ಟಿಮಾಡಿದ್ದು ಈಗಾಗಲೇ ಅಸ್ತಿತ್ವದಲ್ಲಿದ್ದ ಯಾವದೋ ವಸ್ತುವಿನಿಂದ. ಗುರಿಯನ್ನು ಮುಟ್ಟಿ ಪ್ರಕೃತಿಗಿಂತ ಆಚೆಗೆ ಹೋಗುವ, ಪರಿಪೂರ್ಣತೆಯ ಈ ಆಸೆ, ಯಾವದೇ ಒಂದು ಅದನ್ನು ಸೃಷ್ಟಿ ಮಾಡದಿದ್ದರೆ, ಮತ್ತು ಅದನ್ನು ಮನುಷ್ಯನ ವ್ಯಕ್ತಿತ್ವದೊಳಗೆ ಕಂಡಿಕೊರೆದು ಅದು ಅಂತರಂಗದಲ್ಲಿ ಜೀವಿಸುವ ಹಾಗೆ ಮಾಡುವವರೆಗೆ, ಹೇಗೆ ಇರಬಲ್ಲದು? ಆದುದರಿಂದ, ಯಾರಲ್ಲಿ ಈ ಆಸೆಯನ್ನು ಎಚ್ಚರಗೊಳಿಸಿದೆಯೋ ಅವನು ಗುರಿಯನ್ನು ಮುಟ್ಟುತ್ತಾನೆ. ನಮಗೆ ಭಗವಂತನ ವಿನಾ ಪ್ರತಿಯೊಂದೂ ಬೇಕು. ನಿಮ್ಮ ಸುತ್ತ ನೀವು ನೋಡುತ್ತಿರುವ ಇದು ಧರ್ಮವಲ್ಲ. ನನ್ನ ಮನೆಯೊಡತಿಯು ದಿವಾನ ಖಾನೆಯಲ್ಲಿ ಪ್ರಪಂಚದ ಎಲ್ಲ ಕಡೆಯಿಂದ ಬಂದ ಪೀಠೋಪಕರಣಗಳಿವೆ, ಜಪಾನದ ಯಾವದಾದರೊಂದು ವಸ್ತುವನ್ನು ಇಟ್ಟುಕೊಳ್ಳುವದು ಇಂದಿನ ರೂಢಿಯ ಶೈಲಿ, ಅದರಿಂದ ಅವಳು ಹೂದಾನಿಯನ್ನು ಕೊಂಡು, ತನ್ನ ಕೊಠಡಿಯಲ್ಲಿಡುತ್ತಾಳೆ.

ವಿಶಾಲ ಬಹುಮತದವರಿಗೆ ಧರ್ಮ ಹೀಗಿದೆ; ಅವರಿಗೆ ಸಂತೋಷಕೊಡುವ ಎಲ್ಲ ತರಹದ ವಸ್ತುಗಳಿವೆ; ಸ್ವಲ್ಪ ಧರ್ಮದ ಒಗ್ಗರಣೆಯನ್ನು ಕೊಡದಿದ್ದರೆ ಜೀವನ ಶೋಭಿಸುವದಿಲ್ಲ, ಏಕೆಂದರೆ ಆಗ ಸಮಾಜ ಅವರನ್ನು ಆಕ್ಷೇಪಿಸುತ್ತದೆ. ಸಮಾಜ ನಿರೀಕ್ಷಿಸುತ್ತದೆಂದು, ಅವರಿಗೆ ಸ್ವಲ್ಪ ಧರ್ಮಬೇಕು. ಇದು ಪ್ರಪಂಚದಲ್ಲಿ ಧರ್ಮದ ಈಗಿನ ಸ್ಥಿತಿ.

ಶಿಷ್ಯನೊಬ್ಬ ಗುರುವಿನ ಬಳಿ ಬಂದು 'ಸ್ವಾಮೀ ನನಗೆ ಧರ್ಮ ಬೇಕು' ಎಂದು ಕೇಳಿದ. ಗುರು ತರುಣನನ್ನು ನೋಡಿದ, ಮಾತನಾಡಲಿಲ್ಲ, ಬರಿದೆ ಮುಗುಳ್ನಕ್ಕ; ಈ ತರುಣ ಪ್ರತಿದಿನವೂ ಬಂದು ಅವನಿಗೆ ಧರ್ಮ ಬೇಕು ಎಂದು ಪಟ್ಟು ಹಿಡಿದ. ಆದರೆ ವೃದ್ಧನಿಗೆ ತರುಣನಿಗಿಂತ ಹೆಚ್ಚು ತಿಳಿದಿತ್ತು. ಒಂದು ದಿನ, ಬಹಳ ಬಿಸಿಲಿರುವಾಗ, ಅವನು ತರುಣನನ್ನು ತನ್ನ ಜೊತೆ ಬಂದು ನದಿಯಲ್ಲಿ ಮುಳುಗಲು ಕೇಳಿದ. ತರುಣನು ಮುಳುಗು ಹಾಕಿದಾಗ ವೃದ್ಧನು ಹಿಂದೆ ಬಂದು ತರುಣನನ್ನು ಬಲವಾಗಿ ಒಳಗೆ ತಳ್ಳಿ ಹಿಡಿದ. ತರುಣನು ಸ್ವಲ್ಪ ಹೊತ್ತು ಸೆಣಸಿದ ಮೇಲೆ ಅವನನ್ನು ಬಿಟ್ಟು, ನೀರಿನೊಳಗಿದ್ದಾಗ ಅವನಿಗೆ ಬಹಳವಾಗಿ ಬೇಕಾಗಿದ್ದೇನು ಎಂದು ಕೇಳಿದ. ಶಿಷ್ಯನು 'ಗಾಳಿಯ ಒಂದು ಉಸಿರು' ಎಂದು ಉತ್ತರಿಸಿದ. "ಈ ರೀತಿಯಲ್ಲಿ ನಿನಗೆ ಭಗವಂತ ಬೇಕೆ? ಬೇಕೆಂದರೆ ಒಂದು ಕ್ಷಣದಲ್ಲಿ 'ಅವನ'ನ್ನು ಪಡೆಯುವೆ" ಎಂದು ಗುರು ಹೇಳಿದ. ನಿಮಗೆ ಆ ಬಾಯಾರಿಕೆ, ಆ ಆಸೆ, ಬರುವವರೆಗೆ, ನಿಮ್ಮ ಬುದ್ಧಿಮತ್ತೆಯಿಂದ ಅಥವಾ ಗ್ರಂಥಗಳಿಂದ ಅಥವಾ ನಿಮ್ಮ ರೂಪಗಳಿಂದ ನೀವು ಎಷ್ಟೇ ಸೆಣಸಿದರೂ, ನೀವು ಧರ್ಮವನ್ನು ಪಡೆಯಲಾರಿರಿ. ಅಂತಹ ಬಾಯಾರಿಕೆ ನಿಮ್ಮೊಳಗೆ ಎಚ್ಚರಗೊಳ್ಳುವವರೆಗೂ, ಯಾವ ನಾಸ್ತಿಕನಿಗಿಂತಲೂ ನೀವು ಯಾವ ರೀತಿಯಿಂದಲೂ ಉತ್ತಮರಲ್ಲ; ಇಷ್ಟೇ, ನಾಸ್ತಿಕನು ಪ್ರಾಮಾಣಿಕನಾಗಿರುತ್ತಾನೆ, ನೀವು ಅಲ್ಲ.

ಮಹಾಜ್ಞಾನಿಯೊಬ್ಬ ಹೇಳುತ್ತಿದ್ದ: "ನಿಮ್ಮ ಕೋಣೆಯಲ್ಲೊಬ್ಬ ಕಳ್ಳನಿದ್ದಾನೆ ಎನ್ನೋಣ. ಅವನಿಗೆ ಹೇಗೋ ಪಕ್ಕದ ಕೊಠಡಿಯಲ್ಲಿ ತುಂಬಾ ಚಿನ್ನದ ರಾಶಿಯಿದೆ ಎಂದೂ ಈ ಎರಡು ಕೋಣೆಗಳ ಮಧ್ಯೆ ಕೇವಲ ತೆಳುವಾದ ಗೋಡೆ ಮಾತ್ರವಿದೆ ಎಂದೂ ತಿಳಿದಿದೆ. ಆ ಕಳ್ಳನ ಸ್ಥಿತಿ ಏನಾಗಿರುತ್ತದೆ? ಅವನು ನಿದ್ದೆಯನ್ನೇ ಮಾಡಲಾರ, ತಿನ್ನಲಾರ ಅಥವಾ ಏನನ್ನೂ ಮಾಡಲಾರ. ಅವನ ಇಡಿಯ ಮನಸ್ಸು ಆ ಚಿನ್ನವನ್ನು ಪಡೆಯುವದರ ಮೇಲೇ ಇದೆ. ಈ ಎಲ್ಲ ಜನರೂ ಸುಖ, ದಿವ್ಯಾನಂದ ಮತ್ತು ಮಹಿಮೆಗಳ ಗಣಿ ಇಲ್ಲಿದೆ ಎಂದು ನಿಜವಾಗಿಯೂ ನಂಬಿದ್ದರೆ, ದೇವರನ್ನು ಪಡೆಯಲು ಪ್ರಯತ್ನಪಡದೆ ಈ ಪ್ರಪಂಚದಲ್ಲಿ ಈಗಿನಂತೆ ನಡೆಯುತ್ತಿದ್ದರೆಂದು ನೀವು ಎನ್ನುವಿರಾ?" ಭಗವಂತನೊಬ್ಬನಿದ್ದಾನೆಂದು ಅವನು ನಂಬುವದಕ್ಕೆ ಮೊದಲು ಮಾಡಿದ ಕೂಡಲೆ, 'ಅವನ'ನ್ನು ಪಡೆಯುವ ಹಂಬಲದ ಗೀಳು ಅವನಿಗೆ ಹಿಡಿಯುತ್ತದೆ. ಇತರರು ತಮ್ಮ ದಾರಿಯಲ್ಲಿ ಸಾಗಬಹುದು. ಆದರೆ ಇಲ್ಲಿ ಅವನು ನಡೆಸುತ್ತಿರುವದಕ್ಕಿಂತ ಬಹಳ ಹೆಚ್ಚಿನ ಜೀವನವೊಂದಿದೆ ಎಂದು ಖಂಡಿತವಾದ ಕೂಡಲೇ, ಇಂದ್ರಿಯಗಳೇ ಎಲ್ಲವೂ ಅಲ್ಲ ಎಂದು ಅವನಿಗೆ ದೃಢವಾದರೆ, ಅಮರವಾದ ಶಾಶ್ವತವಾದ ಎಂದಿಗೂ ನಾಶವಾಗದಂತಿರುವ, 'ಆತ್ಮ'ದ ಆನಂದದ ಮುಂದೆ ಈ ಮಿತಿಯುಳ್ಳ ಪ್ರಾಪಂಚಿಕ ದೇಹ ಏನೂ ಅಲ್ಲ ಎಂದೆನಿಸಿದ ಕೂಡಲೇ, ಅವನು ಈ ಆನಂದವನ್ನು ತಾನೇ ಕಾಣುವವರೆಗೂ

ಹುಚ್ಚನಾಗುತ್ತಾನೆ. ಈ ಹುಚ್ಚು, ಈ ಬಾಯಾರಿಕೆ, ಈ ಉನ್ಮಾದವೇ ಧರ್ಮಕ್ಕೆ 'ಎಚ್ಚರಾಗುವದು' ಎಂದು ಕರೆಯಲ್ಪಡುವದು, ಅದು ಬಂದಾಗ ಮನುಷ್ಯನು ಧಾರ್ಮಿಕನಾಗಲು ಪ್ರಾರಂಭಮಾಡುತ್ತಾನೆ. ಆದರೆ ಇದು ದೀರ್ಘಕಾಲವನ್ನು ತೆಗೆದುಕೊಳ್ಳುತ್ತದೆ. ಈ ಎಲ್ಲ ರೂಪಗಳು, ಸಾಂಪ್ರದಾಯಿಕ ಕರ್ಮಗಳು, ಪ್ರಾರ್ಥನೆಗಳು ಮತ್ತು ತೀರ್ಥಯಾತ್ರೆಗಳು, ಈ ಗ್ರಂಥಗಳು, ಗಂಟೆಗಳು ಮೋಂಬತ್ತಿಗಳು ಮತ್ತು ಪುರೋಹಿತರು ಸಿದ್ಧತೆಗಳು: ಅವು ವ್ಯಕ್ತಿಯ (ಆತ್ಮನ) ಅಶುದ್ಧತೆಯನ್ನು ತೆಗೆದು ಹಾಕುತ್ತವೆ. ಆತ್ಮವು ಪರಿಶುದ್ಧವಾದಾಗ ಸಹಜವಾಗಿಯೇ ಅದು ಎಲ್ಲ ಪಾವಿತ್ರ್ಯದ ಖನಿಯಾಗಿರುವ ಸಾಕ್ಷಾತ್ ಭಗವಂತನನ್ನೇ ಪಡೆಯಲಿಚ್ಛಿಸುತ್ತದೆ. ಶತಮಾನಗಳ ಧೂಳಿನಿಂದಾವೃತವಾದ ಕಬ್ಬಿಣದ ತುಂಡೊಂದು, ಅಯಸ್ಕಾಂತದ ಸನಿಹದಲ್ಲೇ ಅಷ್ಟು ಕಾಲವೂ ಇದ್ದರೂ, ಅದರಿಂದ ಆಕರ್ಷಿತವಾಗದು, ಆದರೆ ಧೂಳನ್ನೆಲ್ಲಾ ತೊಡೆದ ಕೂಡಲೇ ಅದು ಹೇಗೆ ಅಯಸ್ಕಾಂತದಿಂದ ಆಕರ್ಷಿತವಾಗುತ್ತದೆಯೋ ಅದರಂತೆಯೇ ದೀರ್ಘಕಾಲದ ಕೊಳೆ, ಕಶ್ಮಲ, ಕೆಟ್ಟತನ ಮತ್ತು ಪಾಪದಿಂದಾವೃತವಾದ ಮಾನವನ ಆತ್ಮ ಅನೇಕ ಜನ್ಮಗಳನಂತರ ಇಂತಹ ರೂಪ, ಸಾಂಪ್ರದಾಯಿಕ ಕರ್ಮಗಳಿಂದ, ಇತರರಿಗೆ ಒಳ್ಳೆಯದನ್ನು ಮಾಡುವದು, ಇತರ ಜೀವಿಗಳನ್ನು ಪ್ರೀತಿಸುವದು, ಇವುಗಳಿಂದ ಸಾಕಷ್ಟು ಪರಿಶುದ್ಧವಾಗುತ್ತದೆ; ಅದರ ಸ್ವಾಭಾವಿಕ ಆಧ್ಯಾತ್ಮಿಕ ಆಕರ್ಷಣೆ ಬರುತ್ತದೆ, ಅದು ಎಚ್ಚರಗೊಂಡು ಭಗವಂತನೆಡೆಗೆ ಧಾವಿಸಲು ಹೆಣಗುತ್ತದೆ.

ಆದಾಗ್ಯೂ, ಈ ಎಲ್ಲ ರೂಪ, ಮತ್ತು ಸಂಕೇತಗಳು ಕೇವಲ ಪ್ರಾರಂಭ ಮಾತ್ರ, ಭಗವಂತನ ಮೇಲಿನ ನಿಜವಾದ ಪ್ರೀತಿಯಲ್ಲ. ಎಲ್ಲೆಡೆಯೂ ಪ್ರೀತಿಯ ವಿಷಯದ ಮಾತುಗಳನ್ನು ಕೇಳುತ್ತೇವೆ. ಪ್ರತಿಯೊಬ್ಬನೂ ಹೇಳುತ್ತಾನೆ, 'ಭಗವಂತನನ್ನು ಪ್ರೀತಿಸು'. ಮನುಷ್ಯರಿಗೆ ಪ್ರೀತಿಸುವದೆಂದರೆ ಏನು ಎಂಬುದು ತಿಳಿಯದು; ಅವರಿಗೆ ಗೊತ್ತಿದ್ದಿದ್ದರೆ ಅದರ ವಿಷಯವಾಗಿ ಇಷ್ಟು ನಿರರ್ಗಳವಾಗಿ ಮಾತನಾಡುತ್ತಿರಲಿಲ್ಲ. ಪ್ರತಿಯೊಬ್ಬ ಮನುಷ್ಯನೂ ತಾನು ಪ್ರೀತಿಸಬಲ್ಲೆನೆಂದು ಹೇಳುತ್ತಾನೆ, ಅನಂತರ ತಡವೇ ಇಲ್ಲದಂತೆ ತನ್ನ ಸ್ವಭಾವದಲ್ಲಿ ಪ್ರೀತಿಯೇ ಇಲ್ಲವೆಂಬುದನ್ನು ಕಾಣುತ್ತಾನೆ. ಪ್ರತಿಯೊಬ್ಬ ಹೆಂಗಸೂ ತಾನು ಪ್ರೀತಿಸಬಲ್ಲೆನೆನ್ನುತ್ತಾಳೆ, ಮತ್ತು ಬೇಗನೆ ಅದು ಅವಳಿಂದಾಗುವದಿಲ್ಲವೆಂದು ಕಾಣುತ್ತಾಳೆ. ಪ್ರಪಂಚದ ತುಂಬ ಪ್ರೀತಿಯ ಮಾತಿದೆ, ಆದರೆ ಪ್ರೀತಿಸುವದು ಕಠಿಣ. ಪ್ರೀತಿ ಎಲ್ಲಿದೆ? ಪ್ರೀತಿ ಇದೆ ಎಂದು ನಿಮಗೆ ಹೇಗೆ ಗೊತ್ತು? ಪ್ರೀತಿಯ ಪ್ರಥಮ ಪರೀಕ್ಷೆ ಎಂದರೆ ಅದರಲ್ಲಿ ಚೌಕಾಸಿ ಇಲ್ಲ. ಎಲ್ಲಿಯವರೆಗೆ ಮನುಷ್ಯನೊಬ್ಬಾತನು ಮತ್ತೊಬ್ಬನನ್ನು ಪ್ರೀತಿಸುವದು ಅವನಿಂದ ಏನಾದರೂ ಪಡೆಯಲು ಎಂದು ನೀವು ಕಂಡರೆ, ಅದು ಪ್ರೀತಿಯಲ್ಲ ಎಂದು ನಿಮಗೆ ಗೊತ್ತಾಗುತ್ತದೆ; ಅದು ವ್ಯಾಪಾರದಂಗಡಿ. ಎಲ್ಲೆಲ್ಲಿ ಕೊಂಡು ಮಾರುವ ಪ್ರಶ್ನೆ ಇದೆಯೋ ಅದು ಪ್ರೀತಿಯಲ್ಲ. ಅದರಿಂದ, ಒಬ್ಬನು ಭಗವಂತನಲ್ಲಿ "ಇದು ಕೊಡು, ಅದು ಕೊಡು" ಎಂದು ಪ್ರಾರ್ಥಿಸಿದರೆ, ಅದು ಪ್ರೀತಿಯಲ್ಲ. ಅದು ಹೇಗಾಗಬಲ್ಲುದು? ನಾನು ನಿಮ್ಮಲ್ಲಿ ಒಂದು ಪ್ರಾರ್ಥನೆಯನ್ನು ಸಲ್ಲಿಸುತ್ತೇನೆ, ನೀವು ಹಿಂದಿರುಗಿಸಿ ಏನನ್ನಾದರೂ ನನಗೆ ಕೊಡುವಿರಿ; ಇದೂ ಹಾಗೆಯೇ, ಕೇವಲ ವ್ಯಾಪಾರದಂಗಡಿ.

ಒಬ್ಬಾನೊಬ್ಬ ಮಹಾರಾಜನು ಬೇಟೆಗಾಗಿ ಕಾಡಿಗೆ ಹೋದನು, ಅಲ್ಲಿ ಒಬ್ಬ ಋಷಿಯನ್ನು

ದರ್ಶಿಸಿದನು. ಅವನು ಋಷಿಯೊಡನೆ ಅಲ್ಪ ಸಂಭಾಷಣೆಯನ್ನು ಮಾಡಿದನು, ಅದರಿಂದ ಬಹಳವಾಗಿ ಸಂತೋಷವಾದವನು ತನ್ನಿಂದ ಒಂದು ದಾನವನ್ನು ಸ್ವೀಕರಿಸಲು ಕೇಳಿಕೊಂಡನು. ಋಷಿಯು ಹೇಳಿದನು, "ಇಲ್ಲ, ನನ್ನ ಸ್ಥಿತಿಯ ಬಗ್ಗೆ ನನಗೆ ಸಂಪೂರ್ಣ ತೃಪ್ತಿಯಿದೆ, ಇಲ್ಲಿನ ಮರಗಳು ತಿನ್ನಲು ಸಾಕಷ್ಟು ಹಣ್ಣುಗಳನ್ನು ನೀಡುತ್ತವೆ; ಈ ಸುಂದರ ಶುದ್ಧತೊರೆಗಳು ನನಗೆ ಬೇಕಾದ ನೀರೆಲ್ಲವನ್ನೂ ಒದಗಿಸುತ್ತವೆ; ಈ ಗುಹೆಗಳಲ್ಲಿ ನಾನು ನಿದ್ದೆ ಮಾಡುತ್ತೇನೆ. ನೀನು ಚಕ್ರವರ್ತಿಯೇ ಆದರೂ ನಿನ್ನ ದಾನದ ಕಾಣಿಕೆಯಿಂದ ನನಗೇನು?" ಚಕ್ರವರ್ತಿಯೆಂದನು, "ನನ್ನನ್ನು ಶುದ್ಧೀಕರಿಸಲು ಮಾತ್ರ, ಆನಂದಗೊಳಿಸಲು ನನ್ನೊಡನೆ ಪಟ್ಟಣಕ್ಕೆ ಬನ್ನಿ, ಯಾವದೊಂದು ಕೊಡುಗೆ ಸ್ವೀಕರಿಸಿ". ಕೊನೆಗೆ, ಋಷಿಯು ಚಕ್ರವರ್ತಿಯ ಜೊತೆಗೆ ಹೋಗಲು ಒಪ್ಪಿದನು, ಅವನನ್ನು ಚಕ್ರವರ್ತಿಯ ತನ್ನ ಅರಮನೆಗೆ ಕರೆದುಕೊಂಡು ಹೋದನು– ಅಲ್ಲಿ ಚಿನ್ನ, ಒಡವೆಗಳು, ಅಮೃತಶಿಲೆ ಮತ್ತು ಅತ್ಯಂತ ಆಶ್ಚರ್ಯಕರ ವಸ್ತುಗಳಿದ್ದವು– ಎಲ್ಲೆಲ್ಲೂ ಸಂಪತ್ತು, ಅಧಿಕಾರ ಶಕ್ತಿ ಮೆರೆಯುತ್ತಿದ್ದವು. ಚಕ್ರವರ್ತಿಯು ಋಷಿಯನ್ನು ಒಂದು ನಿಮಿಷ ತಾಳುವಂತೆ ಹೇಳಿ, ತನ್ನ ಪ್ರಾರ್ಥನೆಯನ್ನು ಪುನರುಚ್ಚರಿಸುತ್ತಾ ಒಂದು ಮೂಲೆಗೆ ಹೋಗಿ ಬೇಡಲು ಪ್ರಾರಂಭಿಸಿದನು 'ಮಹಾದೇವನೇ, ನನಗೆ ಹೆಚ್ಚಿನ ಸಂಪತ್ತು ಕೊಡು, ಹೆಚ್ಚಾಗಿ ಮಕ್ಕಳು, ಹೆಚ್ಚಾಗಿ ರಾಜ್ಯ ಪ್ರದೇಶವನ್ನು ಕೊಡು'. ಇಷ್ಟರಲ್ಲಿ ಋಷಿಯು ಎದ್ದು, ನಡೆದು ಹೋಗಲು ಪ್ರಾರಂಭಿಸಿದನು. ಇದನ್ನು ನೋಡಿದ ಚಕ್ರವರ್ತಿಯು ಅವನ ಹಿಂದೆ ಬಂದು, "ಮಹಾಸ್ವಾಮಿ, ನಿಲ್ಲಿ, ನನ್ನ ದಾನವನ್ನು ಸ್ವೀಕರಿಸಲಿಲ್ಲ, ಹಾಗೇ ಹೋಗುತ್ತಿದ್ದೀರಿ" ಋಷಿಯು ಹಿಂದಕ್ಕೆ ತಿರುಗಿ ಹೇಳಿದನು "ಭಿಕ್ಷುಕನೇ, ನಾನು ಭಿಕ್ಷುಕರಿಂದ ಭಿಕ್ಷವನ್ನು ಬೇಡುವದಿಲ್ಲ. ನೀನೇನು ಕೊಡಬಲ್ಲೆ? ಸದಾಕಾಲ ನೀನು ಬೇಡುತ್ತಲೇ ಇರುವೆ?" ಇದು ಪ್ರೀತಿಯ ಭಾಷೆಯಲ್ಲ– ನೀವು ಭಗವಂತನನ್ನು ಇದನ್ನು ಕೊಡು, ಅದನ್ನು ಕೊಡು ಎಂದು ಕೇಳುವದಾದರೆ, ಪ್ರೀತಿಗೂ, ವ್ಯಾಪಾರದಂಗಡಿಗೂ ವ್ಯತ್ಯಾಸವೇನು? ಪ್ರೀತಿಯ ಪ್ರಥಮ ಪರೀಕ್ಷೆ, ಅದಕ್ಕೆ ವ್ಯಾಪಾರ ಗೊತ್ತಿಲ್ಲ. ಪ್ರೀತಿ ಯಾವಾಗಲೂ ದಾನಿ, ಎಂದೂ ಪಡೆಯುವದಲ್ಲ. ಭಗವಂತನ ಮಗುವು ಹೇಳುತ್ತದೆ "ಭಗವಂತ ಬೇಕೆಂದರೆ ನನ್ನೆಲ್ಲವನ್ನೂ 'ಅವನಿ'ಗೆ ಕೊಡುವೆ, ಆದರೆ 'ಅವನಿ'ಂದ ಏನನ್ನೂ ಬಯಸುವದಿಲ್ಲ. ಈ ವಿಶ್ವದಿಂದ ನನಗೇನೂ ಬೇಡ, ನಾನು 'ಅವನ'ನ್ನು ಪ್ರೀತಿಸುತ್ತೇನೆ, ಏಕೆಂದರೆ ನನಗೆ 'ಅವನ'ನ್ನು ಪ್ರೀತಿಸುವದು ಬೇಕು, ಅವನಿಂದ ನಾನು ಯಾವ ಪ್ರಸಾದವನ್ನೂ ಪ್ರತಿಯಾಗಿ, ಕೇಳುವದಿಲ್ಲ. ಭಗವಂತನು ಸರ್ವಶಕ್ತನೋ ಅಲ್ಲವೋ ಯಾರು ಗಮನವಿಡುವರು? 'ಅವನಿಂದ' ನನಗೆ ಯಾವ ಶಕ್ತಿಯೂ ಬೇಡ, ಅಥವಾ 'ಅವನ' ಶಕ್ತಿಯು ರೂಪಾಂತರವೂ ಬೇಡ. 'ಅವನು' ನನ್ನ ಪ್ರೀತಿಯ ಭಗವಂತ ಎಂಬುದಷ್ಟೇ ಸಾಕು. ನಾನು ಬೇರೆ ಯಾವ ಪ್ರಶ್ನೆಯನ್ನೂ ಕೇಳೆನು".

ಪ್ರೀತಿಗೆ ಭೀತಿ ಇಲ್ಲವೆನ್ನುವದು ಎರಡನೆಯ ಪರೀಕ್ಷೆ. ಎಲ್ಲಿಯವರೆಗೆ ಮನುಷ್ಯನು ಭಗವಂತನನ್ನು ಒಂದು ಕೈಲಿ ಅನುಗ್ರಹದ ಪ್ರತಿಫಲವನ್ನೂ, ಮತ್ತೊಂದರಲ್ಲಿ ಶಿಕ್ಷೆಯನ್ನೂ ಹಿಡಿದು ಮೋಡಗಳ ಮೇಲೆ ಕುಳಿತಿರುವ ಜೀವಿ ಎಂದು ಚಿಂತಿಸುತ್ತಿರುವವನೋ ಅಲ್ಲಿಯವರೆಗೆ ಪ್ರೀತಿ ಇರಲಾರದು. ಒಬ್ಬನನ್ನು ಹೆದರಿಕೆಯಿಂದ ಪ್ರೀತಿಗೆ ತರಬಹುದೇ? ಕುರಿಮರಿಯು ಸಿಂಹವನ್ನು

ಪ್ರೀತಿಸುವದೇ? ಇಲಿಯು ಬೆಕ್ಕನ್ನು? ಗುಲಾಮನು ಯಜಮಾನನನ್ನು? ಗುಲಾಮರು ಕೆಲವು ಸಮಯಗಳಲ್ಲಿ ಪ್ರೀತಿಯ ಸೋಗು ಹಾಕುತ್ತಾರೆ, ಆದರೆ ಅದು ಪ್ರೀತಿಯೇ? ಭೀತಿಯಲ್ಲಿ ಪ್ರೀತಿಯನ್ನು ನೀವು ಎಲ್ಲಿಯಾದರೂ ನೋಡುವಿರಾ? ಅದೆಲ್ಲವೂ ನಟನೆ. ಪ್ರೀತಿಯೊಡನೆ ಎಂದೂ ಭೀತಿಯ ಭಾವನೆ ಬರುವದಿಲ್ಲ. ಬೀದಿಯಲ್ಲಿ ಹೋಗುವ ಕಿರಿಯ ತಾಯಿಯನ್ನು ಮನಸ್ಸಿಗೆ ತಂದುಕೊಳ್ಳಿ; ನಾಯಿಯೊಂದು ಅವಳ ಕಡೆ ಬೊಗಳಿದರೆ, ತನಗೆ ತೀರ ಹತ್ತಿರವಿರುವ ಮನೆಯೊಳಗೆ ಓಡಿಬಿಡುತ್ತಾಳೆ. ಮರುದಿನ ಮಗುವಿನ ಜೊತೆ ಬೀದಿಯಲ್ಲಿದ್ದಾಳೆ. ಸಿಂಹವೊಂದು ಮಗುವಿನ ಮೇಲೆ ಧಾವಿಸುತ್ತದೆ ಎನ್ನೋಣ, ಅವಳ ಜಾಗ ಆಗೆಲ್ಲಿರುತ್ತದೆ? ಸರಿಯಾಗಿ ಸಿಂಹದ ಬಾಯಿ ಕಡೆ, ಮಗುವನ್ನು ರಕ್ಷಿಸಲು ಪ್ರೀತಿಯು ಅವಳ ಎಲ್ಲ ಭೀತಿಯನ್ನೂ ಗೆದ್ದಿತು. ಭಗವಂತನ ಮೇಲಿನ ಪ್ರೀತಿಯಲ್ಲೂ ಹಾಗೆಯೇ. ಭಗವಂತನು ಅನುಗ್ರಹಕಾರಕನೋ, ಶಿಕ್ಷೆ ನೀಡುವನೋ ಯಾರು ಚಿಂತಿಸುವರು? ಪ್ರಿಯಕರನ ಯೋಚನೆ ಅದಲ್ಲ. ನ್ಯಾಯಾಧೀಶನು ಮನೆಗೆ ಬಂದಾಗ, ಅವನ ಪತ್ನಿ ಅವನಲ್ಲಿ ಏನು ನೋಡುವಳು, ಯೋಚಿಸಿ? ನ್ಯಾಯಾಧೀಶನನ್ನಲ್ಲ, ಮೆಚ್ಚುಗೆಯನ್ನು ಕೊಡುವವನನ್ನಲ್ಲ, ಶಿಕ್ಷೆ ನೀಡುವನನ್ನಲ್ಲ, ಆದರೆ ಅವಳ ಗಂಡನನ್ನು, ಅವಳ ಪ್ರೀತಿ ಪಾತ್ರನನ್ನು. ಅವನ ಮಕ್ಕಳು ಅವನಲ್ಲಿ ಏನು ಕಾಣುವರು? ಅವರ ಪ್ರೀತಿಯ ತಂದೆ, ಶಿಕ್ಷೆ ಕೊಡುವವನಲ್ಲ, ಬಹುಮಾನ ಕೊಡುವವನಲ್ಲ. ಹಾಗೆ ಭಗವಂತನ ಮಕ್ಕಳೂ 'ಅವನಲ್ಲಿ' ಅನುಗ್ರಹಕಾರನನ್ನಾಗಲೀ, ಶಿಕ್ಷೆ ನೀಡುವವನನ್ನಾಗಲೀ ಎಂದೂ ಕಾಣರು. ಪ್ರೀತಿಯ ರುಚಿಯನ್ನು ಎಂದೂ ಕಾಣದ ಜನರೇ ಹೆದರುವವರು, ನಡುಗುವವರು. ಎಲ್ಲ ಭೀತಿಯನ್ನು ಕಿತ್ತೆಸೆಯಿರಿ,– ಭಗವಂತನು ಶಿಕ್ಷೆಯನ್ನು ಕೊಡುತ್ತಾನೆ, ಬಹುಮಾನ ನೀಡುತ್ತಾನೆ ಎಂಬ ಈ ವಿಪರೀತ ಭಾವನೆಗಳು ಅನಾಗರಿಕ ಮನಸ್ಸುಗಳಲ್ಲಿ ಉಪಯೋಗಕ್ಕೆ ಬರಬಹುದು. ಕೆಲವು ಮನುಷ್ಯರೂ, ಅತ್ಯಂತ ಬುದ್ಧಿಶಾಲಿಗಳೂ ಸಹ, ಆಧ್ಯಾತ್ಮಿಕ ಅನಾಗರಿಕರು, ಈ ಭಾವನೆಗಳು ಅವರಿಗೆ ಸಹಾಯಕವಾಗಬಹುದು. ಆದರೆ ಪಾರಮಾರ್ಥಿಕದ ಮನುಷ್ಯರಿಗೆ, ಧರ್ಮದ ಬಳಿ ಸಾರುತ್ತಿರುವ ಮನುಷ್ಯರಿಗೆ, ಅಂತರಂಗದಲ್ಲಿ ಆಧ್ಯಾತ್ಮಿಕ ಬೆಳಕು ಎಚ್ಚತ್ತಿರುವ ಈ ಜನರಿಗೆ, ಇಂತಹ ಭಾವನೆಗಳು ಕೇವಲ ಬಾಲಿಶ, ಕೇವಲ ದಡ್ಡತನ ಎನಿಸುತ್ತವೆ. ಅಂತಹ ಮನುಷ್ಯರು ಭೀತಿಯ ಎಲ್ಲ ಭಾವನೆಗಳನ್ನೂ ತಿರಸ್ಕರಿಸುವರು.

ಮೂರನೆಯದು ಇದಕ್ಕಿಂತಲೂ ಹೆಚ್ಚಿನ ಪರೀಕ್ಷೆ. ಪ್ರೀತಿಯು ಯಾವಾಗಲೂ ಉತ್ಕೃಷ್ಟ ಆದರ್ಶ. ಒಬ್ಬಾತನು ಮೊದಲೆರಡು ಹಂತಗಳನ್ನು ದಾಟಿದಾಗ, ಒಬ್ಬಾತನು ಎಲ್ಲ ವ್ಯಾಪಾರಿತನವನ್ನೂ ತೊರೆದಾಗ, ಭೀತಿಯನ್ನು ಕಳಚಿದಾಗ, ಆತನು ಪ್ರೀತಿಯೇ ಉತ್ಕೃಷ್ಟವಾದ ಆದರ್ಶ ಎಂದು ಅರಿಯುವನು. ಚೆಲುವಾದ ಹೆಂಗಸೊಬ್ಬಳು ಕುರೂಪಿ ಗಂಡನನ್ನು ಪ್ರೀತಿಸುವದನ್ನು ನಾವು ಎಷ್ಟು ಬಾರಿ ನೋಡುತ್ತೇವೆ? ರೂಪವಂತನಾದ ಗಂಡಸೊಬ್ಬನು ಕುರೂಪಿ ಹೆಂಗಸನ್ನು ಪ್ರೀತಿಸುತ್ತಿರುವದನ್ನು ಎಷ್ಟು ಸಲ ನೋಡುತ್ತೇವೆ? ಆಕರ್ಷಣೆ ಏನು? ನೋಡುವವರು ಕುರೂಪಿ ಗಂಡಸು ಅಥವಾ ಕುರೂಪಿ ಹೆಂಗಸನ್ನು ಮಾತ್ರ ಕಾಣುತ್ತಾರೆ, ಆದರೆ ಪ್ರೀತಿಸುವವನು ಹಾಗಲ್ಲ; ಪ್ರೀತಿಸುವವನಿಗೆ ಪ್ರೀತಿಸುವವಳಿಗೆ, ಅವನ ಪ್ರಿಯತಮೆ/ಪ್ರಿಯತಮ ಎಂದಾದರೂ ಜೀವಿಸಿರುವ ಅತ್ಯಂತ ಸುಂದರ ಜೀವಿ. ಅದು ಹೇಗೆ? ಕುರೂಪಿಯನ್ನು ಪ್ರೀತಿಸುವ ಹೆಂಗಸು, ಅದಿರುವಂತೆ,

ತನ್ನದೇ ಮನಸ್ಸಿನಲ್ಲಿರುವ ಸೌಂದರ್ಯದ ಆದರ್ಶವನ್ನು ಈ ಕುರೂಪಿ ಮನುಷ್ಯನ ಮೇಲೆ ಹರಿಸುತ್ತಾಳೆ; ಅವಳು ಆರಾಧಿಸುವದು, ಪ್ರೀತಿಸುವದು ಈ ಕುರೂಪಿ ಮನುಷ್ಯನನ್ನಲ್ಲ, ಆದರೆ ತನ್ನದೇ ಆದರ್ಶವನ್ನೇ ಆ ಮನುಷ್ಯನು, ಇರುವಂತೆ, ಪ್ರೇರಕನು ಮಾತ್ರ, ಆ ಪ್ರೇರೇಪಣೆಯ ಮೇಲೆ ಅವಳು ತನ್ನ ಆದರ್ಶವನ್ನು ಆರೋಪಿಸಿ ಮುಚ್ಚುತ್ತಾಳೆ, ಮತ್ತು ಅದು ಅವಳ ಆರಾಧನಾ ವಸ್ತುವಾಗುತ್ತದೆ. ಈಗ, ಇದು ನಾವು ಪ್ರೀತಿಸುವ ಪ್ರತಿಯೊಂದು ಸಂದರ್ಭಕ್ಕೂ ಅನ್ವಯಿಸುತ್ತದೆ. ನಮ್ಮಲ್ಲಿ ಅನೇಕರಿಗೆ ನೋಟದಲ್ಲಿ ಸಾಮಾನ್ಯರಂತೆ ಕಾಣಿಸುವ ಸಹೋದರರು ಅಥವಾ ಸಹೋದರಿಯರು ಇರುತ್ತಾರೆ; ಆದರೂ ಅವರು ಸಹೋದರರು ಅಥವಾ ಸಹೋದರಿಯರಾಗಿರುವರು ಎನ್ನುವ ಸಂಗತಿಯೇ ಅವರನ್ನು ನಮಗೆ ರೂಪವಂತರನ್ನಾಗಿ ಮಾಡುತ್ತದೆ.

ಹಿನ್ನೆಲೆಯ ತತ್ತ್ವವೆಂದರೆ ಪ್ರತಿಯೊಬ್ಬನೂ ತನ್ನದೇ ಸ್ವಂತ ಆದರ್ಶವನ್ನು ಹೊರಗೆ ಚಿಮ್ಮಿ, ಅದನ್ನು ಆರಾಧಿಸುತ್ತಾನೆ. ಈ ಬಹಿರಂಗ ಪ್ರಪಂಚವು ಕೇವಲ ಭಾವನಾ ಸ್ಫುರಣೆಯ ಪ್ರಪಂಚ. ನಾವು ನೋಡುವದೆಲ್ಲವನ್ನೂ ನಮ್ಮ ಸ್ವಂತ ಮನಸ್ಸುಗಳ ಒಳಗಿನಿಂದ ಹೊರಗೆ ಎಸೆಯುತ್ತೇವೆ. ಮೃದ್ವಂಗಿ ಪ್ರಾಣಿ (ಆಯ್‌ಸ್ಟರ್)ಯ ಚಿಪ್ಪಿನೊಳಗೆ ಮರಳಿನ ಕಣ ಕೊಚ್ಚಿಕೊಂಡು ಹೋಗಿ ಅದನ್ನು ಕೆರಳಿಸುತ್ತದೆ. ಈ ಪೀಡನೆಯಿಂದ ಆ ಪ್ರಾಣಿಯಲ್ಲಿ ಉಂಟಾದ ಸ್ರಾವ ಆ ಮರಳಿನ ಕಣವನ್ನು ಮುಚ್ಚುತ್ತದೆ, ಸುಂದರವಾದ ಮುತ್ತು ಫಲಿಸುತ್ತದೆ. ಅದೇ ರೀತಿ, ಹೊರಗಿನ ವಿಷಯಗಳು ನಮಗೆ ಪ್ರೇರಣೆಯನ್ನು ಕೊಡುತ್ತವೆ, ಅದರ ಮೇಲೆ ನಮ್ಮದೇ ಆದರ್ಶಗಳನ್ನು ಹೊರಚೆಲ್ಲಿ ನಮ್ಮ ವಸ್ತುಗಳನ್ನು ನಿರ್ಮಿಸುತ್ತೇವೆ. ದುಷ್ಟರು ಈ ಪ್ರಪಂಚವನ್ನು ಪರಿಪೂರ್ಣ ನರಕವೆಂದು ಕಾಣುತ್ತಾರೆ, ಒಳ್ಳೆಯವರು ಪೂರ್ಣ ಸ್ವರ್ಗವೆನ್ನುತ್ತಾರೆ. ಪ್ರೇಮಿಗಳು ಪ್ರಪಂಚವನ್ನು ಪ್ರೇಮಮಯವೆಂದು ಕಾಣುತ್ತಾರೆ, ದ್ವೇಷಿಗಳು ದ್ವೇಷದಿಂದ ತುಂಬಿದೆಯೆಂದು ಕಾಣುತ್ತಾರೆ; ಹೋರಾಟಗಾರರು ಕಲಹವನ್ನು ಕಾಣುತ್ತಾರೆ, ಶಾಂತಿಪ್ರಿಯರು ಕೇವಲ ಶಾಂತಿಯೊಂದನ್ನೇ ಣುತ್ತಾರೆ. ಪರಿಪೂರ್ಣಮನುಷ್ಯನು ಭಗವಂತನನ್ನು ಬಿಟ್ಟು ಬೇರೇನನ್ನೂ ಕಾಣನು. ಹೀಗೆ, ನಾವು ಯಾವಾಗಲೂ ನಮ್ಮ ಶ್ರೇಷ್ಠ ಆದರ್ಶವನ್ನು ಪೂಜಿಸುತ್ತೇವೆ; ನಾವು ಆದರ್ಶವನ್ನು ಆದರ್ಶವೆಂದು ಕಾಣುವ ಗುರಿಯನ್ನು ಮುಟ್ಟಿದಾಗ, ಎಲ್ಲ ವಾದಗಳೂ, ಅನುಮಾನಗಳೂ ಎಂದೆಂದಿಗೂ ಮಾಯವಾಗುವವು. ಭಗವಂತನನ್ನು ತೋರಿಸಿಕೊಡಲು ಆಗುವದೋ ಇಲ್ಲವೋ ಎಂದು ಯಾರು ಗಮನ ಕೊಡುವರು? ಈ ಆದರ್ಶಭಾವ ಎಂದಿಗೂ ಹೋಗಲಾರದು, ಏಕೆಂದರೆ ಅದು ನನ್ನದೇ ಸ್ವಂತ ಸ್ವಭಾವವಾಗಿದೆ. ನನ್ನ ಸ್ವಂತ ಇರವನ್ನೇ ಪ್ರಶ್ನಿಸುವಾಗ, ನಾನು ನನ್ನ ಆದರ್ಶವನ್ನು ಮಾತ್ರ ಪ್ರಶ್ನಿಸುವೆನು; ನಾನು ಒಂದನ್ನು ಪ್ರಶ್ನಿಸಲಾರದಾದಾಗ ಇನ್ನೊಂದನ್ನೂ ನಾನು ಪ್ರಶ್ನಿಸಲಾರೆ. ಭಗವಂತನು ಏಕ ಕಾಲದಲ್ಲಿ ಸರ್ವಶಕ್ತನೂ–ಸರ್ವ ಕರುಣಾಮಯಿಯೂ ಆಗಿರಬಲ್ಲನೋ ಇಲ್ಲವೋ ಎಂದು ಯಾರು ಚಿಂತೆಮಾಡುತ್ತಾರೆ? 'ಅವನು' ಮಾನವ ಕುಲದ ಹಿತಕಾರಿಯಾಗಿದ್ದಾನೋ, 'ಅವನು' ನಮ್ಮನ್ನು ಪೀಡಕನ ದೃಷ್ಟಿಯಿಂದ ನೋಡುತ್ತಲಿದ್ದಾನೋ ಅಥವಾ ಹಿತೈಷಿಯಾದ ಚಕ್ರವರ್ತಿಯಾಗಿ ನೋಡುತ್ತಿದ್ದಾನೋ ಎಂದು ಯಾರು ಗಮನಿಸುವರು?

ಪ್ರೇಮಿಯು ಈ ಎಲ್ಲವುಗಳಿಗಿಂತ ಆಚೆ ಪ್ರತಿಫಲ ಮತ್ತು ದಂಡನೆಗಳಾಚೆ, ಹೆದರಿಕೆಗಳು

ಮತ್ತು ಅನುಮಾನಗಳ ಆಚೆ, ವೈಜ್ಞಾನಿಕ ಅಥವಾ ಇತರ ಪ್ರದರ್ಶನಗಳಾಚೆ ಹಾದು ಹೋಗಿರುತ್ತಾನೆ, ಆದರ್ಶ ಪ್ರೀತಿಯು ಅವನಿಗೆ ಸಾಕು, ಮತ್ತು ಈ ವಿಶ್ವವು ಈ ಪ್ರೀತಿಯ ಪ್ರಕಟಣೆಯಲ್ಲದೆ ಮತ್ತೇನು ಎಂಬುದು ಸ್ವತಸ್ಸಿದ್ಧವಲ್ಲವೇ? ಪರಮಾಣುಗಳ ಜೊತೆ ಪರಮಾಣುಗಳು ಒಂದಾಗುವಂತೆ, ಅಣುಗಳ ಜೊತೆ ಅಣುಗಳು, ಮತ್ತು ಗ್ರಹಗಳು ಒಂದರ ಕಡೆ ಮತ್ತೊಂದು ಹಾರಿಬರುವಂತೆ ಮಾಡುವದು, ಯಾವದು? ಮನುಷ್ಯನನ್ನು ಮನುಷ್ಯ, ಗಂಡಸನ್ನು ಹೆಂಗಸು, ಹೆಂಗಸನ್ನು ಗಂಡಸು, ಮೃಗಗಳನ್ನು ಮೃಗಗಳು ಆಕರ್ಷಿಸಿ, ಇಡೀ ವಿಶ್ವವನ್ನೇ, ಅದಿರುವಂತೆ, ಒಂದು ಕೇಂದ್ರಕ್ಕೆ ಸೆಳೆಯುವದು ಯಾವದು? ಇದನ್ನೇ ಪ್ರೀತಿ ಎನ್ನುವದು. ಅದು ಪ್ರಕಟವಾಗುವದು ಅತ್ಯಂತ ಸಣ್ಣ ಪರಮಾಣುವಿನಿಂದ ಅತ್ಯಧಿಕ ಜೀವಿಯವರೆಗೆ; ಈ ಪ್ರೀತಿಯು ಸರ್ವಶಕ್ತ, ಸರ್ವವ್ಯಾಪಿ. ಇಂದ್ರಿಯಗ್ರಹಣ ಶಕ್ತಿಯಿರುವವರಲ್ಲಿ ಮತ್ತು ಇಲ್ಲದವವರಲ್ಲಿ, ವಿಶಿಷ್ಟದಲ್ಲಿ ಮತ್ತು ಸಾರ್ವಲೌಕಿಕದಲ್ಲಿ, ಆಕರ್ಷಣೆಯೆಂದು ಕಾಣಿಸಿಕೊಳ್ಳುವದು ಏನೋ ಅದು ಪರಮಾತ್ಮನ ಪ್ರೀತಿ. ಇದು ವಿಶ್ವದಲ್ಲಿರುವ ಒಂದು ಚಾಲನ ಶಕ್ತಿ. ಆ ಪ್ರೀತಿಯ ಪ್ರಚೋದನೆಯಿಂದ, ಕ್ರಿಸ್ತನು ಮಾನವಕುಲಕ್ಕಾಗಿ ತನ್ನ ಜೀವನವನ್ನು ಕೊಟ್ಟ; ಬುದ್ಧನು ಒಂದು ಮೃಗಕ್ಕೂ ಕೂಡ, ತಾಯಿಯು ಮಗುವಿಗಾಗಿ, ಗಂಡನು ಹೆಂಡತಿಗಾಗಿ, ತ್ಯಾಗ ಮಾಡುವದರು. ಅದೇ ಪ್ರೀತಿಯ ಪ್ರಚೋದನೆಯಿಂದಲೇ ಜನಗಳು ದೇಶಕ್ಕಾಗಿ ತಮ್ಮ ಜೀವನವನ್ನು ತೆರಲು ತಯಾರಾಗಿರುವದು. ಮತ್ತು, ಹೇಳಲು ವಿಚಿತ್ರವೆಂದರೆ, ಅದೇ ಪ್ರೀತಿಯ ಪ್ರಚೋದನೆಯಿಂದಲೇ ಕಳ್ಳನು ಕದಿಯುವನು, ಕೊಲೆಗಾರಲು ಕೊಲೆ ಮಾಡುವನು. ಈ ಎಲ್ಲ ಪಕ್ಷಗಳಲ್ಲೂ, ಹುಮ್ಮಸ್ಸು ಒಂದೇ, ಆದರೆ ಅದು ತೋರಿಕೊಳ್ಳುವದು ಬೇರೆಯಂತೆಯೇ. ವಿಶ್ವದಲ್ಲಿ ಇದೊಂದು ಚಾಲನಶಕ್ತಿ. ಕಳ್ಳನಿಗೆ ಚಿನ್ನದ ಮೇಲೆ ಪ್ರೀತಿ, ಅಲ್ಲಿ ಪ್ರೀತಿ ಇದೆ ಆದರೆ ತಪ್ಪು ಮಾರ್ಗಕ್ಕೆ ತಿರುಗಿದೆ. ಅದರಿಂದ, ಎಲ್ಲ ಅಪರಾಧಗಳಲ್ಲೂ, ಹಾಗೆಯೇ ಎಲ್ಲ ಪುಣ್ಯಕರ ಕ್ರಿಯೆಗಳಲ್ಲೂ ಹಿಂದೆ ನಿಲ್ಲುವದು ಆ ಶಾಶ್ವತ ಪ್ರೇಮ. ಒಬ್ಬಾತನು ನ್ಯೂಯಾರ್ಕ್‌ನ ಬಡಜನರಿಗಾಗಿ ಒಂದು ಸಾವಿರ ಡಾಲರುಗಳ ಚೆಕ್ ಬರೆಯುತ್ತಾನೆ, ಮತ್ತು ಅದೇ ಕಾಲದಲ್ಲಿ, ಅದೇ ಕೊಠಡಿಯಲ್ಲಿ ಇನ್ನೊಬ್ಬಾತನು ತನ್ನ ಸ್ನೇಹಿತನ ಹೆಸರನ್ನು ಕಳ್ಳ ರುಜು ಮಾಡುತ್ತಾನೆ. ಅವರಿಬ್ಬರೂ ಬರೆಯಲು ಅನುವು ಮಾಡುವದು ಒಂದೇ ಬೆಳಕು, ಆದರೆ ಪ್ರತಿಯೊಬ್ಬನೂ ತಾನು ಮಾಡಿಕೊಳ್ಳುವ ಅದರ ಉಪಯೋಗಕ್ಕೆ ಹೊಣೆಗಾರರಾಗಿರುತ್ತಾರೆ. ಹೊಗಳುವದಾಗಲೀ, ತೆಗಳುವದಾಗಲೀ ಬೆಳಕನ್ನಲ್ಲ. ಯಾವದಕ್ಕೂ ಅಂಟದಿರುವದು, ಆದಾಗ್ಯೂ ಪ್ರತಿಯೊಂದರಲ್ಲೂ ಹೊಳೆಯುವದು ಪ್ರೀತಿ, ಅದು ವಿಶ್ವದ ಚಾಲನ ಶಕ್ತಿ, ಅದಿಲ್ಲದೆ ವಿಶ್ವವು ಕ್ಷಣಮಾತ್ರದಲ್ಲಿ ಛಿದ್ರಛಿದ್ರವಾಗುವುದು, ಆದ ಕಾರಣ ಈ ಪ್ರೀತಿಯೇ ಭಗವಂತನು.

"ಓ ಪ್ರಿಯತಮಾ, ಯಾರೊಬ್ಬರೂ ಗಂಡನನ್ನು ಗಂಡನಿಗೋಸ್ಕರವಾಗಿ ಪ್ರೀತಿಸುವದಿಲ್ಲ, ಆದರೆ ಗಂಡನಲ್ಲಿರುವ ತನ್ನದೇ ಆತ್ಮಕ್ಕಾಗಿ; ಓ ಪ್ರಿಯತಮಾ, ಯಾರೂ ಹೆಂಡತಿಯನ್ನು ಹೆಂಡತಿಗೋಸ್ಕರ ಪ್ರೀತಿಸುವದಿಲ್ಲ, ಆದರೆ ಹೆಂಡತಿಯಲ್ಲಿರುವ ತನ್ನದೇ ಆತ್ಮನಿಗೋಸ್ಕರ. ಯಾರೂ ಎಂದೂ ಬೇರೆ ಯಾವದನ್ನೂ, ತನ್ನ ಆತ್ಮಪರ ವಿನಾ ಪ್ರೀತಿಸುವದಿಲ್ಲ". ಇಷ್ಟೊಂದು ನಿಂದನೆಗೊಳಗಾದ ಈ ಸ್ವಾರ್ಥಪರತೆಯೂ ಕೂಡ ಅದೇ ಪ್ರೀತಿಯ ಪ್ರಕಟನೆ ಮಾತ್ರ. ಈ

ಆಟದಿಂದ ಪಕ್ಕಕ್ಕೆ ನಿಲ್ಲು, ಅದರೊಡನೆ ಬೆರೆಯಬೇಡ, ಆದರೆ ಈ ಅಚ್ಚರಿಯ ದೃಶ್ಯ ಪರಂಪರೆಯನ್ನು, ಒಂದು ಅಂಕದ ನಂತರ ಮತ್ತೊಂದು ಅಂಕದಂತೆ ಆಡುವ ಮಹಾನಾಟಕವನ್ನು ನೋಡು, ಬೆರಗುಗೊಳಿಸುವ ಸ್ವರಮೇಳವನ್ನು ಕೇಳು; ಇವೆಲ್ಲಾ ಅದೊಂದೇ ಪ್ರೀತಿಯ ಪ್ರಕಟನೆಗಳು. ಸ್ವಾರ್ಥಪರತೆಯಲ್ಲೂ ಕೂಡ, ಆ ತನ್ನತನ ಬಹುಸಂಖ್ಯಾಕವಾಗಿ ಬೆಳೆಯುತ್ತದೆ, ಮತ್ತೂ ಬೆಳೆಯುತ್ತದೆ. ಆ ಒಂದು ತನ್ನತನ, ಒಬ್ಬ ಮನುಷ್ಯ, ಅವನು ಮದುವೆಯಾದಾಗ ಎರಡು ಸ್ವಯಂಗಳಾಗುವನು; ಅವನು ಮಕ್ಕಳನ್ನು ಪಡೆದಾಗ ಹಲವು ಸ್ವಯಂ ಆಗುವನು; ಹೀಗೆ ಅವನು ಬೆಳೆದು ಇಡಿಯ ಪ್ರಪಂಚವೇ ತನ್ನ ಆತ್ಮವೆಂದು, ಇಡಿಯ ವಿಶ್ವವೇ ಅವನ ಆತ್ಮವೆಂದು ಭಾವಿಸುವನು. ಆಗ ಅವನು ಒಂದು ರಾಶಿಯ ವಿಶ್ವಪ್ರೇಮಕ್ಕೆ ಅಪರಿಮಿತ ಪ್ರೇಮಕ್ಕೆ ವಿಸ್ತಾರವಾಗುವನು– ಆ ಪ್ರೇಮವೇ ಭಗವಂತನು.

ಈ ರೀತಿ ನಾವು ರೂಪ ಸಂಕೇತಗಳೆಲ್ಲಾ ಉದುರಿ ಬೀಳುವ ಹಂತದಲ್ಲಿ ಅತ್ಯುಚ್ಚ ಭಕ್ತಿ, ಅತ್ಯುಚ್ಚ ದೈವನಿಷ್ಠೆ ಎನಿಸಿಕೊಳ್ಳುವಲ್ಲಿಗೆ ಬರುತ್ತೇವೆ. ಆ ಸ್ಥಿತಿಯನ್ನು ಮುಟ್ಟಿದಾತನು ಯಾವದೇ ಪಂಥಕ್ಕೆ ಸೇರಿದವನಾಗುವದಿಲ್ಲ, ಏಕೆಂದರೆ ಎಲ್ಲ ಪಂಥಗಳೂ ಅವನಲ್ಲೇ ಇವೆ. ಅವನೆಲ್ಲಿಗೆ ಸೇರುವನು?– ಏಕೆಂದರೆ, ಎಲ್ಲ ದೇವಮಂದಿರಗಳು ಮತ್ತು ದೇವಸ್ಥಾನಗಳು ಅವನೊಳಗೇ ಇವೆ. ಅವನಿಗೆ ತಕ್ಕ ದೊಡ್ಡ ದೇವಮಂದಿರ (ಚರ್ಚ್) ಎಲ್ಲಿದೆ? ಅಂತಹ ಪುರುಷನು ಕೆಲವೊಂದು ಮಿತಿಯ ರೂಪಗಳಿಗೆ ಅಂಟಿಕೊಂಡು ಕೆಳಬರಲಾರನು. ಅವನು ಅದರೊಳಗೆ ಒಂದಾಗಿರುವ ಅಪರಿಮಿತ ಭಕ್ತಿಗೆ ಮಿತಿ ಎಲ್ಲಿದೆ? ಈ ಪ್ರೇಮದ ಆದರ್ಶವನ್ನು ಇಟ್ಟುಕೊಂಡ ಎಲ್ಲ ಧರ್ಮಗಳಲ್ಲೂ, ಅದನ್ನು ವ್ಯಕ್ತಗೊಳಿಸುವದಕ್ಕೆ ಪ್ರಯಾಸವಿದೆ ಎನ್ನುವದನ್ನು ನಾವು ಕಾಣುತ್ತೇವೆ. ನಾವು ಈ ಪ್ರೀತಿಯೇನೆಂಬ ಅರ್ಥವನ್ನು ತಿಳಿದಿರುವೆವಾದರೂ, ಈ ವಾತ್ಸಲ್ಯ, ಆಕರ್ಷಣೆಗಳ ಈ ಪ್ರಪಂಚದಲ್ಲಿಯ ಪ್ರತಿಯೊಂದೂ ಆ 'ಅಪರಿಮಿತ ಪ್ರೀತಿಯ ಮೈದೋರುವಿಕೆ ಎಂದು ಕಾಣುವೆವು'. ಆದರೂ, ವಿವಿಧ ರಾಷ್ಟ್ರಗಳ ಋಷಿಗಳು, ಸಂತರು ಇದರ ನಿರೂಪಣೆಗಾಗಿ ಪ್ರಯತ್ನ ಮಾಡಿರುವರು. ಅವರು ಭಾಷೆಯ ಸಾಮರ್ಥ್ಯಗಳೆಲ್ಲವನ್ನೂ ಉಪಯೋಗಿಸಿಕೊಂಡು, ಅತ್ಯಂತ ಐಹಿಕ ಅಭಿವ್ಯಕ್ತತೆಯನ್ನೂ ದೈವಿಕಕ್ಕೆ ರೂಪಾಂತರಗೊಳಿಸಿರುವದನ್ನು ನಾವು ಕಾಣುತ್ತೇವೆ.

ರಾಜವಂಶದ ಯಹೂದ್ಯ ಸಂತನು ಹೀಗೆ ಗಾನ ಮಾಡಿದನು, ಅವರೆಲ್ಲ ಭಾರತದ ಬಗ್ಗೆ ಹೀಗೆ ಹಾಡಿದರು, "ಓ ಪ್ರಿಯತಮ, 'ನಿನ್ನ' ತುಟಿಗಳ ಚುಂಬನವೊಂದು! 'ನಿನ್ನಿಂದ' ಚುಂಬಿಸಲ್ಪಟ್ಟವನಲ್ಲಿ 'ನಿನಗಾಗಿ'ರುವ ತೃಷೆಯು ಎಂದೆಂದಿಗೂ ವೃದ್ಧಿಯಾಗುತಲಿದೆ! ಎಲ್ಲ ದುಃಖಗಳೂ ನಿಲ್ಲುತ್ತವೆ, ನೆನ್ನೆ, ಇಂದು, ನಾಳೆಗಳನ್ನೆಲ್ಲಾ ಆತನು ಒಬ್ಬನು ಮರೆಯುತ್ತಾನೆ, ಕೇವಲ 'ನಿನ್ನೊಬ್ಬನನ್ನೇ' ಚಿಂತಿಸುತ್ತಾನೆ." ಎಲ್ಲ ಆಸೆಗಳೂ ಮಾಯವಾದಾಗ, ಅದು ಪ್ರೇಮಿಯ ಉನ್ಮತ್ತತೆ. "ಮುಕ್ತಿಗಾಗಿ ಯಾರು ಚಿಂತೆಮಾಡುತ್ತಾರೆ? ಸಂರಕ್ಷಣೆಗಾಗಿ ಯಾರು ಕೊರಗುವವರು? ಪರಿಪೂರ್ಣನಾಗಲೂ ಸಹಿತ ಯಾರು ಸೊರಗುವರು? ಬಿಡುಗಡೆಗಾಗಿ ಯಾರು ಯೋಚನೆ ಮಾಡುವರು?" ಎನ್ನುತ್ತಾನೆ ಪ್ರೇಮಿ. "ನನಗೆ ಸಂಪತ್ತು ಬೇಡ, ಆರೋಗ್ಯವೂ ಸಹಿತ ಬೇಡ; ನನಗೆ ಸೌಂದರ್ಯ ಬೇಡ, ಬುದ್ಧಿಮತ್ತೆಯೂ ನನಗೆ ಬೇಡ; ಈ ಪ್ರಪಂಚದಲ್ಲಿರುವ ಎಲ್ಲ ದುಷ್ಟ

ಕರ್ಮಿಗಳ ನಡುವೆಯೂ ನಾನು ಪುನಃ ಪುನಃ ಹುಟ್ಟಿ ಬರಲು ಅವಕಾಶ ಕೊಡು; ನಾನು ದೂರುವದಿಲ್ಲ, ಆದರೆ ನಾನು 'ನಿನ್ನನ್ನು' ಪ್ರೀತಿಗಾಗಿಯೇ ಪ್ರೀತಿಸುವಂತಾಗಲಿ".

ಈ ಹಾಡುಗಳಲ್ಲಿ ಅಭಿವ್ಯಕ್ತವಾಗಿರುವ ಪ್ರೀತಿಯ ಹುಚ್ಚು ಆ ರೀತಿಯದು. ಅತ್ಯುಚ್ಚವಾದ, ಅತ್ಯಂತ ಭಾವಗರ್ಭಿತವಾದ ಮತ್ತು ಅತ್ಯಂತ ಆಕರ್ಷಣೀಯವಾದ ಮಾನವ ಪ್ರೀತಿಯಿರುವದು ಗಂಡಸು, ಹೆಂಗಸಿನ ನಡುವಿನಲ್ಲಿ. ಆದುದರಿಂದ ಆ ಭಾಷೆಯನ್ನೇ ಅತ್ಯಂತ ಆಳವಾದ ದೈವನಿಷ್ಠೆಯನ್ನು ವ್ಯಕ್ತಪಡಿಸಲು ಬಳಸಿದೆ. ಮಾನವ ಪ್ರೀತಿಯ ಹುಚ್ಚು ಸಂತರ ಹುಚ್ಚು ಪ್ರೀತಿಯ ಅತ್ಯಂತ ದುರ್ಬಲ ಪ್ರತಿಧ್ವನಿಯಾಗಿದೆ. ಭಗವಂತನ ನಿಜ ಪ್ರೇಮಿಗಳು ಹುಚ್ಚರಾಗಲು ಬಯಸುತ್ತಾರೆ, ಭಗವಂತನ ಪ್ರೇಮದಿಂದ ಮತ್ತೇರಿದವರಾಗಬಯಸುತ್ತಾರೆ, "ಭಗವಂತನ ಅಮಲಿನ ಮಾನವ" (ಆನಂದ ಪರವಶರಾಗಿ)ರಾಗ ಬಯಸುತ್ತಾರೆ. ಅವರು ಎಲ್ಲ ಧರ್ಮದ ಋಷಿಗಳು ಮತ್ತು ಸಂತರು, ತಮ್ಮ ಹೃದಯದ ರಕ್ತವನ್ನೇ (ಭಕ್ತಿಯನ್ನೇ) ಅದರೊಳಗೆ ಬಸಿದು ತಯಾರಿಸಿರುವ ಪ್ರೇಮದ ಬಟ್ಟಲನ್ನು ಹೀರಬಯಸುತ್ತಾರೆ; ಯಾವ ಪ್ರತಿಫಲವನ್ನೂ ಬಯಸದೆ ಭಗವಂತನನ್ನು ಪ್ರೀತಿಸಿದವರ ಪ್ರೀತಿಗಾಗಿ ಮಾತ್ರವೇ ಪ್ರೀತಿಯನ್ನು ಬಯಸಿದವರ ಎಲ್ಲ ಮನೋರಥಗಳೂ ಆ ಬಟ್ಟಲಲ್ಲಿ ಸಾಂದ್ರೀಕೃತವಾಗಿವೆ. ಪ್ರೀತಿಯ ಪ್ರತಿಫಲ ಪ್ರೀತಿಯೇ, ಎಂತಹ ಪ್ರತಿಫಲವದು! ಎಲ್ಲ ದುಃಖಗಳನ್ನೂ ಹೊಡೆದು ಹಾಕುವದು ಅದೊಂದೇ, ಆ ಬಟ್ಟಲೊಂದರಿಂದಲೇ ಕುಡಿದಾಗ. ಮಾನವನು ದೈವಿಕ ಹುಚ್ಚನಾಗುತ್ತಾನೆ, ಅವನು ಮನುಷ್ಯನೆಂಬುದನ್ನೇ ಮರೆಯುತ್ತಾನೆ, ಈ ಪ್ರಪಂಚದ ರೋಗಮಾಯವಾಗುವದು .

ಕೊನೆಯಲ್ಲಿ, ಈ ವಿವಿಧ ವ್ಯವಸ್ಥೆಗಳು ಕೊನೆಯಲ್ಲಿ ಒಂದು ಬಿಂದುವಿಗೆ, ಆ ಪರಿಪೂರ್ಣ ಸಂಯೋಗಕ್ಕೆ ಏಕಮುಖವಾಗುತ್ತವೆ. ನಾವು ಯಾವಾಗಲೂ ದ್ವೈತಿಗಳಂತೆ ಪ್ರಾರಂಭಿಸುವೆವು. ಭಗವಂತನು ಬೇರೆಯ 'ಇರುವಿಕೆ' ಮತ್ತು ನಾನು ಬೇರೆಯೇ ಜೀವಿ. ಇವೆರಡರ ನಡುವೆ 'ಪ್ರೀತಿ' ಬರುತ್ತದೆ, ಮತ್ತು ಮನುಷ್ಯನು ಭಗವಂತನನ್ನು ಸಮೀಪಿಸತೊಡಗುತ್ತಾನೆ, ಅದಿರುವಂತೆ, ಭಗವಂತನು ಮಾನವನೆಡೆ ಬರಲು ಪ್ರಾರಂಭಿಸುತ್ತಾನೆ. ಮಾನವನು ಜೀವನದ ಹಲವಾರು ಸಂಬಂಧಗಳನ್ನು ತೆಗೆದುಕೊಳ್ಳುತ್ತಾನೆ, ತಂದೆ, ತಾಯಿ ಸ್ನೇಹಿತ ಅಥವಾ ಪ್ರೇಮಿಯಾಗಿ; ಕೊನೆಯ ಹಂತ ಬರುವದು ಅವನು ತನ್ನ ಅರ್ಚನೆಯ ವಸ್ತುವಿನೊಡನೆ ಒಂದಾದಾಗ. "ನಾನು ನೀನಾಗಿರುವೆ, ಮತ್ತು ನೀನು ನಾನಾಗಿರುವೆ, ನಿನ್ನನ್ನು ಅರ್ಚಿಸುವಾಗ ನಾನು ನನ್ನನ್ನೇ ಅರ್ಚಿಸುಕೊಳ್ಳುತ್ತೇನೆ; ನನ್ನನ್ನೇ ಅರ್ಚಿಸುಕೊಳ್ಳುವಲ್ಲಿ, ನಾನು ನಿನ್ನನ್ನು ಅರ್ಚಿಸುತ್ತೇನೆ". ಅದರಲ್ಲಿ ಮನುಷ್ಯನು ಯಾವದರಿಂದ ಪ್ರಾರಂಭಮಾಡಿದನೋ ಅದರ ಅತ್ಯುಚ್ಚ ಶಿಖರಕ್ಕೇರುವದನ್ನು ನಾವು ಕಾಣುತ್ತೇವೆ. ಪ್ರಾರಂಭದಲ್ಲಿ, ಪ್ರೀತಿಯು ತನ್ನ ಕಡೆಗೆ, ಆದರೆ ಈ ಸಣ್ಣ ವ್ಯಕ್ತಿಯು ತನಗೆ ಸೇರಿದುದೆಂದುಕೊಳ್ಳುವಾಗ ಅದು ಪ್ರೀತಿಯನ್ನು ಸ್ವಾರ್ಥವಾಗಿ ಮಾಡಿತು; ಕೊನೆಗೆ ಬಂದದ್ದು ಬೆಳಕಿನ ಪೂರ್ಣ ಪ್ರಭೆ, ಆ ವ್ಯಕ್ತಿ 'ಅಮಿತ'ವಾದಾಗ. ಮೊದಲಿಗೆ ಎಲ್ಲೋ ಇದ್ದನೆನ್ನುವ 'ಇರುವಿಕೆ'ಯ ಭಗವಂತನು, ಅದಿರುವಂತೆ, 'ಅಪರಿಮಿತ ಪ್ರೀತಿ' ಯಾಗಿ ರೂಪಾಂತರ ಪಡೆಯುತ್ತದೆ. ಮನುಷ್ಯನೂ ಸಹ

ಪರಿವರ್ತನೆಯಾದನು. ಅವನು ಭಗವಂತನ ಸಮೀಪಕ್ಕೆ ಬರತೊಡಗುತ್ತಾನೆ, ಇದಕ್ಕೆ ಮೊದಲು ತನ್ನಲ್ಲಿ ತುಂಬಿಕೊಂಡಿದ್ದ ಶುಷ್ಕ ಆಸೆಗಳೆಲ್ಲವನ್ನೂ ಅವನು ತ್ಯಜಿಸುತ್ತಿದ್ದನು. ಅವನ ಅಭಿಲಾಷೆಗಳೊಡನೆ ಸ್ವಾರ್ಥತೆಯೂ ಮಾಯವಾಗಿ ಹೋಗುತ್ತದೆ. ಅಗ್ರಭಾಗದಲ್ಲಿ ಅವನು 'ಪ್ರೇಮ', 'ಪ್ರೇಮಿ' ಮತ್ತು 'ಪ್ರಿಯತಮ'ರೆಲ್ಲಾ 'ಒಂದೇ' ಆಗಿದ್ದನ್ನು ಕಾಣುತ್ತಾನೆ.

(ಆಕರ : Bhakti or Devotion (The Complete works of Swami Vivekananda, Vol-II, P-38)

# 20

## ವಿಶ್ವವ್ಯಾಪಕ ಧರ್ಮದ ಸಫಲತೆಯ ಮಾರ್ಗ

ಭಗವಂತನಿಂದ ಬೆಳಕನ್ನು ತರುವ ಶೋಧವನ್ನು ಬಿಟ್ಟು ಬೇರೆ ಯಾವ ಶೋಧನೆಯೂ ಮಾನವನ ಹೃದಯಕ್ಕೆ ಹೆಚ್ಚು ಪ್ರಿಯವಲ್ಲ. ಹಿಂದಿನ ಕಾಲಗಳಲ್ಲಾಗಲೀ ಅಥವಾ ಈಗಲಾಗಲೀ, ಆತ್ಮನ, ಭಗವಂತನ ಮತ್ತು ಮಾನವನ ಗುರಿಯ ಅಧ್ಯಯನಕ್ಕಿಂತ ಬೇರೆ ಯಾವ ಅಧ್ಯಯನವೇ ಆಗಲಿ, ಇಷ್ಟೊಂದು ಮಾನವಶಕ್ತಿಯನ್ನು ತೆಗೆದುಕೊಂಡಿಲ್ಲ. ನಮ್ಮ ದೈನಂದಿನ ಉದ್ಯೋಗಗಳಲ್ಲಿ, ನಮ್ಮ ಹೆಬ್ಬಯಕೆಗಳಲ್ಲಿ, ನಮ್ಮ ಕಾರ್ಯಗಳಲ್ಲಿ, ನಮ್ಮ ಅತ್ಯಂತ ಮಹತ್ವದ ಹೋರಾಟಗಳ ನಡುವಿನಲ್ಲಿ ನಾವು ಎಷ್ಟೇ ತನ್ಮಯರಾಗಿದ್ದರೂ, ಕೆಲವು ಸಮಯಗಳಲ್ಲಿ ಒಂದು ವಿರಾಮದ ಅಂತರ ಬರುವದು; ಮನಸ್ಸು ನಿಶ್ಚಲವಾಗುವದು; ಈ ಪ್ರಪಂಚದಾಚೆಗಿನ ಯಾವದನ್ನೋ ತಿಳಿಯಬಯಸುವದು. ಕೆಲವು ಸಮಯಗಳಲ್ಲಿ ಇಂದ್ರಿಯಗಳಾಚಿನ ಕ್ಷೇತ್ರದ ಕ್ಷಣಿಕ ದರ್ಶನಗಳನ್ನು ಹಿಡಿಯುವದು, ಅದರ ಪರಿಣಾಮವೇ ಅದನ್ನು ಪಡೆಯುವ ಹೋರಾಟವು. ಈ ರೀತಿ, ಅದು ಎಲ್ಲಾ ಕಾಲಗಳಲ್ಲೂ, ಎಲ್ಲಾ ದೇಶಗಳಲ್ಲೂ ಇದ್ದುಕೊಂಡು ಬಂದಿದೆ. ಮನುಷ್ಯನು ಆ ದೂರದಾಚೆ ನೋಡಲು, ತನ್ನನ್ನು ವಿಕಸನಗೊಳಿಸಿಕೊಳ್ಳಲು ಬಯಸುವನು; ನಾವು ಪ್ರಗತಿ, ವಿಕಸನ ಎಂದು ಕರೆಯುವ ಆ ಎಲ್ಲವನ್ನೂ ಆ ಒಂದು ಶೋಧ, ಮಾನವನ ಗುರಿಯ ಶೋಧನೆ, ಭಗವಂತನ ಶೋಧನೆಯಿಂದ ಯಾವಾಗಲೂ ಅಳೆಯಲಾಗಿದೆ.

ನಮ್ಮ ಸಾಮಾಜಿಕ ಹೋರಾಟಗಳು ವಿಭಿನ್ನ ರಾಷ್ಟ್ರಗಳಲ್ಲಿ ವಿಭಿನ್ನ ಸಾಮಾಜಿಕ ವ್ಯವಸ್ಥೆಗಳಿಂದ ಪ್ರತಿನಿಧಿತವಾಗಿರುವಂತೆ, ಹಾಗೆಯೇ ಮನುಷ್ಯನ ಪಾರಮಾರ್ಥಿಕ ಹೋರಾಟವು ವಿವಿಧ ಧರ್ಮಗಳಿಂದ ಪ್ರತಿನಿಧಿತವಾಗಿದೆ; ಹೇಗೆ ವಿಭಿನ್ನ ಸಾಮಾಜಿಕ ವ್ಯವಸ್ಥೆಗಳು ತಮ್ಮ ತಮ್ಮಲ್ಲೇ ಎಡೆಬಿಡದೆ ಜಗಳಾಡುತ್ತಿರುವವೋ, ಒಂದರೊಡನೆ ಮತ್ತೊಂದು ಯುದ್ಧದಲ್ಲಿರುವವೋ ಹಾಗೆಯೇ ಈ ಪಾರಮಾರ್ಥಿಕ ವ್ಯವಸ್ಥೆಗಳೂ ಒಂದೇ ಸಮನೆ ಒಂದರೊಡನೆ ಮತ್ತೊಂದು ಯುದ್ಧ ನಡೆಸುತ್ತಾ, ಎಡೆಬಿಡದೆ ಜಗಳವಾಡುತ್ತಿರುವವು. ಒಂದು ವಿಶಿಷ್ಟ ಸಮಾಜ ವ್ಯವಸ್ಥೆಗೆ ಸೇರಿದ ಮನುಷ್ಯರು ಜೀವಿಸುವ ಹಕ್ಕು ತಮಗೆ ಮಾತ್ರ ಸೇರಿದೆ ಎಂದು ಸಾಧಿಸುವರು; ಅವರಿಗೆ ಎಲ್ಲಿಯವರೆಗೆ ಸಾಧ್ಯವೋ ಅಲ್ಲಿಯವರೆಗೂ ಬಲಹೀನವಾದವರಿಗೆ ಹಾನಿ ಬರುವಂತೆ, ಆ ತಮ್ಮ ಹಕ್ಕನ್ನು ಚಲಾಯಿಸುವರು. ಈ ಸದ್ಯಕ್ಕೆ (1900) ಇದೇ ತೆರನ ತೀವ್ರ ಹೋರಾಟವೊಂದು ದಕ್ಷಿಣ ಆಫ್ರಿಕದಲ್ಲಿ ನಡೆಯುತ್ತಿರುವದು ನಮಗೆ ಗೊತ್ತು. ಅದೇ ರೀತಿ, ಪ್ರತಿಯೊಂದು ಧಾರ್ಮಿಕ ಪಂಗಡವೂ ತನ್ನ ಇರುವಿಕೆಗೆ ಪ್ರತ್ಯೇಕವಾದ, ಏಕಮಾತ್ರ ಹಕ್ಕನ್ನು ಸಾಧಿಸುತ್ತದೆ. ಮನುಷ್ಯನಿಗೆ ಅನುಗ್ರಹವನ್ನು ತರುವದು ಧರ್ಮವನ್ನು ಬಿಟ್ಟರೆ ಬೇರೆ ಯಾವದೂ ಇಲ್ಲವೆಂದು ನಾವು ಕಂಡಿದ್ದೇವೆ, ಆದರೂ ಸಹ ಅದೇ ಕಾಲಕ್ಕೆ ಧರ್ಮಕ್ಕಿಂತ, ಹೆಚ್ಚಿನ ಭೀಕರತೆಯನ್ನು ತಂದಿರುವದು ಬೇರೆ ಯಾವದೂ ಇಲ್ಲ. ಶಾಂತಿಗೆ, ಪ್ರೀತಿಗೆ, ಧರ್ಮಕ್ಕಿಂತ ಹೆಚ್ಚಿನದನ್ನು ಯಾವದೂ ಮಾಡಿಲ್ಲ; ಧರ್ಮಕ್ಕಿಂತ ಹೆಚ್ಚಾಗಿ ಯಾವದೂ

ತೀವ್ರತರವಾದ ದ್ವೇಷವನ್ನು ಹುಟ್ಟುಹಾಕಿಲ್ಲ. ಮನುಷ್ಯನ ಸೋದರತ್ವವನ್ನು ಧರ್ಮಕ್ಕಿಂತ ಹೆಚ್ಚು ನಿಷ್ಕೃಷ್ಟವಾಗಿ ಮಾಡಿರುವದು ಯಾವದೂ ಇಲ್ಲ; ಮನುಷ್ಯ ಮನುಷ್ಯನ ನಡುವೆ ಹೆಚ್ಚು ಕಹಿತರವಾದ ಶತೃತ್ವವನ್ನು ಧರ್ಮಕ್ಕಿಂತ ಬೇರೆಯಾವದೂ ಬೆಳೆಸಿಲ್ಲ. ಮಾನವರಿಗಾಗಿ, ಪ್ರಾಣಿಗಳಿಗೆ ಕೂಡ, ಹೆಚ್ಚು ಧರ್ಮಾರ್ಥ ಸಂಸ್ಥೆಗಳನ್ನು, ಹೆಚ್ಚು ಆಸ್ಪತ್ರೆಗಳನ್ನು ಧರ್ಮದಷ್ಟು ಯಾವದೂ ಕಟ್ಟಲಿಲ್ಲ; ಪ್ರಪಂಚದಲ್ಲಿ ರಕ್ತ ಅತಿಯಾಗಿ ಹರಿಸಿರುವದು ಧರ್ಮಕ್ಕಿಂತ ಹೆಚ್ಚು ಯಾವದೂ ಇಲ್ಲ. ಅದೇ ಕಾಲಕ್ಕೆ ಚಿಂತನೆಯ ಒಳಹರಿವು ಯಾವಾಗಲೂ ಇರುವುದೆಂದು ನಮಗೆ ಗೊತ್ತಿದೆ; ಮಾನವರ ಪಕ್ಷಗಳು, ತತ್ತ್ವಶಾಸ್ತ್ರಜ್ಞರು, ಮತ್ತು ತುಲನಾತ್ಮಕ ಧರ್ಮದ ವಿದ್ಯಾರ್ಥಿಗಳು ಯಾವಾಗಲೂ ಇದ್ದಾರೆ. ಇವರು ಈ ಎಲ್ಲ ಕಲಹಪ್ರಿಯ, ಹೊಂದಾಣಿಕೆಯಿಲ್ಲದ ಪಂಥಗಳ ಮಧ್ಯದಲ್ಲಿ ಸೌಹಾರ್ದವನ್ನು ತರಲು ಪ್ರಯತ್ನಿಸಿದರು, ಪ್ರಯತ್ನಿಸುತ್ತಲೂ ಇದ್ದಾರೆ. ಕೆಲವೊಂದು ದೇಶಗಳ ವಿಷಯದಲ್ಲಿ ಈ ಪ್ರಯತ್ನಗಳು ಜಯಶೀಲವಾಗಿವೆ, ಆದರೆ ಇಡಿಯ ಪ್ರಪಂಚದ ವಿಷಯದಲ್ಲಿ ಅವು ಸೋತಿವೆ.

ನಮಗೆ ಅತ್ಯಂತ ಪುರಾತನವಾದ ಕೆಲವು ಧರ್ಮಗಳಿವೆ; ಎಲ್ಲ ಪಂಗಡಗಳೂ ಜೀವಿಸಲು ಬಿಡಬೇಕು, ಪ್ರತಿಯೊಂದು ಪಂಗಡಕ್ಕೂ ಒಂದು ಅರ್ಥ, ಮಹತ್ವದ ಭಾವನೆ ಅದರಲ್ಲೇ ಹೊಕ್ಕಿರುವಂತಿದೆ; ಆದುದರಿಂದ ಪ್ರಪಂಚದ ಒಳಿತಿಗಾಗಿ ಅವುಗಳಿಗೆ ಸಹಾಯ ಮಾಡುವದು ಅವಶ್ಯಕ ಎಂಬ ಭಾವನೆಗಳು ಈ ಧರ್ಮಗಳಲ್ಲಿ ತುಂಬಿವೆ. ಆಧುನಿಕ ಕಾಲಗಳಲ್ಲೂ ಇದೇ ಭಾವನೆ ಪ್ರಚಲಿತವಾಗಿದೆ, ಮತ್ತು ಕಾಲದಿಂದ ಕಾಲಕ್ಕೆ ಅವುಗಳನ್ನು ಆಚರಣೆಗೆ ತರುವ ಪ್ರಯತ್ನಗಳು ನಡೆದಿವೆ. ಈ ಪ್ರಯತ್ನಗಳು ಯಾವಾಗಲೂ ನಮ್ಮ ನಿರೀಕ್ಷೆಗಳಿಗೆ ಅನುಗುಣವಾಗಿ, ಬೇಕಾಗಿರುವ ದಕ್ಷತೆಯಿಂದ, ಬರುವದಿಲ್ಲ. ಇಲ್ಲ,– ನಮ್ಮ ಅತಿ ಹೆಚ್ಚಿನ ನಿರಾಶೆಯೆಂದರೆ, ನಾವು ಇನ್ನೂ ಹೆಚ್ಚಾಗಿ ಜಗಳವಾಡುತ್ತಿರುವೆವು ಎಂದು ಕೆಲವು ಕಾಲ ಕಾಣುತ್ತಿದ್ದೇವೆ.

ಈಗ, ಔದ್ಧತ್ಯದ ಅಧ್ಯಯನವನ್ನು ಪಕ್ಕಕ್ಕಿಟ್ಟು, ವ್ಯಾವಹಾರಿಕ ದೃಷ್ಟಿಯನ್ನು ತೆಗೆದುಕೊಂಡರೆ, ಪ್ರಪಂಚದ ಎಲ್ಲಾ ಮಹಾಧರ್ಮಗಳಲ್ಲೂ ಮಹತ್ತರವಾದ ಜೀವ–ಶಕ್ತಿ ಇದೆ ಎನ್ನುವದನ್ನು ಪ್ರಾರಂಭದಲ್ಲೇ ಕಾಣುತ್ತೇವೆ. ಕೆಲವರು ಈ ವಿಷಯದಲ್ಲಿ ಅಜ್ಞರು ಎಂದು ಹೇಳಬಹುದು, ಆದರೆ ಅಜ್ಞಾನವು ವಿನಾಯಿತಿಯಾಗಲಾರದು. "ಈ ಹೊರ ಪ್ರಪಂಚದಲ್ಲಿ ಏನಾಗುತ್ತಿದೆಯೆಂದು ನನಗೆ ತಿಳಿಯದು, ಆದುದರಿಂದ ಹೊರ ಪ್ರಪಂಚದಲ್ಲಿ ನಡೆಯುತ್ತಿರುವದೆಲ್ಲಾ ಅಸ್ತಿತ್ವದಲ್ಲಿಲ್ಲ" ಎಂದು ಒಬ್ಬ ಮನುಷ್ಯನು ಹೇಳಿದರೆ, ಆ ಮನುಷ್ಯನು ಕ್ಷಮಾರ್ಹನಲ್ಲ. ಈಗ, ಪ್ರಪಂಚದಾದ್ಯಂತ ಚಲನೆಯಲ್ಲಿರುವ ಧರ್ಮ ಚಿಂತನೆಗಳನ್ನು ಗಮನಿಸಿರುವವರು, ಒಂದೇ ಒಂದು ದೊಡ್ಡ ಧರ್ಮವೂ ನಶಿಸಿ ಹೋಗಿಲ್ಲ ಎನ್ನುವದನ್ನು ಪೂರ್ಣವಾಗಿ ತಿಳಿದಿರುವವರು; ಹಾಗೆ ಅಷ್ಟೇ ಅಲ್ಲ, ಅದರಲ್ಲಿ ಪ್ರತಿಯೊಂದೂ ಪ್ರಗತಿಯಾಗುತ್ತಿದೆ. ಕ್ರಿಶ್ಚಿಯನ್ನರು ಬಹುಸಂಖ್ಯಾಕರಾಗುತ್ತಿದಾರೆ, ಮಹಮ್ಮದೀಯರು ಬಹು ಸಂಖ್ಯಾಕರಾಗುತ್ತಿದ್ದಾರೆ, ಹಿಂದೂಗಳು ವೃದ್ಧಿಹೊಂದುತ್ತಿದ್ದಾರೆ, ಯಹೂದ್ಯರು ಹೆಚ್ಚಾಗುತ್ತಿದ್ದಾರೆ, ಮತ್ತು ಅವರು ಪ್ರಪಂಚದಲ್ಲೆಲ್ಲಾ ಹರಡಿಕೊಂಡು ಶೀಘ್ರವಾಗಿ ಬಹುವಾಗುತ್ತಿರುವದರಿಂದ ಯಹೂದ್ಯ ಮತವು ಒಂದೇ ಸಮನೆ ವಿಸ್ತಾರವಾಗುತ್ತಿದೆ.

ಪ್ರಪಂಚದ ಒಂದೇ ಒಂದು ಧರ್ಮವು– ಪ್ರಾಚೀನವಾದ, ಮಹಾಧರ್ಮ ನಶಿಸಿ ಹೋಗಿದೆ, ಅದು ಸೋರೋ ಆಸ್ಟ್ರಿಯನ್ (ಜರತುಷ್ಟ್ರ ಮತವು,) ಪ್ರಾಚೀನ ಪಾರಸೀಕರ ಧರ್ಮ. ಮಹಮ್ಮದೀಯರ ಅಧೀನತೆಗೆ ಪರ್ಷಿಯಾ ಬಂದಾಗ ಇಲ್ಲಿಯ ಸುಮಾರು ನೂರು ಸಾವಿರ ಜನಗಳು ಭಾರತಕ್ಕೆ ಬಂದು ಆಶ್ರಯ ಪಡೆದರು, ಕೆಲವರು ಪ್ರಾಚೀನ ಪರ್ಷಿಯಾದಲ್ಲಿ ಉಳಿದರು. ಹೀಗೆ ಉಳಿದವರು ಮಹಮ್ಮದೀಯರ ಎಡೆಬಿಡದ ಹಿಂಸಾತ್ಮಕ ಪೀಡೆಯಿಂದ ಕುಗ್ಗಿಹೋಗಿ ಈಗ ಬಹಳವೆಂದರೆ ಹತ್ತು ಸಾವಿರವಿದ್ದಾರೆ; ಭಾರತದಲ್ಲಿ ಅವರು ಸುಮಾರು ಎಂಭತ್ತು ಸಾವಿರವಿದ್ದಾರೆ, ಆದರೆ ಅವರು ವೃದ್ಧಿಯಾಗುತ್ತಿಲ್ಲ. ಸಹಜವಾಗಿ, ಇಲ್ಲೊಂದು ಪ್ರಾರಂಭದ ತೊಡಕಿದೆ; ಅವರು ಇತರರನ್ನು ತಮ್ಮ ಧರ್ಮಕ್ಕೆ ಪರಿವರ್ತನೆ ಮಾಡುವದಿಲ್ಲ. ಅದರ ಜೊತೆಗೆ ಭಾರತದಲ್ಲಿ ವಾಸಿಸುವ ಈ ಕೈ ತುಂಬುವಷ್ಟು ಜನರು, ತಮ್ಮ ಹಾನಿಕರವಾದ ರಕ್ತಸಂಬಂಧಿ ಮದುವೆಗಳಿಂದಾಗಿ ಸಂತಾನವೃದ್ಧಿಯಾಗುವದಿಲ್ಲ. ಇದೊಂದು ಏಕೈಕ ವಿನಾಯಿತಿಯನ್ನು ಬಿಟ್ಟರೆ, ಉಳಿದ ಎಲ್ಲ ದೊಡ್ಡ ಧರ್ಮಗಳೂ ಜೀವಂತವಾಗಿವೆ, ಹರಡಿಕೊಳ್ಳುತ್ತಿವೆ ಮತ್ತು ವೃದ್ಧಿಯಾಗುತ್ತಿವೆ. ಪ್ರಪಂಚದ ಎಲ್ಲಾ ದೊಡ್ಡ ಧರ್ಮಗಳೂ ಬಹಳ ಪುರಾತನವಾದವು, ಒಂದೂ ಸಹಿತ ವರ್ತಮಾನಕಾಲದಲ್ಲಿ ಸ್ಥಾಪಿತವಾದದ್ದಲ್ಲ ಮತ್ತು ಪ್ರಪಂಚದ ಪ್ರತಿಯೊಂದು ಧರ್ಮವೂ ಗಂಗೆ ಮತ್ತು ಯೂಫ್ರಟಿಸ್ ನಡುವಣ ದೇಶಗಳಲ್ಲಿ ತನ್ನ ಉಗಮವನ್ನು ಹೊಂದಿದೆ; ಒಂದು ದೊಡ್ಡ ಧರ್ಮವೂ ಯೂರೋಪಿನಲ್ಲಿ ಎದ್ದಿಲ್ಲ, ಒಂದೂ ಅಮೆರಿಕದಲ್ಲಿಲ್ಲ, ಒಂದೂ ಇಲ್ಲ; ಪ್ರತಿಯೊಂದು ಧರ್ಮವೂ ಏಷ್ಯ ಮೂಲದ್ದು ಮತ್ತು ಪ್ರಪಂಚದ ಆ ಭಾಗದಲ್ಲಿದೆ, ಎಂಬುದನ್ನು ನೆನಪಿನಲ್ಲಿಡಬೇಕು. ಆಧುನಿಕ ವಿಜ್ಞಾನಿಗಳು ಹೇಳುವದು ನಿಜವಾದರೆ, ಸತ್ತ್ವವುಳ್ಳವು ಉಳಿಯುತ್ತವೆ ಎನ್ನುವದು ಪರೀಕ್ಷೆಯಾದರೆ, ಈ ಧರ್ಮಗಳು ಇನ್ನೂ ಜೀವಂತವಾಗಿರುವದು ಮತ್ತು ಅವುಗಳು ಇನ್ನೂ ಕೆಲವು ಜನಗಳಿಗೆ ಯೋಗ್ಯವಾಗಿವೆ ಎಂಬುದು ಸಾಧಿತವಾಗುತ್ತದೆ. ಅವು ಏಕೆ ಇನ್ನೂ ಜೀವಿಸಬೇಕು ಎನ್ನುವದಕ್ಕೆ ಒಂದು ಕಾರಣವಿದೆ, ಅವು ಅನೇಕರಿಗೆ ಒಳ್ಳೆಯದನ್ನು ತರುತ್ತವೆ. ಮಹಮ್ಮದೀಯರನ್ನು ನೋಡಿ, ಅವರು ಹೇಗೆ ದಕ್ಷಿಣ ಏಷಿಯಾದ ಕೆಲವು ಭಾಗಗಳಲ್ಲಿ ಹರಡಿಕೊಳ್ಳುತ್ತಿದ್ದಾರೆ, ಆಫ್ರಿಕದಲ್ಲಿ ಬೆಂಕಿಯಂತೆ ಹರಡಿಕೊಳ್ಳುತ್ತಿದ್ದಾರೆ. ಬೌದ್ಧರು ಮಧ್ಯ ಏಷ್ಯದ ಎಲ್ಲ ಕಡೆ, ಎಲ್ಲ ಕಾಲದಲ್ಲೂ ಹರಡುತ್ತಿದ್ದಾರೆ. ಹಿಂದೂಗಳು, ಯಹೂದಿಗಳಂತೆಯೇ ಇತರರನ್ನು ಮತಾಂತರಗೊಳಿಸುವದಿಲ್ಲ; ಆದರೂ ಕ್ರಮೇಣವಾಗಿ ಇತರ ಕುಲಗಳು ಹಿಂದೂ ಮತದೊಳಗೆ ಬರುತ್ತಿವೆ, ಮತ್ತು ಹಿಂದೂಗಳ ನಡೆವಳಿ ಮತ್ತು ಪದ್ಧತಿಗಳನ್ನು ಅನುಸರಿಸಿಕೊಂಡು ಅವರ ಸಾಲಿಗೆ ಸೇರುತ್ತಿದ್ದಾರೆ. ನಿಮಗೆಲ್ಲಾ ತಿಳಿದಿರುವಂತೆ, ಕ್ರೈಸ್ತ ಮತವು ಹರಡಿಕೊಳ್ಳುತ್ತಿದೆ. ಆದರೂ ನನಗೆ ಫಲಿತಾಂಶಗಳು ಅವರು ಮುಂದಿಡುವ ಶಕ್ತಿ ಸಾಮರ್ಥ್ಯಕ್ಕೆ ಸಮನಾಗಿದೆ ಎಂಬ ಭರವಸೆಯಿಲ್ಲ. ಕ್ರಿಶ್ಚಿಯನ್ನರ ಪ್ರಚಾರ ಪ್ರಯತ್ನವು ಮಹತ್ತರವಾದ ಒಂದು ಕಳಂಕವನ್ನು ಹೊಂದಿದೆ– ಅದು ಎಲ್ಲ ಪಾಶ್ಚಿಮಾತ್ಯ ಸಂಸ್ಥೆಗಳ ಕುಂದು; ಯಂತ್ರವು ಶೇಕಡಾ ತೊಂಭತ್ತು ಭಾಗದ ಶಕ್ತಿಯನ್ನು ಕಬಳಿಸುತ್ತದೆ. ಅಲ್ಲಿ ಯಂತ್ರ ಭಾಗಗಳು ಅತಿ ಹೆಚ್ಚು. ಏಷ್ಯಾ ಜನರಿಗೆ ಬೋಧನೆಯು ಯಾವಾಗಲೂ ಕರ್ತವ್ಯವಾಗಿದೆ. ಪಾಶ್ಚಿಮಾತ್ಯ ಜನರು ವ್ಯವಸ್ಥೆಗಳಲ್ಲಿ, ಸಾಮಾಜಿಕ ಸಂಸ್ಥೆಗಳಲ್ಲಿ, ಸೈನ್ಯಗಳಲ್ಲಿ, ಸರ್ಕಾರಗಳಲ್ಲಿ ಇತ್ಯಾದಿ– ಮೇಲ್ತರದವರು, ಆದರೆ

ಧರ್ಮೋಪದೇಶಕ್ಕೆ ಬಂದಾಗ, ಅವರು ಏಷಿಯನ್ನರ ಸನಿಹಕ್ಕೆ ಬರಲಾರರು; ಎಲ್ಲ ಕಾಲಕ್ಕೂ ಅದು ಏಷಿಯನ್ನರ ಉದ್ಯೋಗವೆನ್ನಬಹುದು, ಅದನ್ನು ಅವರು ತಿಳಿದಿರುವರು, ಇವನು ಹೆಚ್ಚಾಗಿ ಸಹಾಯಕ ಸಲಕರಣೆಗಳನ್ನು ಉಪಯೋಗಿಸುವದಿಲ್ಲ.

ಇದು ಈಗ ವರ್ತಮಾನ ಕಾಲದ ಮಾನವ ಕುಲದ ಚರಿತ್ರೆಯಲ್ಲಿ ಒಂದು ಸಂಗತಿ,– ಈ ಎಲ್ಲ ದೊಡ್ಡ ಧರ್ಮಗಳು ಇವೆ, ಹರಡುತ್ತಿವೆ ಮತ್ತು ವೃದ್ಧಿಯಾಗುತ್ತಿವೆ. ಖಂಡಿತವಾಗಿಯೂ ಇದಕ್ಕೊಂದು ಅರ್ಥವಿದೆ; 'ಸರ್ವಪ್ರಾಜ್ಞನೂ' ಮತ್ತು 'ಸರ್ವ ಕರುಣಾಶಾಲಿ'ಯೂ ಆದ 'ಸೃಷ್ಟಿಕರ್ತ'ನ ಇಚ್ಛೆಯು ಈ ಧರ್ಮಗಳಲ್ಲಿ ಒಂದು ಇರಬೇಕು, ಉಳಿದವು ನಾಶವಾಗಬೇಕು ಎಂದಿದ್ದರೆ, ಅದು ಹಿಂದೆ, ಬಹಳ ಹಿಂದೆಯೇ ವಾಸ್ತವಾಂಶವಾಗಿರುತ್ತಿತ್ತು. ಈ ಧರ್ಮಗಳಲ್ಲಿ ಒಂದೇ ಒಂದು ಸತ್ಯ, ಉಳಿದವೆಲ್ಲಾ ಸುಳ್ಳು ಎನ್ನುವದು ನಿಜ ಸಂಗತಿಯಾಗಿದ್ದರೆ, ಈ ಹೊತ್ತಿಗೆ ಅದು ಇಡೀ ಭೂಮಿಯನ್ನು ಆವರಿಸಿರುತ್ತಿತ್ತು. ಆದರೆ ಇದು ಹೀಗಿಲ್ಲ; ಒಂದಾದರೂ ಎಲ್ಲ ಭೂಮಿಯನ್ನೂ ಗಳಿಸಿಲ್ಲ. ಎಲ್ಲ ಧರ್ಮಗಳೂ ಕೆಲವೊಮ್ಮೆ ಬೆಳೆಯುತ್ತವೆ, ಕೆಲವು ಕಾಲ ಅವನತಿಯಾಗುತ್ತವೆ. ಈಗ ಇಷ್ಟು ಮಾತ್ರ ಯೋಚಿಸಿ: ನಿಮ್ಮದೇ ಸ್ವಂತ ದೇಶದಲ್ಲಿ ಅರವತ್ತು ದಶಲಕ್ಷಕ್ಕೂ ಹೆಚ್ಚಿನ ಜನರಿದ್ದಾರೆ, ಇಪ್ಪತ್ತೊಂದು ದಶಲಕ್ಷ ಜನರು ಮಾತ್ರವೇ ಎಲ್ಲ ವಿಧದ ಧರ್ಮಗಳನ್ನೂ ತೋರಿಸಿಕೊಳ್ಳುತ್ತಾರೆ. ಅದರಿಂದ ಇದು ಯಾವಾಗಲೂ ಪ್ರಗತಿಯಲ್ಲ. ಬಹುಶಃ ಪ್ರತಿದೇಶದಲ್ಲೂ, ಅಂಕಿಅಂಶಗಳನ್ನು ತೆಗೆದುಕೊಂಡರೆ, ಧರ್ಮಗಳು ಕೆಲವು ಕಾಲಗಳಲ್ಲಿ ಪ್ರಗತಿಯಾಗುತ್ತಿರುತ್ತವೆ, ಮತ್ತೆ ಕೆಲವು ಕಾಲಗಳಲ್ಲಿ ಹಿಂದೆ ಹೋಗುತ್ತಿರುತ್ತವೆ ಎಂಬುದನ್ನು ಕಾಣಬಹುದು. ಕಾಲದುದ್ದಕ್ಕೂ ಪಂಗಡಗಳು ಬಹುಸಂಖ್ಯಾಕವಾಗುತ್ತಿವೆ. ತನ್ನಲ್ಲಿ ಎಲ್ಲ ಸತ್ಯವೂ ಇದೆ, ಭಗವಂತನು ಈ ಎಲ್ಲ ಸತ್ಯವನ್ನೂ ಒಂದು ನಿರ್ದಿಷ್ಟ ಗ್ರಂಥದಲ್ಲಿ ಕೊಟ್ಟಿರುತ್ತಾನೆ ಎಂದು ಧರ್ಮವೊಂದು ಹೇಳಿಕೊಳ್ಳುವದು ನಿಜವಾದರೆ, ಇಷ್ಟು ಅನೇಕ ಪಂಗಡಗಳು ಇರುವದು ಏಕೆ? ಅದೇ ಗ್ರಂಥದ ಆಧಾರದ ಮೇಲೆ, ಐವತ್ತು ವರ್ಷಗಳು ಕಳೆಯುವ ಮೊದಲೇ, ಇಪ್ಪತ್ತಾದರೂ ಪಂಗಡಗಳು ಸ್ಥಾಪಿತವಾಗಿರುತ್ತವೆ. ಭಗವಂತನು ಎಲ್ಲ ಸತ್ಯವನ್ನೂ ಕೆಲವೊಂದು ಗ್ರಂಥಗಳಲ್ಲಿ ಇಟ್ಟಿರುವನೆಂದಾದರೆ, ನಾವು ಅದರ ಗ್ರಂಥಪಾಠ– (ವಚನ, ಪ್ರಕರಣ)ಗಳ ಮೇಲೆ ಜಗಳವಾಡದಿರಲಿ ಎಂದು ಆ ಗ್ರಂಥಗಳನ್ನು ನಮಗೆ ಕೊಡುವದಿಲ್ಲ. ಅದೇ ವಾಸ್ತವಾಂಶ ಎಂದು ತೋರುತ್ತದೆ. ಅದು ಏಕೆ? ಧರ್ಮದ ಬಗ್ಗೆ ಎಲ್ಲ ಸತ್ಯವನ್ನೂ ಒಳಗೊಂಡ ಗ್ರಂಥವೊಂದನ್ನು ಭಗವಂತನು ಕೊಟ್ಟರೂ ಸಹ, ಅದು ಯಾವ ಉದ್ದೇಶವನ್ನೂ ಸಾಧಿಸುವದಿಲ್ಲ, ಏಕೆಂದರೆ ಗ್ರಂಥವನ್ನು ಯಾರೂ ಅರ್ಥಮಾಡಿಕೊಳ್ಳಲಾರರು. ಉದಾಹರಣೆಗೆ, ಬೈಬಲನ್ನು ಮತ್ತು ಕ್ರಿಶ್ಚಿಯನ್ನರಲ್ಲಿರುವ ಎಲ್ಲ ಉಪಮತಗಳನ್ನೂ ತೆಗೆದುಕೊಳ್ಳಿ; ಪ್ರತಿಯೊಂದೂ ಒಂದೇ ಗ್ರಂಥಪಾಠದ ಮೇಲೆ ತನ್ನದೇ ಸ್ವಂತ ವ್ಯಾಖ್ಯಾನವನ್ನು ಕೊಡುತ್ತದೆ ಮತ್ತು ಪ್ರತಿಯೊಂದೂ, ತಾನು ಮಾತ್ರವೇ ಗ್ರಂಥಪಾಠವನ್ನು ಅರ್ಥಮಾಡಿಕೊಳ್ಳುತ್ತದೆ, ಉಳಿದವೆಲ್ಲ ತಪ್ಪು ಎಂದು ಹೇಳುತ್ತದೆ. ಹೀಗೆಯೇ ಪ್ರತಿಯೊಂದು ಧರ್ಮದಲ್ಲಿಯೂ,– ಮಹಮ್ಮದೀಯರಲ್ಲಿ ಅನೇಕ ಪಂಗಡಗಳಿವೆ; ಬೌದ್ಧರಲ್ಲಿವೆ, ಹಿಂದೂಗಳಲ್ಲಿ ನೂರಾರು. ಈಗ ಈ ವಾಸ್ತವಾಂಶಗಳನ್ನು ನಾನು ನಿಮ್ಮ ಮುಂದಿಡುತ್ತಿರುವದು, ಎಲ್ಲ ಮಾನವ ಕುಲವನ್ನೂ ಪಾರಮಾರ್ಥಿಕ ವಿಷಯಗಳಲ್ಲಿ

ಒಂದೇ ವಿಧದ ಚಿಂತನೆಗಳಿಗೆ ತರುವ ಪ್ರಯತ್ನವು ಯಾವಾಗಲೂ ಅಪಜಯವನ್ನಪ್ಪಿದೆ, ಮತ್ತು ಯಾವಾಗಲೂ ಅದಕ್ಕೆ ಅಪಜಯವೇ ಎಂಬುದನ್ನು ತೋರಿಸುವ ಉದ್ದೇಶಕ್ಕಾಗಿ; ಒಂದು ವಿಚಾರಸರಣಿ (ಮತ)ಯನ್ನು ಪ್ರಾರಂಭಿಸುವ ಪ್ರತಿಯೊಬ್ಬನೂ, ವರ್ತಮಾನ ಕಾಲದಲ್ಲಿಯೂ ಕೂಡ, ಅವನು ಅವನ ಅನುಯಾಯಿಗಳಿಂದ ಇಪ್ಪತ್ತು ಮೈಲು ದೂರ ಹೋಗುವದರಲ್ಲಿ ಅವರು ಇಪ್ಪತ್ತು ಪಂಗಡಗಳನ್ನು ಮಾಡಿರುತ್ತಾರೆ. ಇದು ಕಾಲದುದ್ದಕ್ಕೂ ನಡೆಯುತ್ತಿದೆ ಎಂದು ನೀವು ನೋಡುವಿರಿ. ಎಲ್ಲರನ್ನೂ ಒಂದೇ ಭಾವಗಳಿಗೆ ಒಗ್ಗಿಕೊಳ್ಳುವಂತೆ ನೀವು ಮಾಡಲಾರಿರಿ; ಅದು ವಾಸ್ತವ ಸಂಗತಿ,– ನಾನು ಭಗವಂತನನ್ನು ವಂದಿಸುತ್ತೇನೆ, ಅದು ಹಾಗಿದೆ ಎಂದು. ನಾನು ಯಾವ ಪಂಗಡದ ವಿರುದ್ಧವಾಗಿಯೂ ಇಲ್ಲ. ಪಂಗಡಗಳು ಇವೆಯೆಂದು ನಾನು ಸಂತೋಷಪಡುತ್ತೇನೆ, ಅವು ಹೆಚ್ಚು ಹೆಚ್ಚಾಗಿ ಬಹುಸಂಖ್ಯಾಕವಾಗಿ ಹೋಗುತ್ತಾ ಇರಲೆಂದು ನಾನು ಆಶಿಸುತ್ತೇನೆ. ಏಕೆ? ಸರಳವಾಗಿ, ಏಕೆಂದರೆ ಇದು: ನೀವು, ನಾನು ಮತ್ತು ಇಲ್ಲಿರುವ ಎಲ್ಲರೂ ನಿಖರವಾಗಿ ಒಂದೇ ಯೋಚನೆಗಳನ್ನು ಮಾಡುವದಾದರೆ, ನಮಗೆ ಚಿಂತಿಸಲು ಯೋಚನೆಗಳೇ ಇರುವದಿಲ್ಲ. ಚಲನೆಯನ್ನು ಉಂಟುಮಾಡುವದಕ್ಕಾಗಿ ಎರಡು ಅಥವಾ ಹೆಚ್ಚಿನ ಬಲಗಳು ಸಂಘಟನೆಗೆ ಬರಬೇಕೆಂದು ನಮಗೆ ಗೊತ್ತಿದೆ. ಯೋಚನೆಯ ತಾಕಲಾಟ, ಯೋಚನೆಯ ಪ್ರಭೇದವು ಯೋಚನೆಯನ್ನು ಎಚ್ಚರಗೊಳಿಸುತ್ತದೆ. ಈಗ ನಾವೆಲ್ಲರೂ ಒಂದೇ ರೀತಿ ಯೋಚಿಸುವದಾದರೆ, ಸಂಗ್ರಹಾಲಯದಲ್ಲಿ ಒಬ್ಬರು ಮತ್ತೊಬ್ಬರ ಮುಖಗಳನ್ನು ಅರ್ಥಶೂನ್ಯದೃಷ್ಟಿಯಿಂದ ನೋಡುವ ಈಜಿಪ್ಟಿನ ಮಮ್ಮಿಗಳಂತೆ ನಾವೆಲ್ಲರೂ ಇರುತ್ತೇವೆ– ಅದಕ್ಕಿಂತ ಬೇರೇನೂ ಅಲ್ಲ! ಪರಿಭ್ರಮಣಗಳು, ನೀರು ಸುಳಿಗಳು ಕಾಣುವದು ರಭಸದಿಂದ ನುಗ್ಗುವ ಜೀವಂತ ತೊರೆಯಲ್ಲಿ ಮಾತ್ರ. ನಿಂತಲ್ಲಿ ನಿಂತ, ನಿಶ್ಚೇಷ್ಟ ನೀರಿನಲ್ಲಿ ಸುಳಿಗಳಿರುವದಿಲ್ಲ. ಧರ್ಮಗಳು ಜಡವಾದಾಗ, ಇನ್ನು ಯಾವ ಪಂಗಡಗಳೂ ಇರುವದಿಲ್ಲ; ಅದು ಸಮಾಧಿಯ (ಸ್ಮಶಾನ ಶಾಂತಿ, ಮೌನ) ಪೂರ್ಣ ಶಾಂತಿ, ಸಾಮರಸ್ಯ. ಮಾನವಕುಲ ಚಿಂತಿಸುವವರೆಗೆ, ಪಂಗಡಗಳಿರುತ್ತವೆ. ವ್ಯತ್ಯಾಸವು ಜೀವನದ ಸಂಕೇತ; ಮತ್ತು ಅದು ಇರಲೇ ಬೇಕು. ಅವು ಬಹುಸಂಖ್ಯಾಕವಾಗಲಿ ಎಂದು ನಾನು ಪ್ರಾರ್ಥಿಸುತ್ತೇನೆ, ಹಾಗಿದ್ದರೆ ಕಟ್ಟ ಕಡೆಯಲ್ಲಿ ಮಾನವ ಜೀವಿಗಳಷ್ಟೇ ಅನೇಕ ಪಂಗಡಗಳಿರುತ್ತವೆ, ಪ್ರತಿಯೊಂದೂ ತನ್ನದೇ ವಿಧಾನವನ್ನು ಧರ್ಮದಲ್ಲಿ ತನ್ನ ವೈಯಕ್ತಿಕ ತೆರನ ಚಿಂತನೆಯನ್ನು ಹೊಂದಿರುತ್ತದೆ.

ಆದರೆ ಈ ವಿಷಯವು ಆಗಲೇ ಅಸ್ತಿತ್ವದಲ್ಲಿದೆ. ನಮ್ಮಲ್ಲಿ ಪ್ರತಿಯೊಬ್ಬನೂ ತನ್ನ ಸ್ವಂತ ಮಾರ್ಗದಲ್ಲಿ ಯೋಚಿಸುತ್ತಾನೆ, ಆದರೆ ಅವನ ಸಹಜದಾರಿಗೆ ಎಲ್ಲ ಕಾಲಕ್ಕೂ ಅಡ್ಡಿಯಿದೆ, ಮತ್ತು ಈಗಲೂ ಅಡ್ಡಿಯಾಗುತ್ತಲೇ ಇದೆ. ಕತ್ತಿಯನ್ನು ನೇರವಾಗಿ ಉಪಯೋಗಿಸದಿದ್ದರೆ, ಇತರ ಸಾಧನಗಳನ್ನು ಉಪಯೋಗಿಸಲಾಗುವದು. ನ್ಯೂಯಾರ್ಕ್‌ನ ಅತ್ಯುತ್ತಮ ಬೋಧಕರಲ್ಲಿ ಒಬ್ಬಾತನು ಹೇಳುವದನ್ನು ಅಷ್ಟು ಕೇಳಿ; ಫಿಲಿಫೈನ್ಸ್ ಜನರನ್ನು ಅಧೀನಗೊಳಿಸಿಕೊಳ್ಳಬೇಕು, ಏಕೆಂದರೆ ಅವರಿಗೆ ಕ್ರಿಶ್ಚಿಯನ್ ಮತವನ್ನು ಕಲಿಸಲು ಅದೊಂದೇ ಮಾರ್ಗ ಎಂದು ಆತನು ಬೋಧಿಸುವನು! ಅವರು ಆಗಲೇ ಕ್ಯಾಥೊಲಿಕ್‌ರಾಗಿದ್ದಾರೆ, ಅವನು ಅವರನ್ನು ಪ್ರೆಸ್‌ಬಿಟೀರಿಯನ್ (ಸಮಾನ ಪದವಿಯ

ಮಠದ ಹಿರಿಯರು ನಡೆಸುವ ಒಂದು ಕ್ರೈಸ್ತಮತ) ರನ್ನಾಗಿ ಮಾಡಲು ಆಶಿಸುತ್ತಾನೆ, ಮತ್ತು ಇದಕ್ಕಾಗಿ, ಆತನು ಈ ಎಲ್ಲ ಭೀಕರ ರಕ್ತಪಾತದ ಪಾಪವನ್ನು ಅವನ ಕುಲದ ಮೇಲೆ ಹೊರಿಸಲು ಸಿದ್ಧನಾಗಿದ್ದಾನೆ! ಮತ್ತೆ, ಈತನು ಈ ದೇಶದ ಅತಿ ಶ್ರೇಷ್ಠ ಬೋಧಕರಲ್ಲೊಬ್ಬನು, ಅತ್ಯುತ್ತಮ ವಿಷಯ ತಿಳಿದವನು. ಅಂತಹ ಮನುಷ್ಯನೊಬ್ಬನು ಎದ್ದು ನಿಂತು ಈ ತೆರನ ಪೂರಾ ಅವಿವೇಕವನ್ನು ಅರಚಲು ಅವಮಾನವೆನಿಸುವದಿಲ್ಲ ಎಂದರೆ ಪ್ರಪಂಚದ ಸ್ಥಿತಿ ಏನು ಎಂದು ಯೋಚಿಸಿ; ಮತ್ತು ಶ್ರೋತೃವೃಂದ ಅವನಿಗೆ ಜಯಕಾರ ಹೇಳುವರು ಎಂದಾಗ ಪ್ರಪಂಚದ ಸ್ಥಿತಿಯನ್ನು ಚಿಂತಿಸಿ. ಇದು ನಾಗರಿಕತೆಯೇನು? ಇದು ಹುಲಿ, ನರಭಕ್ಷಕ, ಕಾಡು ಮನುಷ್ಯ ಇವುಗಳ ಹಳೆಯ ರಕ್ತಪಿಪಾಸುತನ, ಮತ್ತೊಮ್ಮೆ ಹೊಸ ಹೆಸರುಗಳ, ಹೊಸಸನ್ನಿವೇಶಗಳ ಅಡಿಯಲ್ಲಿ ಬರುತ್ತಿರುವದು. ಇದು ಬೇರೆ ಏನಾಗಬಲ್ಲುದು? ಈಗ ವಸ್ತುಸ್ಥಿತಿ ಹೀಗಿದ್ದರೆ, ಹಿಂದಿನ ಕಾಲಗಳಲ್ಲಿ, ಪ್ರತಿಯೊಂದು ಪಂಥವೂ ತನ್ನ ಅಳವಿನಲ್ಲಿರುವ ಎಲ್ಲ ಸಾಧನಗಳಿಂದಲೂ ಇತರ ಪಂಗಡಗಳನ್ನು ತುಣುಕುತುಣುಕುಗಳನ್ನಾಗಿ ಛೇದಿಸಲು ಪ್ರಯತ್ನಿಸುತ್ತಿದ್ದಾಗ, ಪ್ರಪಂಚವು ಹಾದುಹೋದ ಭಯಂಕರತೆಯ ಭೀತಿಗಳನ್ನು ಯೋಚಿಸಿ. ಚರಿತ್ರೆಯು ಅದನ್ನು ತೋರಿಸುತ್ತದೆ. ನಮ್ಮಲ್ಲಿರುವ ಹುಲಿ ಮಲಗಿದೆ ಮಾತ್ರ, ಅದು ಸತ್ತಿಲ್ಲ. ಅವಕಾಶಗಳು ಬಂದಾಗ, ಹಿಂದಿನಂತೆ, ಅವು ಮೇಲೆ ನೆಗೆದು ಅದರ ಉಗುರುಗಳು, ಚೂಪುಹಲ್ಲುಗಳನ್ನು ಉಪಯೋಗಿಸುತ್ತದೆ. ಕತ್ತಿಯನ್ನು ಬಿಟ್ಟು, ಭೌತಿಕ ಆಯುಧಗಳನ್ನು ಉಳಿದು ಅವುಗಳಿಗಿಂತ ಬೇರೆಯಾಗಿ ಇನ್ನೂ ಹೆಚ್ಚು ಭಯಂಕರವಾದ ಆಯುಧಗಳಿವೆ– ತಿರಸ್ಕಾರ, ಸಮಾಜ ದ್ವೇಷ, ಮತ್ತು ಸಾಮಾಜಿಕ ಬಹಿಷ್ಕಾರ. ಈಗ ನಮ್ಮಂತೆಯೇ ನಿಖರವಾಗಿ ಅದೇ ರೀತಿಯಲ್ಲಿ ಚಿಂತಿಸದಿರುವ ವ್ಯಕ್ತಿಗಳ ವಿರುದ್ಧ ಎಸೆಯುವ ಎಲ್ಲ ಹಿಂಸೆಗಳಲ್ಲಿ ಇವು ಅತ್ಯಂತ ಭೀಕರವಾದವು. ನಮ್ಮಂತೆಯೇ ಪ್ರತಿಯೊಬ್ಬನೂ ಅದೇ ರೀತಿ ಏಕೆ ಯೋಚಿಸಬೇಕು? ನಾನು ಯಾವ ಕಾರಣವನ್ನೂ ಕಾಣುವದಿಲ್ಲ. ನಾನು ವಿವೇಚನೆಯುಳ್ಳವನಾಗಿದ್ದರೆ, ಅವರು ನನ್ನಂತೆಯೇ ಯೋಚಿಸುವದಿಲ್ಲ ಎಂದು ನಾನು ಸಂತೋಷಪಡಬೇಕು. ನಾನು ಸಮಾಧಿಯಂತಹ (ಸ್ಮಶಾನ ಭೂಮಿಯಲ್ಲಿ) ನಾಡಿನಲ್ಲಿ ಜೀವಿಸಲು ಇಷ್ಟಪಡುವದಿಲ್ಲ; ಮನುಷ್ಯರಿರುವ ಪ್ರಪಂಚದಲ್ಲಿ ನಾನೂ ಒಬ್ಬ ಮನುಷ್ಯನಾಗಿರಲು ಇಚ್ಛಿಸುತ್ತೇನೆ. ಚಿಂತನಾ ಜೀವಿಗಳು ಭಿನ್ನವಾಗಿಯೇ ಇರಬೇಕು; ವ್ಯತ್ಯಾಸವೇ ಚಿಂತನೆಯ ಮೊದಲ ಸಂಕೇತ. ನಾನು ಆಲೋಚನಾಸಕ್ತ ಮನುಷ್ಯನಾದರೆ, ಅಭಿಪ್ರಾಯಗಳಲ್ಲಿ ವ್ಯತ್ಯಾಸವಿರುವ ಆಲೋಚನಾಸಕ್ತ ಮನುಷ್ಯರ ಮಧ್ಯದಲ್ಲಿ ಜೀವಿಸಲು ನಾನು ಖಂಡಿತವಾಗಿಯು ಇಷ್ಟಪಡಲೇಬೇಕು.

ಆಗ ಒಂದು ಪ್ರಶ್ನೆ ಏಳುತ್ತದೆ: ಈ ಎಲ್ಲ ವೈವಿಧ್ಯಗಳೂ ಹೇಗೆ ನಿಜವಾಗಿರಬಲ್ಲುವು? ಒಂದು ವಸ್ತುವು ನಿಜವಾದರೆ, ಅದರ ನಿರಾಕರಣವು ಸುಳ್ಳು. ವಿರೋಧಾತ್ಮಕ ಅಭಿಪ್ರಾಯಗಳು ಒಂದೇ ಕಾಲದಲ್ಲಿ ಹೇಗೆ ನಿಜವಾಗಿರಬಲ್ಲುವು? ಉತ್ತರಿಸಲು ನಾನು ಉದ್ದೇಶಿಸಿರುವದು ಈ ಪ್ರಶ್ನೆಯನ್ನು. ಆದರೆ ನಿಮ್ಮನ್ನು ನಾನು ಮೊದಲು ಕೇಳುತ್ತೇನೆ: ಪ್ರಪಂಚದ ಎಲ್ಲ ಧರ್ಮಗಳೂ ನಿಜವಾಗಿಯೂ ವಿರೋಧಾತ್ಮಕಗಳಾಗಿರುವವೇ? ಮಹತ್ವದ ಚಿಂತನೆಗಳನ್ನು ಹೊದ್ದಿರುವ ಹೊರಗಣ ರೂಪಗಳನ್ನು ನಾನು ಮನಸ್ಸಿನಲ್ಲಿಟ್ಟಿಲ್ಲ; ವಿವಿಧ ಧರ್ಮಗಳಲ್ಲಿ ಬಳಸಿರುವ ವಿಭಿನ್ನ ಕಟ್ಟಡಗಳು, ಭಾಷೆಗಳು,

ಆಚರಣೆಗಳು, ಗ್ರಂಥಗಳು ಇತ್ಯಾದಿಗಳನ್ನು ನಾನು ಮನಸ್ಸಿನಲ್ಲಿಟ್ಟಿಲ್ಲ. ಆದರೆ ಪ್ರತಿಯೊಂದು ಧರ್ಮದ ಅಂತರಾತ್ಮವನ್ನು ಕುರಿತು ಹೇಳುತ್ತೇನೆ. ಪ್ರತಿಯೊಂದು ಧರ್ಮವೂ ಅದರ ಹಿಂದೊಂದು ಆತ್ಮವನ್ನು, ಚೈತನ್ಯವನ್ನು ಹೊಂದಿದೆ, ಆ ಆತ್ಮವು ಮತ್ತೊಂದು ಧರ್ಮದ ಆತ್ಮಕ್ಕಿಂತ ಭಿನ್ನವಾಗಿರಬಹುದು, ಆದರೆ ಅವು ವಿರೋಧಾತ್ಮಕವೇ? ಅವು ವಿರೋಧಿಸುವವೋ ಅಥವಾ ಒಂದಕ್ಕೊಂದು ಪೂರಕವೋ?– ಅದು ಪ್ರಶ್ನೆ. ಇನ್ನೂ ಬಾಲಕನಾಗಿದ್ದಾಗ ನಾನು ಈ ಪ್ರಶ್ನೆಯನ್ನು ಕೇಳಿಕೊಂಡೆ; ಅದನ್ನು ನನ್ನ ಜೀವನಾದ್ಯಂತ ಅಧ್ಯಯನ ಮಾಡುತ್ತಿದ್ದೇನೆ. ನನ್ನ ತೀರ್ಮಾನವು ನಿಮಗೆ ಸ್ವಲ್ಪ ಸಹಾಯವಾಗಬಹುದೆಂದು ಯೋಚಿಸಿ, ಅದನ್ನು ನಾನು ನಿಮ್ಮ ಮುಂದಿಡುತ್ತಿದ್ದೇನೆ. ಅವು ವಿರೋಧಾತ್ಮಕಗಳಲ್ಲ ಎಂದು ನಾನು ನಂಬುತ್ತೇನೆ; ಅವು ಸಂಪೂರಕಗಳು. ಪ್ರತಿಯೊಂದು ಧರ್ಮವೂ, ತಾನಿರುವಂತೆ, ಮಹತ್ವದ ವಿಶ್ವವ್ಯಾಪಕ ಸತ್ಯದ ಒಂದು ಭಾಗವನ್ನು ತೆಗೆದುಕೊಂಡು, ಆ ಮಹಾಸತ್ಯದ ಒಂದು ಭಾಗಕ್ಕೆ ಕಾರ್ಯರೂಪವನ್ನು, ಲಕ್ಷಣವನ್ನು ಕೊಡಲು ತನ್ನ ಇಡಿಯ ಶಕ್ತಿಯನ್ನು ಉಪಯೋಗಿಸುತ್ತದೆ. ಆದುದರಿಂದ ಅದು ಹೊರಹಾಕುವದಲ್ಲ, ಸೇರಿಸುವದಲ್ಲ. ಅದು ಒಂದು ಇಲ್ಲಿಯ ಭಾವನೆ. ವ್ಯವಸ್ಥೆಯ ಮೇಲೊಂದು ವ್ಯವಸ್ಥೆ ಉದಯಿಸುತ್ತದೆ, ಪ್ರತಿಯೊಂದೂ ಒಂದು ದೊಡ್ಡ ಭಾವನೆಯನ್ನು ತನ್ನೊಳಕ್ಕೆ ತಂದುಕೊಳ್ಳುತ್ತದೆ. ಮತ್ತು, ಆದರ್ಶಗಳು ಆದರ್ಶಗಳೊಡನೆ ಸೇರಿಕೊಳ್ಳಲೇಬೇಕು. ಇದು ಮಾನವಕುಲದ ಮುನ್ನಡೆ. ಮನುಷ್ಯನು ದೋಷದಿಂದ ಸತ್ಯಕ್ಕೆ ಎಂದೂ ಪ್ರಗತಿಯಾಗುವದಿಲ್ಲ, ಆದರೆ ಸತ್ಯದಿಂದ ಸತ್ಯಕ್ಕೆ, ಸಾಮಾನ್ಯ ಸತ್ಯದಿಂದ ಉನ್ನತಸತ್ಯಕ್ಕೆ– ಆದರೆ ಅದು ಎಂದೂ ದೋಷದಿಂದ ಸತ್ಯಕ್ಕೆ ಬರುವದಲ್ಲ. ಮಗುವು ತಂದೆಗಿಂತ ಹೆಚ್ಚು ಬೆಳೆಯಬಹುದು. ಆದರೆ ತಂದೆಯು ಅವಿವೇಕಿಯಾಗಿದ್ದನೇ? ಮಗುವು ತಂದೆ ಮತ್ತು ಬೇರೆ ಯಾವದೋ ಒಂದು. ನಿಮ್ಮ ಈಗಿನ ಜ್ಞಾನದ ಸ್ಥಿತಿಯು, ನೀವು ಮಗುವಾಗಿದ್ದಾಗಿನದ್ದಕ್ಕಿಂತ ಹೆಚ್ಚು ಮಹತ್ವದ್ದಾಗಿದ್ದರೆ, ನೀವು ಆಗಿನ ಹಂತವನ್ನು ಕೀಳಾಗಿ ಈಗ ನೋಡುವಿರಾ? ಹಿಂದಿರುಗಿ ನೋಡಿ, ಅದನ್ನು ಅವಿವೇಕವೆಂದು ನೀವು ಕರೆಯುವಿರಾ? ಏಕೆ, ನಿಮ್ಮ ಈಗಿನ ಹಂತವು, ಮಗುವಿನ ಜ್ಞಾನ ಮತ್ತು ಯಾವದೋ ಒಂದು ಹೆಚ್ಚಿನದಕ್ಕೆ ಸೇರಿದ್ದು.

ಆಗ, ಮತ್ತೆ, ಒಂದೇ ವಿಷಯದಲ್ಲಿ ಬಹುಮಟ್ಟಿಗೆ ವಿರೋಧಾತ್ಮಕ ದೃಷ್ಟಿಕೋನವಿರಬಹುದೆಂದು ನಮಗೂ ಕೂಡ ಗೊತ್ತಿದೆ, ಆದರೆ ಅವು ಎಲ್ಲವೂ ಒಂದೇ ವಸ್ತುವನ್ನು ಸೂಚಿಸುತ್ತವೆ. ಮನುಷ್ಯನೊಬ್ಬನು ಸೂರ್ಯನ ಕಡೆಗೆ ಪ್ರಯಾಣ ಮಾಡುತ್ತಿರುತ್ತಾನೆ. ಅವನು ಪ್ರಯಾಣವನ್ನು ಮುಂದುವರೆಸಿದಂತೆಲ್ಲಾ ಪ್ರತಿಹಂತದಲ್ಲೂ ಸೂರ್ಯನ ಚಿತ್ರವನ್ನು ತೆಗೆಯುತ್ತಾನೆ ಎಂದುಕೊಳ್ಳೋಣ. ಅವನು ಹಿಂದೆ ಬಂದ ಮೇಲೆ ಅವನಲ್ಲಿ ಸೂರ್ಯನ ಅನೇಕ ಚಿತ್ರಗಳು ಇರುತ್ತವೆ, ಅವನ್ನು ನಮ್ಮ ಮುಂದಿಡುತ್ತಾನೆ. ಅವುಗಳಲ್ಲಿ ಯಾವ ಎರಡೂ ಚಿತ್ರಗಳೂ ಒಂದೇ ರೀತಿ ಇರವುದಿಲ್ಲ ಎಂದು ನಾವು ಕಾಣುತ್ತೇವೆ, ಆದರೂ ಇವೆಲ್ಲವೂ ಅದೇ ಸೂರ್ಯನ ಚಿತ್ರಗಳು, ವಿವಿಧ ದೃಷ್ಟಿಕೋನಗಳಿಂದ, ಎನ್ನುವದನ್ನು ಯಾರು ಅಲ್ಲಗಳೆಯುತ್ತಾರೆ? *(ಮುಂದಿನ ಲೇಖನದಲ್ಲೂ ಈ ಉಪಮಾನವಿದೆ)* ಈ ಚರ್ಚ್‌ನ ನಾಲ್ಕು ಚಿತ್ರಗಳನ್ನು ವಿವಿಧ ಮೂಲೆಗಳಿಂದ ತೆಗೆದುಕೊಳ್ಳಿ; ಅವು ಎಷ್ಟು ಭಿನ್ನವಾಗಿ ಕಾಣುವವು, ಆದಾಗ್ಯೂ ಅವೆಲ್ಲವೂ ಚರ್ಚ್‌ನ್ನು ಪ್ರತಿನಿಧಿಸುತ್ತವೆ.

ಅದೇ ರೀತಿಯಲ್ಲಿ, ನಾವೆಲ್ಲರೂ ಸತ್ಯವನ್ನು ವಿವಿಧ ದೃಷ್ಟಿಕೋನಗಳಿಂದ ನೋಡುತ್ತಿರುತ್ತೇವೆ, ಅವು ನಮ್ಮ ಹುಟ್ಟು, ವಿದ್ಯೆ (ಶಿಕ್ಷಣ), ಪರಿಸರ, ಇತ್ಯಾದಿಗಳಂತೆ ಬದಲಾಗುತ್ತದೆ. ನಾವು ಸತ್ಯವನ್ನು ಈ ಸಂದರ್ಭಗಳು ಎಷ್ಟು ಅವಕಾಶ ಕೊಡುತ್ತವೋ ಅಷ್ಟನ್ನು, ನಮ್ಮ ಸ್ವಂತ ಹೃದಯದಿಂದ ಸತ್ಯಕ್ಕೆ ಬಣ್ಣವನ್ನು ಕೊಡುತ್ತಾ, ನಮ್ಮ ಬುದ್ಧಿಶಕ್ತಿಯಿಂದ ಅರ್ಥಮಾಡಿಕೊಳ್ಳುತ್ತಾ, ಮತ್ತು ನಮ್ಮ ಸ್ವಂತ ಮನಸ್ಸಿನಿಂದ ಅದನ್ನು ಗ್ರಹಿಸುತ್ತಾ ಅವಲೋಕಿಸುತ್ತಿದ್ದೇವೆ. ನಮಗೆ ಎಷ್ಟು ಸಂಬಂಧಪಡುವದೋ, ಅಷ್ಟರ ಮಟ್ಟಿನ ಸತ್ಯವನ್ನು, ನಾವು ಗ್ರಹಿಸಲು ಎಷ್ಟು ಶಕ್ಯವೋ ಅಷ್ಟರ ಮಟ್ಟಿನ ಸತ್ಯವನ್ನು ಮಾತ್ರ ನಾವು ಕಾಣಬಲ್ಲೆವು. ಇದು ಮನುಷ್ಯ ಮತ್ತು ಮನುಷ್ಯನ ನಡುವಿನಲ್ಲಿ ವ್ಯತ್ಯಾಸವನ್ನು ತೋರಿಸುತ್ತದೆ, ಮತ್ತು ಕೆಲವು ಸಮಯಗಳಲ್ಲಿ ವಿರೋಧಾತ್ಮಕ ಭಾವಗಳನ್ನು ಪ್ರೇರಿಸುತ್ತದೆ, ಆದಾಗ್ಯೂ ನಾವೆಲ್ಲರೂ ಒಂದೇ ಮಹಾ ವಿಶ್ವವ್ಯಾಪೀ ಸತ್ಯಕ್ಕೆ ಸೇರಿದವರು.

ಆದುದರಿಂದ, ಈ ಎಲ್ಲ ಧರ್ಮಗಳೂ ಭಗವಂತನ ಆಡಳಿತ ನಿರ್ವಹಣೆಯಲ್ಲಿರುವ ವಿಭಿನ್ನ ಶಕ್ತಿಗಳು, ಮಾನವ ಕುಲದ ಒಳಿತಿಗಾಗಿ ಕೆಲಸ ಮಾಡುವವು ಎನ್ನುವದು ನನ್ನ ಭಾವನೆ; ಮತ್ತು ಯಾರೊಬ್ಬನೂ ಅಚೇತನನಾಗಲಾರನು, ಯಾರೊಬ್ಬನನ್ನೂ ಅಳಿಸಲಾಗದು. ಹೇಗೆ ನೀವು ಪ್ರಕೃತಿಯಲ್ಲಿನ ಯಾವದೇ ಬಲವನ್ನು ನಾಶಮಾಡಲಾರಿರೋ, ಪಾರಮಾರ್ಥಿಕ ಬಲಗಳಲ್ಲಿ ಯಾವದೇ ಒಂದನ್ನೂ ನಾಶಪಡಿಸಲಾರಿರಿ. ಪ್ರತಿಯೊಂದು ಧರ್ಮವೂ ಜೀವಂತವಾಗಿದೆ ಎಂದು ನೀವು ನೋಡಿರುವಿರಿ. ಕಾಲದಿಂದ ಕಾಲಕ್ಕೆ ಅದು ಹಿಮ್ಮೆಟ್ಟಬಹುದು ಅಥವಾ ಮುಂದುವರೆಯಬಹುದು. ಒಂದು ಕಾಲದಲ್ಲಿ, ಅದರ ಉತ್ತಮವಾದ ಅನೇಕ ಅಲಂಕಾರ ಸಜ್ಜುಗಳು ಕತ್ತರಿಸಿರಬಹುದು; ಮತ್ತೊಂದು ಕಾಲದಲ್ಲಿ, ಅದು ಎಲ್ಲ ತೆರನ ಅಲಂಕಾರ ಸಜ್ಜುಗಳಿಂದ ಮಿರುಗುತ್ತಿರಬಹುದು; ಆದರೆ ಎಲ್ಲಾ ಒಂದೇ, ಆತ್ಮವು ಯಾವಾಗಲೂ ಅಲ್ಲಿರುವದು, ಅದನ್ನು ಎಂದೂ ಕಳೆಯಲಾಗದು. ಪ್ರತಿಯೊಂದು ಧರ್ಮವೂ ಪ್ರತಿನಿಧಿಸುವ ಆದರ್ಶವು ಎಂದೆಂದಿಗೂ ನಷ್ಟವಾಗಲಾರದು, ಮತ್ತು ಅದರಂತೆ ಪ್ರತಿಯೊಂದು ಧರ್ಮವೂ ವಿವೇಚನೆಯಿಂದ ಮುಂದುವರೆಯುತ್ತಿದೆ.

ಪ್ರತಿಯೊಂದು ದೇಶದಲ್ಲೂ ತತ್ತ್ವಶಾಸ್ತ್ರಜ್ಞರು ಮತ್ತು ಇತರರು ಕನಸುಕಂಡ ಆ ವಿಶ್ವವ್ಯಾಪಕ ಧರ್ಮವು ಈಗಾಗಲೇ ಅಸ್ತಿತ್ವದಲ್ಲಿದೆ. ಅದು ಇಲ್ಲಿದೆ; ಹೇಗೆ ವಿಶ್ವವ್ಯಾಪೀ ಸೋದರತ್ವವು ಈಗಾಗಲೇ ಅಸ್ತಿತ್ವದಲ್ಲಿರುವದೋ ಹಾಗೆಯೇ ವಿಶ್ವವ್ಯಾಪಕಧರ್ಮವೂ ಇದೆ. ಪ್ರಪಂಚದ ಉದ್ದಗಲಗಳಲ್ಲೂ ಪ್ರಯಾಣ ಮಾಡಿರುವ ನಿಮ್ಮಲ್ಲಿ ಪ್ರತಿಯೊಂದು ರಾಷ್ಟ್ರದಲ್ಲೂ ಸೋದರ, ಸೋದರಿಯರನ್ನು ಕಂಡಿರದವರು ಯಾರು? ನಾನೂ ಅವರನ್ನು ಪ್ರಪಂಚದಾದ್ಯಂತ ಕಂಡಿದ್ದೇನೆ. ಸೋದರತ್ವವು ಈಗಾಗಲೇ ಅಸ್ತಿತ್ವದಲ್ಲಿದೆ; ಆದರೆ, ಇದನ್ನು ಕಾಣಲು ಸೋತು, ನವೀನ ಸೋದರತ್ವಗಳಿಗಾಗಿ ಅಂಗಲಾಚುತ್ತಾ ಅದನ್ನು ಕೇವಲ ಬುಡಮೇಲು ಮಾಡುವ ಅನೇಕರಾದ ಜನರನ್ನು ನಾನು ಕಾಣುತ್ತಿದ್ದೇನೆ. ವಿಶ್ವವ್ಯಾಪಕ ಧರ್ಮವೂ ಸಹಿತ ಈಗಾಗಲೇ ಅಸ್ತಿತ್ವದಲ್ಲಿದೆ. ಪಾದ್ರಿಗಳು ಮತ್ತು ಇತರ ಜನಗಳು ವಿವಿಧ ಧರ್ಮಗಳನ್ನು ಬೋಧನೆಮಾಡುವ ಕಾರ್ಯವನ್ನು ತಮ್ಮ ಮೇಲೆ ಆರೋಪಿಸಿಕೊಂಡಿರುವಾಗ ಕೆಲವು ಕ್ಷಣಗಳು ಬೋಧನೆಯನ್ನು ಸರಳವಾಗಿ ನಿಲ್ಲಿಸಿದರೆ, ಅದು

ಅಲ್ಲಿದೆ ಎಂದು ನೋಡುತ್ತೇವೆ. ಎಲ್ಲ ಕಾಲಕ್ಕೂ ಅವರು ಅದನ್ನು ಕ್ಷೋಭೆಗೊಳಿಸುತ್ತಿರುತ್ತಾರೆ, ಏಕೆಂದರೆ ಅದು ಅವರ ಹಿತಕ್ಕಾಗಿ, ಎಲ್ಲ ದೇಶಗಳಲ್ಲೂ ಪಾದ್ರಿಗಳು ಸಂಪ್ರದಾಯ ನಿಷ್ಠರು, ಎಂದು ನೀವು ನೋಡಿರುತ್ತೀರಿ. ಅದು ಹಾಗೇಕೆ? ಜನರಿಗೆ ಮಾರ್ಗದರ್ಶಕರಾಗಿರುವವರು ಕೆಲವರೇ ಪುರೋಹಿತ/ಪಾದ್ರಿಗಳಿರುವರು; ಅವರಲ್ಲಿ ಅನೇಕರು ಜನರಿಂದಲೇ ಮಾರ್ಗ ಹಿಡಿದು, ಅವರ ಗುಲಾಮರು, ಸೇವಕರಾಗಿರುವರು. ಒಣಗಿದೆ ಎಂದು ಜನ ಹೇಳಿದರೆ, ಅದು ಹಾಗೇ ಎಂದು ಇವರು ಹೇಳುವರು; ಅದು ಕಪ್ಪೆಂದು ನೀವಂದರೆ, ಜನ ಅದನ್ನು ಕಪ್ಪು ಅನ್ನುವರು. ಜನರು ಮುಂದುವರೆದರೆ, ಪಾದ್ರಿಗಳೂ ಮುಂದುವರೆಯಲೇಬೇಕು. ಅವರು ಹಿಂದೆ ಬೀಳಲಾಗದು. ಅದರಿಂದ, ಪಾದ್ರಿಗಳನ್ನು ದೂಷಿಸುವ ಮೊದಲು– ಪಾದ್ರಿಯನ್ನು ದೂಷಿಸುವದು ರೂಢಿಯ ಚಾಳಿಯಾಗಿದೆ– ನೀವು ನಿಮ್ಮನ್ನೇ ದೂಷಿಸಿಕೊಳ್ಳಬೇಕು. ನಿಮ್ಮ ಅರ್ಹತೆ ಏನೋ ಅದನ್ನು ನೀವು ಪಡೆಯುವಿರಿ. ನವೀನ ಮತ್ತು ಅಭಿವೃದ್ಧಿಪರವಾದ ಕಾರ್ಯರಚನೆಗಳನ್ನು ನಿಮಗೆ ಕೊಟ್ಟು ನಿಮ್ಮನ್ನು ಪ್ರಗತಿಗೆ ಕೊಂಡೊಯ್ಯಬೇಕೆನ್ನುವ ಪಾದ್ರಿಯ ಗತಿ ಏನು? ಅವನ ಮಕ್ಕಳು ಬಹುಶಃ ಹೊಟ್ಟೆಗಿಲ್ಲದೆ, ಚಿಂದಿಗಳನ್ನು ತೊಡಬೇಕಾಗಬಹುದು. ಅವನು ನಿಮ್ಮಂತೆಯೇ ಅದೇ ಪ್ರಾಪಂಚಿಕ ನಿಯಮಗಳಿಂದ ಬದ್ಧನಾಗಿರುವನು. 'ನೀವು ಹೋಗುತ್ತಿರುವರಾದರೆ, ನಾವು ಮುಂದೆ ನಡೆಯೋಣ' ಎಂದು ಅವನೆನ್ನುವನು. ಸಹಜವಾಗಿಯೇ, ವಿನಾಯಿತಿ ಇರುವ ಕೆಲವರಿರುತ್ತಾರೆ, ಅವರು ಸಾರ್ವಜನಿಕ ಅಭಿಪ್ರಾಯದಿಂದ ಕುಸಿಯುವರಲ್ಲ. ಅವರು ಸತ್ಯವನ್ನು ನೋಡುವರು, ಸತ್ಯವೊಂದಕ್ಕೇ ಅವರು ಬೆಲೆಕೊಡುವರು. ಸತ್ಯವು ಅವರನ್ನು ಹಿಡಿದಿಡುತ್ತದೆ, ಅವರನ್ನು ವಶಪಡಿಸಿಕೊಂಡಿರುತ್ತದೆ, ಹಾಗಿರುವಂತೆ, ಮತ್ತು ಅವರು ಮುಂದೆ ನಡೆಯಲಾರದೆ ಇರುವಂತಿಲ್ಲ. ಅವರೆಂದೆಂದಿಗೂ ಹಿಂದಿರುಗಿ ನೋಡರು, ಅವರ ಪಾಲಿಗೆ ಜನಗಳೇ ಇರುವದಿಲ್ಲ. ಅವರಿಗೆ ಭಗವಂತನೊಬ್ಬನೇ ಇರುವನು. 'ಅವನು' ಅವರ ಮುಂದಿರುವ 'ಬೆಳಕು', ಅವರು ಆ 'ಬೆಳಕನ್ನು' ಹಿಂಬಾಲಿಸುವರು.

ಈ ದೇಶದಲ್ಲಿ ನಾನೊಬ್ಬ ಮಾರ್ಮನ್ ಎಂಬ ಧರ್ಮಪಂಥದ ಅನುಯಾಯಿಯಾದ ಸಜ್ಜನನನ್ನು ಸಂಧಿಸಿದ್ದೆ, ಅವನು ತನ್ನ ಪಂಥಕ್ಕೆ ನನ್ನನ್ನು ಒಲಿಸಲು ಪ್ರಯತ್ನಿಸಿದನು. ನಾನು ಹೇಳಿದೆನು, "ನಿಮ್ಮ ಅಭಿಪ್ರಾಯಗಳಿಗೆ ನನಗೆ ಬಹಳ ಗೌರವವಿದೆ, ಆದರೆ ಕೆಲವು ನಿರ್ದಿಷ್ಟ ವಿಷಯಗಳನ್ನು ನಾನು ಒಪ್ಪುವದಿಲ್ಲ; ನಾನು ಸಂನ್ಯಾಸ ಪಂಥಕ್ಕೆ ಸೇರಿದವನು, ನೀವು ಬಹುಪತ್ನೀತ್ವದಲ್ಲಿ ನಂಬಿಕೆ ಇರುವವರು– ಆದರೆ, ನೀವೇಕೆ ಬೋಧನೆಗಾಗಿ ಭಾರತಕ್ಕೆ ಹೋಗುವದಿಲ್ಲ?" ಅವನಿಗೆ ಆಶ್ಚರ್ಯವಾಯಿತು, ಅವನು ಹೇಳಿದನು, "ಏಕೆ, ನೀವು ಮದುವೆ ಎಂಬುದನ್ನೇ ನಂಬಿದವರೇ ಅಲ್ಲ, ನಾವು ಬಹು ಪತ್ನೀತ್ವವನ್ನು ನಂಬಿದವರು, ಆದರೂ ನನ್ನನ್ನೇಕೆ ನಿಮ್ಮ ದೇಶಕ್ಕೆ ಹೋಗಲು ಕೇಳುವಿರಿ?" ನಾನು ಹೇಳಿದೆ, "ಹೌದು, ನನ್ನ ದೇಶೀಯರು ಪ್ರತಿಯೊಂದು ಧಾರ್ಮಿಕ ವಿಚಾರವನ್ನೂ, ಅದು ಎಲ್ಲಿಂದಲೇ ಬಂದಿರಲಿ, ಕೇಳುವರು. ನೀವು ಭಾರತಕ್ಕೆ ಹೋಗುವಿರಿ ಎಂದು ನಾನು ಆಶಿಸುತ್ತೇನೆ, ಏಕೆಂದರೆ, ಮೊದಲು ನಾನು ವಿವಿಧ ಪಂಗಡಗಳಲ್ಲಿ ದೊಡ್ಡ ನಂಬಿಕಸ್ಥ. ಎರಡನೆಯದಾಗಿ, ಇರುವ ಯಾವದೇ ಪಂಗಡಗಳಲ್ಲೂ ತೃಪ್ತಿಯೇ ಇಲ್ಲದ ಅನೇಕ ಜನರು ಇಂಡಿಯದಲ್ಲಿರುವರು, ಮತ್ತು ಈ ಅತೃಪ್ತಿಯಿಂದಾಗಿ, ಅವರು

ಧರ್ಮದ ನಂಟನ್ನೇ ಇಟ್ಟುಕೊಂಡವರಲ್ಲ, ಮತ್ತು ನೀವು ಬಹುಶಃ ಅವರಲ್ಲಿ ಕೆಲವರನ್ನು ಪಡೆಯಬಹುದು". ಉಪಮತಗಳ ಸಂಖ್ಯೆಯು ಹೆಚ್ಚಾದಂತೆಲ್ಲಾ, ಜನರು ಧರ್ಮವನ್ನು ಪಡೆಯುವ ಅವಕಾಶವು ಹೆಚ್ಚಾಗಿರುತ್ತದೆ. ಹೋಟೆಲಿನಲ್ಲಿ, ಎಲ್ಲ ತರಹದ ಆಹಾರಗಳೂ ಇರುವಲ್ಲಿ, ಪ್ರತಿಯೊಬ್ಬನಿಗೂ ಅವನ ಹಸಿವನ್ನು ತೃಪ್ತಿಪಡಿಸಿಕೊಳ್ಳುವ ಅವಕಾಶವಿದೆ. ಅದರಿಂದ ಎಲ್ಲ ದೇಶಗಳಲ್ಲೂ ಉಪಮತಗಳು ಬಹುಸಂಖ್ಯಾಕವಾಗಿ ಇರುವದನ್ನು ನಾನು ಅಪೇಕ್ಷಿಸುತ್ತೇನೆ, ಇದರಿಂದ ಹೆಚ್ಚಿನ ಜನರಿಗೆ ಪಾರಮಾರ್ಥಿಕವಾಗಿರುವ ಅವಕಾಶವಿರಬಹುದು. ಜನರು ಧರ್ಮವನ್ನು ಇಷ್ಟಪಡುವದಿಲ್ಲ ಎಂದು ಯೋಚಿಸಬೇಡಿ. ಅದನ್ನು ನಾನು ನಂಬುವದಿಲ್ಲ. ಬೋಧಕರು ಅವರಿಗೆ ಅವಶ್ಯಕವಾದದ್ದನ್ನು ಕೊಡಲಾರರು. ನಾಸ್ತಿಕನೆಂದು, ದೇಹ ಸುಖ ಮಾತ್ರ ಆಶಿಸುವ ಪ್ರಕೃತಿಯವನು ಎಂದೂ ಮುಂತಾಗಿ ನಿಂದೆಗೊಳಗಾದ ಅದೇ ಮನುಷ್ಯನು ಅವನಿಗೆ ಅಗತ್ಯವಾಗಿರುವ ಸತ್ಯವನ್ನು ಕೊಡುವಂತಹ ಮನುಷ್ಯನನ್ನು ಆತ ಸಂಧಿಸಬಹುದು, ಮತ್ತು ಅವನು ಸಮಾನಧರ್ಮಗಳ ಸಮಾಜದಲ್ಲಿ ಅತ್ಯಂತ ಧಾರ್ಮಿಕ ಮನುಷ್ಯನಾಗಿ ತಿರುಗಬಹುದು. ನಾವು ನಮ್ಮದೇ ಆದ ರೀತಿಯಲ್ಲಿ ಆಹಾರ ಸ್ವೀಕರಿಸಬಲ್ಲೆವು. ಉದಾಹರಣೆಗೆ, ನಾವು ಹಿಂದೂಗಳು ಬೆರಳುಗಳಿಂದ ಆಹಾರವನ್ನು ತಿನ್ನುತ್ತೇವೆ. ನಮ್ಮ ಬೆರಳುಗಳು ನಿಮ್ಮಗಳದಕ್ಕಿಂತ ಸುಲಭವಾಗಿ ಬಗ್ಗುವವು, ನೀವು ನಿಮ್ಮ ಬೆರಳುಗಳನ್ನು ಅದೇ ರೀತಿಯಲ್ಲಿ ಉಪಯೋಗಿಸಲಾರಿರಿ. ಆಹಾರವನ್ನು ಬಡಿಸಬೇಕೆಂದಷ್ಟೇ ಅಲ್ಲ, ಆದರೆ ನಿಮ್ಮದೇ ವಿಶಿಷ್ಟ ರೀತಿಯಲ್ಲಿ ಅದನ್ನು ತೆಗೆದುಕೊಳ್ಳಬೇಕು. ನಿಮಗೆ ಪಾರಮಾರ್ಥಿಕ ಭಾವನೆಗಳು ಇರಬೇಕೆಂಬುದಷ್ಟೇ ಅಲ್ಲ, ಆದರೆ ಅವುಗಳು ನಿಮ್ಮದೇ ವಿಧಾನದ ರೀತಿಯಲ್ಲೇ ಬರಲೇಬೇಕು. ಅವರು ನಿಮ್ಮ ಸ್ವಂತ ಭಾಷೆಯನ್ನೇ ಮಾತಾಡಬೇಕು,– ನಿಮ್ಮ ಆತ್ಮದ ಭಾಷೆ,– ಹಾಗಿದ್ದಾಗ ಮಾತ್ರವೇ ಅವರು ನಿಮ್ಮನ್ನು ತೃಪ್ತಿಪಡಿಸುವರು. ನನ್ನ ಭಾಷೆಯನ್ನು ಮಾತನಾಡುವ ಒಬ್ಬಾತನು ಬಂದು ನನ್ನ ಭಾಷೆಯಲ್ಲೇ ಸತ್ಯವನ್ನು ತಿಳಿಯಪಡಿಸಿದರೆ, ಕೂಡಲೇ ನಾನು ಅದನ್ನು ಅರ್ಥ ಮಾಡಿಕೊಂಡು, ಸರ್ವದಾ ಸ್ವೀಕರಿಸುವೆನು. ಅದೇ ಬಹು ಮುಖ್ಯವಾದ ಸತ್ಯಸಂಗತಿ ಆಗಿದೆ.

ಈ ವಿವಿಧ ರೀತಿಯ, ಮಾದರಿಗಳ ಮಾನವ ಮನಸ್ಸುಗಳಿವೆ, ಮತ್ತು ಧರ್ಮಗಳು ಅವುಗಳ ಮೇಲೆ ಯಾವ ರೀತಿ ಒತ್ತಡ ತರುವದು, ಎನ್ನುವದನ್ನು ಇವುಗಳಿಂದ ನಾವು ಕಾಣುತ್ತೇವೆ. ಒಬ್ಬಾತನು ಎರಡು ಅಥವಾ ಮೂರು ಸಿದ್ಧಾಂತಗಳನ್ನು ಮುಂದೆ ತಂದಿಟ್ಟುಕೊಂಡು, ಅವನ ಧರ್ಮವು ಇಡಿಯ ಮಾನವ ಕುಲವನ್ನು ತೃಪ್ತಿ ಪಡಿಸತಕ್ಕದ್ದು ಎಂದು ಸಾಧಿಸುತ್ತಾನೆ. ಅವನು ಸಣ್ಣ ಬೋನೊಂದನ್ನು ಕೈಯಲ್ಲಿ ಹಿಡಿದು, ಭಗವಂತನ ಮೃಗಾಲಯವೆನಿಸುವ ಪ್ರಪಂಚದೊಳಗೆ ಹೋಗುತ್ತಾನೆ; "ಭಗವಂತನಾಗಲೀ, ಆನೆಯಾಗಲೀ ಮತ್ತೆ ಯಾರೇ ಆಗಲೀ ಇದರೊಳಗೆ ಹೋಗಬೇಕು ಎಂದಾಗ, ನಾವು ಆನೆಯನ್ನು ತುಂಡು ತುಂಡಾಗಿ ಕತ್ತರಿಸಿದರೂ ಸರಿಯೇ, ಅದು ಒಳಹೋಗಲೇಬೇಕು" ಎನ್ನುವನು. ಮತ್ತೆ, ಕೆಲವು ಪಂಗಡಗಳಲ್ಲಿ ಉತ್ತಮ ಭಾವನೆ ಇರಬಹುದು. ಅದರ ಅನುಯಾಯಿಗಳು "ಎಲ್ಲ ಮನುಷ್ಯರೂ ಇದರೊಳಗೆ ಬರಲೇಬೇಕು" ಎನ್ನುವರು. "ಆದರೆ ಅಲ್ಲಿ ಅವರಿಗೆ ಸಾಕಷ್ಟು ಸ್ಥಳಾವಕಾಶವಿಲ್ಲ". ಎಂದರೆ, "ಅದನ್ನು ಮನಸ್ಸಿನಲ್ಲೆಂದಿಗೂ ಇಡಬೇಡಿ. ಅವರನ್ನು ತುಂಡುಗಳಾಗಿ ಕತ್ತರಿಸಿ; ಹೇಗಾದರೂ ಅವರನ್ನು

ಒಳಗೆ ತನ್ನಿ; ಅವರು ಒಳಗೆ ಬರದಿದ್ದರೆ,– ಖಂಡಿತ ಅವರು ನರಕಕ್ಕೆ ಹೋಗುವರು" ಎನ್ನುವರು. ನಾನು ಎಂದಾದರೂ ಸಂಧಿಸಿದ ಬೋಧಕನಾಗಲೀ, ಪಂಗಡವಾಗಲೀ, ಅವರು ಹಿಂದೆ ನಿಂತು ಕೇಳುವದಿಲ್ಲ "ಜನಗಳು ನಮ್ಮ ಮಾತನ್ನು ಏಕೆ ಆಲಿಸುವದಿಲ್ಲ," ಎಂದು ಚಿಂತಿಸುವುದಿಲ್ಲ. ಅದರ ಬದಲಿಗೆ, ಅವರು ಜನರನ್ನು ಶಪಿಸಿ, "ಜನಗಳು ಪಾಪಿಗಳು" ಎಂದು ಹೇಳುವರು. ಅವರು ಎಂದೂ ಕೇಳರು: "ಜನಗಳು ನನ್ನ ಮಾತುಗಳನ್ನು ಕೇಳದಿರುವದು ಯಾಕೆ? ಅವರು ಸತ್ಯವನ್ನು ಕಾಣುವಂತೆ ನಾನು ಮಾಡಲಾರೆ ಏಕೆ? ನಾನು ಅವರ ಭಾಷೆಯನ್ನೇ ಮಾತನಾಡಲಾರೆನು ಏಕೆ? ಅವರ ಕಣ್ಣುಗಳನ್ನು ನಾನು ತೆರೆಯಲಾರೆನು ಏಕೆ?" ಖಂಡಿತವಾಗಿಯೂ, ಅವರು ಒಳಿತು ಯಾವುದು ಎಂಬುದನ್ನು ತಿಳಿದಿರಲೇ ಬೇಕು, ಮತ್ತು ಜನಗಳು ತಮ್ಮ ಮಾತನ್ನು ಆಲಿಸುವದಿಲ್ಲವೆಂದು ಕಂಡಾಗ, ಅವರು ಯಾರನ್ನಾದರೂ ಶಪಿಸಬೇಕಾದರೆ ತಮ್ಮಗಳನ್ನು ಮಾತ್ರವೇ. ಆದರೆ, ಅದು ಯಾವಾಗಲೂ ಜನಗಳ ತಪ್ಪೇ? ಅವರ ಪಂಗಡ ಪ್ರತಿಯೊಬ್ಬನನ್ನೂ ತಬ್ಬಿಕೊಂಡು ಸ್ವೀಕರಿಸುವಂತೆ ಸಾಕಷ್ಟು ಉದಾರರಾಗಿರಲು ಅವರು ಎಂದೆಂದಿಗೂ ಪ್ರಯತ್ನ ಮಾಡುವದಿಲ್ಲ.

ಆದುದರಿಂದ, ಏಕೆ ಇಷ್ಟೊಂದು ಸಂಕುಚಿತ ಭಾವನೆಯಿದೆ? ಬಿಡಿಯಾದ ತಾನು ಯಾವಾಗಲೂ ತಾನು ಇಡಿಯೇ ಎಂದು ಸಾಧಿಸುವದು, ಅತಿ ಮಿತಿಯಿಂದ ಕೂಡಿದ ವ್ಯಕ್ತಿ ಅನಂತ ಅಪರಿಮಿತತೆಗಾಗಿ ತನ್ನ ಹಕ್ಕನ್ನು ಪಡೆಯಲು ಮುಂದಿಡುತ್ತಾನೆ, ಎಂಬುದು ಕೂಡಲೇ ಗಮನಕ್ಕೆ ಬರುತ್ತದೆ. ಕೆಲವು ನೂರು ವರ್ಷಗಳಲ್ಲಿ ನಂಬಿಕೆಗೆ ಅರ್ಹವಲ್ಲದ, ಮಾನವ ಮಿದುಳುಗಳಿಂದ ಜನ್ಮತಾಳಿದ ಸಣ್ಣ ಪಂಗಡಗಳು ಭಗವಂತನ ಇಡಿಯ ಅಪರಿಮಿತ ಸತ್ಯದ ಜ್ಞಾನದ ಮೇಲೆ ಸೊಕ್ಕಿನ ಹಕ್ಕು ಸಾಧಿಸುವುದು ಸರಿಯೇ ಯೋಚಿಸಿ! ಆ ಬಗೆಯ ದುರಹಂಕಾರವನ್ನು ಯೋಚಿಸಿ! ಅದು ಏನನ್ನಾದರೂ ತೋರ್ಪಡಿಸಬಹುದಾದರೆ ಅದು ಇದು, ಮಾನವ ಜೀವಿಗಳು ಎಷ್ಟು ದುರಭಿಮಾನಿಗಳು ಎನ್ನುವದು. ಮತ್ತು ಇಂತಹ ಹಕ್ಕು ಸಾಧನೆಗಳೆಲ್ಲಾ ಯಾವಾಗಲೂ ವ್ಯರ್ಥವಾಗಿವೆ, ಮತ್ತು ಭಗವಂತನ ಕರುಣೆಯಿಂದ ಯಾವಾಗಲೂ ಇಂತಹ ಭಾವನೆಗಳು ವ್ಯರ್ಥವಾಗುವದನ್ನು ಮೊದಲೇ ಖಚಿತವಾಗಿ ತಿಳಿಸಲಾಗಿದೆ ಎನ್ನುವದು ಆಶ್ಚರ್ಯವೇನಲ್ಲ. ಈ ವಿಚಾರದಲ್ಲಿ ಮಹಮ್ಮದೀಯರು ಅತ್ಯಂತ ಅನುಕೂಲಸ್ಥರು; ಪ್ರತಿಯೊಂದು ಹೆಜ್ಜೆಯೂ ಕತ್ತಿಯಿಂದಲೇ ಬಂತು, ಒಂದು ಕೈಯಲ್ಲಿ ಕುರಾನ್, ಮತ್ತೊಂದರಲ್ಲಿ ಕತ್ತಿ. "ಕುರಾನ್ ಸ್ವೀಕರಿಸಿ, ಅಥವಾ ನೀವು ಸಾಯಲೇಬೇಕು; ಅವರಿಗೆ ಬೇರೆಯ ದಾರಿಯೇ ಇರಲಿಲ್ಲ!". ಈ ನೀತಿಯಿಂದ ಅವರ ಜಯವು ಎಷ್ಟು ಅದ್ಭುತವಾಗಿತ್ತು ಎಂದು ಚರಿತ್ರೆಯಿಂದ ನೀವು ಅರಿತಿರುವಿರಿ; ಆರುನೂರು ವರ್ಷಗಳಿಂದ ಅವರನ್ನು ತಡೆಯುವ ಶಕ್ತಿ ಯಾವದೂ ಇರಲಿಲ್ಲ, ಮತ್ತು ಅನಂತರ ಅವರು ಸ್ಥಗಿತಗೊಳ್ಳಬೇಕಾದ ಕಾಲವೊಂದು ಬಂದೇಬಿಟ್ಟಿತು. ಇತರ ಧರ್ಮಗಳ ವಿಷಯವೂ ಹೀಗೆಯೇ, ಅವುಗಳೂ ಇದೇ ವಿಧಾನಗಳನ್ನು ಅನುಸರಿಸಿದರೆ. ನಾವು ಅಷ್ಟು ಅನನುಭವಿಗಳು! ಮಾನವ ಸ್ವಭಾವವನ್ನು ನಾವು ಯಾವಾಗಲೂ ಮರೆತಿರುವೆವು ಎಂದು ತಿಳಿಯಬೇಕಾಗುವುದು. ನಾವು ಜೀವನವನ್ನು ಪ್ರಾರಂಭಮಾಡುವಾಗ, ನಮ್ಮ ವಿಧಿಯು ಅಸಾಧಾರಣವಾದ ಯಾವದಾದರೊಂದು ಆಗುವದೆಂದು, ಅದನ್ನು ನಂಬದಿರುವಂತೆ ಮಾಡುವದು ಯಾವದೂ ಇರಲಾರದು ಎಂದು

ಯೋಚಿಸುತ್ತೇವೆ. ನಾವು ವೃದ್ಧರಾದಾಗ ಬೆಳೆದಾಗ, ನಾವು ಬೇರೆಯ ರೀತಿಯೇ ಯೋಚನೆಮಾಡುತ್ತೇವೆ. ಧರ್ಮಗಳ ವಿಷಯವೂ ಹೀಗೆಯೇ. ಒಂದು ಧರ್ಮ ಪ್ರಾರಂಭಿಕ ಹಂತಗಳಲ್ಲಿ, ಅದು ಸ್ವಲ್ಪ ಮಟ್ಟಿಗೆ ಹರಡಿದಾಗ, ಕೇವಲ ಕೆಲವೇ ವರ್ಷಗಳಲ್ಲಿ ಇಡಿಯ ಮಾನವ ಕುಲದ ಮನಸ್ಸುಗಳನ್ನೇ ಬದಲಾಯಿಸಬಲ್ಲನೆಂಬ ಭಾವನೆ ಬರುತ್ತದೆ. ಆದರೆ, ಆ ಧರ್ಮ ಕೊಲ್ಲುತ್ತಾ, ಸಾಮೂಹಿಕ ಹತ್ಯೆ ಮಾಡುತ್ತಾ ಬಲದಿಂದ ಮತಾಂತರವನ್ನು ಮಾಡುತ್ತಿರುತ್ತದೆ; ಅನಂತರ ಅದು ವಿಫಲವಾಗುತ್ತದೆ, ಹೆಚ್ಚು ಅರ್ಥಮಾಡಿಕೊಳ್ಳಲು ಪ್ರಾರಂಭಿಸುತ್ತದೆ. ಈ ಪಂಗಡ ತಾನು ಏನನ್ನು ಮಾಡಲು ಹೊರಟಿತೋ ಅವುಗಳಲ್ಲಿ ಜಯಶೀಲವಾಗಲಿಲ್ಲ ಎನ್ನುವದನ್ನು ನಾವು ಕಾಣುತ್ತೇವೆ; ಅದೊಂದು ದೊಡ್ಡ ಅನುಗ್ರಹವೇ. ಆ ಮತಭ್ರಾಂತ ಪಂಗಡಗಳಲ್ಲಿ ಒಂದಾದರೂ ಪ್ರಪಂಚದಾದ್ಯಂತ ಜಯಶೀಲವಾಗಿದ್ದರೆ, ಈ ದಿನ ಮನುಷ್ಯನೇನಾಗಿರುತ್ತಿದ್ದನು ಎನ್ನುವದನ್ನು ಅಷ್ಟು ಮಾತ್ರ ನೋಡಿ. ಸದ್ಯ, ಅವರು ಜಯಶಾಲಿಗಳಾಗಲಿಲ್ಲವೆಂದು ಭಗವಂತನಲ್ಲಿ ಶ್ರೇಯಃ ಪ್ರಾರ್ಥನೆಮಾಡಿ. ಆದರೂ, ಪ್ರತಿಯೊಂದು ಧರ್ಮವೂ ಮಹಾಸತ್ಯವೊಂದನ್ನು ಪ್ರತಿನಿಧಿಸುತ್ತದೆ; ಪ್ರತಿ ಧರ್ಮವೂ ಒಂದು ವಿಶಿಷ್ಟ ಉತ್ಕೃಷ್ಟತೆಯನ್ನು ಅದರ ಆತ್ಮವೇ ಆಗಿರುವ ಯಾವದಾದರೊಂದನ್ನು– ಪ್ರತಿನಿಧಿಸುತ್ತದೆ. ಹಳೆಯ ಕಥೆಯೊಂದು ನನಗೆ ನೆನಪಾಗುತ್ತದೆ. ಕೆಲವು ನರಭಕ್ಷಕ ರಾಕ್ಷಸರಿದ್ದರು, ಅವರು ಜನರನ್ನು ವಾಡಿಕೆಯಾಗಿ ಕೊಲ್ಲುತ್ತಿದ್ದರು, ಮತ್ತು ಎಲ್ಲ ತೆರನಾದ ಬಾಧೆಯನ್ನೂ ಕೊಡುತ್ತಿದ್ದರು; ಆದರೆ ಅವರನ್ನು ಮಾತ್ರ ಕೊಲ್ಲಲಾಗುತ್ತಿರಲಿಲ್ಲ; ಕೊನೆಗೆ ಯಾರೋ ಒಬ್ಬನು ಅವರ ಪ್ರಾಣಗಳು ಕೆಲವೊಂದು ನಿರ್ದಿಷ್ಟ ಹಕ್ಕಿಗಳಲ್ಲಿವೆ ಎಂದು ಕಂಡುಹಿಡಿದನು, ಹಕ್ಕಿಗಳು ಸುರಕ್ಷಿತವಾಗಿದ್ದಷ್ಟು ಕಾಲವೂ, ರಾಕ್ಷಸರನ್ನು ಯಾವದೂ ಕೊಲ್ಲಲಾಗುತ್ತಿರಲಿಲ್ಲ. ಅದರಂತೆಯೇ, ನಮ್ಮಲ್ಲಿ ಪ್ರತಿಯೊಬ್ಬನೂ ನಮ್ಮ ಪ್ರಾಣವಿರುವ ಇಂತಹ ಹಕ್ಕಿಯನ್ನು, ಹಾಗೆನ್ನುವಂತೆ, ಹೊಂದಿದ್ದಾನೆ; ಒಂದು ಆದರ್ಶವನ್ನು, ಜೀವನ ಧ್ಯೇಯವನ್ನು ಹೊಂದಿದ್ದಾನೆ. ಪ್ರತಿಯೊಬ್ಬ ಮಾನವ ಜೀವಿಯು ಇಂತಹ ಆದರ್ಶ, ಇಂತಹ ಧ್ಯೇಯವನ್ನು ಒಳಕೊಂಡಿರುತ್ತಾನೆ. ನೀವು ಏನನ್ನಾದರೂ ಕಳೆದುಕೊಂಡರೂ, ಆದರ್ಶ ಕಳೆಯದಷ್ಟು ದೂರವೂ, ಆ ಧ್ಯೇಯಕ್ಕೆ ಮುಕ್ಕಾಗದಿರುವವರೆಗೂ, ಯಾವದೂ ನಿಮ್ಮನ್ನು ಕೊಲ್ಲಲಾರದು. ಸಂಪತ್ತು ಬರಬಹುದು ಮತ್ತು ಹೋಗಬಹುದು, ದುರದೃಷ್ಟಗಳು ಬೆಟ್ಟದ ಎತ್ತರಕ್ಕೆ ರಾಶಿಯಾಗಿ ಮುಗಿಬೀಳಬಹುದು. ಆದರೆ ನಿಮ್ಮ ಆದರ್ಶವನ್ನು ನೀವು ಇಡಿಯಾಗಿ ಇಟ್ಟುಕೊಂಡಿದ್ದರೆ, ಯಾವದೂ ನಿಮ್ಮನ್ನು ಕೊಲ್ಲಲಾರದು. ನೀವು ವೃದ್ಧರಾಗಿ ನೂರು ವರ್ಷಗಳ ಕಾಲ ಬಾಳಿದರೂ ಆ ಧ್ಯೇಯ ಹೊಸತಾಗಿದ್ದರೆ, ಮತ್ತು ನಿಮ್ಮ ಹೃದಯವು ಯೌವನಾವಸ್ಥೆಯಲ್ಲಿದ್ದರೆ, ನಿಮ್ಮನ್ನು ಯಾವುದು ತಾನೆ ಕೊಲ್ಲಬಹುದು? ಆದರೆ, ಆದರ್ಶವು ಕಳೆದಾಗ, ಮತ್ತು ಧ್ಯೇಯಕ್ಕೆ ಹಾನಿಯಾಗಿದ್ದರೆ, ಯಾವದೂ ನಿಮ್ಮನ್ನು ರಕ್ಷಿಸಲಾರದು. ಪ್ರಪಂಚದಲ್ಲಿ ಎಲ್ಲ ಸಂಪತ್ತು, ಎಲ್ಲ ಅಧಿಕಾರ ನಿಮ್ಮನ್ನು ರಕ್ಷಿಸುವದಿಲ್ಲ. ರಾಷ್ಟ್ರಗಳೆಂದರೆ ಬಹು ಸಂಖ್ಯಾಕರಾಗಿರುವ ವ್ಯಕ್ತಿಗಳ ಗುಂಪೇ ಅಲ್ಲವೇ? ಹೀಗೆ, ಪ್ರತಿ ರಾಷ್ಟ್ರಕ್ಕೂ ಈ ಕುಲಗಳನ್ನು ಸೌಹಾರ್ದತೆಯಲ್ಲಿ ಮುನ್ನಡೆಸಲು ಬೇಕಾದ ಒಂದು ಧ್ಯೇಯವಿದೆ, ಆ ರಾಷ್ಟ್ರವು ಆ ಆದರ್ಶಕ್ಕೆ ಅಂಟಿರುವವರೆಗೂ ಯಾವ ಶಕ್ತಿಯೇ ಆಗಲಿ ಆ ರಾಷ್ಟ್ರವನ್ನು

ನಾಶಗೊಳಿಸಲಾರದು; ಆದರೆ ಆ ರಾಷ್ಟ್ರವು ತನ್ನ ಜೀವನ ಧ್ಯೇಯವನ್ನು ಬಿಟ್ಟುಕೊಟ್ಟರೆ ಬೇರೆ ಯಾವದರ ಹಿಂದೆಯೋ ಹೋದರೆ, ಅದರ ಜೀವನ ಮೊಟಕಾಗುತ್ತದೆ, ಆ ಧ್ಯೇಯ ಮಾಯವಾಗುತ್ತದೆ.

ಧರ್ಮಗಳ ವಿಷಯವೂ ಹೀಗೆಯೇ. ಈ ಎಲ್ಲ ಪುರಾತನ ಧರ್ಮಗಳೂ ಇವತ್ತೂ ಅಸ್ತಿತ್ವದಲ್ಲಿರುವುದು ಸತ್ಯಸಂಗತಿಯಾಗಿದೆ ಎಂಬುದು ಅವುಗಳು ತಮ್ಮ ಧ್ಯೇಯಗಳನ್ನು ಅಖಂಡವಾಗಿಟ್ಟುಕೊಂಡಿವೆ ಎಂಬುದನ್ನು ಸಿದ್ಧಪಡಿಸುತ್ತದೆ; ಅವುಗಳಲ್ಲಿ ಎಲ್ಲ ತಪ್ಪುಗಳಿದ್ದರೂ, ಎಲ್ಲ ಕಷ್ಟಗಳಿದ್ದರೂ, ಎಲ್ಲ ಜಗಳಗಳಿದ್ದರೂ, ರೂಪಗಳು ಮತ್ತು ಆಕಾರಗಳು ಎಲ್ಲವೂ ಜಡಗಟ್ಟಿದ್ದರೂ, ಅವುಗಳಲ್ಲಿ ಪ್ರತಿಯೊಂದರ ಹೃದಯವೂ ಸ್ವಸ್ಥವಾಗಿದೆ, ಅದು ಮಿಡಿಯುತ್ತಿರುವ, ಬಡಿಯುತ್ತಿರುವ, ಜೀವಂತ ಹೃದಯವಾಗಿದೆ. ಅವುಗಳಲ್ಲಿ ಪ್ರತಿಯೊಂದೂ, ತಾವು ಬಂದಿರುವ ಮಹಾಧ್ಯೇಯವನ್ನು, ಕಳೆದುಕೊಂಡಿಲ್ಲ. ಆ ಧ್ಯೇಯದ ಅಧ್ಯಯನವನ್ನು ಮಾಡುವದು ಅತ್ಯುತ್ಕೃಷ್ಟವಾದುದು. ಮಹಮ್ಮದೀಯ ಮತವನ್ನು ಉದಾಹರಣೆಗೆ ತೆಗೆದುಕೊಳ್ಳಿ. ಕ್ರಿಶ್ಚಿಯನ್ ಜನರು ಮಹಮ್ಮದೀಯ ಮತದಷ್ಟು ಯಾವ ಮತವನ್ನೂ ದ್ವೇಷಿಸುವದಿಲ್ಲ. ಎಂದಾದರೂ ಅಸ್ತಿತ್ವದಲ್ಲಿದ್ದ ಅತ್ಯಂತ ನಿಕೃಷ್ಟರೂಪದ ಧರ್ಮ ಅದು ಎಂದು ಅವರು ಯೋಚಿಸುವರು. ಒಬ್ಬಾತನು ಮಹಮ್ಮದೀಯನಾದ ಕೂಡಲೆ, ಯಾವ ಭೇದವನ್ನೂ ಮಾಡದಂತೆ, ಇಡಿಯ ಇಸ್ಲಾಂ ಮತ ಅವನನ್ನು ತೆರೆದ ತೋಳುಗಳಿಂದ ಸೋದರನೆಂದು ಸ್ವೀಕಾರ ಮಾಡುತ್ತದೆ, ಇದನ್ನು ಬೇರೆ ಯಾವ ಮತವೂ ಮಾಡದು. ಆದರೆ, ನಿಮ್ಮ ಅಮೆರಿಕನ್ ಇಂಡಿಯನ್ನರಲ್ಲೊಬ್ಬನು ಮಹಮ್ಮದೀಯನಾದರೆ, ಅವನೊಡನೆ ಭೋಜನ ಮಾಡಲು ಟರ್ಕಿಯ ಸುಲ್ತಾನನಿಗೆ ಯಾವ ಆಕ್ಷೇಪವೂ ಇರುವದಿಲ್ಲ. ಅವನು ಬುದ್ಧಿವಂತನಾದರೆ, ಯಾವ ಸ್ಥಾನವೂ ಅವನಿಗೆ ನಿರಾಕರಣೆಯಾಗದು. ಈ ದೇಶದಲ್ಲಿ, ಒಬ್ಬ ಬಿಳಿಯ ಮನುಷ್ಯನೂ, ನೀಗ್ರೋ ಪಕ್ಕಪಕ್ಕದಲ್ಲಿ ಪ್ರಾರ್ಥನೆಗಾಗಿ ಮೊಳಕಾಲೂರಿ ಕೂಡುವುದನ್ನು ನಾನು ಇದುವರೆಗೂ ಇನ್ನೂ ನೋಡಿಲ್ಲ. ಅದನ್ನು ಕುರಿತು ಸುಮ್ಮನೆ ಯೋಚಿಸಿ: ಇಸ್ಲಾಂ ತನ್ನ ಅನುಯಾಯಿಗಳೆಲ್ಲರನ್ನೂ ಸಮಾನರಾಗಿ ಮಾಡುತ್ತದೆ,– ಹೀಗೆ ಅದು ಮಹಮ್ಮದೀಯ ಮತದ ವಿಶಿಷ್ಟ ಉತ್ಕೃಷ್ಟತೆ ಎಂದು ನೀವು ನೋಡುವಿರಿ. ಕುರಾನಿನಲ್ಲಿ ಅನೇಕ ಸ್ಥಳಗಳಲ್ಲಿ ವಿಷಯ ಲೋಲುಪತೆಯೇ ಹೆಚ್ಚಾದ ಜೀವನದ ಭಾವನೆಗಳನ್ನು ಉಂಟು ಮಾಡಿರುವುದನ್ನು ನೀವು ಕಾಣುವಿರಿ, ಅದನ್ನೆಂದಿಗೂ ಮನಸ್ಸಿನಲ್ಲಿಡಬೇಡಿ. ತಮ್ಮ ಧರ್ಮಶ್ರದ್ಧೆಗೆ ಸೇರಿರುವ ಎಲ್ಲರನ್ನೂ ಕಾಣುವ ಕಾರ್ಯಶೀಲ ಸೋದರತ್ವವನ್ನು, ಮಹಮ್ಮದೀಯ ಮತವು ಇಡೀ ಪ್ರಪಂಚಕ್ಕೆ ಬೋಧಿಸಲು ಬರುವದು ಮಹಮ್ಮದೀಯ ಧರ್ಮದ ಸಾರಭಾಗವೇ ಇದು; ಮತ್ತು ಸ್ವರ್ಗ, ಜೀವನ ಇತ್ಯಾದಿಗಳ ವಿಷಯದ ಎಲ್ಲ ಇತರ ಭಾವನೆಗಳೂ ಮಹಮ್ಮದೀಯ ಮತದವಲ್ಲ; ಅವು ಸುತ್ತಲೂ ಸೇರಿಕೊಂಡಿರುವವು.

ಹಿಂದೂಗಳಲ್ಲಿ ಒಂದು ರಾಷ್ಟ್ರೀಯ ಭಾವನೆಯನ್ನು– ಪಾರಮಾರ್ಥಿಕತೆ– ನೀವು ಕಾಣುತ್ತೀರಿ. ಪ್ರಪಂಚದ ಇನ್ನು ಯಾವ ಧರ್ಮದಲ್ಲೂ, ಇನ್ನು ಯಾವ ಪವಿತ್ರ ಗ್ರಂಥಗಳಲ್ಲೂ, ಭಗವಂತನ

ಭಾವನೆಯ ವರ್ಣನೆಗೆ ಇಷ್ಟೊಂದು ಶಕ್ತಿಯನ್ನುಪಯೋಗಿಸಿರುವದಿಲ್ಲ ಎಂಬುದನ್ನು ನೀವು ಕಾಣುವಿರಿ. ಯಾವದೇ ಇಹಲೋಕದ ಸ್ಪರ್ಶವೂ ಅದನ್ನು ಮಲಿನಗೊಳಿಸದಂತೆ, ಆತ್ಮದ ಆದರ್ಶಭಾವವನ್ನು ಅವರು ಸ್ಪಷ್ಟಗೊಳಿಸಲು ಪ್ರಯತ್ನಿಸಿದರು. ಚೇತನವು ದೈವಿಕವಾಗಿರಬೇಕು; ಚೇತನ, ಎಂದಾಗ ಚೈತನ್ಯವೇ ಹೊರತು ಅದನ್ನು ಮನುಷ್ಯನನ್ನಾಗಿ ಮಾಡಿರಬಾರದು. ಅದೇ ಏಕತೆಯ ಭಗವಂತನ ಸಾಕ್ಷಾತ್ಕಾರ, ಸರ್ವವ್ಯಾಪಿಯ ಭಾವ ಉದ್ದಕ್ಕೂ ಬೋಧನೆಯಾಗಿದೆ. ಭಗವಂತನು ಸ್ವರ್ಗದಲ್ಲಿರುತ್ತಾನೆ, ಮತ್ತು ಅಂತಹದೆಲ್ಲವನ್ನೂ ಹೇಳುವದು ಅಸಂಬದ್ಧವೆಂದು ಅವರು ಯೋಚಿಸುವರು. ಅದು ಕೇವಲ ಮನುಷ್ಯನಲ್ಲಿ, ಮನುಷ್ಯತ್ವಾರೋಪಣದ ಭಾವ ಎಂದೋ, ಅಸ್ತಿತ್ವದಲ್ಲಿರಬಹುದಾದ ಎಲ್ಲ ಬಗೆಯ ಸ್ವರ್ಗಗಳೂ ಈಗಲೇ, ಇಲ್ಲಿಯೇ ಇವೆ. ಅಪರಿಮಿತ ಕಾಲದ ಒಂದು ಕ್ಷಣವು ಇತರ ಯಾವದೇ ಕ್ಷಣದಷ್ಟೇ ವಿಶುದ್ಧಾಂಗವಾಗಿ ಉತ್ತಮವಾದುದು. ನೀವು ಭಗವಂತನನ್ನು ನಂಬುವಿರಾದರೆ, ಈಗಲೂ ಕೂಡ ನೀವು 'ಅವನನ್ನು' ನೋಡಬಹುದು. ಯಾವದನ್ನಾದರೂ ನೀವು ಸಾಧಿಸಿದಾಗ ಧರ್ಮ ಪ್ರಾರಂಭವಾಗುತ್ತದೆ ಎಂದು ನಾವು ಯೋಚಿಸುತ್ತೇವೆ. ಹಾಗೆಂದರೆ ಸಿದ್ಧಾಂತಗಳಲ್ಲಿ ನಂಬಿಕೆಯಿಡುವದು, ಅಥವಾ ಬೌದ್ಧಿಕವಾಗಿ ಒಪ್ಪಿಗೆಯನ್ನು ನೀಡುವದು, ಅಥವಾ ಘೋಷಣೆಗಳನ್ನು ಮಾಡುವದು ಅಲ್ಲ. ಭಗವಂತನೊಬ್ಬನಿದ್ದಾನೆಂದರೆ, ನೀವು 'ಅವನನ್ನು' ನೋಡಿರುವಿರಾ? ನೀವು 'ಇಲ್ಲ' ಎನ್ನುವಿರಾದರೆ, 'ಅವನ' ಮೇಲೆ ನಂಬಿಕೆ ಇಡಲು ನಿಮಗೆ ಯಾವ ಹಕ್ಕಿದೆ? ಒಬ್ಬ 'ಭಗವಂತ'ನಿದ್ದಾನೆಯೇ ಎಂಬುವದರ ಬಗ್ಗೆ ನಿಮಗೆ ಅನುಮಾನವಿದ್ದರೆ, 'ಅವನನ್ನು' ನೋಡಲು ನೀವು ಏಕೆ ಪ್ರಯಾಸಪಡುವದಿಲ್ಲ? ನೀವು ಪ್ರಪಂಚವನ್ನು ತೊರೆದು, ಅದೊಂದೇ ವಸ್ತುವಿಗಾಗಿ ನಿಮ್ಮ ಇಡೀ ಜೀವನವನ್ನು ಸವೆಸುವದಿಲ್ಲ ಏಕೆ? ತ್ಯಾಗ ಮತ್ತು ಪಾರಮಾರ್ಥಿಕತೆ ಎಂಬ ಇವೆರಡೂ ಭಾರತದ ದೊಡ್ಡ ಪರಿಪೂರ್ಣ ಭಾವಗಳಾಗಿವೆ. ಇಂಡಿಯಾ ಇದಕ್ಕೆ ಅಂಟಿಕೊಂಡಿರುವ ಕಾರಣದಿಂದಲೇ ದೇಶದಲ್ಲಾಗುವ ತಪ್ಪುಗಳೆಲ್ಲಾ ಬಹಳ ಸಣ್ಣವೆಂದು ಪರಿಗಣಿಸಲ್ಪಡುತ್ತವೆ.

ಕ್ರಿಶ್ಚಿಯನ್ನರಲ್ಲೂ, ಅವರು ಬೋಧಿಸುವ ಪ್ರಮುಖ ಭಾವನೆಯೂ ಇದೇ ಆಗಿದೆ: "ಗಮನಿಸು, ಪ್ರಾರ್ಥನೆ ಮಾಡು, 'ಸ್ವರ್ಗ'ದ ಆಧಿಪತ್ಯವು ಇಲ್ಲೇ ಕೈ ಎಟುಕಿನಲ್ಲಿದೆ". ಹಾಗೆಂದರೆ, ನಿಮ್ಮ ಮನಸ್ಸುಗಳನ್ನು ಶುದ್ಧಗೊಳಿಸಿ, ತಯಾರಾಗಿರಿ ಎಂದರ್ಥ! ಆ ಚೈತನ್ಯ ಎಂದಿಗೂ ಸಾಯುವದಿಲ್ಲ. ಗಾಢಾಂಧಕಾರದ ದಿನಗಳಲ್ಲೂ, ಅತ್ಯಂತ ಮೂಢನಂಬಿಕೆಯ ಕ್ರಿಶ್ಚಿಯನ್ ದೇಶಗಳಲ್ಲೂ, ಭಗವಂತನ ಬರುವಿಕೆಗಾಗಿ – ಇತರರಿಗೆ ಸಹಾಯಮಾಡುವದರ ಮೂಲಕ, ಆಸ್ಪತ್ರೆಗಳನ್ನು ಕಟ್ಟುವದು, ಹೀಗೆ ಮತ್ತೂ ಇರುವದರ ಮೂಲಕ, ಕ್ರಿಶ್ಚಿಯನ್ನರು ತಮ್ಮನ್ನು ತಯಾರಿಸಿಕೊಳ್ಳಲು ಯಾವಾಗಲೂ ಪ್ರಯತ್ನಿಸುತ್ತಿರುವದನ್ನು ಸ್ಮರಿಸಿಕೊಳ್ಳಿ. ಕ್ರಿಶ್ಚಿಯನ್ನರು ಆ ಆದರ್ಶವನ್ನು ಉಳಿಸಿಕೊಂಡು ಬರುವವರೆಗೂ ಅವರ ಧರ್ಮ ಜೀವಿಸಿರುತ್ತದೆ.

ಈಗ ಒಂದು ಆದರ್ಶವು ನನ್ನ ಮನಸ್ಸಿನ ಮುಂದೆ ಬರುತ್ತದೆ. ಅದೊಂದು ಬರಿಯ ಕನಸಾಗಿರಬಹುದು. ಅದು ಎಂದಾದರೂ ಈ ಪ್ರಪಂಚದಲ್ಲಿ ಸಾಧಿಸುವದೋ ಎಂಬುದನ್ನೂ ನಾನು ಅರಿಯೆ. ಆದರೆ ಕೆಲವು ಬಾರಿ ಕನಸೊಂದರ ಕನಸು ಕಾಣುವದು, ನಿರ್ವಿವಾದಾಂಶಗಳಿಗಿಂತ

ಮೇಲು. ಕನಸಿನಲ್ಲಾದರೂ ಸಹ, ಅಪ್ರಿಯ ವಾಸ್ತವಾಂಶಗಳಿಗಿಂತ ಮಹಾಸತ್ಯಗಳನ್ನು ಕಾಣುವದು ಒಳ್ಳೆಯದು. ಹೀಗೆ, ನಾವು ಕನಸೊಂದನ್ನು ಕಾಣೋಣ.

ಮನಸ್ಸಿನ ಹಲವಾರು ದರ್ಜೆಗಳಿವೆ ಎಂದು ನೀವು ತಿಳಿದಿರುವಿರಿ. ನೀವು ವಿಷಯಗಳಿಗೆ ತಕ್ಕಂತೆ ಅಷ್ಟರ ಮಟ್ಟಿಗೆ ಮನುಷ್ಯನೋ, ವ್ಯವಹಾರಜ್ಞಾನದ ವಿಚಾರವಾದಿಯೋ ಆಗಿರಬಹುದು; ನೀವು ರೂಪಗಳು ಮತ್ತು ಆಚರಣೆಗಳನ್ನು ಗಮನಿಸುವದಿಲ್ಲ; ನಿಮಗೆ ಬುದ್ಧಿವಂತಿಕೆಯಲ್ಲಿ, ಕಠಿನವಾಗಿ, ಅನುಸರಿಸುವ ವಾಸ್ತವಾಂಶಗಳು ಬೇಕು, ಅವುಗಳು ಮಾತ್ರವೇ ನಿಮ್ಮನ್ನು ತೃಪ್ತಿಪಡಿಸಬಲ್ಲುವು. ಅನಂತರ ಪರಿಶುದ್ಧವಾದಿಗಳು, ಮಹಮ್ಮದೀಯರು ಇರುವರು, ಅವರು ತಮ್ಮ ಪೂಜಾಸ್ಥಾನದಲ್ಲಿ ಚಿತ್ರವನ್ನಾಗಲೀ, ವಿಗ್ರಹವನ್ನಾಗಲೀ ಬರಲು ಬಿಡರು. ಒಳ್ಳೆಯದು. ಆದರೆ, ಅದಕ್ಕಿಂತ ಮಿಗಿಲಾದ ಕಲಾವಿದನಾದ ಮತ್ತೊಬ್ಬನಿರುವನು. ಅವನು ಯಥೇಚ್ಛವಾದ ಕಲೆಯನ್ನು ಇಷ್ಟಪಡುವನು– ನೇರ ಮತ್ತು ಬಾಗು ರೇಖೆಗಳ ಸೌಂದರ್ಯ, ಬಣ್ಣಗಳು, ಹೂವುಗಳು, ಆಕೃತಿಗಳು; ಮೋಂಬತ್ತಿ, ದೀಪಗಳು, ಲಾಂಛನಗಳು; ಮತ್ತು ಮತಾಚರಣೆಯ ಸಾಧನ ಸಾಮಗ್ರಿಗಳು. ಅವನಿಗೆ ಇವುಗಳ ಮೂಲಕ ಭಗವಂತನನ್ನು ಕಾಣಬಹುದೆಂಬ ಅವನಿಗೆ ಆಸೆ ಇದೆ ಅವನ ಮನಸ್ಸು ಆ ರೂಪಾಕೃತಿಗಳಲ್ಲಿ ಭಗವಂತನನ್ನು ಸ್ವೀಕರಿಸುವದು, ಹೇಗೆ ನೀವು ಬುದ್ಧಿಶಕ್ತಿಯಿಂದ 'ಅವನನ್ನು' ಸ್ವೀಕರಿಸುವಿರೋ ಹಾಗೆ. ಅನಂತರ, ಭಗವಂತನಿಗಾಗಿ ಅಂಗಲಾಚುವ ಆತ್ಮವಿರುವ ಭಕ್ತನಿರುವನು; ಭಗವಂತನ ಆರಾಧನೆ ಮತ್ತು 'ಅವನ' ಗುಣಗಾನಕ್ಕಿಂತ ಬೇರೆ ಯಾವ ಭಾವವೂ ಅವನಿಗಿಲ್ಲ. ಮತ್ತೆ ಅನಂತರ, ಇವೆಲ್ಲಕ್ಕೂ ಹೊರಗೆ ನಿಂತು, ಅವುಗಳನ್ನು ಅಣಕವಾಡುವ ತತ್ತ್ವಶಾಸ್ತ್ರಜ್ಞನಿರುವನು. "ಆಹಾ ! ಎಂತಹ ಅವಿವೇಕಿಗಳು ಇವರೆಲ್ಲ ! ಭಗವಂತನ ಕಲ್ಪನೆಗಳು ಏನು ಚೆನ್ನವೋ!"

ಒಬ್ಬರು ಮತ್ತೊಬ್ಬರನ್ನು ಕಂಡು ತಿರಸ್ಕಾರದಿಂದ ನಗಬಹುದು, ಆದರೆ ಪ್ರತಿಯೊಬ್ಬನಿಗೂ ಈ ಪ್ರಪಂಚದಲ್ಲಿ ಸ್ಥಾನವಿದೆ. ಜಗತ್ತಿನಲ್ಲಿ ಈ ಎಲ್ಲ ವಿವಿಧ ಮನಸ್ಸುಗಳು, ಈ ಎಲ್ಲ ವಿವಿಧ ಮಾದರಿಗಳು ಅವಶ್ಯಕವಾಗಿವೆ. ಎಂದಾದರೂ ಒಂದು ಆದರ್ಶ ಧರ್ಮವಿರಬಹುದಾದರೆ, ಅದು ಈ ಎಲ್ಲ ವಿಭಿನ್ನ ಮನಸ್ಸುಗಳಿಗೂ ಭಾವನೆಗಳಿಗೂ ಆಹಾರವನ್ನೊದಗಿಸುವಷ್ಟು ದೊಡ್ಡದೂ, ಉದಾರವೂ ಆಗಿರಬೇಕು. ಅದು ತತ್ತ್ವಜ್ಞಾನಿಗೆ ತತ್ತ್ವದ ಆಹಾರವನ್ನು ನೀಡಬೇಕು, ಭಕ್ತನ ಹೃದಯವನ್ನು ಆರಾಧಕನಿಗೆ ಒದಗಿಸಬೇಕು; ಮತಾಚರಣೆಯ ಶ್ರದ್ಧೆಯವನಿಗೆ, ಅದು ಅತ್ಯಂತ ಆಶ್ಚರ್ಯಕರವಾದ ಸಂಕೇತ ಪದ್ಧತಿಯನ್ನು ತಲುಪಿಸುವ ಎಲ್ಲವನ್ನು ಕೊಡುವದು; ಕವಿಗೆ, ಅವನು ಎಷ್ಟು ಸ್ವೀಕರಿಸಬಲ್ಲನೋ ಅಷ್ಟನ್ನು ಹೃದಯದ ಜೊತೆಗೆ ಇತರ ವಸ್ತುಗಳನ್ನು ಕೊಡುವದು. ಇಷ್ಟು ವಿಶಾಲವಾದ ಧರ್ಮವನ್ನು ಆಚರಿಸಲು, ನಾವು ಧರ್ಮಗಳು ಪ್ರಾರಂಭವಾದ ಕಾಲಕ್ಕೆ ಧರ್ಮಗಳ ಮೂಲಕ್ಕೆ ಹಿಂದೆ ಹೋಗಿ ಅವೆಲ್ಲವನ್ನೂ ಒಳಕೊಳ್ಳಬೇಕಾಗುತ್ತದೆ.

ಆಗ ನಮ್ಮ ಸಂಕೇತ ನುಡಿಯು 'ಸ್ವೀಕಾರ'ವೇ ಹೊರತು 'ಬಹಿಷ್ಕಾರ'ವಲ್ಲ. ಬರಿಯ ಸಹನೆಯುಷ್ಟೇ ಅಲ್ಲ, ಏಕೆಂದರೆ ಈಗ ಹೀಗೆ–ಕರೆಯಲ್ಪಡುವ ಸಹನೆ ಎಂಬುದು ಅನೇಕ ವೇಳೆ ಪಾಷಂಡತನವಾಗಿದೆ, ಅದರಲ್ಲಿ ನನಗೆ ನಂಬಿಕೆ ಇಲ್ಲ. ನಾನು ಸ್ವೀಕಾರದಲ್ಲಿ ನಂಬಿಕೆ ಇಟ್ಟಿದ್ದೇನೆ. ನಾನು ಏಕೆ ಸಹಿಸಬೇಕು? ಸಹನೆ ಎಂದರೆ ಅರ್ಥ– ಎಂದು ನನ್ನ ಯೋಚನೆ. ನೀವು ತಪ್ಪು, ಎಂಬ ನನ್ನ ಯೋಚನೆ ನಾನು ನಿಮ್ಮನ್ನು ಸುಮ್ಮನೆ ಹಾಗೇ ಇರಲು ಬಿಟ್ಟಿದ್ದೇನೆ ಎಂದು. ನೀವು ಮತ್ತು ನಾನು ಒಬ್ಬರನ್ನು ಇನ್ನೊಬ್ಬರು ಜೀವಿಸಲು ಬಿಡುವ ಯೋಚನೆಯು ಪಾಷಂಡತನವಲ್ಲವೇ? ನಾನು ಪುರಾತನ ಧರ್ಮಗಳನ್ನು ಸ್ವೀಕರಿಸುತ್ತೇನೆ, ಅವರೆಲ್ಲರ ಜೊತೆ ಆರಾಧಿಸುತ್ತೇನೆ; ಯಾವದಾದರೂ ರೂಪದಲ್ಲಿ ಅವರು 'ಅವನನ್ನು' ಅರ್ಚಿಸುವಂತೆಯೇ ನಾನು ಭಗವಂತನನ್ನು ಅವರಲ್ಲಿ ಪ್ರತಿಯೊಬ್ಬನೊಡನೆಯೂ ಸೇರಿ ಅರ್ಚಿಸುವೆನು. ನಾನು ಮಹಮ್ಮದೀಯನ ಮಸೀದಿಗೆ ಹೋಗುವೆ; ನಾನು ಕ್ರಿಶ್ಚಿಯನ್ನರ ದೇವ ಮಂದಿರದ ಒಳಗೆ ಹೋಗುತ್ತೇನೆ, ಶಿಲುಬೆಯ ಮುಂದೆ ಮಂಡಿಯೂರುತ್ತೇನೆ; ಬೌದ್ಧರ ಪಗೋಡಗಳಿಗೆ ನಾನು ಹೊಗುವೆನು, ಅಲ್ಲಿ ನಾನು ಬುದ್ಧ ಮತ್ತು ಅವನ 'ನ್ಯಾಯ'ದ ಆಶ್ರಯಪಡೆಯುತ್ತೇನೆ; ನಾನು ಕಾಡಿನೊಳಗೆ ಹೋಗುತ್ತೇನೆ, ಪ್ರತಿಯೊಬ್ಬನ ಹೃದಯವನ್ನು ಬೆಳಗುವ 'ಜ್ಯೋತಿ'ಯನ್ನು ಕಾಣಲು ಪ್ರಯತ್ನಿಸುತ್ತಿರುವ ಹಿಂದೂವಿನ ಜೊತೆ ಕುಳಿತು ಧ್ಯಾನ ಮಾಡುತ್ತೇನೆ.

ಇವಿಷ್ಟನ್ನೂ ನಾನು ಮಾಡುವದಷ್ಟೇ ಅಲ್ಲ, ಮತ್ತೆ ಭವಿಷ್ಯದಲ್ಲಿ ಬರಬಹುದಾದ ಎಲ್ಲಕ್ಕೂ ನನ್ನ ಹೃದಯವನ್ನು ನಾನು ತೆರೆದಿಡುತ್ತೇನೆ. ಭಗವಂತನ ಗ್ರಂಥ ಮುಗಿದಿದೆಯೇ? ಅಥವಾ ಅದು ಇನ್ನೂ ನಡೆಯುತ್ತಿರುವ ನಿರಂತರ ದಿವ್ಯದರ್ಶನವಾಗಿದೆಯೇ? ಹೌದು ! ಅದೊಂದು ಆಶ್ಚರ್ಯಕರವಾದ ಗ್ರಂಥ– ಪ್ರಪಂಚದ ಈ ಪಾರಮಾರ್ಥಿಕ ದಿವ್ಯದರ್ಶನಗಳು– ಬೈಬಲ್, ವೇದಗಳು, ಕುರಾನ್ ಮತ್ತು ಎಲ್ಲ ಇತರ ಪವಿತ್ರ ಗ್ರಂಥಗಳೂ ಕೇವಲ ಇಂತಿಷ್ಟೇ ಪುಟಗಳು ಎಂದಿಲ್ಲ; ಮತ್ತು ಅಪರಿಮಿತ ಸಂಖ್ಯೆಯ ಪುಟಗಳು ಇನ್ನೂ ಮಗುಚಿಹಾಕಲು ಉಳಿದಿವೆ. ಅವೆಲ್ಲವನ್ನೂ ತೆರೆದೇ ಇಡುತ್ತೇನೆ. ನಾವು ವರ್ತಮಾನದಲ್ಲಿ ನಿಂತಿದ್ದೇವೆ. ಆದರೆ ಅಪರಿಮಿತವಾದ ಭವಿಷ್ಯತ್ತಿಗೆ ನಮ್ಮನ್ನು ನಾವು ತೆರೆದುಕೊಂಡಿದ್ದೇವೆ. ಭೂತಕಾಲದಲ್ಲಿ ಆಗಿರುವದನ್ನೆಲ್ಲಾ ನಾವು ಅಂಗೀಕರಿಸುತ್ತೇವೆ, ವರ್ತಮಾನದ ಬೆಳಕಿನಲ್ಲಿ ಸಂತೋಷಿಸುತ್ತೇವೆ, ಭವಿಷ್ಯತ್ತಿನಲ್ಲಿ ಬರುವ ಎಲ್ಲಕ್ಕೂ ಹೃದಯದ ಪ್ರತಿಯೊಂದು ಕಿಟಕಿಯನ್ನು ತೆರೆಯುತ್ತೇವೆ. ಭೂತಕಾಲದ ಎಲ್ಲ ಪ್ರವಾದಿಗಳಿಗೂ ನಮಸ್ಕಾರ, ವರ್ತಮಾನದ ಮಹಿಮಾವಂತರಿಗೆಲ್ಲಾ ಶರಣು ಮತ್ತು ಭವಿಷ್ಯತ್ತಿನಲ್ಲಿ ಬರುವ ಎಲ್ಲರಿಗೂ ನಮನಗಳು.

(ಕ್ಯಾಲಿಫೋರ್ನಿಯಾದ, ಪಸಡೇನಾದ ಯೂನಿವರ್ಸಲಿಸ್ಟ್ ಚರ್ಚ್‌ನಲ್ಲಿ,
28, ಜನವರಿ 1900 ರಲ್ಲಿ ನೀಡಿದ ಉಪನ್ಯಾಸ, ಆಕರ : Bhakti or Devotion
(The Complete works of Swami Vivekananda, Vol-II, P-38)

# 21

# ವಿಶ್ವವ್ಯಾಪಕ ಧರ್ಮವೆಂಬ ಹೆಗ್ಗುರಿ

ವಿಭಿನ್ನ ಮನಗಳ ಮತ್ತು ಮಾರ್ಗಗಳ ಸಮನ್ವಯೀಕರಣ.

ನಮ್ಮ ಇಂದ್ರಿಯಗಳು ಎಲ್ಲೆಲ್ಲಿಗೇ ಆಗಲಿ ಮುಟ್ಟುವವೋ ಅಥವಾ ನಮ್ಮ ಮನಸ್ಸುಗಳು ಏನೇನು ಕಲ್ಪನೆಗಳನ್ನು ಮಾಡುವವೋ ಅಲ್ಲೆಲ್ಲಾ ಎರಡು ಶಕ್ತಿಗಳು-ಕ್ರಿಯೆ ಮತ್ತು ಪ್ರತಿಕ್ರಿಯೆಗಳು, ಒಂದಕ್ಕೊಂದು ಪ್ರತಿಯಾಗಿ ವರ್ತಿಸಿ, ನಾವು ನಮ್ಮ ಸುತ್ತಲೂ ನೋಡುವ ಮತ್ತು ನಾವು ನಮ್ಮ ಮನಸ್ಸುಗಳಲ್ಲಿ ಅನುಭವಿಸುವ, ಮಿಶ್ರವಾದ ಪ್ರಕೃತಿ ಘಟನೆಗಳ ಎಡೆಬಿಡದ ಆಟವನ್ನು ಉಂಟುಮಾಡುತ್ತವೆ, ಎಂಬುದನ್ನು ಕಾಣುತ್ತೇವೆ. ಬಹಿರಂಗ ಪ್ರಪಂಚದಲ್ಲಿ ಈ ಪರಸ್ಪರ ವಿರುದ್ಧ ಶಕ್ತಿಗಳ ಕ್ರಿಯೆಯು ಆಕರ್ಷಣೆ ಮತ್ತು ವಿಕರ್ಷಣೆಯಂತೆ. ಅಥವಾ ಕೇಂದ್ರಾಭಿಮಾನಿ, ಕೇಂದ್ರಾಪಗಾಮಿ ಶಕ್ತಿಗಳಂತೆ ತೋರ್ಪಡಿಸಿಕೊಳ್ಳುತ್ತವೆ; ಅಂತರಂಗದಲ್ಲಿ ಅದು ಪ್ರೀತಿ-ದ್ವೇಷ, ಒಳಿತು-ಕೆಡಕು ಆಗಿದೆ. ನಾವು ಕೆಲವು ವಸ್ತುಗಳನ್ನು ಹಿಮ್ಮೆಟ್ಟಿಸುತ್ತೇವೆ, ಇತರ ವಸ್ತುಗಳನ್ನು ಆಕರ್ಷಿಸುತ್ತೇವೆ. ನಾವು ಒಂದರಿಂದ ಆಕರ್ಷಿತರಾಗುತ್ತೇವೆ, ಮತ್ತೊಂದರಿಂದ ಹಿಮ್ಮೆಟ್ಟಿಸಲ್ಪಡುತ್ತೇವೆ. ನಮ್ಮ ಜೀವನಗಳಲ್ಲಿ ಅನೇಕ ಬಾರಿ ಯಾವ ಕಾರಣವೂ ಇಲ್ಲದೆ, ನಾವು ಇರುವಂತೆಯೇ, ಕೆಲವು ವ್ಯಕ್ತಿಗಳಿಗೆ ಆಕರ್ಷಿತರಾಗುತ್ತೇವೆ; ಇನ್ನು ಕೆಲವು ಬಾರಿ, ಇದೇ ರೀತಿ, ಇತರರಿಂದ ಹಿಮ್ಮೆಟ್ಟುತ್ತೇವೆ. ಇದು ಎಲ್ಲರಿಗೂ ಸ್ಪಷ್ಟವಾಗಿದೆ; ಈ ಕ್ರಿಯಾಕ್ಷೇತ್ರವು ಹೆಚ್ಚು ಇದ್ದಷ್ಟೂ, ಈ ವಿರುದ್ಧ ಬಲಗಳ ಪ್ರಭಾವಗಳು ಹೆಚ್ಚು ಶಕ್ತಿಯುತವೂ, ಹೆಚ್ಚು ಗಮನಾರ್ಹವೂ ಆಗಿರುತ್ತವೆ. ಮಾನವನ ಚಿಂತನೆ ಮತ್ತು ಜೀವನದಲ್ಲಿ ಧರ್ಮವು ಅತ್ಯಂತ ಉನ್ನತವಾದ ಅಂತಸ್ತಿನಲ್ಲಿರುತ್ತದೆ; ಇದರಲ್ಲಿ ಈ ಎರಡು ಬಲಗಳ ಕ್ರಿಯೆಗಳು ಅತ್ಯಂತ ಬಲವಾಗಿರುತ್ತವೆ. ಮಾನವ ಕುಲ ಅರಿತಿರುವ ಅತ್ಯಂತ ಅತಿಶಯ ಪ್ರೀತಿಯು ಧರ್ಮದಿಂದ ಬರುತ್ತದೆ, ಮತ್ತು ಮಾನವ ಕುಲಕ್ಕೆ ಗೊತ್ತಿರುವ ಅತ್ಯಂತ ಪೈಶಾಚಿಕ ದ್ವೇಷವೂ ಧರ್ಮದಿಂದಲೇ ಬರುತ್ತದೆ. ಪ್ರಪಂಚವು ಎಂದಾದರೂ ಕೇಳಿರುವ ಶಾಂತಿಯ ಅತ್ಯಂತ ಶ್ರೇಷ್ಠಪದಗಳು ಧಾರ್ಮಿಕ ಕ್ಷೇತ್ರದಲ್ಲಿರುವ ಮನುಜರಿಂದಲೇ ಬಂದಿವೆ, ಮತ್ತು ಪ್ರಪಂಚವು ಎಂದಾದರೂ ತಿಳಿದಿರುವ ಅತ್ಯಂತ ಕಠೋರ ದೂಷಣೆಯೂ ಧಾರ್ಮಿಕರಾದವರಿಂದಲೇ ಬಂದಿದೆ; ಯಾವದೇ ಧರ್ಮದ ಗುರಿಯು ಹಿರಿದಾದಷ್ಟೂ ಅದರ ವ್ಯವಸ್ಥೆಯು ಸೂಕ್ಷ್ಮವಾಗಿದ್ದಷ್ಟೂ, ಅದರ ಚಟುವಟಿಕೆಗಳೂ ಹೆಚ್ಚು ಗಮನಾರ್ಹವಾಗಿರುತ್ತವೆ. ಧರ್ಮವು ಲೋಕವನ್ನು ರಕ್ತದ ಓಕುಳಿಯಲ್ಲಿ ಮುಳುಗಿಸಿದಂತೆ ಮಾನವನ ಇನ್ನು ಯಾವ ಶಕ್ತಿ ಸಂಘಟನೆಗಳ ಗುರಿಗಳೂ ಮಾಡಿಲ್ಲ; ಅದೇ ಸಮಯದಲ್ಲಿ, ಅನೇಕವಾದ ಇಷ್ಟೊಂದು ಆಸ್ಪತ್ರೆಗಳು ಮತ್ತು ಬಡವರ ಆಶ್ರಯಧಾಮಗಳನ್ನು ನಿರ್ಮಿಸಿರುವಂತೆ, ಮತ್ತು ಕೇವಲ ಮಾನವ ಕುಲದ್ದಷ್ಟೇ ಅಲ್ಲ, ಅತ್ಯಂತ ಕೆಳಗಿನ ಪ್ರಾಣಿವರ್ಗಗಳ ಲಕ್ಷವನ್ನೂ ನೋಡಿಕೊಂಡಂತೆ ಮತ್ತೆ ಯಾವದೂ, ಬೇರೆ ಯಾವ ಮಾನವ ಶಕ್ತಿಯೂ, ಧರ್ಮವು ಮಾಡಿರುವಷ್ಟನ್ನು ಮಾಡಿಲ್ಲ. ಧರ್ಮದ ಹಾಗೆ ನಮ್ಮನ್ನು ಕ್ರೂರಿಗಳನ್ನಾಗಿ ಮತ್ತಾವುದೂ ಮಾಡಿಲ್ಲ,

ಅಂತೆಯೇ, ನಮ್ಮನ್ನು ಧರ್ಮದಂತೆ ಬೇರೆ ಯಾವದೂ ಇಷ್ಟೊಂದು ದಯಾರ್ದ್ರರನ್ನಾಗಿ ಮಾಡಿಲ್ಲ. ಇದು ಹಿಂದೆಯೂ ಹೀಗಿತ್ತು, ಮತ್ತು ಎಲ್ಲ ಭವಿಷ್ಯದಲ್ಲಿಯೂ ಹೀಗೇ ಇರುತ್ತದೆ. ಆದಾಗ್ಯೂ, ಈ ಕೋಲಾಹಲ ಸಂಕ್ಷೋಭೆಗಳ, ಹೋರಾಟ ಹಣಾಹಣಿಗಳ, ಧರ್ಮ–ಪಂಗಡಗಳ ದ್ವೇಷ ಮತ್ತು ಮತ್ಸರಗಳ ನಡುವೆಯಲ್ಲೂ ಕಾಲದಿಂದ ಕಾಲಕ್ಕೆ ಸಮರ್ಥಧ್ವನಿಗಳು ಎದ್ದು ಬಂದಿವೆ– ಎಲ್ಲ ಗದ್ದಲಗಳನ್ನೂ ಅಡಗಿಸುವಂತೆ,– ಉತ್ತರ ಧ್ರುವದಿಂದ ದಕ್ಷಿಣ ಧ್ರುವದವರೆಗೂ ತಮ್ಮ ಮಾತು ಕೇಳಿಸುವಂತೆ,– ಶಾಂತಿ ಮತ್ತು ಸೌಹಾರ್ದವನ್ನು ಸಾರುತ್ತವೆ. ಆದರೆ, ಆ ಕಾಲ ಎಂದಾದರೂ ಬರುವದೆ?

ಬಲಿಷ್ಠವಾದ ಧಾರ್ಮಿಕ ಹೋರಾಟದ ಈ ಸಮಪಾತಳಿಯಲ್ಲಿ ಅವಿಚ್ಛಿನ್ನವಾದ ಸೌಹಾರ್ದತೆ ಯಾವಾಗಲೂ ಆಳುವದು ಸಾಧ್ಯವಿದೆ. ಈ ಶತಮಾನದ ಕಡೆಯ ಭಾಗದಲ್ಲಿ ಪ್ರಪಂಚವು ಸೌಹಾರ್ದದ ಸಮಸ್ಯೆಯಲ್ಲಿ ನಿರತವಾಗಿದೆ; ಸಮಾಜದಲ್ಲಿ ವಿವಿಧ ಪರಿಹಾರೋಪಾಯಗಳನ್ನು ಸೂಚಿಸಲಾಗುತ್ತಿದೆ, ಅವುಗಳನ್ನು ಕಾರ್ಯರೂಪಕ್ಕಿಳಿಸುವ ಯತ್ನಗಳೂ ಆಗುತ್ತಿವೆ; ಆದರೆ ಹಾಗೆ ಮಾಡುವದು ಎಷ್ಟು ಕಷ್ಟಕರ ಎಂದು ನಮಗೆ ತಿಳಿದಿದೆ. ಜೀವನ ಸೆಣಸಾಟದ ಉಗ್ರತೆಯನ್ನು ಕಡಮೆಮಾಡುವದು, ಮನುಷ್ಯನಲ್ಲಿರುವ ನರಮಂಡಲಗಳ ಭೀಕರ ತುಡಿತವನ್ನು ಸೌಮ್ಯ ಮಾಡುವದು, ಬಹುಮಟ್ಟಿಗೆ ಅಸಾಧ್ಯ ಎಂದು ಜನರು ಕಾಣುತ್ತಾರೆ– ಈಗ, ಜೀವನದ ಭೌತಿಕ ಸಮತಳದಲ್ಲಿ– ಬಹಿರಂಗದಲ್ಲಿ, ಸ್ಥೂಲದಲ್ಲಿ ಮತ್ತು ಅದರ ಹೊರಗಿನ ಪಾರ್ಶ್ವದಲ್ಲಿ– ಸಾಮರಸ್ಯವನ್ನು ತರುವದು ಇಷ್ಟೊಂದು ಕಠಿಣವಾಗಿದ್ದರೆ, ಆಗ, ಮನುಷ್ಯನ ಅಂತರಂಗ ಸ್ವಭಾವದ ಮೇಲೆ ಆಳ್ವಿಕೆಯನ್ನು ನಡೆಸುವಂತೆ ಶಾಂತಿ, ಸಾಮರಸ್ಯವನ್ನು ತರುವುದು ಸಾವಿರಪಟ್ಟು ಕಷ್ಟವಾಗಿದೆ. ತತ್ಕಾಲಕ್ಕೆ ನೀವು ಪದಗಳ ಜಾಲಬಂಧದಿಂದ ಹೊರಬನ್ನಿರೆಂದು ನಿಮ್ಮನ್ನು ಕೇಳುತ್ತೇನೆ. ಬಾಲ್ಯದಿಂದಲೂ, ಪ್ರೀತಿ, ಶಾಂತಿ, ದಾನ, ಸಮಾನತೆ ಮತ್ತು ವಿಶ್ವಾತ್ಮಕ ಸೋದರತ್ವ ಮುಂತಾದ ಮಾತುಗಳನ್ನು ನಾವೆಲ್ಲರೂ ಕೇಳುತ್ತಲೇ ಇದ್ದೇವೆ; ಆದರೆ ಅವುಗಳೆಲ್ಲ ಅರ್ಥವಿಲ್ಲದೆ ಕೇವಲ ವ್ಯರ್ಥ ಪದಗಳಾಗಿವೆ, ಆದರೂ, ಅವುಗಳನ್ನು ಗಿಳಿಗಳಂತೆ ಪುನರುಚ್ಚರಿಸುತ್ತೇವೆ; ಆ ರೀತಿ ಮಾಡುವದು ನಮಗೆ ಸಹಜವಾಗಿಹೋಗಿದೆ. ಆ ಆದರ್ಶಗಳನ್ನು ಕಾರ್ಯರೂಪಕ್ಕಂತೂ ತರಲಾರೆವು. ಅದನ್ನೇನೂ ಮಾಡಲಾರೆವು. ಮೊದಲು ಇಂತಹ ಮಹಾ ಆದರ್ಶಗಳನ್ನು ತಮ್ಮ ಹೃದಯದಲ್ಲಿ ಅನುಭವಿಸಿದ ಮಹಾನುಭಾವರು ಈ ಪದಗಳನ್ನು ಬಳಸಿದರು; ಆ ಕಾಲದಲ್ಲಿ ಅನೇಕರು ಅವುಗಳ ಅರ್ಥವನ್ನು ಮನಗಂಡರು. ಅನಂತರದಲ್ಲಿ, ಅಜ್ಞಾನಿ ಜನಗಳು ಅವುಗಳೊಡನೆ ಆಟವಾಡುವಂತೆ ಈ ಪದಗಳನ್ನು ಹಿಡಿದು, ಧರ್ಮವನ್ನು ಆಚರಣೆಗೆ ತರುವ ಭಾವನೆಗಳನ್ನಾಗಿಸದೆ, ಕೇವಲ ಈ ಪದಗಳ ಆಟವೆನಿಸಿದರು. ಅದು 'ನಮ್ಮ ತಂದೆಯ ಧರ್ಮ', 'ನಮ್ಮ ರಾಷ್ಟ್ರದ ಧರ್ಮ', 'ನಮ್ಮ ದೇಶದ ಧರ್ಮ' ಹೀಗೇ ಮುಂದುವರೆಯಿತು. ಯಾವದೇ ಧರ್ಮವನ್ನು ಹೇಳಿಕೊಳ್ಳುವದು ರಾಷ್ಟ್ರಪ್ರೇಮದ ಒಂದು ಪದ್ಧತಿಯಾಯಿತು; ರಾಷ್ಟ್ರ ಪ್ರೇಮವು ಯಾವಾಗಲೂ ಭೇದಭಾವವುಳ್ಳ ಅಂಶವೇ. ಧರ್ಮದಲ್ಲಿ ಸಾಮರಸ್ಯವನ್ನು ತರುವದು ಯಾವಾಗಲೂ ಕಠಿಣವಾಗಿರಲೇಬೇಕು– ಆದಾಗ್ಯೂ ನಾವು ಧರ್ಮಗಳ ಸಾಮರಸ್ಯದ ಸಮಸ್ಯೆಯನ್ನು ಕುರಿತು ಚಿಂತಿಸುತ್ತೇವೆ.

ಪ್ರತಿಯೊಂದು ಧರ್ಮದಲ್ಲೂ ಮೂರು ಭಾಗಗಳನ್ನು ಕಾಣುತ್ತೇವೆ- ಅಂದರೆ, ನಾನು ಹೇಳುವದು ಪ್ರತಿಯೊಂದು ದೊಡ್ಡ ಮತ್ತು ಮಾನ್ಯವಾದ ಧರ್ಮದಲ್ಲಿ- ಮೊದಲಿಗೆ, ಇರುವದು ತತ್ತ್ವ ಜಿಜ್ಞಾಸೆ ಅಥವಾ ಧರ್ಮಶಾಸ್ತ್ರ- ಅದು ಧರ್ಮದ ಮೂಲ ತತ್ತ್ವಗಳನ್ನು ವಿವರಿಸಿ, ಅದರ ಗುರಿ ಮತ್ತು ಅದನ್ನು ಮುಟ್ಟುವ ಬಗೆಗಳನ್ನೂ ಸೇರಿಸಿ ಆ ಧರ್ಮದ ವ್ಯಾಪ್ತಿಯನ್ನು ತಿಳಿಸುವದು. ಎರಡನೆಯ ಭಾಗವು ತತ್ತ್ವಶಾಸ್ತ್ರವನ್ನು ನಿರ್ದಿಷ್ಟಗೊಳಿಸುವ ಪುರಾಣ. ಅದು ಮನುಷ್ಯರ ಅಥವಾ ಅಲೌಕಿಕ ವ್ಯಕ್ತಿಗಳ ಮತ್ತೂ ಹೀಗೆಯೇ ಇರುವವರ ಜೀವನಕ್ಕೆ ಸಂಬಂಧಪಟ್ಟ ಆಖ್ಯಾಯಿಕೆಗಳನ್ನೊಳಗೊಂಡಿರುತ್ತದೆ. ಹೆಚ್ಚು ಕಡಮೆ ಮನುಷ್ಯರ, ಅಲೌಕಿಕ ವ್ಯಕ್ತಿಗಳ ಕಲ್ಪಿತ ಜೀವನಕಥೆಗಳಾಗಿರುವ ಮೂರ್ತರೂಪದಲ್ಲಿ ತಿಳಿಸುವ ತತ್ತ್ವಶಾಸ್ತ್ರದ ಸಾರಸಂಗ್ರಹವದು. ಮೂರನೆಯ ಭಾಗ ಮತಾಚರಣೆ. ಇದು ಇನ್ನೂ ಹೆಚ್ಚಿನ ಮೂರ್ತರೂಪ- ಆಕಾರಗಳು ಮತ್ತು ಆಚರಣೆಗಳು, ವಿವಿಧ ಭೌತಿಕ ಭಾವಭಂಗಿಗಳು, ಹೂವು ಮತ್ತು ಧೂಪ, ಮತ್ತು ಇಂದ್ರಿಯಗಳಿಗೆ ಒಪ್ಪುವ ಅನೇಕ ಇತರ ವಸ್ತುಗಳು ಇವುಗಳಿಂದ ಕೂಡಿದೆ, ಮತಾಚರಣೆಯುಮೀ ಭಾಗದಲ್ಲಿ ಇದೆ. ಎಲ್ಲ ಗಣ್ಯ ಧರ್ಮಗಳಲ್ಲೂ ಈ ಮೂರು ಅಂಶಗಳಿರುತ್ತವೆ ಎಂಬುದನ್ನು ನಾವು ಕಾಣಬಹುದು. ಕೆಲವರು ಒಂದು ಅಂಶದ ಮೇಲೆ ಹೆಚ್ಚು ಒತ್ತುಕೊಟ್ಟರೆ, ಕೆಲವರು ಇನ್ನೊಂದರ ಮೇಲೆ ಒತ್ತು ಕೊಡುತ್ತಾರೆ. ಈಗ ಮೊದಲ ಭಾಗವಾದ ತತ್ತ್ವಶಾಸ್ತ್ರವನ್ನು ನಾವು ಪರಿಶೀಲಿಸೋಣ. ಒಂದೇ ವಿಶ್ವವ್ಯಾಪಿ ತತ್ತ್ವಶಾಸ್ತ್ರವಿದೆಯೇ? ಇನ್ನೂವರೆಗೂ ಇಲ್ಲ. ಪ್ರತಿ ಧರ್ಮವೂ ತನ್ನದೇ ಆದ ಸಿದ್ಧಾಂತಗಳನ್ನು ತಂದು, ಅವುಗಳು ಮಾತ್ರವೇ ನಿಜವಾದವೆಂದು ಪಟ್ಟುಹಿಡಿದು ಹೇಳುವದು. ಅದಷ್ಟನ್ನೇ ಮಾಡುವದಲ್ಲದೆ, ಯಾರು ಈ ಸಿದ್ಧಾಂತಗಳನ್ನು ನಂಬುವದಿಲ್ಲವೋ ಅವರು ಯಾವದೋ ಘೋರ ನರಕಕ್ಕೆ ಹೋಗುವರು ಎಂದು ಸಾರುತ್ತದೆ. ಕೆಲವರು ಇತರರನ್ನು ತಮ್ಮಂತೆಯೇ ನಂಬಿಸುವದಕ್ಕಾಗಿ ಬಲಾತ್ಕರಿಸಲು ಕತ್ತಿಯನ್ನೂ ಝಳಪಿಸುವರು. ಇದು ದುರುದ್ದೇಶದಿಂದಲ್ಲ, ಆದರೆ ಮನುಷ್ಯನ ಮೆದುಳಿನಲ್ಲಿನ ವಿಶಿಷ್ಟ ರೋಗ- ಧರ್ಮಾಂಧತೆಯಿದೆಯಲ್ಲ ಆ ಕಾರಣದಿಂದ ಈ ಧರ್ಮಾಂಧರು ಅತ್ಯಂತ ಪ್ರಾಮಾಣಿಕ ಮಾನವ ವ್ಯಕ್ತಿಗಳು, ಆದರೆ ಅವರು ಪ್ರಪಂಚದ ಇತರ ಹುಚ್ಚರಷ್ಟೇ ಹೊಣೆಗೇಡಿಗಳು, ಜಗತ್ತಿನಲ್ಲಿ ಎಲ್ಲ ರೋಗಗಳಲ್ಲೂ ಅತ್ಯಂತ ಅಪಾಯಕಾರಿಯಾದುದು ಈ ಮತಾಂಧತೆಯ ರೋಗ. ಮಾನವ ಪ್ರಕೃತಿಯ ಎಲ್ಲ ದುಷ್ಟತನಗಳನ್ನೂ ಈ ರೋಗ ಹುರಿದುಂಬಿಸುತ್ತದೆ- ಇದರಿಂದ ಕ್ರೋಧ ಕದಡಿಕೊಂಡು ಏಳುತ್ತದೆ, ನರಗಳು ಸೆಟೆದುಕೊಳ್ಳುತ್ತವೆ, ಮಾನವ ವ್ಯಕ್ತಿಗಳು ಕೆರಳಿದ ಹುಲಿಗಳಂತಾಗುತ್ತಾರೆ.

ಈ ಎಲ್ಲ ಧರ್ಮಗಳಲ್ಲಿ ಒಪ್ಪುವಂತಹ ಯಾವದೇ ಪೌರಾಣಿಕ ಸಾಮ್ಯ, ಸಾಮರಸ್ಯ, ಯಾವದೇ ವಿಶ್ವವ್ಯಾಪಿ ಪುರಾಣವಿದೆಯೇ? ಖಂಡಿತಾ ಇಲ್ಲ. ಎಲ್ಲ ಧರ್ಮಗಳೂ ತಮ್ಮದೇ ಆದ ಸ್ವಂತ ಪುರಾಣಗಳನ್ನು ಹೊಂದಿವೆ, ಅವುಗಳಲ್ಲಿ ಪ್ರತಿಯೊಂದೂ ಸಹ "ನನ್ನ ಕಥೆಗಳು ಬರಿಯ ಕಾಲ್ಪನಿಕವಲ್ಲ" ಎನ್ನುತ್ತದೆ- ಈ ಪ್ರಶ್ನೆಯನ್ನು ದೃಷ್ಟಾಂತದಿಂದ ಅರ್ಥಮಾಡಿಕೊಳ್ಳಲು ಪ್ರಯತ್ನಿಸೋಣ. ನನ್ನ ಸರಳ ಉದ್ದೇಶವು ಉದಾಹರಣೆಯನ್ನು ಕೊಡುವದಷ್ಟೆ, ಯಾವ

ಧರ್ಮವನ್ನೂ ಟೀಕೆ ಮಾಡುವ ಉದ್ದೇಶವಿಲ್ಲ. ಭಗವಂತನು ಪಾರಿವಾಳದ ರೂಪದಲ್ಲಿ ಧರೆಗಿಳಿದು ಬಂದನೆಂದು ಕ್ರಿಶ್ಚಿಯನ್ನನು ನಂಬುತ್ತಾನೆ; ಅವನಿಗೆ ಇದು ಚರಿತ್ರೆ, ಪುರಾಣವಲ್ಲ. ಭಗವಂತನು ಗೋವಿನಲ್ಲಿ ಮೈದೋರುವನು ಎಂದು ಹಿಂದೂ ನಂಬುತ್ತಾನೆ. ಈ ರೀತಿ ನಂಬುವದು ಬರೀ ಕಟ್ಟು ಕಥೆಯೇ ಹೊರತು ಚರಿತ್ರೆಯಲ್ಲ, ಅದು ಮೂಢನಂಬಿಕೆಯೆಂದು ಕ್ರಿಶ್ಚಿಯನ್ನರು ಹೇಳುತ್ತಾರೆ. ಒಂದು ಡಬ್ಬಿಯ ಅಥವಾ ಪೆಟಾರಿಯ ರೂಪದಲ್ಲಿ ಪ್ರತಿಮೆಯನ್ನು ಮಾಡಿ ಅದರ ಅಕ್ಕಪಕ್ಕಗಳಲ್ಲಿ ದೇವತೆಯಿರುವಂತಿದ್ದರೆ, ಅದನ್ನು, ಪೂಜ್ಯವಾದವುಗಳಲ್ಲಿ ಪೂಜ್ಯವೆಂದು ಇಡಬಹುದು, ಅದು ಜೆಹೋವನಿಗೆ ಪವಿತ್ರವಾದುದು, ಆದರೆ ಪ್ರತಿಮೆಯನ್ನು ಒಬ್ಬ ಸುಂದರವಾದ ಗಂಡಸು, ಅಥವಾ ಹೆಂಗಸಿನಂತೆ ಮಾಡಿದರೆ, 'ಅದು ಭೀಕರ ವಿಗ್ರಹ, ಒಡೆದು ಹಾಕಿ' ಎನ್ನುವದು ಯಹೂದಿಗಳ ಅಭಿಪ್ರಾಯದ ಮಾತು. ಇದು ನಮ್ಮ ಪುರಾಣಗಳಲ್ಲಿರುವ ಕಂಡುಬರುವ ಏಕತೆ ! ಒಬ್ಬ ಮನುಷ್ಯನು ಎದ್ದು ನಿಂತು, "ನನ್ನ ಪ್ರವಾದಿಯು ಇಂಥಿಂಥ ವಿಸ್ಮಯಗಳನ್ನು ಮಾಡಿದನು" ಎಂದರೆ, ಇತರರು "ಅದು ಬರೀ ಮೂಢನಂಬಿಕೆ" ಎನ್ನುವರು, ಆದರೆ ಅದೇ ಕಾಲಕ್ಕೆ ಅವರು ತಮ್ಮ ಪ್ರವಾದಿಯು ಇದಕ್ಕಿಂತ ಹೆಚ್ಚು ವಿಸ್ಮಯಗಳನ್ನು ಮಾಡಿದನು ಎನ್ನುವರು, ಅದರ ಜೊತೆಗೆ ಅದನ್ನು ಚಾರಿತ್ರಿಕ ಎಂದು ಪರಿಗಣಿಸುವರು. ನಾನು ನೋಡಿರುವಮಟ್ಟಿಗೆ, ಚರಿತ್ರೆ ಮತ್ತು ಪುರಾಣದ ಸೂಕ್ಷ್ಮ ವ್ಯತ್ಯಾಸವನ್ನು ಈ ವ್ಯಕ್ತಿಗಳಿಗೆ ತಿಳಿಯುವಂತೆ, ಪ್ರಪಂಚದಲ್ಲಿ ಯಾವೊಬ್ಬನೂ ಮಾಡಲಾಗಿಲ್ಲ. ಯಾವದೇ ಧರ್ಮಕ್ಕೆ ಅವು ಸೇರಿರಬಹುದಾದರೂ, ಇಂತಹ ಎಲ್ಲ ಕಥೆಗಳೂ ನಿಜವಾಗಿಯೂ ಪೌರಾಣಿಕವೇ, ವಿಶೇಷ ಸಂದರ್ಭಗಳಲ್ಲಿ ಸ್ವಲ್ಪ ಚರಿತ್ರೆಯೂ ಮಿಶ್ರವಾಗಿರಬಹುದು.

ಮುಂದಿನದು ಮತಾಚರಣೆಗಳು– ಒಂದು ಪಂಗಡಕ್ಕೆ ಒಂದು ರೂಪದ ಆಚರಣೆಯಿದೆ, ಅದು ಪವಿತ್ರ, ಬೇರೆಯ ಪಂಗಡದ ಆಚರಣೆಗಳು ಕೇವಲ ಅಪಖ್ಯಾತ ಮೂಢನಂಬಿಕೆಗಳು ಎಂದು ಭಾವನೆ. ಒಂದು ಪಂಗಡವು ಒಂದು ವಿಶಿಷ್ಟ ಪ್ರತೀಕವನ್ನು ಆರಾಧಿಸಿದರೆ, ಮತ್ತೊಂದು ಪಂಗಡವು 'ಓ, ಅದು ಭೀಕರ' ಎನ್ನುತ್ತದೆ. ಉದಾಹರಣೆಗೆ, ಸಾಮಾನ್ಯ ಪ್ರತೀಕವೊಂದನ್ನೇ ತೆಗೆದುಕೊಳ್ಳಿ, ಶಿಶ್ನವು ಖಂಡಿತವಾಗಿಯೂ ಲೈಂಗಿಕ ಪ್ರತೀಕವೇ, ಕ್ರಮೇಣ ಆ ದೃಷ್ಟಿಯು ಮರೆತು ಹೋಗಿದೆ. ಮತ್ತು ಈಗ ಅದು 'ಸೃಷ್ಟಿಯ' ಪ್ರತೀಕವೆಂದು ನಿಲುವು ತಳೆದಿದೆ. ಈ ಪ್ರತೀಕವನ್ನು ಇಟ್ಟುಕೊಂಡಿರುವ ರಾಷ್ಟ್ರಗಳು ಅದು ಶಿಶ್ನವೆಂದು ಎಂದೂ ಯೋಚಿಸುವದಿಲ್ಲ; ಅದೊಂದು ಪ್ರತೀಕ ಮಾತ್ರ, ಅಷ್ಟಕ್ಕೇ ಮುಗಿಯಿತು. ಆದರೆ ಮತ್ತೊಂದು ಜನಾಂಗ ಅಥವಾ ಮತದ ಅನುಯಾಯಿಯು ಅದನ್ನು ಶಿಶ್ನವೆಂದೇ ವಿನಾ ಬೇರೊಂದನ್ನು ಕಾಣನು, ಹಾಗಾಗಿ ಅದನ್ನು ತೆಗಳುವನು, ಆದಾಗ್ಯೂ, ಅದೇ ಸಮಯಕ್ಕೆ, ಅವನು ಶಿಶ್ನಾರಾಧಕರೆಂದು ಕರೆಯಲ್ಪಡುವರಿಗೆ ಭೀಕರವೆಂದು ತೋರುವ ಬೇರೇನನ್ನೋ ಮಾಡುತ್ತಿರಬಹುದು– ಎರಡು ಅಂಶಗಳನ್ನು ಉದಾಹರಣೆಗೆ ತೆಗೆದುಕೊಳ್ಳುವೆ; ಶಿಶ್ನದ ಪ್ರತೀಕ ಮತ್ತು ಕ್ರಿಶ್ಚಿಯನ್ನರ ಮತ ಸಂಸ್ಕಾರಗಳು. ಕ್ರಿಶ್ಚಿಯನ್ನರಿಗೆ ಶಿಶ್ನವು ಭೀಕರ, ಹಿಂದೂಗಳಿಗೆ ಕ್ರಿಶ್ಚಿಯನ್ನರ ಮತ ಸಂಸ್ಕಾರವು ಭೀಕರವಾಗಿದೆ. ಅವರು, ಮನುಷ್ಯನೊಬ್ಬನನ್ನು ಕೊಂದು, ಅವನ ಮಾಂಸವನ್ನು ತಿನ್ನುವ, ಅವನ ರಕ್ತವನ್ನು ಕುಡಿಯುವದರ ಮೂಲಕ ಆ ಮನುಷ್ಯನ ಉತ್ತಮ ಗುಣಗಳನ್ನು ಪಡೆಯಬಹುದೆಂಬ ಕ್ರಿಶ್ಚಿಯನ್ನರ

ಸಂಸ್ಕಾರವು ನರಭಕ್ಷಕತನವೆನ್ನುವರು. ಕೆಲವು ಅನಾಗರಿಕ ಬಣಗಳು ಮಾಡುವದು ಇದನ್ನೇ; ಒಬ್ಬನು ಧೈರ್ಯಶಾಲಿಯಾಗಿದ್ದರೆ ಅವನನ್ನು ಕೊಂದು ಅವನ ಹೃದಯವನ್ನು ತಿನ್ನುವರು, ಏಕೆಂದರೆ ಆ ಮನುಷ್ಯನು ಹೊಂದಿದ್ದ ಕೆಚ್ಚು ಮತ್ತು ಕಲಿತನದ ಗುಣಗಳನ್ನು ಅದು ಕೊಡುವದು ಎಂದು ಯೋಚಿಸುವರು. ಸರ್ ಜಾನ್ ಲುಬ್ಬಕ್‌ನಂತಹ ಧರ್ಮನಿಷ್ಠ ಕ್ರಿಶ್ಚಿಯನ್ನನೂ ಸಹ ಇದನ್ನೊಪ್ಪಿಕೊಂಡು, ಈ ಅನಾಗರಿಕ ಭಾವನೆಯೇ ಕ್ರಿಶ್ಚಿಯನ್ನರ ಪ್ರತೀಕದ ಮೂಲ ಎನ್ನುವನು. ಆದರೆ, ಸಹಜವಾಗಿಯೇ, ಕ್ರಿಶ್ಚಿಯನ್ನರು ಈ ಮೂಲದ ಅಭಿಪ್ರಾಯವನ್ನು ಒಪ್ಪುವದಿಲ್ಲ; ಅದು ಏನನ್ನು ಧ್ವನಿಸಬಹುದೆಂಬುದು ಅವರ ಮನಸ್ಸಿಗೆ ಎಂದೂ ಬರುವದಿಲ್ಲ. ಅದು ಪವಿತ್ರ ವಸ್ತುಗಳಿಗಾಗಿ ನಿಂತಿದೆ. ಅಷ್ಟೇ ಅವರಿಗೆ ಬೇಕಾದುದು. ಹೀಗೆ, ಮತಾಚರಣೆಗಳಲ್ಲೂ ಸಾರ್ವತ್ರಿಕವಾಗಿ ಒಪ್ಪುವ ಸ್ವೀಕರಿಸುವ ವಿಧ್ಯುಕ್ತವಾದ ವಿಶ್ವವ್ಯಾಪಿ ಪ್ರತೀಕವಿಲ್ಲ. ಅಂದಮೇಲೆ, ಯಾವ ಸಾರ್ವತ್ರಿಕತೆ, ವಿಶ್ವವ್ಯಾಪ್ತಿ ಎಲ್ಲಿದೆ? ಹಾಗಿರುವಾಗ ಧರ್ಮದ ವಿಶ್ವವ್ಯಾಪಿ ರೂಪವನ್ನು ಹೊಂದುವದು ಹೇಗೆ ಸಾಧ್ಯ? ಆದರೆ, ಅದು ಈಗಾಗಲೇ ಅಸ್ತಿತ್ವದಲ್ಲಿದೆ. ಅದು ಏನೆಂದು ನಾವು ನೋಡೋಣ.

ನಾವೆಲ್ಲರೂ ವಿಶ್ವವ್ಯಾಪಿ ಸೋದರತ್ವದ ವಿಷಯವನ್ನು ಕೇಳುವೆವು. ಮತ್ತು ಸಮಾಜಗಳು ಅದರ ಪರವಾಗಿ, ವಿಶೇಷವಾಗಿ ಬೋಧಿಸಲು ಇವೆ. ನನಗೆ ಹಳೆಯದೊಂದು ಕಥೆ ನೆನಪಾಗುತ್ತದೆ. ಭಾರತದಲ್ಲಿ ದ್ರಾಕ್ಷಾ ಮಧು ಸೇವನೆ ತಪ್ಪು ಎಂಬ ಭಾವನೆಯಿದೆ. ಇಬ್ಬರು ಸಹೋದರರಿದ್ದರು, ಒಂದು ರಾತ್ರಿ ಗುಟ್ಟಾಗಿ ದ್ರಾಕ್ಷಾರಸವನ್ನು ಕುಡಿಯಲು ಆಶಿಸಿದರು; ಅತಿ ಸಂಪ್ರದಾಯನಿಷ್ಠ ಚಿಕ್ಕಪ್ಪನು ಹತ್ತಿರದ ಕೊಠಡಿಯಲ್ಲಿ ಮಲಗಿದ್ದನು. ಅದರಿಂದ, ಕುಡಿಯುವ ಮೊದಲು ತಮ್ಮ ತಮ್ಮಲ್ಲೇ ಹೀಗೆ ಹೇಳಿಕೊಂಡರು, 'ನಾವು ಬಹಳ ನಿಶ್ಶಬ್ದವಾಗಿರಬೇಕು, ಇಲ್ಲದಿದ್ದರೆ ಚಿಕ್ಕಪ್ಪನು ಎಚ್ಚರಾಗುವನು'. ಅವರು ಕುಡಿಯುತ್ತಿರುವಾಗ, ತಮ್ಮ ತಮ್ಮಲ್ಲೇ ಪುನರುಚ್ಚರಿಸುತ್ತಾ ಬಂದರು, 'ಸದ್ದು, ಚಿಕ್ಕಪ್ಪ ಎದ್ದು ಬಿಡುತ್ತಾನೆ', ಒಬ್ಬನು ಮತ್ತೊಬ್ಬನನ್ನು ತನ್ನ ಕೂಗಿನಿಂದ ಅವನ ಮಾತನ್ನು ಮುಚ್ಚುವಂತೆ ಕೂಗುತ್ತಿದ್ದನು. ಕೂಗಿನ ಗದ್ದಲ ಹೆಚ್ಚಿದಂತೆ, ಚಿಕ್ಕಪ್ಪನಿಗೆ ಎಚ್ಚರವಾಗಿ ಕೊಠಡಿಗೆ ಬಂದಾಗ ಎಲ್ಲವೂ ತಿಳಿಯಿತು. ಈಗ, ನಾವೂ ಈ ಮತ್ತೇರಿದ ಮನುಷ್ಯರಂತೆ ಕೂಗುವೆವು, "ವಿಶ್ವವ್ಯಾಪಿ ಸೋದರತ್ವ! ನಾವೆಲ್ಲರೂ ಸಮಾನರು, ಆದುದರಿಂದ ಒಂದು ಪಂಥವನ್ನು ಮಾಡಿಕೊಳ್ಳೋಣ". ಒಂದು ಪಂಥವನ್ನು ಕಟ್ಟಿದ ಕೂಡಲೇ, ನೀವೂ ಸಮಾನತೆಯನ್ನು ಪ್ರತಿಭಟಿಸುತ್ತೀರಿ, ಸಮಾನತೆ ಇನ್ನಿಲ್ಲ. ಮಹಮ್ಮದೀಯರು ವಿಶ್ವವ್ಯಾಪಿ ಸೋದರತ್ವವನ್ನು ಮಾತನಾಡುತ್ತಾರೆ, ಆದರೆ ನಿಜದಲ್ಲಿ ಅದರಿಂದ ಬರುವದೇನು? ಏಕೆ, ಮಹಮ್ಮದೀಯನಲ್ಲದವನು ಯಾವನನ್ನೂ ಈ ಸೋದರತ್ವಕ್ಕೆ ಸೇರಿಸಿಕೊಳ್ಳುವದಿಲ್ಲ; ಪ್ರಾಯಶಃ ಅವನ ಗಂಟಲನ್ನು ಸೀಳಿಬಿಡುವರು. ಕ್ರಿಶ್ಚಿಯನ್ನರು ವಿಶ್ವವ್ಯಾಪಿ ಸೋದರತ್ವವನ್ನು ಮಾತನಾಡುತ್ತಾರೆ, ಆದರೆ ಕ್ರಿಶ್ಚಿಯನ್ ಅಲ್ಲದವನು ಶಾಶ್ವತವಾಗಿ ಒಲೆಯಮೇಲೆ ಅವನನ್ನು ಹುರಿಯುವಲ್ಲಿಗೆ ಹೋಗಲೇಬೇಕಾಗುವದು.

ಹೀಗೆಯೇ ನಾವು ವಿಶ್ವವ್ಯಾಪೀ ಸೋದರತ್ವ ಮತ್ತು ಸಮಾನತೆಯನ್ನು ಅರಸಿಕೊಂಡು ಈ ಪ್ರಪಂಚದಲ್ಲಿ ಹೋಗುತ್ತಲೇ ಇರುವೆವು. ಇಂತಹ ಮಾತನ್ನು ಈ ಪ್ರಪಂಚದಲ್ಲಿ ನೀವು ಕೇಳಿದಾಗ, ಸ್ವಲ್ಪ ಮನವನ್ನು ಸಡಿಲುಗಳಿಸದೆ ಸಂಯಮದಿಂದಿರಲು, ನಿಮ್ಮ ಎಚ್ಚರಿಕೆಯನ್ನು ನೀವೇ ತೆಗೆದುಕೊಳ್ಳುವಂತೆ ಇರಿ ಎಂದು ನಾನು ನಿಮ್ಮನ್ನು ಕೇಳಿಕೊಳ್ಳುವೆನು, ಏಕೆಂದರೆ ಈ ಮಾತಿನ ಹಿಂದೆ ಅನೇಕ ವೇಳೆ ಅತ್ಯಂತ ತೀಕ್ಷ್ಣವಾದ ಸ್ವಾರ್ಥವಿರುತ್ತದೆ. "ಚಳಿಗಾಲದಲ್ಲಿ ಕೆಲವೊಮ್ಮೆ ಗುಡುಗಿನ ಮೋಡ ಬರುತ್ತದೆ, ಅದು ಗರ್ಜಿಸುತ್ತಲೇ ಇರುವದು, ಆದರೆ ಮಳೆಗರೆಯುವದಿಲ್ಲ; ಆದರೆ ಮಳೆಗಾಲದಲ್ಲಿ ಮೋಡಗಳು ಸದ್ದಿಲ್ಲದೆ ಪ್ರಪಂಚವನ್ನೆಲ್ಲಾ ಸುರಿಮಳೆಯಲ್ಲಿ ಮುಳುಗಿಸುವದು". ಹಾಗೆಯೇ ನಿಜವಾಗಿಯೂ ಕೆಲಸಗಾರರಾದವರು, ನಿಜವಾಗಿಯೂ ಮಾನವನ ವಿಶ್ವವ್ಯಾಪಿ ಸೋದರತ್ವವನ್ನು ಎದೆಯಲ್ಲಿಟ್ಟಿರುವವರು ಹೆಚ್ಚು ಮಾತನಾಡರು, ವಿಶ್ವವ್ಯಾಪಿ ಸೋದರತ್ವಕ್ಕಾಗಿ ಸಣ್ಣ ಪಂಥಗಳನ್ನು ಕಟ್ಟರು; ಆದರೆ ಅವರ ಕಾರ್ಯಗಳು, ಚಲನವಲನಗಳು, ಅವರ ಇಡಿಯ ಜೀವನಗಳು, ಅವರು ನಿಜವಾಗಿಯೂ ಮಾನವಕುಲದ ಸೋದರತ್ವ ಭಾವವನ್ನು ಹೊಂದಿರುವರು, ಅವರಿಗೆ ಎಲ್ಲರಲ್ಲೂ ಪ್ರೀತಿ, ಸಹಾನುಭೂತಿಗಳಿವೆ ಎಂಬುದನ್ನು ತೋರಿಸುತ್ತವೆ. ಅವರು ಮಾತನಾಡುವದಿಲ್ಲ, ಅವರು ಮಾಡುವರು, ಅವರು ನಿಜವಾಗಿ 'ಜೀವಿಸುವರು', ಈ ಪ್ರಪಂಚವು ಅಹಂಕಾರದ ಅಬ್ಬರದ ಮಾತುಗಳಿಂದ ಅತಿಯಾಗಿ ತುಂಬಿದೆ. ಹೆಚ್ಚಾದ ಶ್ರದ್ಧಾಪೂರ್ವಕ, ಕಟ್ಟಕ್ಕರೆಯ ಕೆಲಸ ಬೇಕು ಮಾತು ಕಡಿಮೆ ಬೇಕು.

ಇದುವರೆಗೆ, ಧರ್ಮದ ವಿಷಯವಾಗಿ ವಿಶ್ವವ್ಯಾಪಿ ವೈಲಕ್ಷಣ್ಯಗಳನ್ನು ಕಾಣುವದು ಕಠಿಣವೆಂದು ನಾವು ನೋಡುದೆವು, ಆದರೂ ಅವುಗಳು ಅಸ್ತಿತ್ವದಲ್ಲಿವೆ ಎಂಬುದೂ ತಿಳಿದಿದೆ. ನಾವೆಲ್ಲರೂ ಮಾನವ ಜೀವಿಗಳು, ಆದರೆ ನಾವೆಲ್ಲರೂ ಸಮಾನರೇ?– ಖಂಡಿತಾ ಇಲ್ಲ. ನಾವು ಸಮಾನರೆಂದು ಹೇಳುವರಾರು? ಹುಚ್ಚನು ಮಾತ್ರ. ನಮ್ಮ ಬುದ್ಧಿಯಲ್ಲಿ, ನಮ್ಮ ಶಕ್ತಿಗಳಲ್ಲಿ, ನಮ್ಮ ದೇಹಗಳಲ್ಲಿ ನಾವೆಲ್ಲರೂ ಸಮಾನರಾಗಿದ್ದೇವೆಯೇ? ಒಬ್ಬಾತನು ಇನ್ನೊಬ್ಬನಿಗಿಂತ ಹೆಚ್ಚು ಶಕ್ತಿಶಾಲಿ, ಒಬ್ಬಾತನು ಇನ್ನೊಬ್ಬನಿಗಿಂತ ಹೆಚ್ಚು ಬುದ್ಧಿಶಾಲಿ. ನಾವೆಲ್ಲರೂ ಸಮಾನರಾದರೆ, ಈ ಅಸಮಾನತೆ ಇರುವದೇಕೆ? ಅದನ್ನು ಮಾಡಿದವರು ಯಾರು? ನಾವು. ನಮ್ಮಲ್ಲಿ ಹೆಚ್ಚು ಅಥವಾ ಕಡಮೆ ಶಕ್ತಿಯಿರುವದರಿಂದ, ಹೆಚ್ಚು ಅಥವಾ ಕಡಿಮೆ ಬುದ್ಧಿ, ಹೆಚ್ಚು ಅಥವಾ ಕಡಮೆ ದೇಹ ಬಲವಿರುವದರಿಂದ, ಅದು ನಮ್ಮ ನಡುವೆ ವ್ಯತ್ಯಾಸವನ್ನು ಕಲ್ಪಿಸುವದು. ಆದಾಗ್ಯೂ, ಸಮಾನತೆಯ ಸಿದ್ಧಾಂತ ನಮ್ಮ ಹೃದಯಕ್ಕೆ ಸಮಾನವಾಗಿ ರುಚಿಸುತ್ತದೆ. ನಾವೆಲ್ಲರೂ ಮಾನವರು, ಆದರೆ ಕೆಲವರು ಗಂಡಸರು, ಕೆಲವರು ಹೆಂಗಸರು. ಇಲ್ಲೊಬ್ಬನು ಕಪ್ಪು ಮನುಷ್ಯ, ಅಲ್ಲೊಬ್ಬನು ಬಿಳಿಯ, ಆದರೆ ನಾವೆಲ್ಲರೂ ಮನುಷ್ಯರೇ, ಎಲ್ಲರೂ ಒಂದೇ ಮಾನವ ಕುಲಕ್ಕೆ ಸೇರಿದವರು. ನಮ್ಮ ಮುಖಗಳು ವಿವಿಧವಾಗಿವೆ; ಒಂದೇ ತೆರನಿರುವ ಇಬ್ಬರನ್ನು ನಾನು ಕಾಣೆ, ಆದರೂ ನಾವೆಲ್ಲರೂ ಮಾನವರು. ಈ ಒಂದು ಮಾನವತ್ವ ಎಲ್ಲಿದೆ? ನಾನೊಬ್ಬ ಗಂಡಸು ಅಥವಾ ಹೆಂಗಸನ್ನು, ಕಪ್ಪು ಅಥವಾ ಬಿಳಿಯಾಗಿರುವವನನ್ನು ನೋಡುತ್ತೇನೆ. ಈ ಮುಖಗಳಲ್ಲಿ ಎಲ್ಲರಿಗೂ ಸಾಮಾನ್ಯವಾದ ಭಾವನಾರೂಪ ಮಾನವತ್ವವಿದೆ ಎಂದು ನನಗೆ ಗೊತ್ತಿದೆ. ಅದನ್ನು ಹಿಡಿಯಲು, ಅದನ್ನು ಅರಿಯಲು, ಕಣ್ಣಿಗೆ ಕಟ್ಟುವಂತೆ

ಮಾಡಲು ನನಗೆ ಅದು ಸಿಗದಿರಬಹುದು, ಆದರೂ ಅದು ಇದೆ ಎಂದು ನನಗೆ ಖಂಡಿತವಾಗಿ ಗೊತ್ತು. ನಾನು ಯಾವದಾದರೂ ವಿಷಯಕ್ಕೆ ನಿಶ್ಚಯನಾಗಿದ್ದರೆ, ಅದು ನಮ್ಮೆಲ್ಲರಿಗೂ ಸಾಮಾನ್ಯವಾದ ಈ ಮಾನವತ್ವವೇ. ಈ ಸಾಮಾನ್ಯೀಕರಣವಾದ ಅಸ್ತಿತ್ವದ ಮೂಲಕವೇ ನಾನು ನಿಮ್ಮನ್ನು ಪುರುಷ ಅಥವಾ ಮಹಿಳೆ ಎಂದು ನೋಡುವೆನು. ಹಾಗೆಯೇ ಪ್ರಪಂಚದ ಎಲ್ಲ ವಿವಿಧ ಧರ್ಮಗಳ ಮೂಲಕವೂ ಭಗವಂತನ ಸ್ವರೂಪದಲ್ಲಿ ಈ ವಿಶ್ವವ್ಯಾಪಿ ಧರ್ಮವನ್ನು ನೋಡುವೆ; ಅದು ಇದೆ, ಇರಲೇಬೇಕು ಎಂದೆಂದಿಗೂ. "ಈ ಎಲ್ಲ ಮುತ್ತುಗಳ ಮೂಲಕವೂ ಹಾದುಹೋಗುವ ದಾರ ನಾನೇ". ಅದರಲ್ಲಿಯೇ ಪ್ರತಿಯೊಂದು ಮುತ್ತೂ ಒಂದು ಧರ್ಮ ಅಥವಾ ಒಂದು ಪಂಥವೂ ಹೌದು. ವಿವಿಧ ಮುತ್ತುಗಳು ಹೀಗಿವೆ, ಭಗವಂತನು ಅವುಗಳೆಲ್ಲದರ ಮೂಲಕ ಹಾಯುವ ದಾರ; ಆದರೆ ಮಾನವಕುಲದ ಬಹುಪಾಲಿನ ಜನರಿಗೆ ಸಂಪೂರ್ಣವಾಗಿ ಅದರ ಅರಿವಿಲ್ಲ.

ವಿವಿಧತೆಯಲ್ಲಿ ಏಕತ್ವವೇ ವಿಶ್ವದ ರಚನಾರೂಪ. ನಾವೆಲ್ಲರೂ ಮನುಷ್ಯರೇ, ಆದರೂ ನಾವೆಲ್ಲರೂ ಒಬ್ಬರಿಗಿಂತ ಮತ್ತೊಬ್ಬರು ಸ್ಪಷ್ಟವಾಗಿ ಬೇರೆ. ಮಾನವತ್ವದ ಭಾಗವಾಗಿ ನಾನು ನಿಮ್ಮಲ್ಲಿಯೇ ಒಂದಾಗಿದ್ದೇನೆ, ಮತ್ತು ಶ್ರೀ– ಸಾಮಾನ್ಯನಾದ ನಾನು ನಿಮಗಿಂತ ಭಿನ್ನನು. ಗಂಡಸಾಗಿ ನೀವು ಹೆಂಗಸಿಗಿಂತ ಬೇರೆ; ಮಾನವ ಜೀವಿಯಾಗಿ ನೀವು ಹೆಂಗಸು ಒಂದೇ. ಮನುಷ್ಯನಾಗಿ ನೀವು ಪ್ರಾಣಿಗಿಂತ ಭಿನ್ನ, ಆದರೆ ಬದುಕಿರುವ ಜೀವಿಗಳಾಗಿ ಗಂಡಸು, ಹೆಂಗಸು, ಪ್ರಾಣಿ, ಸಸ್ಯ ಎಲ್ಲಾ ಒಂದೇ; ಅಸ್ತಿತ್ವದಿಂದಾಗಿ ನೀವು ಇಡಿಯ ವಿಶ್ವದೊಡನೆ ಒಂದು. ಈ ವಿಶ್ವವ್ಯಾಪಕ ಅಸ್ತಿತ್ವವೇ ಭಗವಂತ, ವಿಶ್ವದಲ್ಲಿನ ಕಟ್ಟಕಡೆಯ 'ಏಕ' ತತ್ವದಲ್ಲಿ. 'ಅವನ'ಲ್ಲಿ ನಾವೆಲ್ಲರೂ ಒಂದೇ. ಅದೇ ಕಾಲಕ್ಕೆ, ತೋರ್ಪಡಿಕೆಯಲ್ಲಿ ಈ ವ್ಯತ್ಯಾಸಗಳು ಯಾವಾಗಲೂ ಇರಲೇಬೇಕು. ನಮ್ಮ ಕೆಲಸಗಳಲ್ಲಿ, ನಮ್ಮ ಶಕ್ತಿಗಳಲ್ಲಿ ಅವು ಹೊರಗಡೆ ತೋರ್ಪಡಿಸುವ ರೀತಿಯಲ್ಲಿ, ಈ ವ್ಯತ್ಯಾಸಗಳು ಯಾವಾಗಲೂ ಇರಲೇಬೇಕು. ವಿಶ್ವವ್ಯಾಪಕ ಧರ್ಮದ ಗುರಿಯೆಂದರೆ ಎಲ್ಲ ಮಾನವಕೋಟಿಯ ಒಂದೇ ಸಿದ್ಧಾಂತದ ಭಿನ್ನರೀತಿಯಲ್ಲಿ ನಂಬಿಕೆ ಇಡುವದು ಎಂದು ಅರ್ಥಮಾಡುವದಾದರೆ, ಅದು ಸಂಪೂರ್ಣವಾಗಿ ಅಸಾಧ್ಯ. ಅದು ಎಂದಿಗೂ ಆಗದು, ಎಲ್ಲರ ಮುಖಗಳೂ ಒಂದೇ ತರಹವಿರುವದೆಂಬ ಕಾಲ ಎಂದಿಗೂ ಇಲ್ಲ–ಹಾಗೆಯೇ, ಒಂದೇ ವಿಶ್ವವ್ಯಾಪಕ ಪುರಾಣ ವಿರುವದೆಂದು ನಾವು ನಿರೀಕ್ಷಿಸುವದಾದರೆ, ಅದೂ ಕೂಡ ಸಾಧ್ಯವಿಲ್ಲ; ಅದು ಎಂದೆಂದೂ ಇರಲಾರದು. ಒಂದೇ ವಿಶ್ವವ್ಯಾಪಕ ಆಚರಣೆಯೂ ಎಂದೆಂದಿಗೂ ಇರಲಾರದು. ಈ ತೆರನ ವಸ್ತುಸ್ಥಿತಿಗಳು ಎಂದೆಂದಿಗೂ ಅಸ್ತಿತ್ವಕ್ಕೆ ಬರಲಾರವು; ಹಾಗೆಂದಾದರೂ ಆಗುವದಾದರೆ, ಪ್ರಪಂಚವೇ ನಾಶವಾದೀತು, ಏಕೆಂದರೆ ವೈವಿಧ್ಯತೆ ಜೀವನದ ಮೊದಲ ತತ್ತ್ವ. ನಮ್ಮನ್ನು ಜೀವಿಗಳಾಗಿ ಮಾಡಿರುವುದು ಏನು? ವಿಭಿನ್ನತೆಯೇ. ಸಮಗ್ರ ಸಮತೋಲನವು ನಮ್ಮ ನಾಶ. ಸಮಾನವಾದ ಮತ್ತು ಸಂಪೂರ್ಣವಾಗಿ ವ್ಯಾಪಿಸುವ ಪ್ರವೃತ್ತಿ ಶಾಖಕ್ಕೆ ಇದೆ. ಈ ಕೊಠಡಿಯಲ್ಲಿ ಒಂದು ಪ್ರಮಾಣದಶಾಖಾಂಶ ಇದೆ ಎಂದುಕೊಳ್ಳೋಣ, ಅದು ಆ ತರಹ ಹರಡುವದಾದರೆ, ಆಗ ಎಲ್ಲ ವ್ಯಾವಹಾರಿಕ ಉದ್ದೇಶಗಳಿಂದಲೂ ಆ ಶಾಖ ಕೊನೆಗಂಡಂತೆಯೇ. ಈ ವಿಶ್ವದಲ್ಲಿ ಚಲನೆಯನ್ನು ಸಾಧ್ಯಮಾಡುವದು ಯಾವದು? ಸಮತೋಲನ

ಕಳೆದಿರುವದು. ಸಮಾನತೆಯ ಏಕತ್ವ ಬರುವುದು, ಈ ವಿಶ್ವವಿನಾಶವಾದಾಗ ಮಾತ್ರವೇ; ಇಲ್ಲವಾದರೆ ಇಂತಹದೊಂದು ಅಸಾಧ್ಯ. ಅದಷ್ಟೇ ಅಲ್ಲ, ಹಾಗಿರುವದು ಅಪಾಯಕಾರಿ. ನಾವೆಲ್ಲರೂ ಒಂದೇ ರೀತಿಯಲ್ಲಿ ಆಲೋಚನೆ ಮಾಡಬೇಕೆಂದು ಅಪೇಕ್ಷೆಪಡಲೇಬಾರದು. ಆಗ ಆಲೋಚಿಸುವಂತಹ ಯಾವ ಯೋಚನೆಯೂ ಇರುವದಿಲ್ಲ. ವಸ್ತುಸಂಗ್ರಹಾಲಯದಲ್ಲಿರುವ ಈಜಿಪ್ಟಿನ ಮಮ್ಮಿಗಳಂತೆ (ರಕ್ಷಿತ ಶವ) ಯೋಚಿಸಲು ಯಾವ ಯೋಚನೆಯೂ ಇರದೆ ಒಬ್ಬರನ್ನೊಬ್ಬರು ನೋಡುತ್ತಾ ಇರುವೆವು. (ನಮ್ಮಗಳ ನಡುವೆ ಇರುವ) ಈ ವ್ಯತ್ಯಾಸ, ವೈವಿಧ್ಯತೆ ಈ ಪ್ರಭೇದವೇ, ಈ ತೆರನಾಗಿ ಸಮತೋಲನವಿಲ್ಲದಿರುವದೇ, ಇವುಗಳೇ ನಮ್ಮ ಅಭಿವೃದ್ಧಿಯ ಸಾಕ್ಷಾತ್ತಾದ ಆತ್ಮ, ನಮ್ಮೆಲ್ಲರ ಅಂತರಾತ್ಮ ಆಗುತ್ತದೆ. ಇದು ಹಾಗೇ ಆಗಿರುವದೇ ಸರಿ.

ಹಾಗಾದರೆ, ವಿಶ್ವವ್ಯಾಪಕ ಧರ್ಮದ ಆದರ್ಶವೆಂದರೆ ನಾನು ಏನೆಂದು ಅರ್ಥ ಮಾಡುತ್ತೇನೆ? ಯಾವದೋ ಒಂದು ವಿಶ್ವವ್ಯಾಪಕತತ್ವಶಾಸ್ತ್ರ ಅಥವಾ ಯಾವದೋ ಒಂದು ವಿಶ್ವವ್ಯಾಪಕ ಪುರಾಣ ಅಥವಾ ಯಾವದೋ ಒಂದು ವಿಶ್ವವ್ಯಾಪಕ ಆಚರಣೆ,– ನಾವೆಲ್ಲರೂ ಒಂದೇ ರೀತಿಯಲ್ಲಿ ಹಿಡಿದಿರುವದು, ಎಂದು ಅರ್ಥಮಾಡುವದಿಲ್ಲ. ಏಕೆಂದರೆ, ಈ ಪ್ರಪಂಚವು ಚಕ್ರದೊಳಗೆ ಚಕ್ರವಿರುವ ಅತಿತೊಡರಿನ, ಅತ್ಯಂತ ಜಟಿಲವಾದ, ಅತ್ಯಂತ ಅದ್ಭುತವಾದ ಯಂತ್ರ. ಇದು ಕಾರ್ಯಶೀಲವಾಗಿಯೇ ಇರಬೇಕೆಂದು ನನಗೆ ಗೊತ್ತಿದೆ. ಆಗ ನಾವು ಏನು ಮಾಡಬೇಕು? ಅದು ಸಲಿಲವಾಗಿ ಓಡುವಂತೆ, ಮಾಡಬಲ್ಲೆವು; ತಿಕ್ಕಾಟವನ್ನು ಕಡಮೆ ಮಾಡಬಲ್ಲೆವು; ಚಕ್ರಗಳಿಗೆ, ಇರುವ ಹಾಗೆಯೇ, ಜಿಡ್ಡನ್ನು ಹಚ್ಚಬಹುದು. ಹೇಗೆ? ಭಿನ್ನತೆಯ ಸಹಜವಾದ ಆವಶ್ಯಕತೆಯನ್ನು ಒಪ್ಪುವದರಿಂದ. ನಮ್ಮ (ಪರಮ) ಸಾಕ್ಷಾತ್ ಸ್ವಭಾವದಿಂದಾಗಿ ಹೇಗೆ ನಾವು ಏಕತೆಯನ್ನು ಮಾನ್ಯಮಾಡಿರುವೆವೋ, ಅದರಂತೆ ಭಿನ್ನತೆಯನ್ನು ನಾವು ಒಪ್ಪಬೇಕು. ಸತ್ಯವನ್ನು ನೂರು ಸಾವಿರ ವಿಧಗಳಲ್ಲಿ ವ್ಯಕ್ತಗೊಳಿಸಬಹುದು, ಈ ರೀತಿಯಲ್ಲಿ ಪ್ರತಿಯೊಂದೂ, ಎಷ್ಟು ದೂರ ತಾನು ಸಾಗುವದೋ, ಅಷ್ಟರಮಟ್ಟಿಗೆ ಸತ್ಯ ಎಂಬುದನ್ನು ನಾವು ಕಲಿಯಲೇಬೇಕು. ಒಂದೇ ವಸ್ತುವನ್ನು ನೂರು ಭಿನ್ನ ನಿಲುವುಗಳಿಂದ ಅವಲೋಕಿಸಬಹುದು ಆದಾಗ್ಯೂ ಅದು ಒಂದೇ ವಸ್ತುವೇ ಎಂಬುದನ್ನು ನಾವು ತಿಳಿಯಬೇಕು. ಉದಾಹರಣೆಗೆ ಸೂರ್ಯನನ್ನೇ ತೆಗೆದುಕೊಳ್ಳಿ. ಭೂಮಿಯ ಮೇಲೆ ನಿಂತ ಮನುಷ್ಯನು ಬೆಳಿಗ್ಗೆ ಉದಯವಾಗುವ ಸೂರ್ಯನನ್ನು ನೋಡುತ್ತಾನೆ ಎನ್ನೋಣ; ಸೂರ್ಯ ದೊಡ್ಡ ಚೆಂಡಿನಂತೆ ಕಾಣುತ್ತಾನೆ. ಅವನು ಕೈಯಲ್ಲಿ ಕ್ಯಾಮೆರಾ ಹಿಡಿದು ಸೂರ್ಯನಕಡೆಗೆ ಪ್ರಯಾಣ ಮಾಡುತ್ತಾನೆ, ಸೂರ್ಯನನ್ನು ಮುಟ್ಟುವವರೆಗೂ ಪ್ರತಿಹಂತದಲ್ಲೂ ಚಿತ್ರಗಳನ್ನು ತೆಗೆಯುತ್ತಿರುತ್ತಾನೆ ಎನ್ನೋಣ. ಪ್ರತಿಹಂತದ ಚಿತ್ರವೂ, ಬೇರೆಬೇರೆಯ ಹಂತಗಳ ಚಿತ್ರಗಳಿಗಿಂತ ಭಿನ್ನವಾಗಿರುವದು ಕಾಣಬರುತ್ತದೆ; ವಾಸ್ತವವಾಗಿ, ಅವನು ಹಿಂದಿರುಗಿದ ಮೇಲೆ, ಅವನ ಜೊತೆ ಎಷ್ಟೋ ಅನೇಕ ಸೂರ್ಯರು ಎನ್ನುವಂತೆ ಕಾಣುವ ಎಷ್ಟೋ ಅನೇಕ ಚಿತ್ರಗಳನ್ನು ತಂದಿರುತ್ತಾನೆ, ಆದರೂ ಆ ಮನುಷ್ಯನ ಪ್ರಯಾಣದ ವಿವಿಧ ಹಂತಗಳಲ್ಲಿ ತೆಗೆದದ್ದು ಒಂದೇ ಸೂರ್ಯನ ಚಿತ್ರಗಳು ಎಂದು ನಮಗೆ ಗೊತ್ತಿದೆ. ಇದರಂತೆಯೇ, ಭಗವಂತನ ವಿಷಯದಲ್ಲಿಯೂ ಸಹ. ಅತ್ಯುನ್ನತ ಅಥವಾ ಕೆಳಮಟ್ಟದ ತತ್ತ್ವಶಾಸ್ತ್ರಗಳ ಮೂಲಕ; ಅತ್ಯಂತ ಘನತೆಗೇರಿಸಿದ ಅಥವಾ

ಅತ್ಯಂತ ಸಾಮಾನ್ಯವಾದ ಪುರಾಣ ಕಥೆಗಳ ಮೂಲಕವಾಗಲೀ; ಅಥವಾ ಅತ್ಯಂತ ಅತಿಪರಿಷ್ಕಾರದ ಆಚರಣೆಗಳು ಅಥವಾ ಪೂರಾ ಅಂಧಭಕ್ತಿಯ ಮೂಲಕವಾಗಲೀ, ಪ್ರತಿ ಪಂಗಡ, ಪ್ರತಿ ಆತ್ಮ (ವ್ಯಕ್ತಿ), ಪ್ರತಿರಾಷ್ಟ್ರ ಪ್ರತಿಧರ್ಮ, ಅರಿತೋ, ಅರಿಯದೆಯೋ, ಭಗವಂತನೆಡೆಗೆ ಸೆಣಸುತ್ತಾ ಮೇಲು ಮೇಲಕ್ಕೆ ಏರುತ್ತದೆ; ಮಾನವನು ಕಾಣುವ ಸತ್ಯದ ಪ್ರತಿಯೊಂದು ದರ್ಶನವೂ, ಭಗವಂತನ ದರ್ಶನವೇ ಹೊರತು ಬೇರೆಯಾವದೂ ಅಲ್ಲ. ನಾವೆಲ್ಲರೂ ಕೈಗಳಲ್ಲಿ ಪಾತ್ರೆಗಳನ್ನು ಹಿಡಿದು ನೀರನ್ನು ಕೆರೆಯಿಂದ ತರಲು ಹೋಗುವೆವೆನ್ನೋಣ. ಒಬ್ಬನು ಬಟ್ಟಲು, ಮತ್ತೊಬ್ಬನು ಜಾಡಿ, ಇನ್ನೊಬ್ಬನು ಬಾನೆ ಇನ್ನೂ ಹೀಗೆಯೇ, ಇಟ್ಟುಕೊಂಡಿರುತ್ತಾನೆ, ನಾವು ಎಲ್ಲರೂ ನಮ್ಮ ಪಾತ್ರೆಗಳನ್ನು ತುಂಬಿಕೊಳ್ಳುವೆವು. ಪ್ರತಿಯೊಂದರಲ್ಲೂ ಸಹಜವಾಗಿಯೇ ನಾವು ತೆಗೆದುಕೊಂಡ ಹೋದ ಪಾತ್ರೆಯ ಆಕಾರವನ್ನು ನೀರು ಹೊಂದಿರುತ್ತದೆ. ಬಟ್ಟಲನ್ನು ತಂದವನಿಗೆ ನೀರು ಬಟ್ಟಲಿನ ಆಕಾರದಲ್ಲಿರುವದು; ಜಾಡಿಯನ್ನು ತಂದವನ ನೀರು ಜಾಡಿಯ ಆಕಾರದಲ್ಲಿ, ಇನ್ನೂ ಹೀಗೆಯೇ; ಆದರೆ ಪ್ರತಿಯೊಂದು ಎಡೆಯಲ್ಲೂ ನೀರು ಮತ್ತು ನೀರಿನ ಹೊರತು ಬೇರಲ್ಲ. ಧರ್ಮದ ವಿಷಯದಲ್ಲೂ ಅದು ಹಾಗೆಯೇ; ನಮ್ಮ ಮನಸ್ಸುಗಳು ಪಾತ್ರೆಗಳಂತೆ, ನಮ್ಮಲ್ಲಿ ಪ್ರತಿಯೊಬ್ಬನೂ ಭಗವಂತನನ್ನು ಸಿದ್ಧಿಸಿಕೊಳ್ಳುವ ಹಂತಕ್ಕೆ ಬರಲು ಪ್ರಯತ್ನ ಪಡುತ್ತಿದ್ದಾನೆ. ಭಗವಂತನು ಈ ವಿವಿಧ ಪಾತ್ರೆಗಳಲ್ಲಿ ತುಂಬಿದ ನೀರಿನಂತೆ, ಪ್ರತಿಯೊಂದು ಪಾತ್ರೆಯಲ್ಲೂ ಭಗವಂತನ ದೃಶ್ಯವು ಪಾತ್ರೆಯ ಒಳ ಆಕಾರದ ರೂಪದಲ್ಲಿ ಬರುವದು. ಆದಾಗ್ಯೂ 'ಅವನು' 'ಒಬ್ಬನೇ'. ಪ್ರತಿಯೊಂದರಲ್ಲೂ ಅವನು ಭಗವಂತನು. ನಾವು ಪಡೆಯಲಾಗುವದು ವಿಶ್ವವ್ಯಾಪಕತೆಯ ಇದೊಂದೇ ಭಾವನೆ.

ಇದುವರೆಗೆ ಹೇಳಿದಲ್ಲೆ ಸೈದ್ಧಾಂತಿಕವಾಗಿ ಸರಿಯಾಗಿದೆ. ಆದರೆ, ಧರ್ಮಗಳಲ್ಲಿ ಸಾಮರಸ್ಯವನ್ನು ಕಾರ್ಯರೂಪದಲ್ಲಿ ತರಲು ಯಾವದಾದರೂ ಮಾರ್ಗವಿದೆಯೇ? ಧರ್ಮದ ಈ ಎಲ್ಲ ವಿವಿಧ ಅವಲೋಕನಗಳ ವಾಸ್ತವಿಕತೆಗಳೂ ನಿಜವೆನ್ನುವದು ಬಹಳ ಬಹಳ ಹಿಂದಿನವು ಎನ್ನುವದನ್ನು ನಾವು ಕಾಣುತ್ತೇವೆ. ಭಾರತದಲ್ಲಿ, ಅಲೆಕ್ಸಾಂಡ್ರಿಯ, ಯೂರೋಪ್, ಚೀನ, ಜಪಾನ್, ಟಿಬೆಟ್, ಮತ್ತು ಕೊನೆಯಲ್ಲಿ ಅಮೆರಿಕದಲ್ಲಿ ಸೌಹಾರ್ದಯುತ ಧಾರ್ಮಿಕ ನಂಬಿಕೆಯನ್ನು ಆಕಾರಕ್ಕೆ ಕೊಡುವಲ್ಲಿ, ಎಲ್ಲ ಧರ್ಮಗಳೂ ಪ್ರೀತಿಯಲ್ಲಿ ಒಟ್ಟಾಗಿ ಬರುವಂತೆ ಮಾಡಲು ನೂರಾರು ಪ್ರಯತ್ನಗಳು ನಡೆದಿವೆ. ಅವೆಲ್ಲವೂ ಸೋತುಹೋಗಿವೆ. ಏಕೆಂದರೆ ಅವುಗಳು ಯಾವದೇ ವ್ಯಾವಹಾರಿಕ ಕಾರ್ಯಕ್ರಮವನ್ನು ತೆಗೆದುಕೊಳ್ಳಲಿಲ್ಲ. ಪ್ರಪಂಚದಲ್ಲಿರುವ ಎಲ್ಲ ಧರ್ಮಗಳೂ ಸರಿಯೇ ಆಗಿವೆ ಎಂದು ಅನೇಕರು ಒಪ್ಪಿಕೊಂಡಿದ್ದಾರೆ, ಆದರೆ ಅವುಗಳನ್ನು ಒಟ್ಟಿಗೆ ತರುವ, ಆದರೆ ಸಮೂಹದಲ್ಲಿಯೂ ಅವುಗಳಲ್ಲಿ ಪ್ರತಿಯೊಂದೂ ತನ್ನದೇ ವೈಯಕ್ತಿಕತೆಯನ್ನು ಕಾಪಾಡಿಕೊಂಡು ಬರುವಂತಹ, ಅನುಷ್ಠಾನ ವಿಧಾನವನ್ನು ಅವರು ತೋರಿಸುವದಿಲ್ಲ. ಧರ್ಮದಲ್ಲಿರುವ ಯಾವದೇ ಮನುಷ್ಯನ ವ್ಯಕ್ತಿ ವೈಲಕ್ಷಣ್ಯವನ್ನು ನಾಶಪಡಿಸದ, ಮತ್ತು ಅದೇ ಕಾಲದಲ್ಲಿ ಅವನಿಗೆ ಇತರ ಎಲ್ಲವುಗಳೊಡನೆ ಸಮರಸವಾಗಿ ಒಟ್ಟುಗೂಡುವ ಸ್ಥಾನವನ್ನು ಸೂಚಿಸುವ ಆ ಒಂದು ಮಾತ್ರವೇ ಅನುಷ್ಠಾನ ಯೋಗ್ಯವಾದುದು. ಆದರೆ ಈವರೆಗೂ, ಧಾರ್ಮಿಕ

ಸೌಹಾರ್ದತೆಗಾಗಿ ಪ್ರಯತ್ನ ಮಾಡಿದ, ಎಲ್ಲ ಕಾರ್ಯ ವ್ಯವಸ್ಥೆಗಳೂ, ಧರ್ಮದ ಎಲ್ಲ ವಿವಿಧ ದೃಷ್ಟಿಗಳನ್ನು ತೆಗೆದುಕೊಳ್ಳುವ ಪ್ರಸ್ತಾಪವನ್ನಿಟ್ಟುಕೊಂಡರೂ, ಕಾರ್ಯದಲ್ಲಿ ಅವೆಲ್ಲವನ್ನೂ ಕೆಲವು ಸಿದ್ಧಾಂತಗಳಿಗೆ ಕಟ್ಟಿಹಾಕುವ ಹೊಡೆದಾಟ, ಹೆಣಗಾಟಗಳನ್ನು ಮತ್ತು ಒಂದನ್ನು ಮತ್ತೊಂದು ತಳ್ಳಿಹಾಕುವಂತಹ ಹೆಚ್ಚಿನ ಹೊಸ ಪಂಗಡಗಳನ್ನು ಹುಟ್ಟು ಹಾಕಿದವು.

ನಾನು ನನ್ನದೊಂದು ಪುಟ್ಟ ಯೋಜನೆಯನ್ನಿಟ್ಟುಕೊಂಡಿದ್ದೇನೆ. ಅದು ಅನುಷ್ಠಾನ ಯೋಗ್ಯವೋ, ಇಲ್ಲವೋ ನನಗೆ ತಿಳಿಯದು, ಚರ್ಚೆಗಾಗಿ ಅದನ್ನು ನಿಮ್ಮ ಮುಂದಿಡಬಯಸುತ್ತೇನೆ. ನನ್ನ ಯೋಜನೆಯ ಕಾರ್ಯರೂಪವೇನು? ಮೊದಲಿಗೆ, ಸಾರ್ವತ್ರಿಕ ತತ್ತ್ವವನ್ನು ಸೂತ್ರವನ್ನು ಒಪ್ಪಲು ಮಾನವಕುಲವನ್ನು ಕೇಳಿಕೊಳ್ಳಬಯಸುತ್ತೇನೆ. "ನಾಶಮಾಡಬೇಡಿ". ಮೂರ್ತಿಭಂಜಕ ಸುಧಾರಕರು ಪ್ರಪಂಚಕ್ಕೆ ಯಾವದೇ ಒಳಿತನ್ನು ಮಾಡುವದಿಲ್ಲ. ಸಾಧ್ಯವಾದರೆ, ಸಹಾಯಮಾಡಿ, ನಿಮಗಾಗದಿದ್ದರೆ, ಕೈ ಕಟ್ಟಿಕೊಂಡು ಪಕ್ಕದಲ್ಲಿ ನಿಂತು ನಡೆಯುತ್ತಿರುವದನ್ನು ನೋಡಿ. ಸಹಾಯ ಮಾಡುವದಕ್ಕಾಗದಿದ್ದರೆ, ಚಿಂತೆಯಿಲ್ಲ, ಕೇಡು ಮಾಡಬೇಡಿ. ಯಾವದೇ ಮನುಷ್ಯನ ನಿಶ್ಚಿತಾಭಿಪ್ರಾಯಗಳು, ಅವು ಪ್ರಾಮಾಣಿಕವಾಗಿರುವವರೆಗೂ, ಅವುಗಳ ವಿರುದ್ಧ ಒಂದು ಪದವನ್ನೂ ಹೇಳಬೇಡಿ. ಎರಡನೆಯದಾಗಿ, ಮನುಷ್ಯನು ಎಲ್ಲಿ ನಿಂತಿರುವನೋ ಅಲ್ಲಿಂದ ಮುಂದಕ್ಕೆ ಸಾಗುವಂತೆ ಮಾಡಿರಿ. ಎಲ್ಲ ಧರ್ಮಗಳ ಕೇಂದ್ರ ಬಿಂದುವೂ ಭಗವಂತನೇ ಎನ್ನುವದು ಮತ್ತು ನಮ್ಮಲ್ಲಿ ಪ್ರತಿಯೊಬ್ಬನೂ ತ್ರಿಜ್ಯಗಳಲ್ಲೊಂದರ ಮೇಲೆ ಅವನೆಡೆಗೆ ಚಲಿಸುತ್ತಿದ್ದೇವೆ ಎಂಬುದು ನಿಜವಾದರೆ, ಆಗ ನಾವೆಲ್ಲರೂ ಆ ಕೇಂದ್ರಬಿಂದುವನ್ನು ತಲುಪುವದು ಖಂಡಿತ. ಎಲ್ಲ ತ್ರಿಜ್ಯಗಳೂ ಸಂಧಿಸುವ ಆ ಕೇಂದ್ರ ಬಿಂದುವಿನಲ್ಲಿ ನಮ್ಮೆಲ್ಲರ ಭಿನ್ನಾಭಿಪ್ರಾಯಗಳೂ ಕೊನೆಗಾಣುವುವು. ಈ ಎಲ್ಲ ತ್ರಿಜ್ಯಗಳೂ ಒಂದೇ ಕೇಂದ್ರದಲ್ಲಿ ಸೇರಿಹೋಗುತ್ತವೆ. ಒಬ್ಬನು, ತನ್ನ ಸ್ವಭಾವಕ್ಕನುಗುಣವಾಗಿ, ಇವುಗಳಲ್ಲಿ ಒಂದು ರೇಖೆಯ ಉದ್ದಕ್ಕೂ ಚಲಿಸುವನು, ಮತ್ತೊಬ್ಬನು ಇನ್ನೊಂದರ ಉದ್ದಕ್ಕೆ, ಮತ್ತು ನಾವೆಲ್ಲರೂ ನಮ್ಮ ಸ್ವಂತ ರೇಖೆಗಳುದ್ದಕ್ಕೂ ಮುನ್ನುಗ್ಗುವದಾದರೆ, ನಾವು ಖಂಡಿತವಾಗಿಯೂ ಅದರ ಕೇಂದ್ರಕ್ಕೆ ಬರುವೆವು, ಏಕೆಂದರೆ "ಎಲ್ಲ ರಸ್ತೆಗಳೂ ರೋಮ್‌ನಗರಕ್ಕೆ ಕರೆದೊಯ್ಯುತ್ತವೆ". ನಮ್ಮಲ್ಲಿ ಪ್ರತಿಯೊಬ್ಬನೂ ಸಹಜವಾಗಿ ತನ್ನದೇ ಸ್ವಭಾವಕ್ಕನುಗುಣವಾಗಿ ಬೆಳೆಯುತ್ತಾ ಅಭಿವೃದ್ಧಿಯಾಗುತ್ತಾ ಇರುವನು. ಸಕಾಲದಲ್ಲಿ ಪ್ರತಿಯೊಬ್ಬನೂ ಶ್ರೇಷ್ಠ ಸತ್ಯವನ್ನು ತಿಳಿಯುತ್ತಾನೆ, ಏಕೆಂದರೆ ಎಷ್ಟಾದರೂ ಮನುಷ್ಯರು ತಮಗೆ ತಾವೇ ಅರಿಯ ಕೊಳ್ಳಬೇಕು. ನೀವು, ನಾನು ಏನು ಮಾಡಬಲ್ಲೆವು? ನೀವು ಒಂದು ಮಗುವಿಗಾದರೂ ಕಲಿಸಿಕೊಡಬಲ್ಲಿರೆಂದು ಯೋಚಿಸುವಿರಾ? ಯೇನು ಮಾಡಲಾರಿರಿ. ಮಗುವು ತಾನೇ ಕಲಿತುಕೊಳ್ಳುತ್ತದೆ. ಅವಕಾಶಗಳನ್ನು ಕಲ್ಪಿಸಿ, ಇರುವ ಅಡೆತಡೆಗಳನ್ನು ತೆಗೆದು ಹಾಕುವದೇ ನಿಮ್ಮ ಕರ್ತವ್ಯವಾಗಿರಲಿ. ಸಸಿಯೊಂದು ಬೆಳೆಯುತ್ತದೆ. ಆ ಸಸಿ ಬೆಳೆಯುವಂತೆ ನೀವು ಮಾಡುವಿರಾ? ಅದರ ಸುತ್ತ ಬೇಲಿಕಟ್ಟಿ, ಯಾವದೇ ಪ್ರಾಣಿ ಸಸಿಯನ್ನು ತಿನ್ನದಂತೆ ನೋಡಿಕೊಳ್ಳುವದೇ ನಿಮ್ಮ ಕರ್ತವ್ಯ, ಅಲ್ಲಿಗೆ ನಿಮ್ಮ ಕರ್ತವ್ಯ ಮುಗಿಯುತ್ತದೆ. ಸಸಿಯು ತನ್ನಷ್ಟಕ್ಕೆ ತಾನೇ ಬೆಳೆಯುತ್ತದೆ. ಹಾಗೆಯೇ, ಪ್ರತಿಯೊಬ್ಬ ಮನುಷ್ಯನ ಧಾರ್ಮಿಕ ಬೆಳವಣಿಗೆಯ ವಿಷಯವೂ ಅಷ್ಟೆ. ಯಾರೂ ನಿಮಗೆ ಕಲಿಸಿಕೊಡಲಾರರು; ಯಾರೂ ನಿಮ್ಮನ್ನು

ಧಾರ್ಮಿಕ ಮನುಷ್ಯನನ್ನಾಗಿ ಮಾಡಲಾರರು. ನೀವೇ ಸ್ವಂತ ಕಲಿಯಬೇಕು ; ನಿಮ್ಮ ಬೆಳವಣಿಗೆಯು ನಿಮ್ಮ ಒಳಗಿನಿಂದ ಬರಬೇಕು.

ಹೊರಗಿನ ಉಪಾಧ್ಯಾಯನು ಏನು ಮಾಡಬಲ್ಲನು? ಅವನು ಅಡ್ಡಿಗಳನ್ನು ಸ್ವಲ್ಪಮಟ್ಟಿಗೆ ತೆಗೆದುಹಾಕಬಲ್ಲನು, ಅಲ್ಲಿಗೆ ಅವನ ಕರ್ತವ್ಯ ಮುಗಿಯಿತು. ಆದುದರಿಂದ ನಿಮ್ಮ ಕೈಲಾದರೆ, ಸಹಾಯಮಾಡಿ, ಆದರೆ ನಾಶಪಡಿಸಬೇಡಿ. ಜನರನ್ನು ಧಾರ್ಮಿಕರನ್ನಾಗಿ ನಾವು ಮಾಡಬಲ್ಲವರೆನ್ನುವ ಎಲ್ಲ ಭಾವನೆಗಳನ್ನು ಬಿಟ್ಟುಬಿಡಿ. ಅದು ಅಸಾಧ್ಯ. ನಿಮ್ಮ ಆತ್ಮವಲ್ಲದೆ ನಿಮಗೆ ಬೇರೆ ಯಾವ ಉಪಾಧ್ಯಾಯನೂ ಇರುವದಿಲ್ಲ. ಇದನ್ನು ಒಪ್ಪಿಕೊಳ್ಳಿ. ಅದರಿಂದೇನು? ಸಮಾಜದಲ್ಲಿ, ನಾವು ಅನೇಕ ಎಷ್ಟೋ ಭಿನ್ನ ಸ್ವಭಾವಗಳನ್ನು ನೋಡುತ್ತೇವೆ. ಸಾವಿರ, ಸಾವಿರ ವಿಧಗಳ ಮನಸ್ಸುಗಳು ಮತ್ತು ಪ್ರವೃತ್ತಿಗಳು, ಒಲವುಗಳು ಇವೆ. ಅವುಗಳ ಆದ್ಯಂತವಾದ ಸಾಮಾನ್ಯೀಕರಣ ಅಸಾಧ್ಯ, ಆದರೆ ನಮ್ಮ ಕಾರ್ಯೋದ್ದೇಶಕ್ಕಾಗಿ, ಅವುಗಳನ್ನು ಗುಣವಿವರಣೆಗೆ ನಾಲ್ಕು ಭಾಗಗಳಾಗಿ ಮಾಡಬಹುದು. ಮೊದಲು, ಕಾರ್ಯನಿರತ ಮನುಷ್ಯ, ಕೆಲಸಗಾರ; ಕರ್ಮಿಷ್ಠ, ಅವನು ಕೆಲಸ ಮಾಡಬೇಕೆನ್ನುತ್ತಾನೆ, ಅವನ ಮಾಂಸಖಂಡಗಳಲ್ಲಿ, ನರಗಳಲ್ಲಿ ಪ್ರಚಂಡವಾದ ಶಕ್ತಿಇದೆ. ಅವನ ಗುರಿ ಕರ್ಮ ಮಾಡುವದೇ– ಆಸ್ಪತ್ರೆಗಳನ್ನು ಕಟ್ಟುವದು, ಪರೋಪಕಾರಾರ್ಥ ಕಾರ್ಯಗಳನ್ನು, ಕರ್ಮಗಳನ್ನು ಮಾಡುವದು, ರಸ್ತೆಗಳನ್ನು ಮಾಡುವದು, ಕಾರ್ಯದ ಹವಣಿಕೆ ಮಾಡುವದು ಮತ್ತು ವ್ಯವಸ್ಥೆ ಮಾಡುವದು. ಅನಂತರ, ಭಾವುಕನು–ಭವ್ಯತೆ ಮತ್ತು ಸೌಂದರ್ಯವನ್ನು ಅತಿಯಾದ ಮಟ್ಟಕ್ಕೆ ಪ್ರೀತಿಸುವವನು. ಅವನು ಸುಂದರವಾದವನ್ನು ಯೋಚಿಸಲು ಇಷ್ಟ, ಪ್ರಕೃತಿಯ ಸೌಂದರ್ಯೋಪಾಸನೆಯಲ್ಲಿ ಸಂತೋಷ ಪಡುವನು. ಪ್ರೀತಿಯಿಂದ ಭಗವಂತನ ಆರಾಧನೆ ಮಾಡುವನು. ಎಲ್ಲ ಕಾಲದ ಮಹಾಮಹಿಮರನ್ನು ಧರ್ಮಗಳ ಪ್ರವಾದಿಗಳನ್ನು, ಭಗವಂತನ ಅವತಾರಗಳನ್ನು ತನ್ನ ತುಂಬು ಹೃದಯದಿಂದ ಪ್ರೀತಿಸುವನು; ಕ್ರಿಸ್ತ ಅಥವಾ ಬುದ್ಧ ಇದ್ದ ಎನ್ನುವದನ್ನು ತರ್ಕವು ಸಾಧಿಸಬಲ್ಲದೋ ಇಲ್ಲವೋ ಎನ್ನುವದರ ಗೊಡವೆ ಅವನಿಗಿಲ್ಲ; ಅವನಿಗೆ ಸಿನ್ಯೆ ಬೆಟ್ಟದ ಮೇಲಿನ ಧರ್ಮೋಪದೇಶ (Sermon on the mount) ಮಾಡಿದ ನಿಖರವಾದ ಕಾಲ ಯಾವದು, ಅಥವಾ ಕೃಷ್ಣ ಜನ್ಮ ತಳೆದ ನಿರ್ದಿಷ್ಟವಾದ ಕ್ಷಣ ಯಾವದು, ಎಂಬುದರ ಬಗ್ಗೆ ಗಮನವಿಲ್ಲ; ಅವನು ಎಚ್ಚರಿಕೆಯಿಂದ ಗಮನಿಸುವದು ಅವರ ವ್ಯಕ್ತಿತ್ವಗಳನ್ನು, ಅವರ ಪ್ರಿಯವಾದ ದೇಹಾಕೃತಿಗಳನ್ನು. ಇದು ಅವನ ಒಳ ಮನ ಹೀಗಿದೆ: ಇದು ಪ್ರಿಯಕರನಾದವನ, ಭಾವಪೂರಿತನಾದವನ ಸ್ವಭಾವ. ಅನಂತರದವನು ಅತೀಂದ್ರಿಯವಾದಿ, ಯೋಗಿ; ಅವನ ಮನಸ್ಸು ತನ್ನನ್ನೇ ತಾನು ವಿಶ್ಲೇಷಿಸಬೇಕು ಎನ್ನುತ್ತದೆ, ಮನುಷ್ಯನ ಮನೋ ವ್ಯಾಪಾರವನ್ನು ಅರ್ಥಮಾಡಿಕೊಳ್ಳಲು, ಒಳಗೆ ಕ್ರಿಯೆಯಲ್ಲಿ ತೊಡಗಿರುವ ಶಕ್ತಿಗಳು ಯಾವವು, ಅವುಗಳನ್ನು ತಿಳಿದು ಕೌಶಲದಿಂದ ನಿರ್ವಹಿಸಿ ಅವುಗಳನ್ನು ನಿಯಂತ್ರಣಕ್ಕೆ ತರುವದು ಹೇಗೆ ಎನ್ನುವದು ಆ ಮನಸ್ಸಿನ ಇಚ್ಛೆ. ಆಮೇಲೆ, ತತ್ತ್ವಶಾಸ್ತ್ರಜ್ಞನಿರುವನು, ಅವನು ಪ್ರತಿಯೊಂದನ್ನೂ ಅಳತಮಾಡಿ, ಎಲ್ಲ ಮಾನವ ತತ್ತ್ವಶಾಸ್ತ್ರದ ಸಾಧ್ಯತೆಗಳ ಆಚೆಯ – ತತ್ತ್ವ ಶಾಸ್ತ್ರಾತೀತವನ್ನು ತಿಳಿಯಲು ತನ್ನ ಬುದ್ಧಿಶಕ್ತಿಯನ್ನು ಯುಕ್ತಿಯನ್ನು

ಉಪಯೋಗಿಸಬೇಕೆಂದಿರುವವನು.

ಅಂದರೆ, ಈಗ ಅತ್ಯಂತ ದೊಡ್ಡ ಪ್ರಮಾಣದ ಮಾನವಕುಲಕ್ಕೆ ಈ ವಿವಿಧ ತೆರನ ಮನಸ್ಸುಗಳಿಗೆ ಧರ್ಮವು ಸಾಕಷ್ಟು ಗ್ರಾಸವನ್ನೊದಗಿಸುವ ಸಾಮರ್ಥ್ಯಶಾಲಿಯಾಗಿರಲೇಬೇಕು; ಎಲ್ಲಿ ಈ ಸಾಮರ್ಥ್ಯಕ್ಕೆ ಕೊರತೆ ಇರುವದೋ ಆಗ ಇರುವ ಪಂಗಡಗಳೆಲ್ಲಾ ಏಕಪಕ್ಷೀಯಗಳಾಗುವವು. ಪ್ರೀತಿ ಮತ್ತು ಭಾವಪರವಶತೆಯನ್ನು ಬೋಧಿಸುವ ಪಂಗಡದ ಕಡೆ ನೀವು ಹೋಗುವಿರೆನ್ನೋಣ. ಅವರು ಹಾಡುವರು, ಅಳುವರು ಮತ್ತು ಪ್ರೀತಿಯನ್ನು ಬೋಧಿಸುವರು. 'ನನ್ನ ಸ್ನೇಹಿತನೇ, ಅದೇನೋ ಸರಿ, ಆದರೆ ನನಗೆ ಇದಕ್ಕಿಂತ ಪ್ರಬಲವಾದದ್ದೊಂದು– ಸ್ವಲ್ಪ ಸಹಜ ಪ್ರಜ್ಞೆ ಮತ್ತು ತತ್ತ್ವಶಾಸ್ತ್ರ– ಬೇಕು; ಇದನ್ನು ನಾನು ಹೆಜ್ಜೆ ಹೆಜ್ಜೆಯಂತೆ ಹೆಚ್ಚು ವಿವೇಚನೆಯಿಂದ ಅರ್ಥಮಾಡಿಕೊಳ್ಳಬಯಸುತ್ತೇನೆ' ಎಂದು ನೀವು ಹೇಳಿದಕೂಡಲೆ, ಅವರು ನಿನ್ನನ್ನು ಹೊರಗೆ ಹೋಗಲು ಹೇಳುವದಷ್ಟೇ ಅಲ್ಲ, ಸಾಧ್ಯವಾದರೆ ಇತರ ಸ್ಥಳಕ್ಕೂ ಕಳಿಸಿಕೊಡುವರು. ಪರಿಣಾಮವೆಂದರೆ, ಈ ಪಂಗಡವು ಭಾವಪರವಶತೆಯುಳ್ಳ ಮನಸ್ಸಿನ ಜನರಿಗೆ ಮಾತ್ರ ಸಹಾಯ ಮಾಡಬಲ್ಲರು. ಅವರು ಇತರರಿಗೆ ಸಹಾಯ ಮಾಡುವದಿಲ್ಲವಷ್ಟೇ ಅಲ್ಲ ಅವರನ್ನು ನಾಶಮಾಡಲೂ ಪ್ರಯತ್ನಿಸುವರು; ಇದಿಷ್ಟು ಸಮಗ್ರತೆಯಲ್ಲೂ ಅತ್ಯಂತ ಕೆಟ್ಟ ಭಾಗವೆಂದರೆ ಅವರು ಮತ್ತಿತರರಿಗೆ ಸಹಾಯ ಮಾಡರು ಎಂದಷ್ಟೇ ಅಲ್ಲ, ಆದರೆ ಅವರ ಪ್ರಾಮಾಣಿಕತೆಯನ್ನು ನಂಬುವದಿಲ್ಲ. ಭಾರತದ ಮತ್ತು ಪೂರ್ವ ದೇಶಗಳ ವಿವೇಚನಾ ಶಕ್ತಿಯನ್ನು ಕುರಿತು ಮಾತನಾಡುವ ತತ್ತ್ವಶಾಸ್ತ್ರಜ್ಞರಿದ್ದಾರೆ, ಅವರು ಮನಃಶಾಸ್ತ್ರದ ದೊಡ್ಡ ಮತ್ತು ಐವತ್ತು ಅಕ್ಷರಗಳಷ್ಟು ಉದ್ದವಿರುವ ಪದಗಳನ್ನೂ ಉಪಯೋಗಿಸುವರು, ಆದರೆ ನನ್ನಂತಹ ಸಾಮಾನ್ಯ ಮನುಷ್ಯನೊಬ್ಬ ಅವರಲ್ಲಿ ಹೋಗಿ "ನನ್ನನ್ನು ಧಾರ್ಮಿಕನನ್ನಾಗಿ ಮಾಡುವಂತಹದೇನನ್ನಾದರೂ ಹೇಳಬಲ್ಲಿರಾ?" ಎಂದು ಕೇಳಿದರೆ, ಅವರು ಮೊದಲು ಮಾಡುವದೆಂದರೆ ಮುಗುಳ್ನಗುವರು– "ಓ, ನೀವು ನಿಮ್ಮ ವಿವೇಚನೆಯಲ್ಲಿ ಬಹಳ ಕೆಳಗಿರುವಿರಿ, ಪಾರಮಾರ್ಥಿಕವಾದದ್ದೇನನ್ನು ಅರ್ಥಮಾಡಿಕೊಳ್ಳಬಲ್ಲಿರಿ" ಎನ್ನುವರು. ಇವರು ಅಹಂಕಾರದ–ತತ್ತ್ವಜ್ಞರು. ಅವರು ಸರಳವಾಗಿ ಹೋಗಲು ನಿಮಗೆ ಬಾಗಿಲನ್ನು ತೋರುವರು. ಅನಂತರ ಯೋಗ ರಹಸ್ಯದ ಪಂಗಡದವರಿದ್ದಾರೆ; ಇರುವಿಕೆಯ ಭಿನ್ನ ಭಿನ್ನ ಪಾತಳಿಗಳು, ಮನಸ್ಸಿನ ವಿಭಿನ್ನ ಹಂತಗಳು, ಮನಃಶಕ್ತಿ ಏನನ್ನು ಮಾಡಬಲ್ಲುದು, ಹೀಗೇ ನಾನಾಬಗೆಯ ಅನೇಕ ತೆರನ ವಿಷಯಗಳನ್ನು ಕುರಿತು ಅವರು ಮಾತನಾಡುವರು; ನೀವು ಸಾಮಾನ್ಯ ಮನುಷ್ಯರಾಗಿದ್ದರೆ, "ನಾನೇನಾದರೂ ಒಳಿತನ್ನು ಮಾಡುವಂತಹದನ್ನು ತೋರಿಸಿ, ನಾನು ಹೆಚ್ಚಾಗಿ ಚಿಂತನಾತ್ಮಕವಾಗಿ ವಿಚಾರ ಮಾಡಲಾರೆ; ನನಗೆ ಹೊಂದುವಂತಹ ಏನನ್ನಾದರೂ ಕೊಡಬಲ್ಲಿರಾ" ಎಂದು ಕೇಳಿದರೆ? ಅವರು ನಕ್ಕು ಹೇಳುವರು, "ಆ ಮೂರ್ಖನ ಮಾತನ್ನು ಕೇಳಿ, ಅವನು ಏನೂ ತಿಳಿದಿಲ್ಲ, ಅವನ ಇರುವಿಕೆಯೂ ವ್ಯರ್ಥ". ಈ ರೀತಿ ಪ್ರಪಂಚದ ಎಲ್ಲೆಡೆಗಳಲ್ಲೂ ನಡೆಯುತ್ತಿರುವದು. ಈ ಎಲ್ಲ ವಿಭಿನ್ನ ಪಂಗಡಗಳ ಪ್ರಚಂಡ ಪ್ರತಿವಾದಕರನ್ನು ಕರೆಸಿ, ಅವರೆಲ್ಲರನ್ನೂ ಒಂದು ಕೊಠಡಿಯಲ್ಲಿ ಕೂಡಿಹಾಕಿ, ಅವರ ಸುಂದರ ಅಪಹಾಸ್ಯದ ನಗುವನ್ನು ಚಿತ್ರೀಕರಿಸಬೇಕು ಎಂದು ಇಷ್ಟಪಡುತ್ತೇನೆ.

ಇದೀಗ ಧರ್ಮವಿರುವ ಸ್ಥಿತಿ, ವಸ್ತುಗಳ ಇರುವಿಕೆಯ ಸ್ಥಿತಿ, ನಾನು ಪ್ರಸಾರ ಮಾಡಲಿಚ್ಛಿಸುವ ಧರ್ಮವು ಸಮಾನವಾಗಿ ಎಲ್ಲ ಮನಸ್ಸುಗಳಿಗೂ ಸ್ವೀಕೃತವಾಗಿರಬೇಕು; ಸಮಾನ ತಾತ್ವಿಕತೆ, ಸಮಾನ ಭಾವುಕತೆ ಭಕ್ತಿ, ಸಮಾನ ನಿಗೂಢತೆ (ಯೋಗ ಜ್ಞಾನ) ಮತ್ತು ಸಮಾನ ಕಾರ್ಯಾನುಕೂಲಕರವಾಗಿರಲೇಬೇಕು. ಕಾಲೇಜುಗಳಿಂದ ಮಹಾಮಹೋಪಾಧ್ಯಾಯರುಗಳು, ವಿಜ್ಞಾನ ಜನರು, ಭೌತ ಶಾಸ್ತ್ರಜ್ಞರು ಬಂದರೆ ಅವರು ಯುಕ್ತವಾದದ್ದನ್ನು ಆರಿಸಿಕೊಳ್ಳುವರು. ಅವರಿಗೆಷ್ಟು ಬೇಕೋ ಅಷ್ಟನ್ನು ಯುಕ್ತಿಯನ್ನು ಅವರು ತೆಗೆದುಕೊಳ್ಳಲಿ, ಅದಕ್ಕೊಂದು ಮಿತಿಯಿದೆ, ಅಲ್ಲಿಂದಾಚೆಗೆ ತರ್ಕ (ಯುಕ್ತಿ) ವನ್ನು ಬಿಡದೆ ಮುಂದೆ ಹೋಗಲಾರೆವೆಂದು ಅವರಿಗೆ ಅನಿಸುವದು. ಅವರು ಹೇಳುವರು, "ಭಗವಂತ ಮತ್ತು ಮುಕ್ತಿಯ ಈ ಭಾವನೆಗಳು ಮೂಢನಂಬಿಕೆಗಳು, ಅವನ್ನು ಬಿಟ್ಟು ಬಿಡಿ". ನಾನು ಹೇಳುವೆ, "ಶ್ರೀಮಾನ್ ತತ್ತ್ವಶಾಸ್ತ್ರಜ್ಞರೇ, ನಿಮ್ಮ ದೇಹವೇ ಅತೀ ದೊಡ್ಡ ಮೂಢನಂಬಿಕೆ. ಅದನ್ನು ಬಿಡಿ, ಊಟಕ್ಕೆ ಅಥವಾ ನಿಮ್ಮ ತಾತ್ವಿಕ ಕುರ್ಚಿಗೆ ಹೋಗಬೇಡಿ. ದೇಹವನ್ನು ಬಿಡಿ, ಅದು ನಿಮಗೆ ಆಗಲಾರದ್ದಾದರೆ, ಪ್ರಾಣದಾನವನ್ನು ಬೇಡಿ, ಕುಳಿತುಕೊಳ್ಳಿ". ಏಕೆಂದರೆ, ಈ ಪ್ರಪಂಚವು ಒಂದೇ, ವಿಶ್ವದಲ್ಲಿರುವದು ಕೇವಲ ಒಂದೇ 'ಅಸ್ತಿತ್ವ' ಎಂದು ಉಪದೇಶಿಸುವ ತತ್ತ್ವವನ್ನು ಹೇಗೆ ಸಂಪಾದಿಸುವದು ಎಂದು ಧರ್ಮವು ತೋರಿಸಿಕೊಡಬಲ್ಲದಾಗಿರಲೇಬೇಕು. ಅದರಂತೆಯೇ, ಯೋಗಿ ಬಂದರೆ, ಅವನಿಗೆ ಸ್ವಾಗತ ನೀಡಬೇಕು, ಅವನಿಗೆ ಮನೋ ವಿಶ್ಲೇಷಣೆಯ ವಿಜ್ಞಾನವನ್ನು ಕೊಡಲು ತಯಾರಾಗಿ, ಅದನ್ನು ಪ್ರಾಯೋಗಿಕವಾಗಿಯೂ ಅವನ ಮುಂದೆ ತೋರಿಸಿಕೊಡಿ. ಭಾವನಾತ್ಮಕ ಭಕ್ತರು ಬಂದರೆ, ನಾವು ಅವರೊಡನೆ ಭಗವಂತನ ಹೆಸರಿನಲ್ಲಿ ನಗುತ್ತಾ ಅಳುತ್ತಾ ಕುಳಿತುಕೊಳ್ಳಬೇಕು; ನಾವು "ಪ್ರೀತಿಯ ಬಟ್ಟಲನ್ನು ಕುಡಿಯಬೇಕು, ಹುಚ್ಚರಾಗಬೇಕು", ಶಕ್ತಿಪೂರಿತ ಕರ್ಮಿಷ್ಠ ಬಂದರೆ, ನಮ್ಮಲ್ಲಿರುವ ಎಲ್ಲ ಶಕ್ತಿಯಿಂದ ಅವನೊಡನೆ ಕರ್ಮ ಮಾಡಲೇಬೇಕು. ಈ ಸಂಯೋಜನೆಯು ವಿಶ್ವವ್ಯಾಪಕ ಧರ್ಮಕ್ಕೆ ಅತಿ ಹತ್ತಿರದ ಆದರ್ಶರೂಪಕ್ಕೆ ದಾರಿ. ಅವರೆಲ್ಲರ ಮನಸ್ಸುಗಳಲ್ಲಿ, ತತ್ತ್ವಶಾಸ್ತ್ರ ಅಧ್ಯಾತ್ಮಯೋಗ, ಭಾವಪರವಶತೆ (ಭಕ್ತಿ), ಕಾರ್ಯಾಸಕ್ತಿ,- (ಕರ್ಮಾಸಕ್ತಿ) ಈ ಎಲ್ಲವುಗಳ ಮೂಲಾಂಶಗಳು ಸಮಾನವಾಗಿ ತುಂಬಿಕೊಂಡಿರುವಂತಹ ಎಲ್ಲ ಮನುಷ್ಯರನ್ನೂ ಭಗವಂತನು ರೂಪಿಸುವದಾದರೆ! ಅದು ಪರಿಪೂರ್ಣ ಮನುಷ್ಯನ ಆದರ್ಶ, ನನ್ನ ಆದರ್ಶ. ಈ ಮೂಲಾಂಶಗಳಲ್ಲಿ ಒಂದೋ ಎರಡನ್ನೋ ಮಾತ್ರವೇ ಇರುವ ವೈಲಕ್ಷಣ್ಯದ ಪ್ರತಿಯೊಬ್ಬನನ್ನೂ ನಾನು 'ಏಕಪಕ್ಷೀಯ'ನೆಂದು ಪರಿಗಣಿಸುವೆ; ಈ ಪ್ರಪಂಚವು ಬಹುಮಟ್ಟಿಗೆ ಇಂತಹ 'ಏಕ ಪಕ್ಷೀಯ' ಮನುಷ್ಯರಿಂದಲೇ ತುಂಬಿದೆ; ತಾವು ಚಲಿಸುವ ಕೇವಲ ಒಂದೇ ರಸ್ತೆಯನ್ನು ಮಾತ್ರ ತಿಳಿದಿರುವರು, ಮತ್ತು ಅದನ್ನು ಬಿಟ್ಟು ಬೇರೆ ಯಾವದಾದರೂ ಅವರಿಗೆ ಅಪಾಯಕಾರಿ, ಭೀಕರ ಎನಿಸುವದು. ಈ ಎಲ್ಲ ನಾಲ್ಕೂ ದಿಕ್ಕುಗಳಲ್ಲಿಯೂ ಸೌಹಾರ್ದಯುತವಾದ ಸಮತೆಯನ್ನು ಹೊಂದುವದೇ ನನ್ನ ಧರ್ಮದ ಆದರ್ಶ, ಮತ್ತು ಈ ಧರ್ಮವನ್ನು ಪಡೆಯುವದು, ನಾವು ಭಾರತದಲ್ಲಿ ಏನನ್ನು, 'ಯೋಗ'- ಏಕೀಭಾವ ಎಂದು ಕರೆಯುವೆವೋ ಅದರಿಂದ. ಕಾರ್ಯನಿರತನಿಗೆ ಅದು ಮನುಷ್ಯರು ಮತ್ತು ಇಡೀ ಮಾನವ ಕುಲದ ಸಂಯೋಗ; ಯೋಗಿಗೆ ತನ್ನ ಕೆಳ ಹಂತ ಮತ್ತು 'ಉನ್ನತ ಆತ್ಮ' ಸಂಯೋಗ; ಪ್ರಿಯಕರನಿಗೆ ತನ್ನ ಮತ್ತು 'ಪ್ರೀತಿಯ

ಭಗವಂತ'ನ ಸಂಯೋಗ; ಮತ್ತು ತತ್ತ್ವಜ್ಞನಿಗೆ ಎಲ್ಲ ಅಸ್ತಿತ್ವಗಳ ಸಂಯೋಗ. ಇದೇ ಯೋಗವೆನ್ನುವದರ ಅರ್ಥ. ಇದು ಸಂಸ್ಕೃತ ಪದ, ಈ ಯೋಗದ ನಾಲ್ಕು ಭಾಗಗಳನ್ನು ಸಂಸ್ಕೃತದಲ್ಲಿ ಬೇರೆಬೇರೆಯಾದ ಹೆಸರುಗಳಿಂದ ಕರೆಯುತ್ತಾರೆ. ಈ ತೆರನ ಸಂಯೋಗವನ್ನು ಅರಸುವ ಮನುಷ್ಯನನ್ನು ಯೋಗಿಯೆಂದು ಕರೆಯುವರು. ಕಾರ್ಯನಿರತನನ್ನು ಕರ್ಮಯೋಗಿಯೆನ್ನುವರು; ಪ್ರೀತಿಯ ಮೂಲಕ ಸಂಯೋಗವನ್ನು ಕಾಣುವವನು ಭಕ್ತಿಯೋಗಿ, ಅಧ್ಯಾತ್ಮಯೋಗದಿಂದ ಅದನ್ನು ಕಾಣುವವನು ರಾಜಯೋಗಿ. ಮತ್ತು ತತ್ತ್ವಶಾಸ್ತ್ರದಿಂದ ಅದನ್ನು ಕಾಣಬಯಸುವವನು ಜ್ಞಾನಯೋಗಿ. ಹೀಗೆ ಈ ಪದ 'ಯೋಗಿ' ಎಂಬ ಮಾತು ಎಲ್ಲವನ್ನೂ ಒಳಗೊಂಡಿದೆ.

ಈಗ ಎಲ್ಲಕ್ಕೂ ಮೊದಲು ರಾಜಯೋಗವನ್ನು ತೆಗೆದುಕೊಳ್ಳೋಣ. ಈ ರಾಜಯೋಗವೆಂದರೆ, ಮನಸ್ಸನ್ನು ಹತೋಟಿಯಲ್ಲಿಡುವದು ಎಂದೇನು? ಈ ದೇಶದಲ್ಲಿ ನೀವು ಎಲ್ಲ ತೆರಗಳ ತುಂಟ ಪಿಶಾಚಿಗಳೊಡನೆ ಈ 'ಯೋಗ' ಪದವನ್ನು ಕೂಡಿಸಿರುವುದು, ನನಗೆ ಭೀತಿಯುಂಟು ಮಾಡಿದೆ, ಆದುದರಿಂದ ಇಂತಹವುಗಳ ಜೊತೆ ಅದಕ್ಕೇನೂ ಸಂಬಂಧವಿಲ್ಲೆಂದು ನಾನು ಮೊದಲು ಹೇಳಲೇಬೇಕು. ಈ ಯೋಗಗಳಲ್ಲಿ ಯಾವದೊಂದೂ ತರ್ಕವನ್ನು ಬಿಡುವದಿಲ್ಲ, ಯಾವದೊಂದೂ ಕಣ್ಣಿಗೆ ಮಣ್ಣೆರಚಿಸಿಕೊಳ್ಳಿ ಎಂದು ಹೇಳುವದಿಲ್ಲ, ಅಥವಾ ನಿಮ್ಮ ವಿವೇಚನೆಯನ್ನು ಯಾವದಾದರೂ ಮಾದರಿಯ ಪಾದ್ರಿ (ಪುರೋಹಿತ)ಗಳ ಕೈಗೂ ವಹಿಸಬೇಡಿ. ನಿಮ್ಮ ನಿಷ್ಠೆಯನ್ನು ಯಾವ ಅತಿಮಾನವ ದೂತನಿಗೂ ಕೊಡಿ ಎಂದು ಅವುಗಳಲ್ಲಿ ಯಾವದೂ ಕೇಳುವದಿಲ್ಲ. ಅವುಗಳಲ್ಲಿ ಪ್ರತಿಯೊಂದೂ ನೀವು ನಿಮ್ಮ ವಿವೇಚನಾಶಕ್ತಿಗೆ ಅಂಟಿಕೊಂಡು ಅದನ್ನು ಭದ್ರವಾಗಿ ಹಿಡಿಯಿರಿ ಎಂದು ಹೇಳುತ್ತದೆ. ಎಲ್ಲ ಜೀವಿಗಳಲ್ಲೂ ಮೂರು ವಿಧದ ಜ್ಞಾನ ಸಾಧನಗಳು ಇವೆ. ಮೊದಲನೆಯದು, ಸಹಜ ಪ್ರವೃತ್ತಿ; ಇದು ಪ್ರಾಣಿಗಳಲ್ಲಿ ಅತಿಹೆಚ್ಚಾಗಿ ಅಭಿವೃದ್ಧಿಯಾಗಿದೆ ಎಂದು ನೀವು ಕಾಣುತ್ತೀರಿ. ಇದು ಜ್ಞಾನದ ಅತಿ ಕೆಳಮಟ್ಟದ ಸಾಧನ. ಜ್ಞಾನದ ಎರಡನೆಯ ಸಾಧನವು ಯಾವದು? ವಿವೇಚನೆ. ಅದು ಹೆಚ್ಚಾಗಿ ಬೆಳೆದಿರುವದು ಮನುಷ್ಯನಲ್ಲಿ ಎಂದು ನೀವು ಕಾಣುತ್ತೀರಿ. ಈಗ ಮೊದಲಸ್ಥಾನದಲ್ಲಿ, ಸಹಜ ಪ್ರವೃತ್ತಿಯು (ಸಹಜ ವಿಜ್ಞಾನ) ತಕ್ಕಷ್ಟು ಸಾಲದ ಉಪಕರ; ಪ್ರಾಣಿಗಳಿಗೆ ಅವುಗಳ ಕಾರ್ಯಕ್ಷೇತ್ರ ಬಹಳವಾಗಿ ಮಿತಿಯುಳ್ಳದ್ದು, ಆ ಮಿತಿಯೊಳಗೆ ಸಹಜ ಪ್ರವೃತ್ತಿ ಕ್ರಿಯಾಶೀಲವಾಗುತ್ತದೆ. ನೀವು ಮನುಷ್ಯನಿಗೆ ಬಂದಾಗ, ಅದು ಬಹುದೊಡ್ಡದಾಗಿ ವಿವೇಕವೆಂದು ಬೆಳೆದಿರುತ್ತದೆ. ಇಲ್ಲಿ ಕಾರ್ಯಕ್ಷೇತ್ರವು ವಿಸ್ತಾರವಾಗಿ ಬಂದಿರುತ್ತದೆ. ಆದರೂ, ವಿವೇಚನಾ ಶಕ್ತಿಯೂ ಇನ್ನೂ ಹೆಚ್ಚಾಗಿ ಸಾಲದ್ದು. ವಿವೇಚನೆಯು ಸ್ವಲ್ಪ ದೂರದವರೆಗೆ ಮಾತ್ರ ಹೋಗಬಲ್ಲುದು, ಆಮೇಲೆ ನಿಲ್ಲುತ್ತದೆ; ಅದು ಇನ್ನೂ ಹೆಚ್ಚು ಮುಂದೆ ಹೋಗಲಾರದು; ಅದನ್ನು ತಳ್ಳಲು ಪ್ರಯತ್ನಿಸಿದರೆ, ನಿಸ್ಸಹಾಯಕ ಗೊಂದಲವಾಗಿ, ಭ್ರಾಂತಿಯಾಗಿ ಪರಿಣಮಿಸುವದು, ವಿವೇಕವೇ ಅವಿವೇಕಿಯಾಗುವದು. ತರ್ಕವು ಸುಳಿಯೊಳಗಿನ ವಾದವಾಗುತ್ತದೆ. ಉದಾಹರಣೆಗೆ, ನಮ್ಮ ಇಂದ್ರಿಯಾನುಭವದ ಸಾಕ್ಷಾತ್ ಮೂಲವನ್ನು ತೆಗೆದುಕೊಳ್ಳಿ– ವಸ್ತು ಮತ್ತು ಬಲ. ವಸ್ತುವೆಂದರೆ ಏನು? ಯಾವದರ ಮೇಲೆ ಬಲ ಕಾರ್ಯಮಾಡುವದೋ ಅದು. ಬಲವೆಂದರೆ?

ಜಡವಸ್ತುವಿನ ಮೇಲೆ ಕೆಲಸ ಮಾಡುವಂತಹುದು. ಗೋಜಲನ್ನು ನೋಡಿ, ನೈಯಾಯಿಕರು, ಹಿಂದೆ–ಮುಂದೆ ಆಡುವದು ಎನ್ನುವರು. ಒಂದು ಭಾವ ಇನ್ನೊಂದನ್ನು ಅವಲಂಬಿಸಿರುವದು, ಆ ಇನ್ನೊಂದು ಒಂದನ್ನು ಅವಲಂಬಿಸಿದೆ. ವಿವೇಕದ ಮುಂದೆ ಬಹುದೊಡ್ಡ ಅಡ್ಡಗಟ್ಟಾಗಿನಿಂತಿದೆ, ಅದರಿಂದಾಚೆಗೆ ವಿವೇಕವು ಹೋಗಲಾರದು; ಆದಾಗ್ಯೂ ಅದು ಯಾವಾಗಲೂ ಆಚೆಯಿರುವ ಅಪರಿಮಿತದ ಪ್ರದೇಶಕ್ಕೆ ಒಳಹೋಗಲು ಅಸಹನೆಯಿಂದಿರುತ್ತದೆ. ನಮ್ಮ ಇಂದ್ರಿಯಗಳು ಅನುಭವಿಸುವ ಅಥವಾ ಮನಸ್ಸು ಯೋಚಿಸುವ ಈ ಪ್ರಪಂಚವು ಅಥವಾ ಈ ವಿಶ್ವವು (ಹಾಗೆ ಹೇಳುವದಾದರೆ) ಅಪರಿಮಿತದ, ಜಾಗ್ರತಾವಸ್ಥೆಯ ಸಮತಟ್ಟಿನ ಮೇಲೆ ಬಿದ್ದಿರುವ, ಕೇವಲ ಒಂದು ಪರಮಾಣು ಮಾತ್ರ; ಜಾಗ್ರತಾವಸ್ಥೆಯ ಜಾಲಬಂಧವು ನಿರ್ಧರಿಸಿರುವ ಸಂಕುಚಿತ ಮಿತಿಯೊಳಗೆ ವಿವೇಕವು ಕೆಲಸಮಾಡುವದು, ಅದರಿಂದಾಚೆಗಿಲ್ಲ. ಆದುದರಿಂದ ನಮ್ಮನ್ನು ಆಚೆಗೆ ಕರೆದೊಯ್ಯುವ ಯಾವದೋ ಇತರ ಉಪಕರಣವಿರಲೇಬೇಕು, ಆ ಉಪಕರಣವೇ ಸ್ಫೂರ್ತಿ. ಹೀಗೆ, ಸಹಜತೆ (ಪ್ರವೃತ್ತಿ,) ವಿವೇಕ ಮತ್ತು ಸ್ಫೂರ್ತಿಗಳು ಜ್ಞಾನದ ಮೂರು ಉಪಕರಣಗಳು. ಸಹಜ ಪ್ರವೃತ್ತಿಯು ಪ್ರಾಣಿಗಳಿಗೆ, ವಿವೇಕವು ಮನುಷ್ಯರಿಗೆ, ಸ್ಫೂರ್ತಿಯು 'ದೇವ–ಮನುಷ್ಯರಿಗೆ' ಸೇರಿವೆ. ಆದರೆ ಎಲ್ಲ ಮಾನವ ಜೀವಿಗಳಲ್ಲೂ, ಜ್ಞಾನದ ಈ ಮೂರು ಉಪಕರಣಗಳ ಬೀಜಾಂಕುರಗಳು ಹೆಚ್ಚು ಕಡಿಮೆ ಅಭಿವೃದ್ಧ ಸ್ಥಿತಿಯಲ್ಲಿ ಕಾಣಬರುವವು. ಈ ಮಾನಸಿಕ ಉಪಕರಣಗಳ ವಿಕಸನಕ್ಕೆ ಜೀವಾಂಕುರಗಳಿರಲೇಬೇಕು. ಒಂದು ಉಪಕರಣವು ಮತ್ತೊಂದರ ವಿಕಸನ, ಆದುದರಿಂದ ಅದನ್ನು ಪ್ರತಿಷೇಧ ಮಾಡುವದಿಲ್ಲ, ಎಂಬುದು ಕೂಡ ನೆನಪಿನಲ್ಲಿರಲೇಬೇಕು. ವಿವೇಕವು ಸ್ಫೂರ್ತಿಯಾಗಿ ವಿಕಸನವಾಗುತ್ತದೆ, ಆದುದರಿಂದ ಸ್ಫೂರ್ತಿಯು ವಿವೇಕವನ್ನು ವಿರೋಧಿಸುವದಿಲ್ಲ, ಆದರೆ ಅದಕ್ಕೆ ಪೂರಕವಾಗುತ್ತದೆ. ವಿವೇಕಕ್ಕೆ, ದೊರಕದವುಗಳನ್ನು ಸ್ಫೂರ್ತಿಯು ಬೆಳಕಿಗೆ ತರುತ್ತದೆ; ಅವು ವಿವೇಕವನ್ನು ವಿರೋಧಿಸುವದಿಲ್ಲ. ವೃದ್ಧನು ಮಗುವನ್ನು ವಿರೋಧಿಸುವದಿಲ್ಲ, ಆದರೆ ಮಗುವನ್ನು ಪೂರಯಿಸುತ್ತಾನೆ. ಆದುದರಿಂದ, ಕೆಳಗಿನ ರೂಪದ ಉಪಕರಣವನ್ನು ಹೆಚ್ಚಿನದೆಂದು ತಪ್ಪು ತಿಳಿಯುವದರಲ್ಲಿ ಹೆಚ್ಚಿನ ಅಪಾಯವಿದೆ ಎನ್ನುವದನ್ನು ಯಾವಾಗಲೂ ಮನಸ್ಸಿನಲ್ಲಿ ಹೊಂದಿರಬೇಕು. ಅನೇಕಬಾರಿ, ಸಹಜ ಪ್ರವೃತ್ತಿಯನ್ನೇ ಸ್ಫೂರ್ತಿಯೆಂದು ಪ್ರಪಂಚದ ಮುಂದೆ ತೋರಿಕೆಗೆ ಹಿಡಿದಿರುತ್ತದೆ, ಆಗ ಕಾಲಜ್ಞಾನದ ವರವೆಂದು ಸಾಧಿಸುವ ಎಲ್ಲ ಕಪಟಗಳೂ ಬರುತ್ತವೆ. ಒಬ್ಬ ಮೂರ್ಖನೋ ಅಥವಾ ಅರೆ ಹುಚ್ಚನೋ ತನ್ನ ಮಿದುಳಿನಲ್ಲಿ ನಡೆಯುವ ಗೊಂದಲವನ್ನು ಸ್ಫೂರ್ತಿಯೆಂದು ಯೋಚಿಸಿ, ಜನಗಳು ಅವನನ್ನು ಅನುಸರಿಸಬೇಕು ಎಂದು ಇಚ್ಛೆಪಡುವನು. ಅತ್ಯಂತ ವಿರೋಧಾಭಾಸದ, ಅವಿಚಾರದ, ಅಸಂಬದ್ಧತೆಯು ಈ ಪ್ರಪಂಚದಲ್ಲಿ ಬೋಧಿಸಲ್ಪಟ್ಟಿದೆ, ಅದು ಸರಳವಾಗಿ (ಸ್ಫೂರ್ತಿಯ ಭಾಷೆಯೆಂದು ಪರಿಗಣನೆಯಾಗಲು ಪ್ರಯತ್ನಿಸುವ) ಅಸ್ತವ್ಯಸ್ತ ಹುಚ್ಚು ಮಿದುಳುಗಳ ಸಹಜ ಪ್ರವೃತ್ತಿಯ ಗೋಜಲು ಗೊಂದಲ ಆಗಿದೆ.

ನಿಜವಾದ ಬೋಧನೆಯ ಮೊದಲ ಪರೀಕ್ಷೆಯೆಂದರೆ ಬೋಧನೆಯು ವಿವೇಕಕ್ಕೆ ವಿರೋಧವಾಗಿರಲೇಬಾರದೆಂಬುದು. ಇದು ಎಲ್ಲ ಯೋಗಗಳ ತಳಹದಿಯು ಹಾಗಿದೆ ಎಂಬುದನ್ನು ನೀವು ನೋಡಬಹುದು. ನಾವು ರಾಜಯೋಗವನ್ನು– ಮನಃಶಾಸ್ತ್ರದ ಯೋಗ, ಸಂಯೋಗಕ್ಕೆ

ಮನಶ್ಶಾಸ್ತ್ರ ಮಾರ್ಗ– ತೆಗೆದುಕೊಳ್ಳೋಣ. ಅದು ವಿಸ್ತಾರವಾದ ವಿಷಯ, ನಾನು ಈಗ ಈ ಯೋಗದ ಕೇಂದ್ರಭಾವವನ್ನು ಮಾತ್ರ ಸೂಚಿಸಬಲ್ಲೆ. ನಮಗೆ ಜ್ಞಾನವನ್ನು ಪಡೆಯಲು ಇರುವದು ಒಂದೇ ಮಾರ್ಗ. ಅತ್ಯಂತ ಕೆಳಗಿನ ಮನುಷ್ಯನಿಂದ ಶ್ರೇಷ್ಠ ಯೋಗಿಯವರೆಗೆ, ಎಲ್ಲರೂ ಒಂದೇ ವಿಧಾನವನ್ನು ಬಳಸಬೇಕಾಗುವದು; ಅದು ಏಕಾಗ್ರತೆ ಎಂದು ಕರೆಯುವ ವಿಧಾನವು. ತನ್ನ ಪ್ರಯೋಗ ಶಾಲೆಯಲ್ಲಿ ಕೆಲಸ ಮಾಡುವ ರಸಾಯನ ಶಾಸ್ತ್ರದ ವಿಜ್ಞಾನಿಯು ತನ್ನ ಮನದ ಎಲ್ಲ ಶಕ್ತಿಗಳನ್ನೂ ಕೇಂದ್ರೀಕೃತ ಮಾಡಿ, ಅವುಗಳನ್ನು ಒಂದೇ ಬಿಂದುವಿಗೆ ತಂದು, ಮೂಲ ಧಾತುಗಳಲ್ಲಿಡುವನು; ಮೂಲ ಧಾತುಗಳು ಗ್ರಹಿಕೆಯಾಗುವದು; ಹೀಗೆ ಜ್ಞಾನ ಬರುವದು. ಖಗೋಳ ಶಾಸ್ತ್ರಜ್ಞನೂ ತನ್ನ ಮನಸ್ಸಿನ ಶಕ್ತಿಗಳನ್ನು ಏಕಾಗ್ರ ಮಾಡಿ, ಅವುಗಳನ್ನು ಒಂದು ಬಿಂದುವಿಗೆ ತಂದು ತನ್ನ ದೂರದರ್ಶಕದ ಮೂಲಕ ವಸ್ತುಗಳ ಮೇಲಿಡುವನು; ನಕ್ಷತ್ರಗಳು ಮತ್ತು ನಕ್ಷತ್ರವ್ಯೂಹಗಳು ಉರುಳಿ ಮುಂದೆ ಬಂದು ತಮ್ಮ ರಹಸ್ಯಗಳನ್ನೆಲ್ಲಾ ಅವನಿಗೆ ಬಿಟ್ಟುಕೊಡುತ್ತವೆ. ಕುರ್ಚಿಯಲ್ಲಿರುವ ಮಹೋಪಾಧ್ಯಾಯರು, ಪುಸ್ತಕ ಹಿಡಿದಿರುವ ವಿದ್ಯಾರ್ಥಿ, ಜ್ಞಾನಕ್ಕಾಗಿ ದುಡಿಯುತ್ತಿರುವ ಪ್ರತಿಯೊಬ್ಬ ಮನುಷ್ಯ, ಹೀಗೆ ಪ್ರತಿಯೊಂದು ಪಕ್ಷದಲ್ಲೂ ಇದು ಹೀಗೆಯೇ. ನೀವು ನನ್ನನ್ನು ಕೇಳುತ್ತಿದ್ದೀರಿ, ನನ್ನ ಮಾತುಗಳು ನಿಮಗೆ ಆಸಕ್ತಿ ತರಿಸಿದರೆ ನಿಮ್ಮ ಮನಸ್ಸು ಅವುಗಳ ಮೇಲೆ ಏಕಾಗ್ರವಾಗುತ್ತವೆ; ಈಗ ಒಂದು ಗಡಿಯಾರ ಗಂಟೆ ಹೊಡೆಯುತ್ತೆನ್ನೋಣ, ಅದನ್ನು ಈ ಏಕಾಗ್ರತೆಯಿಂದಾಗಿ ನೀವು ಕೇಳುವದಿಲ್ಲ; ನೀವು ನಿಮ್ಮ ಮನಸ್ಸನ್ನು ಹೆಚ್ಚು ಹೆಚ್ಚು ಏಕಾಗ್ರ ಮಾಡಿದಂತೆ, ನೀವು ನನ್ನನ್ನು ಹೆಚ್ಚು ಚೆನ್ನಾಗಿ ಅರ್ಥಮಾಡಿಕೊಳ್ಳುತ್ತೀರಿ; ಮತ್ತು ನಾನು ನನ್ನ ಪ್ರೀತಿ ಮತ್ತು ಶಕ್ತಿಗಳ ಮೇಲೆ ಹೆಚ್ಚು ಹೆಚ್ಚು ಏಕಾಗ್ರ ಮಾಡಿದಂತೆ, ನಾನು ನಿಮಗೆ ಏನು ತಿಳಿಯಪಡಿಸಬೇಕೆಂದಿದ್ದೇನೋ ಅದಕ್ಕೆ ಹೆಚ್ಚು ಒಳ್ಳೆಯ ಅಭಿವ್ಯಕ್ತತೆಯನ್ನು ಕೊಡಬಲ್ಲೆನು. ಈ ಏಕಾಗ್ರತೆಯ ಶಕ್ತಿ ಹೆಚ್ಚಿದಂತೆ, ಪಡೆಯುವ ಜ್ಞಾನವೂ ಹೆಚ್ಚಾಗಿರುತ್ತದೆ, ಏಕೆಂದರೆ ಜ್ಞಾನವನ್ನು ಸಂಪಾದಿಸಲು ಇದು ಏಕೈಕ ವಿಧಾನ. ಜೋಡುಗಳಿಗೆ ಬಣ್ಣ ಹಾಕುವ ಅತ್ಯಂತ ಕೆಳಗಿನವನೂ ಸಹಿತ, ಹೆಚ್ಚಾದ ಏಕಾಗ್ರತೆಯನ್ನು ನೀಡಿದರೆ, ಜೋಡುಗಳನ್ನು ಹೆಚ್ಚು ಚೆನ್ನಾಗಿ ಕಪ್ಪು ಮಾಡುವನು; ಏಕಾಗ್ರತೆಯಿಂದ ಅಡುಗೆ ಮಾಡುವ ಬಾಣಸಿಗನು ಊಟವನ್ನು ಎಲ್ಲಕ್ಕೂ ಉತ್ತಮವಾಗಿ ಮಾಡುವನು. ಹಣ ಗಳಿಸುವಾಗ ಅಥವಾ ಭಗವಂತನನ್ನು ಅರ್ಚಿಸುವಾಗ ಅಥವಾ ಯಾವದನ್ನೇ ಮಾಡುವಾಗಲೂ, ಏಕಾಗ್ರತೆಯು ಹೆಚ್ಚು ಶಕ್ತಿಯುತವಾದಷ್ಟೂ ಆ ಕೆಲಸವು ಉತ್ತಮವಾಗುವದು. ಇದು ಒಂದೇ ಕರೆ, ಒಂದೇ ಬಡಿತ, ಪ್ರಕೃತಿಯ ಬಾಗಿಲುಗಳನ್ನು ತೆರೆಸುವದು, ಬೆಳಕಿನ ಪ್ರವಾಹವನ್ನು ಹರಿಸುವದು. ಈ ಏಕಾಗ್ರತೆಯ ಶಕ್ತಿಯೇ ಜ್ಞಾನದ ಖಜಾನೆಯ ಒಂದೇ ಕೀಲಿಕೈ. ರಾಜಯೋಗದ ಪದ್ಧತಿಯು ಬಹುಮಟ್ಟಿಗೆ ಏಕಮಾತ್ರವಾಗಿ ಇದೊಂದರಲ್ಲೇ ಪ್ರವೃತ್ತವಾಗಿರುವದು. ನಮ್ಮ ಈಗಿನ ದೇಹಸ್ಥಿತಿಯಲ್ಲಿ ನಾವು ಎಷ್ಟೋ ಮಟ್ಟಿಗೆ ಬೇರೆಡೆಯ ಸೆಳೆತದಲ್ಲಿದ್ದೇವೆ, ಮತ್ತು ಮನಸ್ಸು ತನ್ನೆಲ್ಲ ಶಕ್ತಿಗಳನ್ನೂ ನೂರಾರು ತೆರನ ವಿಷಯಗಳ ಮೇಲೆ ಅಪವ್ಯಯ ಮಾಡುತ್ತಿರುತ್ತದೆ. ನನ್ನ ಯೋಚನೆಗಳನ್ನು ಶಾಂತ ಮಾಡಲು, ಮನಸ್ಸನ್ನು ಯಾವದೊಂದು ಜ್ಞಾನದ ವಿಷಯದ ಮೇಲೆ ಏಕಾಗ್ರ ಮಾಡಲು, ಪ್ರಯತ್ನ ಮಾಡಿದ ಕೂಡಲೇ ಸಾವಿರಾರು ಅಭಿಲಾಷೆಪಡದ ಮನಸ್ಸಿನ

ಆವೇಗಗಳು ಬಂದು, ಅದನ್ನು ಕೆರಳಿಸುತ್ತವೆ, ಸಾವಿರಾರು ಯೋಚನೆಗಳು ಮನಸ್ಸಿಗೆ ನುಗ್ಗಿ ಬಂದು, ಅದನ್ನು ಕೆರಳಿಸುತ್ತವೆ. ಅದನ್ನು ನಿಲ್ಲಿಸುವದು ಹೇಗೆ, ಮತ್ತು ಮನಸ್ಸನ್ನು ನಿಯಂತ್ರಣಕ್ಕೆ ತರುವದು ಹೇಗೆ ಎನ್ನುವದು ರಾಜಯೋಗದಲ್ಲಿ ಅಧ್ಯಯನ ಮಾಡುವ ಸಂಪೂರ್ಣ ವಿಷಯ.

ಈಗ ಕರ್ಮದ ಮೂಲಕ ಭಗವಂತನನ್ನು ಪಡೆಯುವ ಕರ್ಮಯೋಗವನ್ನು ತೆಗೆದುಕೊಳ್ಳಿ. ಸಮಾಜದಲ್ಲಿ, ಯಾವದೋ ತೆರನ ಚಟುವಟಿಕೆಗೆ ಅಥವಾ ಮತ್ತೊಂದಕ್ಕಾಗಿ ಹುಟ್ಟಿರುವಂತೆ ಕಾಣುವ ಅನೇಕ ವ್ಯಕ್ತಿಗಳು ಸಮಾಜದಲ್ಲಿದ್ದಾರೆ ಎನ್ನುವದು ಸ್ಪಷ್ಟ. ಅವರ ಮನಸ್ಸುಗಳು ಯೋಚನೆಯ ಪಾತಳಿಯ ಮೇಲೆ ಮಾತ್ರ ಏಕಾಗ್ರವಾಗಲಾರದು ಮತ್ತು ಅವರಿಗೆ ಇರುವದು ಒಂದೇ ಭಾವನೆ, ದೃಗ್ಗೋಚರವಾದ ಮತ್ತು ಹಿಡಿತಕ್ಕೆ ಸಿಕ್ಕುವ ಕರ್ಮದ ಮೇಲೆ ಘನೀಕರಿಸಿರುತ್ತದೆ. ಈ ತರಹದ ಜೀವನಕ್ಕೂ ಸಹಿತ ಒಂದು ವಿಜ್ಞಾನವಿರಲೇಬೇಕು. ನಮ್ಮಲ್ಲಿ ಪ್ರತಿಯೊಬ್ಬನೂ ಯಾವದೋ ಕರ್ಮದಲ್ಲಿ ತೊಡಗಿಕೊಂಡಿರುತ್ತಾನೆ, ಆದರೆ ನಮ್ಮಲ್ಲಿ ಅಧಿಕಶಕ್ತರಾದ ಬಹುಮಂದಿ ನಮ್ಮ ಶಕ್ತಿಗಳ ಹೆಚ್ಚಿನ ಭಾಗವನ್ನು ಅಪವ್ಯಯ ಮಾಡುತ್ತಾರೆ, ಏಕೆಂದರೆ ನಮಗೆ ಕರ್ಮದ ರಹಸ್ಯ ತಿಳಿದಿರುವದಿಲ್ಲ. ಕರ್ಮಯೋಗವು ಈ ರಹಸ್ಯವನ್ನು ನಮಗೆ ತಿಳಿಸಿಕೊಡುತ್ತದೆ, ಮತ್ತು ಎಲ್ಲಿ, ಹೇಗೆ ಕರ್ಮ ಮಾಡಬೇಕು, ಅತ್ಯಧಿಕ ಪ್ರಯೋಜನಕ್ಕಾಗಿ, ನಮ್ಮ ಶಕ್ತಿಗಳ ಅತಿ ಹೆಚ್ಚಿನ ಭಾಗವನ್ನು ನಮ್ಮ ಮುಂದಿರುವ ಕರ್ಮಕ್ಕೆ ಹೇಗೆ ಬಳಸಬೇಕು ಎಂಬುದನ್ನು ಬೋಧಿಸುತ್ತದೆ. ಆದರೆ ಈ ರಹಸ್ಯದ ಜೊತೆಯಲ್ಲಿಯೇ, ಅದು ನೋವನ್ನುಂಟುಮಾಡುತ್ತದೆ ಎಂಬ ಕರ್ಮದ ವಿರುದ್ಧದ ಆಕ್ಷೇಪವನ್ನೂ ಪರಿಗಣನೆಗೆ ತೆಗೆದುಕೊಳ್ಳಬೇಕು. ಎಲ್ಲ ದುಃಖ ಮತ್ತು ನೋವು ಮಾಡುವ ಕರ್ಮದ ಮೇಲಿನ ಆಸಕ್ತಿಯಿಂದ ಬರುತ್ತದೆ. ನಾನು ಕರ್ಮಮಾಡಬೇಕು ಎಂದು ಅನಿಸಿಕೆ, ನಾನು ಒಬ್ಬ ಮಾನವ ಜೀವಿಗೆ ಒಳ್ಳೆಯದನ್ನು ಮಾಡಬೇಕು; ಆ ಮಾನವ ವ್ಯಕ್ತಿಯಲ್ಲಿ ತೊಂಭತ್ತಕ್ಕೆ ಒಬ್ಬನು ಕೃತಘ್ನನಾಗಿದ್ದು ನನ್ನ ವಿರುದ್ಧ ಹೋಗುವನು, ಮತ್ತು ನನಗೆ ಅದರ ಪರಿಣಾಮವು ನೋವು. ಇಂತಹ ವಿಷಯಗಳು ಮಾನವ ಕುಲವನ್ನು ಕರ್ಮದಿಂದ ಹಿಮ್ಮೆಟ್ಟಿಸುತ್ತವೆ; ಮತ್ತು ಅದು, ಎಂದರೆ ಈ ನೋವು, ದುಃಖದ ಭೀತಿ ಮಾನವಕುಲದ ಕರ್ಮ ಮತ್ತು ಶಕ್ತಿಯ ಉತ್ತಮ ಭಾಗವನ್ನು ಹಾಳುಮಾಡುತ್ತದೆ. ಕರ್ಮವನ್ನು ಕರ್ಮಕ್ಕಾಗಿಯೇ, ಯಾವದೇ ಆಸಕ್ತಿ ಇಲ್ಲದೆ, ಯಾರಿಗೆ ಸಹಾಯವಾಗುತ್ತದೆ, ಏತಕ್ಕಾಗಿ ಎಂಬುದನ್ನು ಗಮನಿಸದೆಯೇ, ಮಾಡಬೇಕು ಎಂದು ಕರ್ಮಯೋಗವು ಕಲಿಸುತ್ತದೆ. ಕರ್ಮಯೋಗಿಯು ಕರ್ಮ ಮಾಡುವನು. ಏಕೆಂದರೆ ಅದು ಅವನ ಸ್ವಭಾವ, ಏಕೆಂದರೆ ಹಾಗೆ ಮಾಡುವದು ಅವನಿಗೆ ಒಳ್ಳೆಯದೆಂದು ಭಾವಿಸುವನು ಮತ್ತು ಅದರಾಚೆಯ ವಸ್ತುವಿಲ್ಲ. ಈ ಪ್ರಪಂಚದಲ್ಲಿ ಅವನ ಸ್ಥಾನವು ಕೊಡುವವನದೇ, ಅವನು ಯಾವದನ್ನೂ ತೆಗೆದುಕೊಳ್ಳಲು ಎಂದೆಂದಿಗೂ ಅವನು ಯೋಚಿಸುವದಿಲ್ಲ. ತಾನು ಕೊಡುತ್ತಿದ್ದೇನೆಂದು ಅವನಿಗೆ ಗೊತ್ತು, ಹಿಂದಿರುಗಿ ಯಾವದನ್ನೂ ಅವನು ಕೇಳನು, ಆದುದರಿಂದ ಅವನು ದುಃಖದ ಹಿಡಿತದಿಂದ ಪಾರಾಗುವನು. ನೋವಿನ ಹಿಡಿತ, ಅದು ಯಾವಾಗಲಾದರೂ ಬಂದರೂ, "ಆಸಕ್ತಿ"ಯ ಪ್ರತಿಕ್ರಿಯೆಯ ಪರಿಣಾಮ.

ಅದರ ಅನಂತರ ಭಾವ ಪರವಶತೆಯ ಮನುಷ್ಯನಿಗಾಗಿ, ಭಕ್ತನಿಗಾಗಿ ಭಕ್ತಿಯೋಗವಿದೆ. ಅವನು ಭಗವಂತನನ್ನು ಪ್ರೇಮಿಸಲು ಬೇಕು, ಅದಕ್ಕಾಗಿ ಎಲ್ಲ ವಿಧಗಳಾದ ಮತ ಆಚರಣೆಗಳು, ಹೂವು, ಧೂಪ, ಸುಂದರ ಕಟ್ಟಡಗಳು, ಆಕಾರಗಳು ಇಂತಹ ಎಲ್ಲ ವಸ್ತುಗಳ ಮೇಲೆ ಅವಲಂಬಿಸುವನು, ಅವುಗಳನ್ನು ಉಪಯೋಗಿಸುವನು. ಅವೆಲ್ಲಾ ತಪ್ಪೆಂದು ನೀವು ಅರ್ಥ ಹೇಳುವಿರಾ? ಒಂದು ಸಂಗತಿಯನ್ನು ನಾನು ನಿಮಗೆ ಹೇಳಲೇಬೇಕು. ಪ್ರಪಂಚದ ಶ್ರೇಷ್ಠ ಪಾರಮಾರ್ಥಿಕ ಪ್ರಚಂಡ ಸಮರ್ಥಶಾಲಿಗಳೆಲ್ಲರನ್ನೂ, ಬಹು ಶ್ರೀಮಂತ ಪುರಾಣ ಮತ್ತು ಮತಾಚರಣೆಗಳನ್ನು ಹೊಂದಿರುವ ಧರ್ಮ ಪಂಗಡಗಳು ಉತ್ಪನ್ನ ಮಾಡಿವೆ, ಎನ್ನುವದನ್ನು ನೀವು, ಅದರಲ್ಲೂ ವಿಶೇಷವಾಗಿ ಈ ದೇಶದಲ್ಲಿ, ನೆನಪಿಗೆ ತಂದುಕೊಳ್ಳುವದು ಒಳ್ಳೆಯದು. ಭಗವಂತನನ್ನು ಯಾವ ರೂಪ ಅಥವಾ ಸಂಪ್ರದಾಯಗಳಿಲ್ಲದೆ ಅರ್ಚಿಸಲು ಪ್ರಯತ್ನಮಾಡಿದ ಎಲ್ಲ ಪಂಗಡಗಳೂ, ಧರ್ಮದಲ್ಲಿ ಸುಂದರವಾದದ್ದೂ, ಪರಮೋದಾತ್ತವೂ ಆದ ಪ್ರತಿಯೊಂದನ್ನೂ ಯಾವ ಕರುಣೆಯಿಲ್ಲದಂತೆ ಜಜ್ಜಿ ಬಡಿದಿವೆ. ಬಹಳವೆಂದರೆ ಅವರ ಧರ್ಮವು ಧರ್ಮಾಂಧತೆ, ಸಾರವಿಲ್ಲದ ಒಣವಸ್ತು. ಪ್ರಪಂಚದ ಚರಿತ್ರೆಯು ಈ ಸಂಗತಿಗೆ ಗಣ್ಯಸಾಕ್ಷಿ. ಆದುದರಿಂದ, ಈ ಮತಾಚರಣೆಗಳನ್ನು ಪುರಾಣಗಳನ್ನು ಜರೆಯದಿರಿ. ಜನಗಳು ಅವನ್ನು ಇಟ್ಟುಕೊಳ್ಳಲು ಬಿಡಿ: ಆ ರೀತಿ ಅಪೇಕ್ಷೆ ಪಡುವವರು ಅವನ್ನು ಇಟ್ಟುಕೊಳ್ಳಲಿ. ಯೋಗ್ಯವಲ್ಲದ, ಅಪಹಾಸ್ಯದ ಮುಗುಳ್ನಗುವನ್ನು ಪ್ರದರ್ಶಿಸಬೇಡಿ, ಮತ್ತು "ಅವರು ಮೂರ್ಖರು, ಅದನ್ನು ಅವರು ಇಟ್ಟುಕೊಳ್ಳಲಿ" ಎನ್ನಬೇಡಿ. ಹಾಗಲ್ಲ, ನನ್ನ ಜೀವನದಲ್ಲಿ ನಾನು ನೋಡಿರುವ ಅತಿಶ್ರೇಷ್ಠ ಪುರುಷರು, ಪಾರಮಾರ್ಥಿಕವಾಗಿ ಅತ್ಯಂತ ಅದ್ಭುತವಾಗಿ ಅಭಿವೃದ್ಧಿಯಾದವರು, ಎಲ್ಲರೂ ಈ ಆಚರಣೆಗಳ ಶಿಸ್ತಿನ ಮೂಲಕ ಬಂದಿರುವರು. ಅವರ ಪಾದಗಳ ಬಳಿ ಕುಳಿತುಕೊಳ್ಳಲು, ನಾನು ಅವರನ್ನು ಟೀಕೆ ಮಾಡಲು, ನಾನು ಯೋಗ್ಯನೆಂದು ಪರಿಗಣಿಸುವದಿಲ್ಲ. ಈ ಭಾವನೆಗಳು ಹೇಗೆ ಮಾನವನ ಮನಸ್ಸಿನ ಮೇಲೆ ಕಾರ್ಯಮಾಡುತ್ತವೆ, ಅವುಗಳಲ್ಲಿ ನಾನು ಯಾವದನ್ನು ಸ್ವೀಕರಿಸಬೇಕು, ಯಾವದನ್ನು ತಿರಸ್ಕರಿಸಬೇಕು ಎಂದು ನನಗೆ ಹೇಗೆ ಗೊತ್ತಾಗಬೇಕು? ಪ್ರಪಂಚದಲ್ಲಿ ಪ್ರತಿಯೊಂದನ್ನೂ ಸಾಕಷ್ಟು ಅಧಿಕಾರವಿಲ್ಲದೆ ನಾವು ಟೀಕೆಮಾಡುವ ಪ್ರವೃತ್ತಿಯುಳ್ಳವರು. ತಮಗೆ ಬೇಕಾದ ಎಲ್ಲ ಪುರಾಣವನ್ನೂ ಅದರ ಮನೋಜ್ಞ ಸ್ಫೂರ್ತಿ ಭಾವಗಳೊಡನೆ ಅವರು ಹೊಂದಿರಲಿ: ಭಾವ ಪರವಶತೆಯ ಪ್ರಕೃತಿಯುಳ್ಳವರು ಸತ್ವದ ಅಮೂರ್ತ ಲಕ್ಷಣ ನಿರ್ದೇಶನಗಳಿಗೆ ಲಕ್ಷ್ಯ ಕೊಡುವದಿಲ್ಲ ಎಂಬುದನ್ನು ಯಾವಾಗಲೂ ನೀವು ಮನಸ್ಸಿನಲ್ಲಿಡಲೇಬೇಕು. ಅವರಿಗೆ ಭಗವಂತನು ಹಿಡಿತಕ್ಕೆ ಸಿಕ್ಕುವ ಯಾವದೋ ವಸ್ತು ನಿಜವಾದ ಒಂದೇ ವಸ್ತು: ಅವರು ಅನುಭವಿಸಿ, ಕೇಳುತ್ತಾ, 'ಅವನ'ನ್ನು ನೋಡುವರು, 'ಅವನನ್ನು' ಪ್ರೀತಿಸುವರು. ಅವರು ತಮ್ಮ ಭಗವಂತನನ್ನಿಟ್ಟುಕೊಳ್ಳಲಿ. ಅವರಿಗೆ ಸುಂದರವಾದ ಪ್ರತಿಮೆಯನ್ನು ನೋಡಿ ಅದನ್ನು ಯಾವ ದ್ರವ್ಯದಿಂದ ಮಾಡಿದೆ ಎಂಬುದನ್ನು ಕಂಡುಹಿಡಿಯಲು ಒಡೆದು ಹಾಕಿದ ಮೂರ್ಖನಂತೆ ನಿಮ್ಮ ವಿಚಾರವಾದಿಯು ಕಾಣುವನು. ಭಕ್ತಿಯೋಗವು, ಯಾವ ದೂರ ಉದ್ದೇಶವೂ ಇಲ್ಲದೆ ಹೇಗೆ ಪ್ರೀತಿಸಬೇಕೆಂಬುದನ್ನೂ, ಭಗವಂತನನ್ನು ಪ್ರೀತಿಸುತ್ತಿರುವದು, ಒಳ್ಳೆಯದನ್ನು ಪ್ರೀತಿಸುತ್ತಿರುವದು ಏಕೆಂದರೆ ಹಾಗೆ ಮಾಡುವದು

ಒಳ್ಳೆಯದು, ಸ್ವರ್ಗಕ್ಕೆ ಹೋಗುವದಕ್ಕಲ್ಲ, ಮಕ್ಕಳು, ಸಂಪತ್ತು ಅಥವಾ ಬೇರೆ ಯಾವದನ್ನೂ ಪಡೆಯಲಿಲ್ಲ ಎಂದೂ ಭಕ್ತಿಯೋಗವು ಹೇಳಿ ಕೊಡುವದು. ಪ್ರೀತಿಗೆ ಪ್ರೀತಿ ಮಾತ್ರವೇ ಅತಿಶ್ರೇಷ್ಠ ಪುರಸ್ಕಾರ, 'ಭಗವಂತನು ತಾನೇ' ಪ್ರೀತಿ ಎಂದು ಅದು ಬೋಧಿಸುತ್ತದೆ. ಭಗವಂತನಿಗೆ ಎಲ್ಲ ವಿಧದ ಮರ್ಯಾದೋಪಚಾರ ಕಾಣಿಕೆಗಳನ್ನೂ, 'ಅವನು ಸೃಷ್ಟಿಕರ್ತ; ಸರ್ವವ್ಯಾಪಿ, ಸರ್ವಜ್ಞ, ಸರ್ವಶಕ್ತ ಪ್ರಭು, ತಂದೆ, ತಾಯಿ', ಎಂದು ಅರ್ಪಿಸಲು ಬೋಧಿಸುತ್ತದೆ. ಅವನನ್ನು ಅಭಿವ್ಯಕ್ತಗೊಳಿಸುವ ಅತ್ಯಂತ ಶ್ರೇಷ್ಠ ವಾಕ್ಸರಣಿ, 'ಅವನನ್ನು' ಮಾನವ ಮನಸ್ಸು ರೂಪಿಸಿಕೊಳ್ಳಬಲ್ಲ ಅತ್ಯಂತ ಶ್ರೇಷ್ಠ ಭಾವವು ಆಗಿದೆ. ಅದು 'ಅವನು ಪ್ರೀತಿಯ ದೇವನು' ಎನ್ನುವದು. "ಎಲ್ಲೆಲ್ಲಿ ಪ್ರೀತಿ ಇದೆಯೋ ಅದು 'ಅವನು', ಭಗವಂತನು ಅಲ್ಲಿರುತ್ತಾನೆ". ಗಂಡಸು ಪತ್ನಿಯನ್ನು ಆಲಿಂಗಿಸುವಲ್ಲಿ ಅವನು ಆಲಿಂಗನದಲ್ಲಿರುವನು, ತಾಯಿ ಮಗುವನ್ನು ಅಪ್ಪುವಲ್ಲಿ ಅವನು ಅಪ್ಪುಗೆಯಲ್ಲಿರುವನು, ಎಲ್ಲಿ ಸ್ನೇಹಿತರು ಕೈಗಳನ್ನು ಹಿಡಿದುಕೊಂಡಿರುವರೋ ಅಲ್ಲಿ 'ಅವನು, ಪ್ರಭುವು ಇರುವನು ಪ್ರೀತಿಯ ಭಗವಂತನಾಗಿ. ಯಾವಾಗ ದೊಡ್ಡ ಮನುಷ್ಯನೊಬ್ಬನು ಪ್ರೀತಿಯಿಂದ ಮಾನವಕುಲಕ್ಕೆ ಸಹಾಯಮಾಡಲು ಇಷ್ಟಪಟ್ಟರೆ, ಅಲ್ಲಿ ಮಾನವಕುಲದ ಮೇಲೆ ಇರುವ ಪ್ರೀತಿಯಿಂದ, ತನ್ನ ಸಮೃದ್ಧತೆಯನ್ನು ಧಾರಾಳವಾಗಿ ಕೊಡುವನು. ಎಲ್ಲೆಲ್ಲಿ ಹೃದಯ ವೈಶಾಲ್ಯವಿರುವದೋ ಅಲ್ಲಿ ಅವನು ಮೈದೋರುವನು. ಭಕ್ತಿಯೋಗವು ಏನು ಬೋಧಿಸುತ್ತದೋ ಅದೇ ಇದು.

ನಾವು ಕೊನೆಗೆ, ಜ್ಞಾನಯೋಗಿ, ತತ್ತ್ವಶಾಸ್ತ್ರಜ್ಞ, ಚಿಂತನಶೀಲ ದೃಗ್ಗೋಚರದಾಚೆಗೆ ಹೋಗಲೆಳಸುವವನೆಡೆಗೆ ಬರುವೆವು. ಅವನಿಗೆ ಲೋಕದ ಸಣ್ಣ ವಸ್ತುಗಳ ವಿಷಯದಲ್ಲಿ ತೃಪ್ತಿಯಿಲ್ಲ. ತಿನ್ನುವದು, ಕುಡಿಯುವದು, ಹೀಗೇ ಇರುವ ದಿನಚರಿಯಾಚೆಗೆ ಹೋಗುವ ಧ್ಯೇಯವಿದೆ; ಸಾವಿರಾರು ಪುಸ್ತಕಗಳ ಬೋಧನೆಗಳೂ ಅವನನ್ನು ತೃಪ್ತಿಪಡಿಸಲಾರವು. ಎಲ್ಲ ವಿಜ್ಞಾನಗಳೂ ಸಹಿತ ಅವನನ್ನು ತೃಪ್ತಿಪಡಿಸುವದಿಲ್ಲ; ಬಹಳವೆಂದರೆ, ಈ ಸಣ್ಣ ಪ್ರಪಂಚವನ್ನು ಅವು ಅವನ ಮುಂದೆ ತರುವವು. ಅವನಿಗೆ ತೃಪ್ತಿಯನ್ನು ಕೊಡುವದು ಬೇರೆ ಏನು? ಪ್ರಪಂಚಗಳ ಕೋಟ್ಯನುಕೋಟಿ ವ್ಯವಸ್ಥಿತ ಸಮುದಾಯಗಳೂ ಅವನಿಗೆ ಸಮಾಧಾನವನ್ನು ಕೊಡಲಾರವು; ಅವು ಅವನಿಗೆ ಅಸ್ತಿತ್ವದ ಸಾಗರದಲ್ಲಿ ಕೇವಲ ಒಂದು ಹನಿ ಮಾತ್ರ. ಅವನ ಆತ್ಮವು ಇವೆಲ್ಲವುಗಳ ಆಚೆಗೆ ಜೀವಿತದ ಸಾಕ್ಷಾತ್ ಹೃದಯ ಭಾಗಕ್ಕೆ ಹೋಗಬೇಕೆನ್ನುತ್ತದೆ, 'ಅಸ್ತಿತ್ವ'ವು 'ಅದು' ಇರುವಂತೆಯೇ ನೋಡುವದು; 'ಅದ'ನ್ನು ಸಿದ್ಧಿಸಿಕೊಳ್ಳುವದು, 'ಅದೇ' ಆಗಿರುವದು, ಆ 'ವಿಶ್ವವ್ಯಾಪಕ ಇರುವಿಕೆ'ಯಲ್ಲಿ ಒಂದಾಗುವದು. ಅವನೇ ತತ್ತ್ವಜ್ಞಾನಿ. ಭಗವಂತನು 'ತಂದೆ' ಅಥವಾ 'ತಾಯಿ', ವಿಶ್ವದ 'ಸೃಷ್ಟಿಕರ್ತ', ಅದರ 'ರಕ್ಷಕ, ಮಾರ್ಗದರ್ಶಕ' ಎಂದು ಹೇಳುವದು 'ಅವನ' ಅಭಿವ್ಯಕ್ತಿಗೆ ಏನೇನೂ ಸಾಲದು. ಅವನಿಗೆ ಭಗವಂತನು ಅವನ ಜೀವನದ ಜೀವನ, ಅವನ ಆತ್ಮದ ಆತ್ಮ. ಭಗವಂತನು ಅವನ ಸ್ವಂತ 'ಆತ್ಮ'ವೇ. ಭಗವಂತನನ್ನು ಬಿಟ್ಟು ಬೇರೆ ಯಾವದೂ ಉಳಿಯುವದಿಲ್ಲ. ತತ್ತ್ವಶಾಸ್ತ್ರದ ಭಾರವಾದ ಹೊಡೆತಗಳು ಅವನ ಎಲ್ಲ ಮರ್ತ್ಯಭಾಗಗಳನ್ನೂ ಕುಟ್ಟಿ ಹಾಕಿ, ಪಕ್ಕಕ್ಕೆ ಗುಡಿಸಿ ಹಾಕುತ್ತವೆ. ಕಟ್ಟಕಡೆಗೆ ನಿಜವಾಗಿ ಏನು ಉಳಿಯುವದೋ ಅದು ಅವನೇ, ಭಗವಂತನೇ.

ಒಂದೇ ಮರದ ಮೇಲೆ ಎರಡು ಹಕ್ಕಿಗಳಿವೆ, ಒಂದು ಮೇಲಿದೆ, ಮತ್ತೊಂದು ಅದರ ಕೆಳಗಿದೆ; ಮೇಲಿನದು ಶಾಂತ, ಮೌನ ಮತ್ತು ಗಂಭೀರ, ತನ್ನದೇ ಆದ ಆನಂದದಲ್ಲಿದೆ; ಕೆಳಗಿನ ಶಾಖೆಯಲ್ಲಿರುವದು ಒಂದಾದಮೇಲೊಂದಾಗಿ ಸಿಹಿ ಮತ್ತು ಕಹಿ ಹಣ್ಣುಗಳನ್ನು ತಿನ್ನುತ್ತಾ, ಕೊಂಬೆಯಿಂದ ಕೊಂಬೆಗೆ ಜಿಗಿಯುತ್ತಾ, ಸಂತೋಷ, ದುಃಖಗಳ ಆವರ್ತನಗಳಲ್ಲಿದೆ. ಸ್ವಲ್ಪ ಕಾಲದನಂತರ, ಕೆಳಗಿರುವ ಹಕ್ಕಿಯು ವಿಶೇಷವಾಗಿ ಕಹಿಯಾದ ಹಣ್ಣನ್ನು ತಿಂದು, ಜಿಗುಪ್ಸೆಯಾಗಿ, ಮೇಲೆ ನೋಡಿ ಇನ್ನೊಂದು ಹಕ್ಕಿಯನ್ನು ಕಾಣುತ್ತದೆ. ಆ ಬೆರಗಿನ ಒಂದು ಸಿಹಿಯಾಗಲಿ, ಕಹಿಯಾಗಲಿ ಹಣ್ಣು ಯಾವದನ್ನೂ ತಿನ್ನದೆ, ಸುಖಿಯೂ ಅಲ್ಲದೆ ದುಃಖಿಯೂ ಅಲ್ಲದೆ, ಆದರೆ ಶಾಂತವಾಗಿ, 'ಆತ್ಮ'ದಲ್ಲೇ ಕೇಂದ್ರೀಕೃತವಾಗಿ ತನ್ನ 'ಆತ್ಮ' ದಾಚೆ ಏನನ್ನೂ ನೋಡುವದಿಲ್ಲ. ಈ ಸ್ಥಿತಿಗಾಗಿ ಕೆಳಗಿರುವ ಹಕ್ಕಿಯು ಹಂಬಲಿಸುತ್ತದೆಯಾದರೂ ಅದನ್ನು ಕೂಡಲೆ ಮರೆತು ಪುನಃ ಹಣ್ಣುಗಳನ್ನು ತಿನ್ನಲು ತೊಡಗುವದು. ಸ್ವಲ್ಪ ಕ್ಷಣಗಳಲ್ಲೇ, ಅದು ಮತ್ತೊಂದು ಅತಿ ವಿಶೇಷವಾದ ಕಹಿಯ ಹಣ್ಣನ್ನು ತಿಂದಾಗ ದುಃಖವನ್ನನುಭವಿಸಿ ಪುನಃ ಮೇಲೆ ನೋಡಿ, ಆಮೇಲಿರುವ ಹಕ್ಕಿಯ ಕಡೆಗೆ ಹತ್ತಿರ ಹೋಗಲು ಪ್ರಯತ್ನಿಸುತ್ತದೆ, ಮತ್ತೊಮ್ಮೆ ಮರೆಯುವದು, ಸ್ವಲ್ಪ ಸಮಯದನಂತರ ಮೇಲೆ ನೋಡುವದು ಹೀಗೆ ಮತ್ತೆ ಮತ್ತೆ ಹೋಗುತ್ತದೆ, ಆ ಸುಂದರ ಹಕ್ಕಿಗೆ ಬಹಳ ಹತ್ತಿರದವರೆಗೆ ಅಲ್ಲಿ ಅದರ ಗರಿಗಳಿಂದ ಪ್ರತಿಫಲನವಾದ ಬೆಳಕು ತನ್ನ ದೇಹದ ಸುತ್ತಲೂ ಹರಡಿರುವದನ್ನು, ಬದಲಾವಣೆಯನ್ನು ಕಂಡು ಕರಗಿ ಹೋಗುವಂತೆ ಭಾಸವಾಗುತ್ತದೆ; ಇನ್ನೂ ಹತ್ತಿರ ಬರುತ್ತದೆ; ಅದರ ಸರ್ವಸ್ವವೂ ಕರಗಿ ಹೋಗುತ್ತದೆ. ಕಟ್ಟ ಕಡೆಗೆ ಅದು ಈ ಅದ್ಭುತ ಬದಲಾವಣೆಯನ್ನು ಅರ್ಥಮಾಡಿಕೊಳ್ಳುತ್ತದೆ. ಕೆಳಗಿನ ಹಕ್ಕಿಯು, ಅದು ಇರುವಂತೆಯೇ, ಸಾರಭೂತವಾಗಿ ಕಾಣುವ ನೆರಳು ಮಾತ್ರವೇ, ಮೇಲಿನದರ ಪ್ರತಿಫಲನ; ತಿರುಳಿನಲ್ಲಿ ಅದು ತಾನೇ ಅಷ್ಟು ಕಾಲವೂ ಮೇಲಿನ ಹಕ್ಕಿಯೇ ಆಗಿತ್ತು. ಹಣ್ಣುಗಳನ್ನು ತಿನ್ನುವದು, ಸಿಹಿಕಹಿ, ಕೆಳಗಿನದು, ಸಣ್ಣ ಹಕ್ಕಿ, ಆವರ್ತವಾಗಿ ಅಳುವದು, ಸಂತೋಷವಾಗಿರುವದು, ಒಣಹೆಮ್ಮೆಯ ಭ್ರಾಂತಿ, ಕನಸು; ಉದ್ದಕ್ಕೂ, ನಿಜವಾದ ಹಕ್ಕಿಯು ಮೇಲೆಯೇ ಇತ್ತು, ಶಾಂತ ಮತ್ತು ಮೌನ, ರಮ್ಯ ಮತ್ತು ಗಂಭೀರ, ದುಃಖದಿಂದಾಚೆ ವ್ಯಸನದಿಂದಾಚೆಗೆ, ಮೇಲಿನ ಹಕ್ಕಿಯೇ ಭಗವಂತ, ಈ ವಿಶ್ವದ 'ಪ್ರಭು', ಕೆಳಗಿನ ಹಕ್ಕಿಯು, ಈ ಪ್ರಪಂಚದ ಸಿಹಿ, ಕಹಿ ಹಣ್ಣುಗಳನ್ನು ತಿನ್ನುತ್ತಿರುವ ಮಾನವ ಆತ್ಮ. ಆಗಾಗ ಆತ್ಮಕ್ಕೊಂದು ತೀವ್ರಪೆಟ್ಟು ಬೀಳುವದು. ಸ್ವಲ್ಪ ಹೊತ್ತು ಅದು ತಿನ್ನುವದನ್ನು ನಿಲ್ಲಿಸಿ, ಕಾಣದಿರುವ ಭಗವಂತನ ಕಡೆ ಹೋಗುವದು, ಬೆಳಕಿನ ಪ್ರವಾಹಬರುವದು. ಅವನು ಈ ಪ್ರಪಂಚ ನಿಷ್ಫಲ ತೋರಿಕೆ ಎಂದು ಚಿಂತಿಸುವನು. ಆದರೂ ಮತ್ತೆ ಇಂದ್ರಿಯಗಳು ಅವನನ್ನು ಕೆಳಗೆ ಎಳೆಯುವವು, ಅವನು ಮೊದಲಿನಂತೆ ಸಿಹಿ, ಕಹಿ ಹಣ್ಣುಗಳನ್ನು ತಿನ್ನಲು ತೊಡಗುವನು. ಮತ್ತೆ ವಿಶೇಷವಾದೊಂದು ಗಟ್ಟಿಯಾದ ಪೆಟ್ಟು ಬೀಳುವದು. ಅವನ ಹೃದಯ ದೈವೀ ಬೆಳಕಿಗೆ ಪುನಃ ತೆರೆದುಕೊಳ್ಳುವದು; ಈ ರೀತಿ ಅವನು ಕ್ರಮೇಣ ಭಗವಂತನ ಬಳಿಸಾರುವನು, ಮತ್ತು ಹತ್ತಿರ ಹತ್ತಿರ ಬಂದಂತೆಲ್ಲಾ, ತನ್ನ ಹಳೆಯ ವ್ಯಕ್ತಿತ್ವ (ಆತ್ಮ) ಕರಗಿ ಹೋಗುತ್ತಿರುವದನ್ನು ಕಾಣುವನು. ಸಾಕಷ್ಟು ಹತ್ತಿರ ಬಂದ ಮೇಲೆ, ಅವನು ತಾನು ಭಗವಂತನೇ ಬೇರೆಯಲ್ಲ ಎಂಬುದನ್ನು ಕಾಣುವನು; ಆಶ್ಚರ್ಯದಿಂದ ಘೋಷಿಸುವನು: "ಈ ವಿಶ್ವದ "ಜೀವ" ನೇ ಎಂದು ನಾನು ಹಿಂದೆ ನಿಮಗೆ ವಿವರಿಸಿದ

ಭಗವಂತನು, ಪರಮಾಣುವಿನಲ್ಲಿ, ಸೂರ್ಯ ಚಂದ್ರರಲ್ಲಿ ಇರುವನು– ನಮ್ಮ ಜೀವನದ ಆಧಾರನು 'ಅವನು', ನಮ್ಮ ಆತ್ಮದ 'ಆತ್ಮ'ನು. ಇಲ್ಲ– ತತ್ ತ್ವಂ ಅಸಿ. ನೀನು ಅದು ಆಗಿದ್ದೀಯೆ". ಇದು ಜ್ಞಾನಯೋಗವು ಏನನ್ನು ಬೋಧಿಸುವದೋ ಅದು. ಅದು, ಅವನು ಸಾರಭೂತವಾಗಿ (ದಿವ್ಯಾತ್ಮನು) ದೇವರಂಥವನು ಎಂದು ಮನುಷ್ಯನಿಗೆ ಹೇಳುತ್ತದೆ. ಜೀವಿಯ ನಿಜವಾದ ಐಕ್ಯ, ಮತ್ತು ನಮ್ಮಲ್ಲಿ ಪ್ರತಿಯೊಬ್ಬನೂ ಭೂಮಿಯಲ್ಲಿ ಮೈದೋರಿದ "ಪ್ರಭು ಭಗವಂತನು ಅವನೇ" ಎಂದು ಮಾನವಕುಲಕ್ಕೆ ತೋರಿಸುವದು. ನಾವೆಲ್ಲರೂ, ನಮ್ಮ ಕಾಲಕೆಳಗೆ ತೆವಳುವ ಅತ್ಯಂತ ಕೆಳಗಿನ ಹುಳುವಿನಿಂದ, ಆಶ್ಚರ್ಯ ಭಯಭಕ್ತಿಯಿಂದ ನಾವು ಮೇಲೆ ನೋಡುವ ಅತ್ಯಂತ ಶ್ರೇಷ್ಠ ಜೀವಿಯವರೆಗೆ– ಎಲ್ಲರೂ ಅದೇ 'ಪ್ರಭುವಿನ' ಮೈದೋರಿಕೆಯಾಗಿದ್ದೇವೆ.

ಕೊನೆಯಲ್ಲಿ, ಈ ವಿವಿಧ ಯೋಗಗಳನ್ನೂ ಅಭ್ಯಾಸದಲ್ಲಿ ತಂದುಕೊಳ್ಳಬೇಕು ಎಂಬುದು ಅವಶ್ಯ ಕರ್ತವ್ಯ; ಅವುಗಳ ವಿಷಯದ ಬರಿಯ ತತ್ತ್ವ ನಿರೂಪಣೆಗಳು ಯಾವದೇ ಒಳಿತನ್ನು ಮಾಡಲಾರವು. ಮೊದಲು ಅವುಗಳನ್ನು ವಿಷಯವನ್ನು ಕೇಳಿಕೊಳ್ಳಬೇಕು, ಅನಂತರ ಅವುಗಳ ವಿಷಯವನ್ನು ಚಿಂತಿಸಬೇಕು. ಚಿಂತನೆಗಳನ್ನು ಕಾರಣಸಮೇತವಾಗಿ ಬಿಡಿಸಿಕೊಳ್ಳಬೇಕು, ಅವುಗಳನ್ನು ನಮ್ಮಗಳ ಮನಸ್ಸಿನ ಮೇಲೆ ಮೂಡಿಸಿಕೊಳ್ಳಬೇಕು, ಮತ್ತು ಅವುಗಳ ಮೇಲೆ ಧ್ಯಾನಮಾಡಬೇಕು, ಸಿದ್ಧಿಸಿಕೊಳ್ಳಬೇಕು, ಕಟ್ಟ ಕಡೆಗೆ ಅವು ನಮ್ಮ ಇಡಿಯ ಜೀವನವಾಗುವವರೆಗೆ. ಬಹು ಕಾಲದವರೆಗೆ ಧರ್ಮವು ಭಾವನೆಗಳ ಅಥವಾ ತತ್ತ್ವ ನಿರೂಪಣೆಗಳ ಹೊರೆಯಾಗಿ ಉಳಿಯುವದಿಲ್ಲ; ಅಥವಾ ಬೌದ್ಧಿಕವಾದ ಒಪ್ಪಿಗೆಯಾಗಿಯೂ ಅಲ್ಲ; ಅದು ನಮ್ಮ ಸಾಕ್ಷಾತ್ ಆತ್ಮದೊಳಗೆ (ಅಂತರಂಗದೊಳಗೆ) ಪ್ರವೇಶಿಸುತ್ತದೆ. ನಮ್ಮ ಬೌದ್ಧಿಕ ಒಪ್ಪಿಗೆಯ ಮೂಲಕ ಇವತ್ತು ನಾವು ಅನೇಕ ಮೂರ್ಖ ವಸ್ತುಗಳಿಗೆ ಅನುಮೋದನೆ ನೀಡಬಹುದು ಮತ್ತು ನಾಳೆ ನಮ್ಮ ಮನಸ್ಸುಗಳನ್ನು ಶುದ್ಧಾಂಗವಾಗಿ ಬದಲಾಯಿಸಬಹುದು. ಆದರೆ ನಿಜವಾದ ಧರ್ಮ ಎಂದೆಂದೂ ಬದಲಾಗದು. ಧರ್ಮವೇ ಸಿದ್ಧಿ; ಅದು ಮಾತಲ್ಲ, ಸಿದ್ಧಾಂತವಲ್ಲ, ಅಥವಾ ತತ್ತ್ವ ನಿರೂಪಣೆಗಳೂ ಅಲ್ಲ, ಅವು ಎಷ್ಟೇ ಸೊಗಸಾಗಿದ್ದಿರಬಹುದಾದರೂ, ಅದು ಇರುವುದು ಮತ್ತು ಆಗುವುದು, ಕೇಳುವುದಲ್ಲ, ಅಂಗೀಕರಿಸುವುದಲ್ಲ; ಅದು ಇಡಿಯ ಆತ್ಮವೇ ತಾನೇನನ್ನು ನಂಬುವುದೋ ಅದಕ್ಕೆ ಬದಲಾಗುವದು. ಅದೇ ಧರ್ಮ.

(The Idial of Universal Religion- P-374, The Complete Works of Swami Vivekananda, Vol-II)

# 22

# ಎಲ್ಲರಿಗೂ ತಿಳಿದಿರುವ ರಹಸ್ಯ

ವಸ್ತುಗಳನ್ನು ಅವುಗಳ ನಿಜಸ್ಥಿತಿಯಲ್ಲಿ ಅರ್ಥಮಾಡಿಕೊಳ್ಳುವ ಪ್ರಯತ್ನದಲ್ಲಿ ನಾವು ಯಾವ ದಿಕ್ಕಿನಲ್ಲಿ ತಿರುಗಿದರೂ, ಸಾಕಷ್ಟು ದೀರ್ಘವಾಗಿ ವಿಶ್ಲೇಷಣೆ ಮಾಡಿದರೆ, ಕಟ್ಟ ಕಡೆಗೆ, ತೋರಿಕೆಗೆ ಅಸಮಂಜಸವಾಗಿರುವ ವಸ್ತುಗಳ ವಿಚಿತ್ರ ಸ್ಥಿತಿಗೆ ಬರುತ್ತೇವೆ; ಅದು ನಮ್ಮ ತರ್ಕವು ಗ್ರಹಿಸಲಾರದಂತಹ ಸ್ಥಿತಿ ಆದರೂ, ಸತ್ಯವಾದುದು. ಯಾವದೊಂದು ವಸ್ತುವನ್ನು ನಾವು ಪರಿಶೀಲಿಸುತ್ತೇವೆ. ಅದು ಪರಿಮಿತ ಎಂದು ನಮಗೆ ಗೊತ್ತು; ಆದರೆ ಅದನ್ನು ವಿಶ್ಲೇಷಿಸತೊಡಗಿದ ಕೂಡಲೇ, ಅದು ತರ್ಕದಾಚೆಗೆ ನಮ್ಮನ್ನು ಕೊಂಡೊಯ್ಯುತ್ತದೆ; ಅದರ ಎಲ್ಲ ಗುಣಗಳು, ಎಲ್ಲ ಸಾಧ್ಯತೆಗಳು, ಅದರ ಶಕ್ತಿಗಳು, ಅದರ ಸಂಬಂಧಗಳು ಈ ಎಲ್ಲದರ ಕೊನೆಯನ್ನು ನಾವು ಎಂದೂ ಕಾಣುವದಿಲ್ಲ. ಅದು ಅಪರಿಮಿತ (ಅನಂತ)ವಾಗಿರುತ್ತದೆ. ಸಾಧಾರಣವಾದ ಹೂವನ್ನು ಗಮನಿಸಿ, ಅದು ಸಾಕಷ್ಟು ಪರಿಮಿತವೇ; ಆದರೆ ಆ ಹೂವಿನ ವಿಷಯವೆಲ್ಲವನ್ನೂ ತಿಳಿದಿರುವೆನೆಂದು ಹೇಳಬಲ್ಲವನಾರು? ಆ ಹೂವಿನ ವಿಷಯದ ತಿಳಿವಳಿಕೆಯಲ್ಲಿ ಯಾರೂ ಸಹ ಕೊನೆಮುಟ್ಟುವ ಸಾಧ್ಯತೆ ಇಲ್ಲ. ಶುರುಮಾಡುವಾಗ ಪರಿಮಿತವೆಂದೆನಿಸಿದ್ದ ಹೂವು ಅಪರಿಮಿತವಾಗಿರುತ್ತದೆ. ಒಂದು ಮರಳಿನ ಕಣವನ್ನು ತೆಗೆದುಕೊಳ್ಳಿ. ಅದನ್ನು ಪರೀಕ್ಷಿಸಿ. ಅದು ಪರಿಮಿತ ಎಂಬ ಭಾವನೆಯಿಂದ ಪ್ರಾರಂಭ ಮಾಡುತ್ತೇವೆ, ಕಟ್ಟಕಡೆಗೆ ಅದು ಹಾಗಿಲ್ಲ, ಅದು ಅಪರಿಮಿತ ಎಂದು ಕಾಣುತ್ತೇವೆ; ಅದು ಹೇಗೇ ಇರಲಿ, ಅದನ್ನು ಪರಿಮಿತ ಎಂದೇ ಕಂಡಿದ್ದೇವೆ. ಹೂವನ್ನೂ ಹಾಗೆಯೇ ಪರಿಮಿತವಾದ ಯಾವದೋ ಒಂದೆಂದು ಪರಿಗಣಿಸಿದ್ದೇವೆ.

ಹೀಗೆಯೇ, ನಮ್ಮೆಲ್ಲ ಭೌತಿಕ, ಮಾನಸಿಕ ಯೋಚನೆ ಮತ್ತು ಅನುಭವಗಳಲ್ಲೂ ಸಹ ನಾವು ಚಿಂತಿಸಬಹುದು, ಸಣ್ಣ ಪ್ರಮಾಣದಲ್ಲಿ ನಾವು ಪ್ರಾರಂಭಿಸಿ, ಅವುಗಳನ್ನು ಸಣ್ಣ ವಸ್ತುಗಳೆಂದು ಗ್ರಹಿಸಬಹುದು; ಆದರೆ ಬಹು ಬೇಗನೆ ಅವು ನಮ್ಮ ತಿಳಿವಳಿಕೆಯಿಂದ ಜಾರಿ ಅಪರಿಮಿತತೆಯ ಪ್ರಪಾತಕ್ಕೆ ಮುಳುಗುತ್ತವೆ. ಮತ್ತು ಅರಿಯುವ ಅತ್ಯಂತ ದೊಡ್ಡದು ಮತ್ತು ಪ್ರಥಮ ವಸ್ತು ಸ್ವಯಂ ನಾವೇ. ಇರುವಿಕೆಯ ವಿಷಯದಲ್ಲಿ ನಾವು ಕೂಡ ಅದೇ ಇಕ್ಕಟ್ಟಿನಲ್ಲಿದ್ದೇವೆ. ನಾವು ಇದ್ದೇವೆ. ನಾವು ಪರಿಮಿತ ಜೀವಿಗಳೆಂದು ನಾವು ತಿಳಿದಿದ್ದೇವೆ. ನಾವು ಹುಟ್ಟುತ್ತೇವೆ, ಸಾಯುತ್ತೇವೆ. ನಮ್ಮ ಅನುಭವದ ವ್ಯಾಪ್ತಿಯ ದಿಗಂತ ಬಹಳ ಕಿರಿದು. ನಾವು ಇಲ್ಲಿದ್ದೇವೆ, ಮಿತಿಯಲ್ಲಿದ್ದೇವೆ, ಸುತ್ತಲೂ ಮಾರಾಂತು ಆವರಿಸಿರುವ ವಿಶ್ವದ ಎದುರಿನಲ್ಲಿದ್ದೇವೆ. ಒಂದು ಕ್ಷಣದಲ್ಲಿ ಪ್ರಕೃತಿಯು ನಮ್ಮನ್ನು ಇರುವಿಕೆಯಾಚೆಗೆ ಹಿಸುಕೆಸೆಯಬಲ್ಲದು. ನಮ್ಮ ಸಣ್ಣ ದೇಹಗಳು ಅಷ್ಟು ಮಾತ್ರ ಒಟ್ಟಾಗಿ ಹಿಡಿದುಕೊಂಡಿವೆ, ಕ್ಷಣಮಾತ್ರದ ಸೂಚನೆಯಲ್ಲಿ ತುಂಡುತುಂಡಾಗಿ ಹೋಗಲು ಸಿದ್ಧವಾಗಿದೆ. ಅದು ನಮಗೆ ಗೊತ್ತಿದೆ. ಕಾರ್ಯವ್ಯಾಪ್ತಿಯ ಪ್ರದೇಶದಲ್ಲಿ ನಾವೆಷ್ಟು ಶಕ್ತಿಹೀನರು! ಪ್ರತಿ ಸಂದರ್ಭದಲ್ಲೂ ನಮ್ಮ ಸಂಕಲ್ಪ ಶಕ್ತಿಯನ್ನು ಮುರಿದು ಹಾಕಲಾಗುತ್ತಿದೆ. ಎಷ್ಟನ್ನೋ ನಾವು

ಮಾಡಬೇಕೆಂದಿರುವೆವು, ಎಷ್ಟು ಸ್ವಲ್ಪವನ್ನು ನಾವು ಮಾಡಬಲ್ಲೆವು? ನಮ್ಮ ಸಂಕಲ್ಪಕ್ಕೆ ಮಿತಿಯಿಲ್ಲ. ನಾವು ಪ್ರತಿಯೊಂದನ್ನು ಆಶಿಸಬಹುದು, ಪ್ರತಿಯೊಂದೂ ಬೇಕೆನ್ನಬಹುದು, ನಾವು ಶ್ವಾನನಕ್ಷತ್ರ ಪುಂಜಕ್ಕೆ ಹೋಗಲು ಅಪೇಕ್ಷೆಪಡಬಲ್ಲೆವು. ಆದರೆ ನಮ್ಮ ಅಪೇಕ್ಷೆಗಳಲ್ಲಿ ಎಷ್ಟು ಸ್ವಲ್ಪ ಸಾಧಿತವಾಗುತ್ತದೆ! ದೇಹವು ಅದನ್ನು ಆಗಗೊಡದು. ಸರಿ, ನಮ್ಮ ಇಚ್ಛೆಯ ಈಡೇರಿಕೆಗೆ ಪ್ರಕೃತಿಯು ಅಡ್ಡವಾಗಿದೆ. ನಾವು ದುರ್ಬಲರು. ಹೂವಿನ ವಿಷಯಕ್ಕೆ, ಮರಳಿನ ಕಣದ ವಿಷಯಕ್ಕೆ, ಭೌತಿಕ ವಿಷಯದ ಪ್ರಪಂಚಕ್ಕೆ, ಮತ್ತು ನಮ್ಮ ಪ್ರತಿಯೋಚನೆಯ ವಿಷಯಕ್ಕೆ ಇರುವ ಸತ್ಯವೇನೋ ಅದು ನಮ್ಮ ವಿಷಯಕ್ಕೆ ನೂರುಪಟ್ಟು ಹೆಚ್ಚು ನಿಜವಾಗಿದೆ. ಒಂದೇ ಕಾಲಕ್ಕೆ ನಾವು ಪರಿಮಿತ ಮತ್ತು ಅಪರಿಮಿತವಾಗಿರುವದರಿಂದ, ನಾವೂ ಸಹಿತ ಇರುವಿಕೆಯ ಅದೇ ರೀತಿಯ ಸಂದಿಗ್ಧದಲ್ಲಿದ್ದೇವೆ. ನಾವು ಸಾಗರದ ಅಲೆಗಳಂತಿದ್ದೇವೆ: ಅಲೆಯು ಸಾಗರ, ಆದರೂ ಸಾಗರವಲ್ಲ– ನೀವು 'ಇದು ಸಾಗರದ ಭಾಗವಲ್ಲ' ಎಂದು ಹೇಳಲಾರದಂತಹ ಯಾವ ಭಾಗವೂ ಅಲೆಯಲ್ಲಿಲ್ಲ. 'ಸಾಗರ' ಎಂಬ ಹೆಸರು ಅಲೆಗೂ ಮತ್ತು ಅಷ್ಟೇ ಸಮನಾಗಿ ಸಾಗರದ ಪ್ರತಿ ಇತರ ಭಾಗಕ್ಕೂ ಅನ್ವಯಿಸುತ್ತದೆ. ಆದರೂ ಅದು ಸಾಗರಕ್ಕಿಂತ ಬೇರೆಯಾಗಿದೆ. ಅದರಿಂದ, ಇರುವಿಕೆಯ ಈ ಅಪರಿಮಿತ ಸಾಗರದ ಅಸ್ತಿತ್ವದಲ್ಲಿ ಕಿರಿಯಲೆಗಳಂತಿದ್ದೇವೆ. ಅದೇ ಕಾಲಕ್ಕೆ, ನಿಜವಾಗಿಯೂ ನಮ್ಮನ್ನೇ ಮನವರಿಕೆ ಮಾಡಿಕೊಳ್ಳಬೇಕೆಂದರೆ, ನಾವು ಮಾಡಲಾರೆವು– ನಾವು ಅಪರಿಮಿತರಾಗಿದ್ದೇವೆ.

ನಾವು ಕನಸಿಗಳೊಳಗೆ ನಡೆಯುತ್ತಿರುವಂತೆ ತೋರುತ್ತದೆ. ಕನಸುಗಳೆಲ್ಲ ಸಾಕ್ಷಾತ್ಕಾರ ಸ್ವಪ್ನ ಮನೋರಾಜ್ಯದಲ್ಲಿ ಸರಿ: ಆದರೆ ಅವುಗಳಲ್ಲಿ ಒಂದನ್ನಾದರೂ ಹಿಡಿಯಹೋಗುವ ಕೂಡಲೇ, ಅದು ಕೈತಪ್ಪಿಹೋಗುತ್ತದೆ. ಏಕೆ? ಅದು ಸುಳ್ಳು ಎಂದಲ್ಲ, ಆದರೆ ಅದು ತರ್ಕದ ಶಕ್ತಿಯಾಚೆಗಿದೆ, ಅದನ್ನು ಗ್ರಹಿಸುವ ಬುದ್ಧಿಯ ಆಚೆಗಿದೆ. ಈ ಜೀವನದಲ್ಲಿ ಪ್ರತಿಯೊಂದೂ ಎಷ್ಟು ವಿಶಾಲವಾಗಿದೆಯೆಂದರೆ, ಅದರ ಮುಂದೆ ಬುದ್ಧಿಮತ್ತೆ ಹೋಲಿಕೆಯಲ್ಲಿ ಏನೂ ಇಲ್ಲ. ಅದು ಬುದ್ಧಿಮತ್ತೆಯ ನಿಯಮಗಳಿಗೆ ಕಟ್ಟು ಬೀಳುವದಿಲ್ಲ! ಬುದ್ಧಿಮತ್ತೆಯು ಅದರ ಸುತ್ತ ಹರಡ ಬೆಳಸುವ ಬಂಧನಕ್ಕೆ ಅದು ನಗುತ್ತದೆ. ಮಾನವನ ಆತ್ಮದ ಪಕ್ಷದಲ್ಲಿ ಅದು ಇನ್ನೂ ನೂರು ಪಾಲು ಹೆಚ್ಚಿನದು. ವಿಶ್ವದ ಅತ್ಯಂತ ಬೃಹತ್ ನಿಗೂಢತೆಯೇ "ಸ್ವಂತ ನಾವೇ".

ಇದೆಲ್ಲಾ ಎಷ್ಟು ಅದ್ಭುತವಾಗಿದೆ! ಮಾನವನ ಕಣ್ಣನ್ನು ನೋಡಿ, ಎಷ್ಟು ಸುಲಭವಾಗಿ ಅದನ್ನು ನಾಶಪಡಿಸಬಹುದು, ಆದರೂ ಸಹಿತ ಅತ್ಯಂತ ದೊಡ್ಡ ಸೂರ್ಯರಿರುವದು ಏಕೆಂದರೆ ನಿಮ್ಮ ಕಣ್ಣುಗಳು ಅವನ್ನು ನೋಡುವದರಿಂದ ಮಾತ್ರ. ಪ್ರಪಂಚ ಇರುವದು ಏಕೆಂದರೆ ನಿಮ್ಮ ಕಣ್ಣುಗಳು ಅದು ಇದೆಯೆಂದು ದೃಢೀಕರಿಸುತ್ತವೆ. ಆ ರಹಸ್ಯವನ್ನು ಚಿಂತಿಸಿ! ಈ ಬಡ ಚಿಕ್ಕ ಕಣ್ಣುಗಳು! ಪ್ರಖರವಾದ ಬೆಳಕು ಅಥವಾ ಒಂದು ಗುಂಡು ಸೂಜಿ ಅವುಗಳನ್ನು ನಾಶಮಾಡಬಲ್ಲುದು. ಆದರೂ ನಾಶಗೊಳಿಸುವ ಅತ್ಯಂತ ಶಕ್ತಿಶಾಲಿ ಯಂತ್ರಗಳು, ಅತ್ಯಂತ ಶಕ್ತಿಶಾಲಿ ಕ್ಷೋಭೆಗಳು; ಅತ್ಯಂತ ಅದ್ಭುತವಾದ ಇರುವಿಕೆಗಳು, ದಶಲಕ್ಷ ಸೂರ್ಯರು, ನಕ್ಷತ್ರಗಳು, ಚಂದ್ರರು, ಮತ್ತು ಭೂ ಇವೆಲ್ಲವೂ ತಮ್ಮ ಇರುವಿಕೆಗಾಗಿ, ಮತ್ತು ಇದೆಯೆಂಬ ದೃಢೀಕರಣಕ್ಕಾಗಿ ಈ ಎರಡು ಚಿಕ್ಕ ವಸ್ತುಗಳನ್ನು

ಅವಲಂಬಿಸಿದೆ! ಅವು (ಆ ಕಣ್ಣುಗಳು) 'ಪ್ರಕೃತಿ, ನೀನಿರುವೆ' ಎನ್ನುತ್ತವೆ, ನಾವು ಪ್ರಕೃತಿ ಇದೆ ಎಂದು ನಂಬುತ್ತೇವೆ. ಹಾಗೆಯೇ ಎಲ್ಲ ಇಂದ್ರಿಯಗಳ ವಿಷಯವೂ.

ಇದು ಏನು? ದೌರ್ಬಲ್ಯ ಇರುವದೆಲ್ಲಿ? ಶಕ್ತರು ಯಾರು? ಯಾವದು ದೊಡ್ಡದು, ಯಾವದು ಚಿಕ್ಕದು? ಅತ್ಯಂತ ಸಣ್ಣ ಪರಮಾಣುವೂ ಇಡಿಯ ವಸ್ತುವಿನ ಇರುವಿಕೆಗೆ ಅವಶ್ಯವಾಗಿರುವೆಡೆ, ಆಶ್ಚರ್ಯಾದ್ಭುತವಾದ ಇರುವಿಕೆಯ ಅನ್ಯೋನ್ಯಾಶ್ರಯದಲ್ಲಿ ಯಾವದು ಉನ್ನತವಾದುದು, ಯಾವದು ಕೀಳು? ಯಾರು ಹೆಚ್ಚಿನವರು, ಯಾರು ಸಣ್ಣವರು? ಅದನ್ನು ಕಂಡುಕೊಳ್ಳುವ ಕಾಲಮೀರಿದೆ! ಅದು ಏಕೆ? ಏಕೆಂದರೆ ಯಾರೊಬ್ಬನೂ ದೊಡ್ಡವನಲ್ಲ, ಯಾರೊಬ್ಬನೂ ಸಣ್ಣವನಲ್ಲ. ಎಲ್ಲ ವಸ್ತುಗಳೂ ಆ ಅಪರಿಮಿತದ ಸಾಗರದಿಂದ ಪರಸ್ಪರವ್ಯಾಪ್ತವಾಗಿದೆ; ಅವುಗಳ ವಾಸ್ತವಿಕತೆಯೇ ಆ ಅಪರಿಮಿತ; ಯಾವದೆಲ್ಲ ಮೇಲ್ಮೈಯಲ್ಲಿ ಇದೆಯೋ ಅದು ಅಪರಿಮಿತವಲ್ಲದೆ ಬೇರೆಯಲ್ಲ. ವೃಕ್ಷವು ಅಪರಿಮಿತ; ಅದರಂತೆ ನೀವು ನೋಡುವ ಸ್ಪರ್ಶಿಸುವ ಪ್ರತಿಯೊಂದೂ– ಮರಳಿನ ಪ್ರತಿಯೊಂದು ಕಣ, ಪ್ರತಿಯೊಂದು ಅಲೋಚನೆ, ಪ್ರತಿಯೊಂದು ಆತ್ಮ, ಇರುವ ಪ್ರತಿಯೊಂದು ವಸ್ತುವೂ, ಅಪರಿಮಿತವಾಗಿದೆ. ಅಪರಿಮಿತವು ಮಿತ, ಮಿತವು ಅಪರಿಮಿತ. ಇದೇ ನಮ್ಮ ಇರವು.

ಅದೆಲ್ಲವೂ ನಿಜವಾಗಿರಬಹುದು, ಆದರೆ ಅಪರಿಮಿತದ ವಿಷಯದ ಈ ಭಾವನೆಗಳೆಲ್ಲಾ ಪ್ರಕೃತದಲ್ಲಿ ಬಹುಮಟ್ಟಿಗೆ ಅಜಾಗೃತ ಸ್ಥಿತಿಯಲ್ಲಿದೆ. ನಾವು ನಮ್ಮ ಅಪರಿಮಿತ ಸ್ವಭಾವವನ್ನು ಮರೆತಿದ್ದೇವೆ ಎಂಬುದೇನೋ ಅಲ್ಲ. ಯಾರುತಾನೆ ಎಂದಾದರೂ ತಾನು ನಿಶ್ಶೇಷನಾಗುವೆನು ಎಂಧು ಯೋಚಿಸಬಲ್ಲರು? ಯಾರು ತಾನೇ ತಾನು ಸಾಯುವೆನೆಂದು ಯೋಚಿಸಬಲ್ಲನು? ಯಾರೂ ಹಾಗೆ ಮಾಡಲಾರರು. ಅಪರಿಮಿತದೊಡನೆ ನಮ್ಮ ಸಂಬಂಧವೆಲ್ಲವೂ ನಮ್ಮೊಳಗೆ ಅಜಾಗೃತ ಸ್ಥಿತಿಯಲ್ಲಿ ಕೆಲಸಮಾಡುತ್ತದೆ. ಆದುದರಿಂದ, ಒಂದು ವಿಧದಲ್ಲಿ, ನಾವು ನಮ್ಮ ನಿಜರೂಪವನ್ನು ಮರೆತಿದ್ದೇವೆ, ಆದುದರಿಂದಲೇ ಈ ಎಲ್ಲ ಸಂಕಟವೂ ಬರುವದು.

ನಮ್ಮ ದೈನಂದಿನ ಪ್ರಾಯೋಗಿಕ ಜೀವನದಲ್ಲಿ ನಾವು ಸಣ್ಣ ವಸ್ತುಗಳಿಂದಲೂ ನೋವನ್ನು ಅನುಭವಿಸುವೆವು; ಸಣ್ಣ ಜೀವಿಗಳು ನಮ್ಮನ್ನು ಅಡಿಯಾಳು ಮಾಡುತ್ತವೆ. ನಾವು ಪರಿಮಿತರು, ನಾವು ಸಣ್ಣವರು ಎಂದುಕೊಳ್ಳುವ ಕಾರಣದಿಂದಲೇ ನಮಗೆ ಸಂಕಟ ಬರುವದು. ಆದರೂ ಸಹಿತ ನಾವೂ ಅಪರಿಮಿತ ಜೀವಿಗಳು ಎಂದು ನಂಬಲು ಎಷ್ಟು ಕಷ್ಟವಾಗುವದು; ಈ ಎಲ್ಲ ಸಂಕಟ ಮತ್ತು ತೊಂದರೆಗಳ ನಡುವೆ, ಸಣ್ಣ ವಸ್ತುವೊಂದೂ ಸಹ ನನ್ನನ್ನು ಸಮತೋಲನದಿಂದ ಬಿಸಾಡಿದಾಗ, ನಾನು ಅಪರಿಮಿತನು ಎಂದು ನಂಬುವ ನಮ್ಮ ಎಚ್ಚರವಿರಲೇಬೇಕು. ನಿಜ ಸಂಗತಿ ಎಂದರೆ ನಾವು ಅಪರಿಮಿತರಾಗಿದ್ದೇವೆ, ಬುದ್ಧಿಪೂರ್ವಕವಾಗಲೀ ಅಥವಾ ಎಚ್ಚರವಿಲ್ಲದೆಯಾಗಲೀ, ನಾವೆಲ್ಲರೂ ಅಪರಿಮಿತವಾದ ಆ ಯಾವದೋ ಒಂದನ್ನು ಅರಸುತ್ತಲಿದ್ದೇವೆ; ಯಾವಾಗಲೂ ನಾವು ಸ್ವತಂತ್ರವಾಗಿರುವ ಅದೊಂದನ್ನು ಅನ್ವೇಷಿಸುತ್ತಿದ್ದೇವೆ.

ಒಂದು ಧರ್ಮವಿರದ ಮತ್ತು ಒಂದು ತೆರನ ಭಗವಂತ ಅಥವಾ ದೇವರುಗಳನ್ನು ಅರ್ಚಿಸದ ಮಾನವಕುಲ ಎಂದೆಂದೂ ಇರಲಿಲ್ಲ. ಆ ಭಗವಂತನು ಅಥವಾ ದೇವರುಗಳು ಇದ್ದರೋ ಇಲ್ಲವೋ ಎಂಬ ಪ್ರಶ್ನೆಯೇ ಇಲ್ಲ; ಆದರೆ ಮನಸ್ಸಿನ ಮೇಲೆ ಪರಿಣಾಮಮಾಡುವ ಈ ಸಂಗತಿಯ ವಿಶ್ಲೇಷಣೆ ಏನು? ಏಕೆ ಎಲ್ಲ ಪ್ರಪಂಚವೂ ಒಬ್ಬ ಭಗವಂತನನ್ನು ಕಾಣಲು ಅಥವಾ ಅನ್ವೇಷಿಸಲು ಪ್ರಯತ್ನಿಸುತ್ತಿದೆ? ಏಕೆ? ಏಕೆಂದರೆ, ಎಲ್ಲ ಬಂಧನಗಳಿದ್ದರೂ, ಮತ್ತು ಪ್ರಕೃತಿಯ ಹಾಗೂ ನಿಯಮದ ಭೀಕರ ಶಕ್ತಿಯು ನಮ್ಮನ್ನು ಯಾವ ಕಡೆಗೂ ತಿರುಗಲು ಎಂದಿಗೂ ಬಿಡಲಾರದಂತೆ ಅರೆದು ಹಾಕುತ್ತಿದ್ದರೂ, – ನಾವು ಎಲ್ಲೆಲ್ಲಿಗೆ ಹೋದರೂ, ಏನನ್ನಾದರೂ ಮಾಡಬೇಕೆಂದರೂ, ಎಲ್ಲೆಲ್ಲೂ ಇರುವ ಈ ನಿಯಮವು–ನಮ್ಮನ್ನು ಅಡ್ಡಿ ಪಡಿಸುತ್ತದೆ, ಇಷ್ಟೆಲ್ಲಾ ಆದರೂ ಮಾನವನ ಆತ್ಮವು ತನ್ನ ಸ್ವಾತಂತ್ರ್ಯವನ್ನು ಎಂದೆಂದಿಗೂ ಮರೆಯದೆ ಎಂದೂ ಅದನ್ನು ಅರಸುತ್ತಿದೆ. ಸ್ವಾತಂತ್ರ್ಯಕ್ಕಾಗಿ ಮಾಡುವ ಅನ್ವೇಷಣೆಯೇ, ಎಲ್ಲ ಧರ್ಮಗಳ ಅನ್ವೇಷಣೆಯೂ ಸಹ; ಅವುಗಳಿಗೆ ಗೊತ್ತಿರಲಿ, ಗೊತ್ತಿಲ್ಲದಿರಲಿ, ಅವುಗಳು ಚೆನ್ನಾಗಿಯೇ ಸೂತ್ರೀಕರಿಸಲಾಗಿರಲಿ, ಆಗಿಲ್ಲದಿರಲಿ, ಆ ಭಾವನೆ ಇದ್ದೇ ಇದೆ. ಅತ್ಯಂತ ಕೆಳಮಟ್ಟದ ಮನುಷ್ಯನೂ, ಅತ್ಯಂತ ಅಜ್ಞಾನಿಯೂ, ಪ್ರಕೃತಿ ನಿಯಮಗಳ ಮೇಲೆ ನಿಯಂತ್ರಣ ಶಕ್ತಿ ಇರುವ ಯಾವದೋ ಒಂದನ್ನು ಹುಡುಕುತ್ತಾನೆ. ಅವನು ಭೂತ, ಪ್ರೇತವನ್ನಾಗಲೀ, ದೇವತೆಯನ್ನಾಗಲೀ ನೋಡಬಯಸುತ್ತಾನೆ– ಪ್ರಕೃತಿಯನ್ನು ದಮನ ಮಾಡುವ, ಪ್ರಕೃತಿಯು ಅದಕ್ಕೆ ಸರ್ವಶಕ್ತನಲ್ಲದಿರುವಂತಹ, ಅದಕ್ಕೆ ಯಾವ ನಿಯಮವೂ ಇರದಂತಹ ಯಾವದೋ ಒಂದನ್ನು, ಅರಸುತ್ತಾನೆ. 'ಓ, ನಿಯಮವನ್ನು ಮುರಿಯಬಲ್ಲ ಯಾರೊಬ್ಬನಿಗಾಗಿ'– ಇದು ಮಾನವ ಹೃದಯದಿಂದ ಬರುವ ಮೊರೆ. ನಾವು ಯಾವಾಗಲೂ ನಿಯಮವನ್ನು ಮುರಿಯುವ ಆ ಯಾರೊಬ್ಬನನ್ನು ಹುಡುಕುತ್ತಿರುವೆವು. ರಭಸದಿಂದ ಮುನ್ನುಗ್ಗುವ ಇಂಜಿನ್ ರೈಲುಹಳಿಯಮೇಲೆ ವೇಗದಿಂದೋಡುತ್ತದೆ; ಸಣ್ಣ ಹುಳುವೊಂದು ಅದರ ಪಥದಿಂದಾಚೆಗೆ ತೆವಳಿಹೋಗುತ್ತದೆ. ನಾವು ಕೂಡಲೆ ಹೇಳುತ್ತೇವೆ: "ಇಂಜಿನ್ ನಿರ್ಜೀವ ವಸ್ತು, ಯಂತ್ರ; ಹುಳುವು ಜೀವಂತವಾಗಿದೆ", ಏಕೆಂದರೆ ಹುಳುವು ನಿಯಮವನ್ನು ಮುರಿಯಲು ಯತ್ನಿಸಿತು. ತನ್ನೆಲ್ಲ ಶಕ್ತಿ ಮತ್ತು ದೊಡ್ಡ ಆಕಾರವಿದ್ದರೂ, ಇಂಜಿನ್ ನಿಯಮವನ್ನು ಮುರಿಯಲಾರದು. ಮನುಷ್ಯನಿಗೆ ಬೇಕಾಗುವ ಯಾವ ದಿಕ್ಕಿನಲ್ಲಾದರೂ ಅದನ್ನು ಹೋಗುವಂತೆ ಮಾಡಿದೆ, ಆದರೆ ಅದು ಬೇರೆಯಂತೆ ಮಾಡಲಾರದು; ಆದರೆ, ಹುಳುವು ಸಣ್ಣದು; ಅತ್ಯಲ್ಪವಾದರೂ ಅದು ನಿಯಮವನ್ನು ಮುರಿಯಲು ಯತ್ನಿಸಿ ಅಪಾಯವನ್ನು ತಪ್ಪಿಸಿತು. ಅದು ನ್ಯಾಯದ ವಿರುದ್ಧ ತನ್ನನ್ನೇ ಪ್ರತಿಪಾದಿಸಿಕೊಳ್ಳಲು, ತನ್ನ ಸ್ವತಂತ್ರವನ್ನು ದೃಢವಾಗಿಸಿಕೊಳ್ಳಲು ಪ್ರಯತ್ನಿಸಿತು; ಮತ್ತು ಅದರಲ್ಲಿ ಭವಿಷ್ಯತ್ ಭಗವಂತನ ಚಿಹ್ನೆಯಿದ್ದಿತು.

ಎಲ್ಲೆಲ್ಲೂ ನಾವು ಈ ಸ್ವಾತಂತ್ರ್ಯ ಪ್ರತಿಪಾದನೆಯನ್ನು, ಆತ್ಮ ಸ್ವಾತಂತ್ರ್ಯವನ್ನು ಕಾಣುತ್ತೇವೆ. ಅದು ಎಲ್ಲ ಧರ್ಮದಲ್ಲೂ ಭಗವಂತನ ಅಥವಾ ದೇವರುಗಳ ಆಕಾರದಲ್ಲಿ ಪ್ರತಿಫಲನವಾಗುತ್ತದೆ. ಆದರೆ ಇದೆಲ್ಲಾ ಬಹಿರಂಗ, ದೇವರುಗಳನ್ನು ಹೊರಗೆ ಮಾತ್ರ ನೋಡುವವರಿಗೆ. ಮನುಷ್ಯನು ತಾನು ಏನೂ ಅಲ್ಲವೆಂದು ನಿರ್ಧರಿಸಿದನು, ತಾನೆಂದಿಗೂ ಸ್ವತಂತ್ರನಾಗಲಾರ ಎಂಬ ಹೆದರಿಕೆ

ಅವನಿಗಿತ್ತು; ಅದರಿಂದ ಅವನು ಪ್ರಕೃತಿಯ ಹೊರಗೆ ಸ್ವತಂತ್ರವಾಗಿರುವ ಒಬ್ಬಾತನನ್ನು ಹುಡುಕಲು ಹೊರಟನು. ಆಗ ಅವನು ಈ ತೆರನ ಸ್ವತಂತ್ರರು ಅನೇಕ ಅನೇಕರಿರುವರು ಎಂದು ಯೋಚಿಸಿದನು, ಕ್ರಮೇಣ ಅವರೆಲ್ಲರನ್ನೂ ಒಬ್ಬನೇ ದೇವರುಗಳ 'ದೇವ'ನಾಗಿ, ರಾಜರುಗಳ 'ರಾಜ'ನಾಗಿ ಲೀನಗೊಳಿಸಿದನು. ಅದೂ ಅವನಿಗೆ ಸಮಾಧಾನ ನೀಡಲಿಲ್ಲ. ಅವನು ಸತ್ಯಕ್ಕೆ ಸ್ವಲ್ಪ ಹತ್ತಿರ, ಇನ್ನೂ ಸ್ವಲ್ಪ ಹತ್ತಿರಕ್ಕೆ ಬಂದನು, ಮತ್ತು ಕ್ರಮೇಣ ತಾನು ಏನಾಗಿದ್ದರೂ ತಾನು ಯಾವದೋ ಒಂದು ರೀತಿಯಲ್ಲಿ ಆ ದೇವರುಗಳ 'ದೇವ'ನಿಗೆ, ರಾಜರುಗಳ 'ರಾಜ'ನಿಗೆ ಸಂಬಂಧಿಸಿದವನು ಎಂದು ಕಂಡನು; ಬಂಧನದಲ್ಲಿದ್ದು, ಕೆಳಗಿದ್ದು, ಅಶಕ್ತನಾಗಿದ್ದೆನೆಂದು ಯೋಚಿಸಿದರೂ, ತಾನು ಅದು ಹೇಗೋ ಆ ದೇವರ 'ದೇವ'ನಿಗೆ ಸಂಬಂಧಪಟ್ಟವನು ಎಂದು ಭಾವಿಸಿದನು. ಆಗ ಅವನಿಗೆ (ದರ್ಶನಗಳು) ನೋಟಗಳು ಬರತೊಡಗಿದುವು; ಯೋಚನೆಗಳು ಮೇಲೆದ್ದು, ಜ್ಞಾನ ಬೆಳೆಯಿತು. ಅವನು ಆ ಭಗವಂತನಿಗೆ ಹತ್ತಿರ ಹತ್ತಿರವಾಗಿ ಬರತೊಡಗಿದನು. ಮತ್ತು ಕಟ್ಟಕಡೆಗೆ, ಭಗವಂತ ಮತ್ತು ಎಲ್ಲ ದೇವರುಗಳು, ಈ ಇಡಿಯ ಮನೋರಾಜ್ಯದ ಸಂಗತಿಯು ಸರ್ವಶಕ್ತವಾದೊಂದು ಸ್ವತಂತ್ರ ಆತ್ಮದ ಅರಸುವಿಕೆಯೊಡನೆ ಸಂಬಂಧಿಸಿದೆ, ಮತ್ತು ಅದು ತನ್ನ ಸ್ವಂತವಾದ ಅವನದೇ ವಿಷಯದ ಭಾವನೆಯ ಪ್ರತಿಫಲನ ಎಂಬುದನ್ನು ಕಂಡುಕೊಂಡನು. ಆಗ ಕೊನೆಯದಾಗಿ 'ಭಗವಂತನು ಮಾನವನನ್ನು ತನ್ನದೇ ಪ್ರತೀಕವಾಗಿ ಮಾಡಿದನು' ಎಂಬುದು ಸತ್ಯಮಾತ್ರವಲ್ಲದೆ, ಮಾನವನೂ ಭಗವಂತನನ್ನು ತನ್ನ ಸ್ವಂತ ಪ್ರತೀಕದಂತೆಯೇ ಮಾಡಿದನು ಎಂಬುದೂ ಸತ್ಯ ಎಂದು ಅವನು ಕಂಡುಹಿಡಿದನು. ಒಳಗೇ ಇರುವವನು, ಹತ್ತಿರದಲ್ಲಿ ಅತ್ಯಂತ ಹತ್ತಿರನು. ಅವನನ್ನು ನಾವು ಎಂದೆಂದೂ ಹೊರಗೇ ಅರಸುತ್ತಿದ್ದೆವು, ಕಟ್ಟ ಕಡೆಗೆ ಅವನು ನಮ್ಮಗಳ ಹೃದಯದ ಹೃದಯದಲ್ಲಿಯೇ ಇರುವನೆಂದು ಕಂಡೆವು. ನಿಮಗೆ ಈ ಕಥೆ ಗೊತ್ತಿರಬೇಕು. ತನ್ನ ಸ್ವಂತದ ಹೃದಯ ಬಡಿತವನ್ನು ಯಾರೋ ಬಾಗಿಲನ್ನು ತಟ್ಟುತ್ತಿರುವರೆಂದು ತಪ್ಪು ತಿಳಿದು ಆ ಮನುಷ್ಯನು ಬಾಗಿಲಿಗೆ ಹೋಗಿ ಅದನ್ನು ತೆರೆದನು, ಅಲ್ಲಿ ಯಾರೂ ಕಾಣದೆ, ಹಾಗೆಯೇ ಹಿಂದಿರುಗಿದನು. ಪುನಃ ಅವನಿಗೆ ಬಾಗಿಲು ಬಡಿತವನ್ನು ಕೇಳಿದಂತೆ ಭಾಸವಾಯಿತು, ಆದರೆ ಅಲ್ಲಿ ಯಾರೂ ಇರಲಿಲ್ಲ. ಆಗ ಅವನಿಗೆ ಅದು ತನ್ನದೇ ಹೃದಯ ಬಡಿತವೆಂದು, ಮತ್ತು ಅದನ್ನು ಬಾಗಿಲ ಬಡಿತವೆಂದು ತಪ್ಪಾಗಿ ಅನುಮಾನಿಸಿದ್ದನೆಂದು ಅರ್ಥವಾಯಿತು. ಅದರಂತೆಯೇ, ಹೊರಗಿನ ಪ್ರಕೃತಿಯಲ್ಲೇ ಇಟ್ಟಿದ್ದ ಈ ಅಪರಿಮಿತ ಸ್ವಾತಂತ್ರ್ಯದ ಕಲ್ಪನೆಯು ಒಳಗಿನ ವಿಷಯ, ತನ್ನೊಳಗಿನ ಅಂತರಂಗ ಸಾಕ್ಷಿ, ಆತ್ಮಗಳೆಲ್ಲದರ ಶಾಶ್ವತ 'ಆತ್ಮ' ಎಂದು ಶೋಧನೆಯನಂತರ ಮನುಷ್ಯನು ಕಂಡುಕೊಂಡನು, ಆ 'ಸತ್ಯ'ವು ಸ್ವತಃ ಅವನೇ.

ಈ ರೀತಿಯಲ್ಲಿ, ಕಟ್ಟಕಡೆಗೆ, ಇರವಿನ ಈ ಅದ್ಭುತ ದ್ವೈತವನ್ನು ಅವನು ಗ್ರಹಿಸಿದನು; ವಿಷಯವು ಅಪರಿಮಿತ ಮತ್ತು ಪರಿಮಿತ ಒಂದರಲ್ಲಿಯೇ ಇದೆ– 'ಅಪರಿಮಿತ ಜೀವನೂ' ಅದೇ ಪರಿಮಿತ ಆತ್ಮನೂ ಕೂಡ ಆಗಿದ್ದಾನೆ. ಬುದ್ಧಿಮತ್ತೆಯ ಜಾಲರಿಯಲ್ಲಿ 'ಅಪರಿಮಿತ'ವು ಸಿಕ್ಕಿಕೊಂಡಂತೆಯೇ ಆಗುವದು, ಇದು ಪರಿಮಿತ ಜೀವಿಗಳಂತೆ ತೋರಿಕೊಳ್ಳುವದು, ಆದರೆ 'ಸತ್ಯ'ವು ಮಾತ್ರ ಬದಲಾಗದೆ ಉಳಿದಿರುವದು.

ಆದುದರಿಂದ ಇದೇ ನಿಶ್ಚಿತವಾದ ಜ್ಞಾನ: ನಮ್ಮ ಆತ್ಮಗಳ 'ಆತ್ಮ', ನಮ್ಮೊಳಗಿರುವ 'ಸತ್ಯ'ವು ಎಂಬುದು ಬದಲಾಗದ, ಶಾಶ್ವತ, ಎಂದೆಂದಿಗೂ ಆನಂದಕರ, ಎಂದೆಂದೂ ಸ್ವತಂತ್ರವಾದ 'ಅದು' (ತತ್!) ಆಗಿದೆ. ಈ ವಿಷಯದಲ್ಲಿ ಇದೊಂದೇ ನಮಗಿರುವ ಬಲವಾದ ನಿಲುವಿನ ಭೂಮಿಕೆ.

ಇದೀಗ, ಎಲ್ಲ ಮೃತ್ಯುವಿನ ಅಂತ್ಯ, ಎಲ್ಲ ಅಮರತ್ವದ ಅವತರಣ, ಎಲ್ಲ ಸಂಕಟದ ಕೊನೆ– ಯಾರು ಎಲ್ಲ ನಾನಾತ್ವಗಳಲ್ಲಿ ಆ ಒಂದನ್ನು–, ಬದಲಾಗುವ ವಿಶ್ವದಲ್ಲಿ ಬದಲಾಗದಿರುವ ಆ 'ಒಂದು'– ಕಾಣುವನೋ, ಯಾರೋ 'ಅವನನ್ನು' ತನ್ನ ಆತ್ಮದ 'ಆತ್ಮ'ನೆಂದು ಕಾಣುವನೋ ಆ ಶಾಶ್ವತ ಶಾಂತಿಯು ಅವನೊಬ್ಬನಿಗೆ ಮಾತ್ರ ಸೇರಿದ್ದು, ಮತ್ತ್ಯಾರಿಗೂ ಅಲ್ಲ.

ಸಂಕಟ ಮತ್ತು ಅವನತಿಯ ಆಳದ ಮಧ್ಯದಲ್ಲಿ, 'ಆತ್ಮವು' ಒಂದು ಬೆಳಕಿನ ಕಿರಣವನ್ನು ಕಳಿಸುತ್ತದೆ, ಮಾನವನು ಜಾಗ್ರತನಾಗಿ, ಎಂದಿಗೂ ಅವನು ಕಳೆದುಕೊಳ್ಳಲಾರದ, ನಿಜವಾಗಿಯೂ ತನ್ನದೇ ಆದದ್ದು ಏನು ಎಂದು ಕಂಡುಕೊಳ್ಳುವನು. ಇಲ್ಲ, ನಾವು ಎಂದೆಂದಿಗೂ ನಿಜವಾಗಿಯೂ ನಮ್ಮದಾಗಿರುವದನ್ನು ಕಳೆದುಕೊಳ್ಳಲಾರೆವು. ತನ್ನ ಅಸ್ತಿತ್ವವನ್ನು ಯಾರು ಕಳೆದುಕೊಳ್ಳಬಲ್ಲನು? ತನ್ನ ಸಾಕ್ಷಾತ್ ಇರುವನ್ನು ಯಾರು ಕಳೆದುಕೊಳ್ಳಬಲ್ಲನು? ನಾನು ಒಳ್ಳೆಯವನಾದರೆ, ಅದು ಮೊದಲು ಇರವು, ಅನಂತರ ಅದು ಒಳ್ಳೆಯತನದ ಗುಣದಿಂದ ಬಣ್ಣದ ಮೆರುಗು ಹೊಂದುತ್ತದೆ. ನಾನು ದುಷ್ಟನಾದರೆ, ಮೊದಲಿಗೆ ಅದು ಇರುವಿಕೆ, ಅದು ದುಷ್ಟತನದ ಗುಣದಿಂದ ಬಣ್ಣ ಪಡೆಯುತ್ತದೆ. ಆ ಇರುವಿಕೆ ಮೊದಲು, ಕೊನೆಗೆ, ಯಾವಾಗಲೂ ಇದೆ; ಅದು ಎಂದೆಂದೂ ಕಳೆಯುವದಿಲ್ಲ, ಆದರೆ ಎಂದೆಂದೂ ಇರುತ್ತದೆ.

ಆದುದರಿಂದ ಎಲ್ಲರಿಗೂ ಭರವಸೆಯಿದೆ. ಯಾರೂ ಸಾಯಲಾರರು, ಯಾರೂ ಅವನತಿಹೊಂದಲಾರರು. ಆಟ ಎಷ್ಟೇ ಒರಟಾಗಿರಬಹುದಾದರೂ, ಜೀವನವೇ ಒಂದು ರಂಗಭೂಮಿ. ಎಷ್ಟಾದರೂ ನಮಗೆ ಪೆಟ್ಟುಬಿದ್ದರೂ, ಎಷ್ಟೊಂದು ಹೊಡೆತಗಳನ್ನು ಮೇಲಿಂದಮೇಲೆ ನಾವು ತಿಂದಿರಬಹುದಾದರೂ, 'ಆತ್ಮ'ವಿದೆ, ಅದಕ್ಕೆ ಎಂದೂ ಹಾನಿಯಿಲ್ಲ. ನಾವೇ ಆ 'ಅಪರಿಮಿತ'ರು.

ವೇದಾಂತಿಗಳೊಬ್ಬರು ಹೀಗೆ ಹಾಡಿದರು: "ನನಗೆ ಎಂದೆಂದೂ ಭೀತಿಯಿರಲಿಲ್ಲ, ಅಥವಾ ಅನುಮಾನವಿರಲಿಲ್ಲ. ಸಾವು ನನಗೆಂದೆಂದೂ ಬರಲಿಲ್ಲ. ನನಗೆ ಎಂದೆಂದೂ ತಂದೆಯಿರಲಿಲ್ಲ, ಅಥವಾ ತಾಯಿಯಿರಲಿಲ್ಲ; ಏಕೆಂದರೆ ನಾನು ಎಂದೆಂದೂ ಹುಟ್ಟಿರಲೇ ಇಲ್ಲ. ನನ್ನ ಶತ್ರುಗಳು ಎಲ್ಲಿದ್ದಾರೆ?– ಏಕೆಂದರೆ ನಾನೇ 'ಎಲ್ಲವೂ'. ನಾನು ಸತ್, ಚಿತ್, ಆನಂದ. ನಾನು 'ಅದೇ' ಆಗಿದ್ದೇನೆ. ನಾನು ಅದೇ. ಸಿಟ್ಟು, ವಿಷಯಾಭಿಲಾಷೆ, ಮತ್ತು ಮತ್ಸರ, ದುಷ್ಟ ಯೋಚನೆಗಳು ಮತ್ತಿಂಥ ಎಲ್ಲ ವಸ್ತುಗಳೂ ನನಗೆಂದೂ ಬರಲೇ ಇಲ್ಲ, ಏಕೆಂದರೆ ನಾನು ಸತ್, ಚಿತ್, ಆನಂದ. ನಾನು ಅದೇ, 'ನಾನು ಅದೇ'.

ಅದೇ ಔಷಧವಾಗಿದೆ ಎಲ್ಲ ಭವರೋಗಗಳಿಗೂ, ಎಲ್ಲ ಸಾವನ್ನೂ ಗುಣಪಡಿಸಬಲ್ಲ ಅಮೃತ. ನಾವು ಇಲ್ಲಿ ಈ ಪ್ರಪಂಚದಲ್ಲಿದ್ದೇವೆ, ನಮ್ಮ ಸ್ವಭಾವ ಅದಕ್ಕೆದುರು ಬೀಳುತ್ತದೆ. ಆದರೆ ನಾವು

ಪುನರುಚ್ಚರಿಸೋಣ "ನಾನು ಅದು, ನಾನು ಅದೇ, ನನಗೆ ಭೀತಿ ಇಲ್ಲ, ಅನುಮಾನವೂ ಇಲ್ಲ, ಸಾವಂತೂ ಇಲ್ಲ, ನನಗೆ ಲಿಂಗವಿಲ್ಲ, ಜಾತಿಯಿಲ್ಲ, ಬಣ್ಣವಿಲ್ಲ. ನಾನು ಯಾವ ಮತವನ್ನು ಹೊಂದಬಲ್ಲೆ? ನಾನು ಯಾವ ಪಂಗಡಕ್ಕೆ ಸೇರಬಹುದು? ಯಾವ ಪಂಗಡ ನನ್ನನ್ನು ಹಿಡಿಯಬಹುದು? ನಾನು ಎಲ್ಲ ಪಂಥಗಳಲ್ಲೂ ಇದ್ದೇನೆ."

ದೇಹ ಎಷ್ಟರ ಮಟ್ಟಿಗೆ ವಿರೋಧಿಸಿದರೂ, ನನ್ನ ಮನಸ್ಸು ಎಷ್ಟೊಂದು ಎದುರುಬಿದ್ದರೂ, ಸಂಪೂರ್ಣ ದಟ್ಟ ಅಂಧಕಾರದಲ್ಲೂ, ಯಾತನೆಗಳ ಒದ್ದಾಟದಲ್ಲೂ, ಅತ್ಯಂತ ದಟ್ಟವಾದ ಹತಾಶೆಯಲ್ಲೂ, ಇದನ್ನು ಪುನರುಚ್ಚರಿಸಿ, ಒಂದು ಬಾರಿ, ಎರಡು ಬಾರಿ, ಮೂರು ಬಾರಿ, ಮತ್ತೆಷ್ಟೋ ಬಾರಿ. ಜ್ಞಾನದ ಬೆಳಕು ಸೌಮ್ಯವಾಗಿ, ನಿಧಾನವಾಗಿ ಬರುತ್ತದೆ, ಆದರೆ ಅದು ಖಂಡಿತ ಬರುತ್ತದೆ.

ಅನೇಕ ಬಾರಿಗಳಲ್ಲಿ, ಹಸಿದುಕೊಂಡು, ಕಾಲು ಸೋತು, ದಣಿವಾಗಿ, ಸಾವಿನ ದವಡೆಯಲ್ಲಿದ್ದೇನೆ; ದಿನದಿನಗಳವರೆಗೂ ನನಗೆ ಆಹಾರವಿರಲಿಲ್ಲ, ಆಗಾಗ ಇನ್ನೂ ಮುಂದೆ ನಡೆಯಲೇ ಆಗುತ್ತಿರಲಿಲ್ಲ; ನಾನು ಮರವೊಂದರ ಕೆಳಗೆ ಕುಸಿದು ಬೀಳುತ್ತಿದ್ದೆ, ಮತ್ತು ಜೀವ ಸರಿದು ಹೋಗುವಂತೆ ತೋರುತ್ತಿತ್ತು. ನನಗೆ ಮಾತನಾಡಲಾಗುತ್ತಿರಲಿಲ್ಲ, ನನಗೆ ಯೋಚನೆ ಮಾಡಲೇ ಆಗುತ್ತಿರಲಿಲ್ಲ, ಆದರೆ ಕಟ್ಟಕಡೆಗೆ ಮನಸ್ಸು ಇದೇ ಭಾವನೆಗೆ ಹಿಂದಿರುಗುತ್ತಿತ್ತು: "ನನಗೆ ಹೆದರಿಕೆ ಇಲ್ಲ, ಸಾವಿಲ್ಲ; ನನಗೆ ಹಸಿವು, ಬಾಯಾರಿಕೆ ಎಂದೂ ಇಲ್ಲ. ನಾನು ಅದು! ನಾನು ಅದೇ! (ಸೋऽಹಂ! ಸೋऽಹಂ!) ಇಡಿಯ ಪ್ರಕೃತಿಯೇ ನನ್ನನ್ನು ಹಿಸುಕಿ ಹಾಕಲಾರದು; ಅದು ನನ್ನ ಸೇವಕ. ದೇವರುಗಳ 'ದೇವ'ನೇ, ಪ್ರಭುಗಳ 'ಪ್ರಭು'ವೇ, ನಿನ್ನ ಶಕ್ತಿಯನ್ನು ಸಾಧಿಸಿಕೋ! ನಿನ್ನ ಕಳೆದ ಚಕ್ರಾಧಿಪತ್ಯವನ್ನು ಮರಳಿ ಸಂಪಾದಿಸಿಕೋ! ಎದ್ದೇಳು, ನಡೆ, ನಿಲ್ಲದಿರು!" ಮತ್ತು ನಾನು ಎದ್ದು ನಿಲ್ಲುತ್ತಿದ್ದೆ, ಪುನಶ್ಚೇತನಗೊಳ್ಳುತ್ತಿದ್ದೆ, ಹಾಗಾಗಿ ಈಗ ನಾನಿಲ್ಲಿದ್ದೇನೆ, ಜೀವಂತವಾಗಿ ಈ ದಿನ. ಈ ರೀತಿ, ಎಂದಾದರೂ ಕತ್ತಲು ಮುಸುಕಿದಾಗ, ನೈಜತೆಯನ್ನು ಸಾಧಿಸಿಕೊಳ್ಳಿ, ಮತ್ತು ಪ್ರತಿಕೂಲವಾದ ಪ್ರತಿಯೊಂದೂ ಮಾಯವಾಗಲೇ ಬೇಕು. ಏಕೆಂದರೆ, ಇಷ್ಟೆಲ್ಲಾ ಆದರೂ, ಅದು ಬರಿಯ ಕನಸಷ್ಟೆ. ಕಷ್ಟಗಳು ಬೆಟ್ಟದಷ್ಟಿರುವಂತೆ ಕಾಣುತ್ತಿದ್ದರೂ, ಎಲ್ಲ ವಸ್ತುಗಳೂ ಭೀಕರ, ಅಂಧಕಾರಮಯವೆಂದು ತೋರುತ್ತಿದ್ದರೂ, ಅವೆಲ್ಲವೂ 'ಮಾಯೆ',– ಹೆದರದಿರಿ, ಅದನ್ನು ತೊಲಗಿಸಿದೆ. ಅದನ್ನು ಜಜ್ಜಿಹಾಕಿ, ಅದು ಮಾಯವಾಗುತ್ತದೆ. ಅದರ ಮೇಲೆ ಅದನ್ನು ತುಳಿದು ಹಾಕಿ, ಅದು ಸಾಯುತ್ತದೆ. ಹೆದರಬೇಡಿ. ಎಷ್ಟು ಸಾರಿ ನೀವು ಸೋಲುವಿರೆಂದು ಯೋಚಿಸಬೇಡಿ, ಎಂದೆಂದೂ ಸೋಲನ್ನು ಮನಸ್ಸಿಗೆ ತರಬೇಡಿ. ಕಾಲವು ಅಪರಿಮಿತ. ಮುಂದೆ ನುಗ್ಗಿ; ಪುನಃ ಪುನಃ ನಿಮ್ಮನ್ನೇ ಸಾಧಿಸಿಕೊಳ್ಳಿ, ಬೆಳಕು ಬರಲೇಬೇಕು. ಹುಟ್ಟಿದ ಪ್ರತಿಯೊಬ್ಬನನ್ನೂ ಎಂದಾದರೂ ನೀವು ಪ್ರಾರ್ಥಿಸಬಹುದು. ಆದರೆ ನಿಮಗೆ ಸಹಾಯ ಮಾಡಲು ಯಾರು ಬರುವರು? ತಪ್ಪಿಸಿಕೊಳ್ಳಲು ಯಾರ್ಯಾರಿಗೂ ತಿಳಿಯದ ಸಾವಿನ ವಿಧಾನವೇನು? ನಿಮಗೆ ನೀವೇ ಸಹಾಯಮಾಡಿಕೊಳ್ಳಿ. ಸ್ನೇಹಿತರೇ, ಬೇರೆ ಯಾರೊಬ್ಬರೂ ನಿಮಗೆ ಸಹಾಯಮಾಡಲಾರರು. ಏಕೆಂದರೆ, ನೀವೊಬ್ಬರೇ ನಿಮ್ಮ ಅತ್ಯಂತ ದೊಡ್ಡ ಶತ್ರು, ನೀವೊಬ್ಬರೇ ನಿಮ್ಮ ಅತ್ಯಂತ ದೊಡ್ಡ

ಸ್ನೇಹಿತ. ಆದ ಕಾರಣ, ನಿಮ್ಮನ್ನೇ ನೀವು ಅವಲಂಬಿಸಿ. ಎದ್ದು ನಿಲ್ಲಿ, ಹೆದರಬೇಡಿ. ಎಲ್ಲ ಸಂಕಟಗಳ, ಎಲ್ಲ ದೌರ್ಬಲ್ಯಗಳ ನಡುವಿನಲ್ಲಿ 'ಆತ್ಮ'ವು ಹೊರಬರಲಿ, ಪ್ರಾರಂಭದಲ್ಲಿ ಮಂದವಾಗಿಯೂ, ಸೂಕ್ಷ್ಮವಾಗಿಯೂ ಇದ್ದರೂ, ನೀವು ಧೈರ್ಯವನ್ನು ಗಳಿಸುವಿರಿ. ಕಟ್ಟಕಡೆಗೆ, ಸಿಂಹದಂತೆ ನೀವು ಗರ್ಜಿಸುವಿರಿ– 'ಅದು ನಾನು, ನಾನು ಅದು!" "ನಾನು ಪುರುಷನಲ್ಲ, ನಾನು ಸ್ತ್ರೀಯಲ್ಲ, ದೇವರಲ್ಲ, ಅಥವಾ ರಾಕ್ಷಸನಲ್ಲ; ಇಲ್ಲ, ಪ್ರಾಣಿಗಳು, ಸಸ್ಯಗಳು ಅಥವಾ ಮರಗಳೂ ಅಲ್ಲ. ನಾನು ಬಡವನಲ್ಲ, ಶ್ರೀಮಂತನೂ ಅಲ್ಲ, ವಿದ್ವಾಂಸನಲ್ಲ, ಅಜ್ಞಾನಿಯೂ ಅಲ್ಲ. ನಾನು ಏನಾಗಿದ್ದೇನೆ ಎಂಬುದಕ್ಕೆ, ಹೋಲಿಸಿದರೆ ಇವೆಲ್ಲ ವಸ್ತುಗಳೂ ಅತಿ ಕ್ಷುಲ್ಲಕ; ಏಕೆಂದರೆ ನಾನು ಅದು, ನಾನು ಅದು! ನಾನು ಅದು! ಸೂರ್ಯ, ಚಂದ್ರ, ನಕ್ಷತ್ರಗಳನ್ನು ನೋಡಿ, ಅವುಗಳಲ್ಲಿ ಬೆಳಗುತ್ತಿರುವ ಬೆಳಕು ನಾನು. ಬೆಂಕಿಯ ಸೌಂದರ್ಯ ನಾನು! ವಿಶ್ವದ ಶಕ್ತಿ ನಾನು! ಏಕೆಂದರೆ ನಾನು ಅದು! ನಾನು ಅದು!

"ನಾನು ಸಣ್ಣವನೆಂದು ತಿಳಿದುಕೊಳ್ಳುವವರು ತಪ್ಪು ಮಾಡುತ್ತಿದ್ದಾರೆ, ಏಕೆಂದರೆ ಇರುವದು 'ಆತ್ಮ'ವೊಂದೇ. ಸೂರ್ಯನಿದ್ದಾನೆ, ಏಕೆಂದರೆ ನಾನು ಅದು ಇದೆ ಎಂದು ಘೋಷಿಸುತ್ತೇನೆ. ಪ್ರಪಂಚವಿದೆ, ಏಕೆಂದರೆ ಅದು ಇದೆ ಎಂದು ನಾನು ಘೋಷಿಸುತ್ತೇನೆ. ನಾನಿಲ್ಲದೆ ಅವು ಇರಲಾರವು, ಏಕೆಂದರೆ ನಾನು ಸತ್, ಚಿತ್, ಆನಂದ– ಎಂದೆಂದೂ ಸಂತೋಷ, ಎಂದೆಂದೂ ಪರಿಶುದ್ಧ, ಎಂದೆಂದೂ ಸುಂದರ, ನೋಡು, ಸೂರ್ಯ ನಮ್ಮ ದೃಷ್ಟಿಗೆ ಕಾರಣನು, ಆದರೆ ತನ್ನಷ್ಟಕ್ಕೆ ಆನಂದ ಅದು ಎಂದೆಂದೂ ಯಾರೊಬ್ಬನ ಕಣ್ಣಿನ ದೋಷದಿಂದ ಬಾಧಿತವಾಗುವದಿಲ್ಲ; ನಾನಾದರೂ ಹಾಗೆಯೇ. ಎಲ್ಲ ಶರೀರಗಳ ಮೂಲಕವೂ ನಾನು ಕೆಲಸಮಾಡುತ್ತೇನೆ, ಪ್ರತಿಯೊಂದರ ಮೂಲಕವೂ ಕೆಲಸ ಮಾಡುತ್ತೇನೆ, ಆದರೆ ಕರ್ಮದ ಒಳ್ಳೆಯದು, ಕೆಟ್ಟದು ಎಂದೆಂದೂ ನನಗೆ ಅಂಟುವುದಿಲ್ಲ. ನನಗೆ ಯಾವ ನಿಯಮವೂ ಇಲ್ಲ, ಕರ್ಮವೂ ಇಲ್ಲ, ಕರ್ಮದ ನಿಯಮಗಳಿಗೆ ನಾನು ಒಡೆಯನಾಗಿದ್ದೇನೆ. ನಾನು ಎಂದೆಂದೂ ಇದ್ದೆ, ಎಂದೆಂದೂ ಇರುವೆ.

"ನನ್ನ ನಿಜವಾದ ಸಂತೋಷವು ಎಂದೆಂದೂ ಪ್ರಾಪಂಚಿಕ ವಸ್ತುಗಳಲಿಲ್ಲ– ಗಂಡ, ಹೆಂಡತಿ, ಮಕ್ಕಳು ಮತ್ತು ಇತರ ವಸ್ತುಗಳಲಿಲ್ಲ. ಏಕೆಂದರೆ ನಾನು ಅಪರಿಮಿತವಾದ ನೀಲ ಆಗಸದಂತಿರುವೆ; ಬಣ್ಣ ಬಣ್ಣದ ಮೋಡಗಳು ಅದರ ಮೇಲೆ ಹಾದುಹೋಗುತ್ತವೆ, ಒಂದು ಕ್ಷಣ ಆಡುತ್ತವೆ, ಅನಂತರ ಚಲಿಸಿಕೊಂಡು ಹೋಗುತ್ತವೆ; ಅದೇ ಬದಲಾಗದ ನೀಲಿಯಿರುತ್ತದೆ. ಸುಖದುಃಖ, ಒಳಿತು, ಕೆಟ್ಟದು, ಒಂದು ಕ್ಷಣಕಾಲ ನನ್ನನ್ನು ಆವರಿಸಬಹುದು, 'ಆತ್ಮ'ವನ್ನು ಮುಸುಕಬಹುದು, ಆದರೆ ನಾನು ಇನ್ನೂ ಇರುತ್ತೇನೆ. ಅವೆಲ್ಲಾ ಹೊರಟುಹೋಗುತ್ತವೆ, ಏಕೆಂದರೆ ಅವುಗಳು ಬದಲಾಗುವಂತಹವು. ನಾನು ಹೊಳೆಯುವೆ, ಏಕೆಂದರೆ ನಾನು ಬದಲಾಗದವನು. ದುಃಖ ಬಂದರೆ, ಅದು ಪರಿಮಿತ ಎಂದು ನನಗೆ ಗೊತ್ತು, ಅದು ಹೋಗಲೇಬೇಕು. ನಾನೊಬ್ಬನೇ ಅನಂತ, ಅಪರಿಮಿತ ಮತ್ತು ಯಾವದರಿಂದಲೂ ಪರಿಣಾಮವಿಲ್ಲದಿರುವನು. ಏಕೆಂದರೆ ನಾನು

'ಅಪರಿಮಿತ', ಆ ಶಾಶ್ವತ, ಬದಲಾಗದ ಆತ್ಮ". ಹೀಗೆ ಹಾಡುವನು ನಮ್ಮಲ್ಲೊಬ್ಬ ಕವಿ.

ಆ ಬಟ್ಟಲಲ್ಲಿರುವ ಅಮೃತವನ್ನು ನಾವು ಕುಡಿಯೋಣ; ಈ ಬಟ್ಟಲಿನ ಅಮೃತ ಅಮರವಾಗಿರುವ ಪ್ರತಿಯೊಂದಕ್ಕೂ, ಬದಲಾಗದ ಪ್ರತಿಯೊಂದಕ್ಕೂ ಕರೆದೊಯ್ಯುತ್ತದೆ. ಹೆದರಬೇಡಿ. ನಾವು ದುಷ್ಟರು, ನಾವು ಪರಿಮಿತರು, ನಾವು ಎಂದಾದರೂ ಸಾಯುವವರು ಎಂದು ನಂಬಬೇಡಿ. ಅದು ನಿಜವಲ್ಲ.

"ಇದನ್ನು ಕೇಳಬೇಕು, ಅನಂತರ ಅದನ್ನು ಚಿಂತಿಸಬೇಕು, ಅನಂತರ ಅದರ ಮೇಲೆ ಧ್ಯಾನ ಮಾಡಬೇಕು". ಕೈಗಳು ಕೆಲಸ ಮಾಡುವಾಗ, ಮನಸ್ಸು ಪುನರುಚ್ಚರಿಸಬೇಕು. 'ನಾನು ಅದು, ನಾನು ಅದು.' ಅದನ್ನು ಯೋಚಿಸಿ, ಅದರ ಕನಸು ಕಾಣಿರಿ, ಆಗ ಅದು ನಿಮ್ಮ ಮೂಳೆಗಳ ಮೂಳೆಯಾಗುವವರೆಗೆ, ಮಾಂಸಖಂಡಗಳ ಮಾಂಸಖಂಡವಾಗುವವರೆಗೆ, (ದೇಹಗಳು ದೇಹವಾಗುವವರೆಗೆ) ಸಣ್ಣತನ, ದೌರ್ಬಲ್ಯ, ದುಃಖ, ದುಷ್ಟತನಗಳ ಎಲ್ಲ ಅಸಹ್ಯಕರ ಕನಸುಗಳು ಪೂರ್ಣಮಾಯವಾಗುವವರೆಗೆ ಇದ್ದರೆ, ಆಗ 'ಸತ್ಯ'ವನ್ನು ನಿಮ್ಮಿಂದ ಒಂದು ಕ್ಷಣವಾದರೂ ಮುಚ್ಚಿಡಲಾಗದು.

ಲಾಸ್ ಏಂಜಲೀಸ್, ಕ್ಯಾಲಿಫೋರ್ನಿಯಾದಲ್ಲಿ ಜನವರಿ 5, 1900 ರಂದು ನೀಡಿದ ಉಪನ್ಯಾಸ.

(The Complete works of Swami Vivekananda, Vol-II,
The Open Secret - P-397)

# 23

# ಆನಂದದ ಹಾದಿ

ಇವತ್ತು ನಿಮಗೆ ವೇದಗಳಿಂದ ಒಂದು ಕಥೆಯನ್ನು ಹೇಳುತ್ತೇನೆ. ವೇದಗಳು ಹಿಂದೂಗಳ ಪವಿತ್ರ ಧರ್ಮಗ್ರಂಥಗಳು, ಇವು ವಿಸ್ತಾರವಾದ ಸಾಹಿತ್ಯ ಸಂಗ್ರಹ; ಇವುಗಳ ಕೊನೆಯ ಭಾಗವೇ ವೇದಾಂತ, ಅಂದರೆ ವೇದಗಳ ಕೊನೆಯ ಭಾಗ. ಅವುಗಳಲ್ಲಿರುವ ಸೂತ್ರಗಳ ವಿಷಯದಲ್ಲಿ ವ್ಯವಹರಿಸಿರುತ್ತದೆ, ಅದರಲ್ಲೂ ವಿಶೇಷವಾಗಿ ನಾವು ಈಗ ಆಸಕ್ತರಾಗಿರುವ ತತ್ತ್ವಶಾಸ್ತ್ರ ವಿಚಾರದಲ್ಲಿ ಅದು ಬೇಕಾಗುತ್ತದೆ. ಅದು ಇರುವದು ಪ್ರಾಚೀನ ಸಂಸ್ಕೃತದಲ್ಲಿ, ಇದನ್ನು ಸಾವಿರಾರು ವರ್ಷಗಳ ಹಿಂದೆ ರೂಪುಗೊಂಡಿತು ಎಂಬುದನ್ನು ನೀವು ನೆನಪಿಡಬೇಕು. ಒಬ್ಬಾನೊಬ್ಬಾತನು ದೊಡ್ಡ ಯಜ್ಞವೊಂದನ್ನು ಮಾಡಲುದ್ದೇಶಿಸಿದ್ದನು. ಅನೇಕ ವಿಧದ ಯಜ್ಞಗಳಿವೆ. ಹಿಂದೂ ಧರ್ಮದಲ್ಲಿ ಯಜ್ಞವು ದೊಡ್ಡ ಪಾತ್ರವನ್ನು ವಹಿಸುತ್ತದೆ. ಅವರು ಯಜ್ಞವೇದಿಗಳನ್ನು ಮಾಡುವದು, ಅನೇಕ ಆಹುತಿಗಳನ್ನು ಅಗ್ನಿಗೆ ಅರ್ಪಿಸುವದು, ಅನೇಕ ಮಂತ್ರಗಳನ್ನು ಪುನರುಚ್ಚರಿಸುವದು– ಹೀಗೆಯೇ ಇನ್ನೂ ಕೆಲವು; ಯಜ್ಞದ ಕೊನೆಯಲ್ಲಿ ಅವರು ಬ್ರಾಹ್ಮಣರಿಗೆ, ಬಡಬಗ್ಗರಿಗೆ ದಾನಗಳನ್ನು ಕೊಡುವರು. ಪ್ರತಿಯೊಂದು ಯಜ್ಞಕ್ಕೂ ಅದರದೇ ಆದ ವಿಶೇಷ ದಾನವಿದೆ. ಅಲ್ಲೊಂದು ಯಜ್ಞವಿತ್ತು, ಅದರಲ್ಲಿ ಕರ್ತೃವು ತಾನು ಹೊಂದಿದ್ದ ಸರ್ವಸ್ವವನ್ನೂ ಬಿಟ್ಟುಕೊಡಬೇಕಾಗಿತ್ತು. ಈ ಮನುಷ್ಯನು ಶ್ರೀಮಂತನಾದರೂ, ಜಿಪುಣ; ಆದರೂ ಅದೇ ಕಾಲದಲ್ಲಿ, ಇಂತಹ ಅತ್ಯಂತ ಕಠಿಣ ಯಜ್ಞವನ್ನು ಮಾಡಿದನೆಂಬ ಹೆಸರು ಪಡೆಯುವ ಆಸೆಯಿತ್ತು. ಈ ಯಜ್ಞವನ್ನು ಮಾಡಿದಾಗ, ತನ್ನಲ್ಲಿದ್ದ ಪ್ರತಿಯೊಂದನ್ನೂ ಬಿಟ್ಟುಕೊಡುವ ಬದಲಾಗಿ, ಕುರುಡ, ಕುಂಟ, ಎಂದಿಗೂ ಹಾಲು ಕರೆಯಲಾರದ ಮುದಿ ಹಸುಗಳನ್ನು ದಾನಮಾಡಿದನು. ಆದರೆ ಅವನಿಗೊಬ್ಬ ವರ್ಚಸ್ಸುಳ್ಳ ಕಿರಿಯ ಹುಡುಗನಾದ ನಚಿಕೇತ ಎಂಬ ಮಗನಿದ್ದನು, ಅವನು ತನ್ನ ತಂದೆ ಮಾಡಿದ ಬಡದಾನಗಳನ್ನು ಗಮನಿಸಿ ಇದರಿಂದ ಅವನಿಗೆ ಬರಬಹುದಾದ ದೋಷವನ್ನು ಚಿಂತಿಸಿ, ಅದನ್ನು ನೇರ್ಪಡಿಸಲು ತನ್ನನ್ನೇ ದಾನವಾಗಿ ಕೊಟ್ಟು ಕೊಳ್ಳಲು ನಿರ್ಧರಿಸಿದನು. ಅದರಿಂದ, ಅವನು ತಂದೆಯ ಬಳಿಸಾರಿ, 'ನೀನು ನನ್ನನ್ನು ಯಾರಿಗೆ ಕೊಡುವೆ' ಎಂದು ಕೇಳಿದನು. ತಂದೆಯು ಅವನಿಗೆ ಸರಿಯಾಗಿ ಉತ್ತರಿಸಲಿಲ್ಲ. ಹುಡುಗನು ಎರಡನೇ, ಮೂರನೇ ಬಾರಿ ಕೇಳಿದನು. ಆಗ ಕುಪಿತನಾದ ತಂದೆಯು, 'ನಿನ್ನನ್ನು ಯಮನಿಗೆ ಅರ್ಥಾತ್ ಮೃತ್ಯುವಿಗೆ ಕೊಡುವೆನು ಎಂದನು. ಹುಡುಗನು ನೇರವಾಗಿ ಯಮನ ರಾಜ್ಯಕ್ಕೇ ಹೋದನು. ಯಮನು ಮನೆಯಲ್ಲಿರಲಿಲ್ಲ, ಅದರಿಂದ ಅವನು ಅಲ್ಲಿ ಯಮನಿಗಾಗಿ ಕಾದನು. ಮೂರು ದಿನಗಳನಂತರ ಯಮನು ಬಂದು, ಹೇಳಿದನು 'ಓ ಬ್ರಾಹ್ಮಣಾ, ನೀನು ನನ್ನ ಅತಿಥಿ, ನೀನು ಮೂರು ದಿನಗಳು ಊಟವಿಲ್ಲದೆ ಇಲ್ಲಿದ್ದೀಯೆ. ನಾನು ನಿನಗೆ ನಮಸ್ಕಾರ ಮಾಡುತ್ತೇನೆ. ಈ ತೊಂದರೆಗೆ ಪರಿಹಾರವಾಗಿ, ನಾನು ನಿನಗೆ ಮೂರು ವರಗಳನ್ನು ಕೊಡುವೆನು, ಕೇಳಿಕೋ" ಎಂದನು.

ಆಗ ಹುಡುಗನು ಮೊದಲ ವರವನ್ನು ಕೇಳಿದನು, 'ನನ್ನ ಮೇಲಿನ ತಂದೆಯ ಸಿಟ್ಟು ಶಾಂತವಾಗಲಿ', ಎರಡನೆಯ ವರವಾಗಿ ಅವನು ಒಂದಾನೊಂದು ಯಜ್ಞದ ವಿಷಯವನ್ನು ಕೇಳಿದನು. ಅನಂತರ ಬಂದದ್ದು ಮೂರನೆಯ ವರದ ವಿಷಯ. "ಒಬ್ಬ ಮನುಷ್ಯನು ಸತ್ತಮೇಲೆ, ಪ್ರಶ್ನೆಯೊಂದು ಏಳುತ್ತದೆ : ಅವನಿಗೆ ಏನಾಗಬಹುದು? ಅವನು ಅಸ್ತಿತ್ವದಲ್ಲಿ ಇರುವದಿಲ್ಲವೆಂದು ಕೆಲವರು ಹೇಳುವರು. ಇನ್ನು ಕೆಲವರು ಅವನು ಇರುವನೆಂದು ಹೇಳುವರು. ಉತ್ತರ ಏನು ಎಂದು ದಯವಿಟ್ಟು ಹೇಳಿ. ಇದು ನನಗೆ ಬೇಕಾದ ಮೂರನೆಯ ವರ" ಎಂದನು. 'ಮೃತ್ಯು'ವು ಉತ್ತರಿಸಿದನು, "ಹಿಂದಿನ ಕಾಲದ ದೇವರುಗಳು ಈ ನಿಗೂಢತೆಯ ಸಿಕ್ಕು ಬಿಡಿಸಲು ಪ್ರಯತ್ನಿಸಿದರು; ಈ ರಹಸ್ಯ ಎಷ್ಟು ಸೂಕ್ಷ್ಮವೆಂದರೆ ಅದನ್ನು ತಿಳಿಯುವದು ಬಲುಕಷ್ಟ. ಬೇರೆ ಯಾವದಾದರೂ ವರವನ್ನು ಕೇಳು, ಇದನ್ನು ಕೇಳಬೇಡ. ನೂರು ವರ್ಷಗಳ ದೀರ್ಘಾಯುಸ್ಸನ್ನು ಕೇಳು. ಗೋವುಗಳನ್ನು, ಕುದುರೆಗಳನ್ನು ಕೇಳು, ದೊಡ್ಡ ರಾಜ್ಯಾಧಿಪತ್ಯಗಳನ್ನು ಕೇಳು. ಏನು ಬೇಕಾದರೂ ಕೇಳು, ಇದೊಂದನ್ನು ಉತ್ತರಿಸಲು ಒತ್ತಾಯಮಾಡಬೇಡ. ಮನುಷ್ಯನು ತನ್ನ ಸಂತೋಷಕ್ಕಾಗಿ ಏನೆಲ್ಲವನ್ನು ಅಪೇಕ್ಷೆಪಡುತ್ತಾನೋ, ಅದೆಲ್ಲವನ್ನೂ ಕೇಳು. ನಾನು ಅದನ್ನು ನಡೆಸಿಕೊಡುವೆನು, ಈ ರಹಸ್ಯವನ್ನು ತಿಳಿಯಬೇಕೆಂದು ಕೇಳಬೇಡ". "ಇಲ್ಲ ಸ್ವಾಮೀ, ನನಗೆ ಆ ಪ್ರಶ್ನೆಗೇ ಉತ್ತರಬೇಕು" ಎಂದು ಹುಡುಗನು ಹೇಳಿದನು, "ಮನುಷ್ಯನು ಬರಿಯ ಸಂಪತ್ತಿನಿಂದ ತೃಪ್ತನಾಗಲಾರ; ಸಂಪತ್ತು ಬೇಕಾಗಿದ್ದರೆ, ನಿನ್ನನ್ನು ನೋಡಿದ ಮಾತ್ರಕ್ಕೆ, ಅದನ್ನು ಪಡೆಯಬಹುದು. ನೀನು ಆಡಳಿತ ನಡೆಸುವವರೆಗೂ ನಾವು ಜೀವಿಸಿರಬಹುದು. ಕೆಳಗಿನ ಮರ್ತ್ಯಲೋಕದಲ್ಲಿ ಜೀವಿಸಿದ್ದು, ಜ್ಞಾನವನ್ನು ಹೊಂದಿರುವನು, ನಶಿಸಿಹೋಗದ ಅಮರವಾದವನ ಸಹವಾಸವನ್ನು ಪಡೆದು, ಯಾವ ನಶಿಸಿಹೋಗುವ ಮರ್ತ್ಯನು, ಗಾನ, ಕ್ರೀಡೆಗಳಿಂದೊದಗುವ ಸಂತೋಷದ ಸ್ವಭಾವವನ್ನು ಅರಿತೂ ಸಹ ದೀರ್ಘಾಯುಸ್ಸಿನಿಂದ ಸಂತೋಷಪಡುವನು? ಆದುದರಿಂದ, ಇಲ್ಲಿಂದಾಚೆಯ ಮಹತ್ತರದ ವಿಷಯದ ರಹಸ್ಯವನ್ನು ಹೇಳು, ಬೇರೆ ಏನೂ ನನಗೆ ಬೇಡ; ಅದೇ ನಚಿಕೇತನಿಗೆ ಬೇಕು, ಸಾವಿನ ನಿಗೂಢತೆ". ಆಗ, ಮೃತ್ಯು ದೇವತೆಗೆ ಸಂತೋಷವಾಯಿತು. ಹಿಂದಿನ ಎರಡು ಮೂರು ಉಪನ್ಯಾಸಗಳಲ್ಲಿ ಈ ಜ್ಞಾನವು ಮನಸ್ಸನ್ನು ತಯಾರುಗೊಳಿಸುವದು ಎಂದು ನಾವು ಹೇಳುತ್ತಲಿರುವೆವು. ಅದರಿಂದ, ಮೊದಲ ತಯಾರಿಯು ಮನುಷ್ಯನು ಸತ್ಯವನ್ನಲ್ಲದೆ ಬೇರೇನನ್ನೂ ಅಪೇಕ್ಷಿಸಬಾರದು, ಸತ್ಯವು ಸತ್ಯಕ್ಕಾಗಿ, ಎಂದು ನೀವು ಇಲ್ಲಿ ನೋಡುವಿರಿ. ಮೃತ್ಯು ದೇವತೆಯು ನೀಡಲಿದ್ದ ಎಲ್ಲ ಕೊಡುಗೆಗಳನ್ನೂ ಹೇಗೆ ನಿರಾಕರಿಸಿದನೆಂಬುದನ್ನು ನೋಡಿ; ಸ್ವಾಮ್ಯವಸ್ತುಗಳು, ಆಸ್ತಿ, ಐಶ್ವರ್ಯ, ದೀರ್ಘಾಯುಸ್ಸು, ಮತ್ತು ಪ್ರತಿಯೊಂದನ್ನೂ, ಇದೊಂದು ಉದ್ದೇಶಕ್ಕಾಗಿ ಕೇವಲ ಜ್ಞಾನ, ಸತ್ಯಕ್ಕಾಗಿ– ತ್ಯಾಗ ಕೊಡಲು ಸಿದ್ಧವಾಗಿದ್ದನು. ಈ ರೀತಿಮಾತ್ರವೇ ಸತ್ಯವು ಬರಬಲ್ಲುದು. ಮೃತ್ಯು ದೇವತೆಗೆ ಸಂತೋಷವಾಯಿತು. "ಇಲ್ಲಿ ಎರಡು ಮಾರ್ಗಗಳಿವೆ," ಅವನು ಹೇಳಿದನು. "ಒಂದು ಸುಖಾನುಭವದ, (ಪ್ರೇಯಸ್ಸು) ಮತ್ತೊಂದು ದಿವ್ಯಾನಂದದ, (ಶ್ರೇಯಸ್ಸು) ಇವೆರಡೂ ವಿವಿಧ ರೀತಿಗಳಲ್ಲಿ ಮಾನವಕುಲವನ್ನು ಸೆಳೆಯುತ್ತವೆ. ಇವೆರಡರ ಈ ಪೈಕಿ, ದಿವ್ಯಾನಂದಕ್ಕೆ ಕರೆದೊಯ್ಯುವದನ್ನು ತೆಗೆದುಕೊಂಡವನು ಖುಷಿಯಾಗುತ್ತಾನೆ, ಸುಖಾನುಭವದ ಹಾದಿಯನ್ನು ಹಿಡಿದವನು ಅವನತಿ ಹೊಂದುವನು. ನಚಿಕೇತ, ನಾನು ನಿನ್ನನ್ನು

ಮೆಚ್ಚಿದೆ, ನೀನು ಆಸೆಗಳನ್ನು ಕೇಳಲಿಲ್ಲ. ಅನೇಕ ವಿಧಗಳಲ್ಲಿ ನಾನು ನಿನ್ನನ್ನು ಸುಖಾನುಭವದ ಹಾದಿಗೆಳೆಯಲು ಪ್ರಲೋಭನಗೊಳಿಸಿದೆ, ನೀನು ಅವೆಲ್ಲವನ್ನೂ ನಿರೋಧಿಸಿದೆ, ಜ್ಞಾನವು ಸುಖದ ಜೀವನಕ್ಕಿಂತ ಹೆಚ್ಚಿನದೆಂದು ನೀನು ತಿಳಿದುಕೊಂಡಿರುವೆ".

"ಅಜ್ಞಾನದಲ್ಲಿದ್ದು ಸುಖವನ್ನನುಭವಿಸುವ ಮನುಷ್ಯನು, ಅವನ ಉಪಯೋಗಕ್ಕಿರುವ ಮೃಗಕ್ಕಿಂತ ಭಿನ್ನವಲ್ಲ ಎಂದು ನೀನು ತಿಳಿದಿರುವೆ. ಆದರೂ, ಅಜ್ಞಾನದಲ್ಲಿ ಮುಳುಗಿದ್ದರೂ ತಮ್ಮ ಹೃದಯದಲ್ಲಿರುವ ಸೊಕ್ಕಿನಿಂದ ತಾವೇ ದೊಡ್ಡ ಋಷಿಗಳೆಂದು ತಿಳಿದುಕೊಂಡು, ಕುರುಡರು ಕುರುಡರನ್ನು ದಾರಿನಡೆಸುವಂತೆ, ಮೋಸಗೊಳಿಸುವ ವಿವಿಧ ವಿಧಾನಗಳಿಂದ ಸುತ್ತಿ ಸುತ್ತಿ ತಿರುಗುವವರು ಅನೇಕರಿದ್ದಾರೆ. ನಚಿಕೇತ, ಕೆಲವು ಮಣ್ಣಿನ ಹೆಂಟೆಗಳಿಂದ ಮರುಳಾಗುವ ದಡ್ಡ ಮಕ್ಕಳಂತೆ ಇರುವಂತಹವರಲ್ಲಿ ಈ ಸತ್ಯವು ಎಂದೆಂದಿಗೂ ಹೊಳೆಯುವದಿಲ್ಲ. ಅವರು ಇಹವನ್ನಾಗಲೀ ಪರವನ್ನಾಗಲೀ ಅರ್ಥಮಾಡಿಕೊಳ್ಳರು. ಅವರು ಇವೆರಡನ್ನೂ ನಿರಾಕರಿಸುವರು, ಮತ್ತು ಈ ರೀತಿ ಪುನಃ ಪುನಃ ನನ್ನ ನಿಯಂತ್ರಣದೊಳಗೆ ಬರುವರು. ಅನೇಕರಿಗೆ ಈ ವಿಷಯವನ್ನು ಕೇಳುವ ಅವಕಾಶವೂ ಕೂಡ ಇರುವದಿಲ್ಲ; ಕೇಳಿದರೂ ಅರ್ಥ ಮಾಡಿಕೊಳ್ಳದವರು ಇರುತ್ತಾರೆ, ಏಕೆಂದರೆ ಹೇಳುವ ಗುರುವು ವಿಶೇಷವಾಗಿರಬೇಕು; ಅದರಂತೆ ಯಾರಿಗೆ ಈ ಜ್ಞಾನವು ಮನಗಾಣಿಸಲ್ಪಡುವದೋ ಅವನೂ ಕೂಡ ಅಷ್ಟೇ ಅದ್ಭುತನಾಗಿರಬೇಕು. ಹೇಳುವ ಮನುಷ್ಯನು ಹೆಚ್ಚಾದ ರೀತಿಯಲ್ಲಿ ಪ್ರಗತಿಯಾದವನಲ್ಲವಾಗಿದ್ದರೆ, ಆಗ ನೂರು ಸಲ ಕೇಳಿದರೂ, ನೂರು ಸಲ ಹೇಳಿಕೊಟ್ಟರೂ, ಆ ಸತ್ಯವು ಆತ್ಮವನ್ನು ಬೆಳಗುವದಿಲ್ಲ. ನಚಿಕೇತನೇ, ನಿನ್ನ ಮನಸ್ಸನ್ನು ವ್ಯರ್ಥವಾದ ವಾದಗಳಿಂದ ಕಲಕಬೇಡ; ಶುದ್ಧವಾಗಿಸಿದ ಹೃದಯದಲ್ಲಿ ಮಾತ್ರವೇ ಈ ಸತ್ಯವು ಪ್ರಜ್ವಲಿಸುವದು. ಯಾರನ್ನು ಮಹತ್ತರವಾದ ಕಷ್ಟದಿಂದಲ್ಲದೆ ನೋಡಲಾಗದೋ 'ಅವನು', ಯಾರು ಮರೆಯಾಗಿರುವನೋ 'ಅವನು', ಯಾರು ಹೃದಯಗಳ ಹೃದಯಾಂತರಾಳದ ಗುಹೆಯನ್ನು ಹೊಕ್ಕಿರುವನೋ 'ಅವನು'– ಆ 'ಪುರಾಣಪುರುಷನು' ಹೊರಗಿನ ಕಣ್ಣುಗಳಿಂದ ಕಾಣಲ್ಪಡುವವನಲ್ಲ; ಆತ್ಮದ ಕಣ್ಣುಗಳಿಂದ 'ಅವನನ್ನು' ನೋಡಿದಾಗ, ಅವನು ಸಂತೋಷ ದುಃಖಗಳೆರಡನ್ನೂ ಬಿಟ್ಟುಬಿಡುವನು. ಈ ರಹಸ್ಯವನ್ನು ತಿಳಿದವನು ಎಲ್ಲ ಶುಷ್ಕ ಆಸೆಗಳನ್ನೂ ಬಿಟ್ಟು ಬಿಟ್ಟು ಅತೀಂದ್ರಿಯ ಗ್ರಹಿಕೆಯನ್ನು ಹೊಂದುವನು, ಈ ರೀತಿ ಅವನೆಂದೆಂದಿಗೂ ಆನಂದವನ್ನು ಹೊಂದುವನು. ನಚಿಕೇತನೇ, ಅದುವೆ ಆನಂದದ ಮಾರ್ಗ. ಅವನು ಎಲ್ಲ ಪುಣ್ಯ, ಎಲ್ಲ ಪಾಪಗಳ ಆಚೆಗಿರುವನು, ಎಲ್ಲ ಕರ್ತವ್ಯಗಳು, ಎಲ್ಲ ಅಕರ್ತವ್ಯಗಳ ಆಚೆ, ಎಲ್ಲ ಇರುವಿಕೆಯಾಚೆಗೆ, ಮುಂದೆ ಆಗಬೇಕಾದ ಎಲ್ಲ ಇರವಿನ ಆಚೆಯಿರುತ್ತಾನೆ; ಇದನ್ನು ಯಾರು ತಿಳಿದಿರುವನೋ, ಅವನೊಬ್ಬನೇ ಜ್ಞಾನಿ. ಯಾರನ್ನು ಎಲ್ಲ ವೇದಗಳೂ ಅರಸುವವೋ, ಯಾರನ್ನು ನೋಡಲು ಜನರು ಎಲ್ಲ ತೆರನ ದೇಹದಂಡನೆಗಳನ್ನೂ ಹೊಂದಿ, ತಪಸ್ಸುಗಳನ್ನಾಚರಿಸುವರೋ, ನಾನು ನಿನಗೆ 'ಅವನ' ಹೆಸರನ್ನು ಹೇಳುತ್ತೇನೆ; 'ಅದು' 'ಓಂಕಾರ', ಈ ಶಾಶ್ವತ 'ಓಂಕಾರ'ವು ಬ್ರಹ್ಮ, ಇದು ಅಮರವಾದ 'ಒಂದು'; ಈ ರಹಸ್ಯವನ್ನು ತಿಳಿದವನು, ಅವನು ಇಚ್ಛಿಸುವದೆಲ್ಲಾ ಅವನದು. ನಚಿಕೇತ, ಮನುಷ್ಯನ ಈ 'ಆತ್ಮ' ದ ವಿಷಯವನ್ನು ನೀನು ತಿಳಿಯಲು ಅರಸುತ್ತಿರುವೆ, ಅವನು ಎಂದೆಂದಿಗೂ ಹುಟ್ಟುವದಿಲ್ಲ,

ಎಂದೆಂದಿಗೂ ಸಾಯನು. ಆದಿಯಿಲ್ಲದೆ,- ಅನಾದಿಯಾದ,- ಯಾವಾಗಲೂ ಇರುವ ಈ ಪುರಾತನ ಪುರುಷನು, ದೇಹ ನಾಶವಾದಾಗ, ನಾಶವಾಗುವದಿಲ್ಲ. ಕೊಲ್ಲುವವನು ನಾನು ಕೊಲ್ಲಬಲ್ಲೆನು ಎಂದು ಯೋಚಿಸಿದರೆ, ಕೊಲ್ಲಲ್ಪಡುವ ಮನುಷ್ಯನು ತಾನು ಕೊಲ್ಲಲ್ಪಟ್ಟೆ ಎಂದು ಯೋಚಿಸಿದರೆ, ಇಬ್ಬರೂ ತಪ್ಪು ತಿಳಿದವರು, ಏಕೆಂದರೆ 'ಆತ್ಮ'ವು ಕೊಲ್ಲಲಾರದು, ಅಥವಾ ಕೊಲ್ಲಲ್ಪಡಲಾರದು. ಅಣೋರಣೀಯನೂ, ಮಹತೋಮಹೀಯನೂ (ಅಪರಿಮಿತವಾದ ಸಣ್ಣದಕ್ಕಿಂತ ಸಣ್ಣದಾಗಿರುವ ಕಣ, ಅಪರಿಮಿತವಾದ ಅತಿ ಹೆಚ್ಚಿನದಕ್ಕಿಂತ ಹೆಚ್ಚಿಗೆ ಇರುವದು) ಆದ ಎಲ್ಲ ಜೀವಿಗಳ 'ಪ್ರಭು'ವು ಎಲ್ಲ ವ್ಯಕ್ತಿಗಳ ಹೃದಯ ಗಹ್ವರದಲ್ಲಿರುವನು. ಯಾರು ಪಾಪರಹಿತನಾಗಿದ್ದಾನೋ ಅವನು, 'ತನ್ನ' ಎಲ್ಲ ವೈಭವದಿಂದ ಕೂಡಿರುವ 'ಅವನನ್ನು', ಅದೇ ಪ್ರಭುವಿನ ಕರುಣೆಯಿಂದ ನೋಡುವನು. [ಭಗವಂತನ-ಸಿದ್ಧಿಗೆ (ಭಗವಂತನ ದರ್ಶನಕ್ಕೆ) ಭಗವಂತನ ಕರುಣೆಯು ಕಾರಣಗಳಲ್ಲೊಂದು] ಕುಳಿತಾಗ 'ಅವನು' ದೂರ ಹೋಗುವನು. ಮಲಗಿದಾಗ ಎಲ್ಲೆಲ್ಲೂ ಹೋಗುವನು; ಎಲ್ಲ ವಿರುದ್ಧ ಗುಣಗಳೂ ಕೂಡಿರುವ ಭಗವಂತನನ್ನು ಅರಿಯಲು ಪರಿಶುದ್ಧರೂ ಸೂಕ್ಷ್ಮಗ್ರಹಣಶಕ್ತಿಯುಳ್ಳವರೂ ಆದ ಮಾನವರಲ್ಲದೆ ಮತ್ತೆ ಯಾರು ಯೋಗ್ಯತೆಯುಳ್ಳವರು? ದೇಹವಿಲ್ಲದೆ, ಆದರೂ ದೇಹದೊಳಗೇ ಜೀವಿಸುವ, ಸ್ಪರ್ಶರಹಿತನು ಆದರೂ ತೋರಿಕೆಯಲ್ಲಿ ಸಂಸ್ಪರ್ಶವುಳ್ಳ, ಸರ್ವತ್ರಗೋಚರನೆಂದೂ 'ಆತ್ಮ'ನನ್ನು ಅರಿತಿರುವ ಋಷಿಯು ಎಲ್ಲ ಸಂಕಟಗಳನ್ನೂ ಬಿಡುವನು. ಈ 'ಆತ್ಮ'ನನ್ನು ವೇದಗಳ ಅಧ್ಯಯನದಿಂದ, ಅಥವಾ ಅತ್ಯಂತ ಶ್ರೇಷ್ಠ ಬುದ್ಧಿಮತ್ತೆಯಿಂದ, ಅಥವಾ ಹೆಚ್ಚಿನ ವ್ಯಾಸಂಗಗಳಿಂದ ಪಡೆಯಲಾಗುವದಿಲ್ಲ. ಯಾರನ್ನು 'ಆತ್ಮನು' ಅರಸುವನೋ, ಅವನು 'ಆತ್ಮ'ನನ್ನು ಪಡೆಯುವನು, ಅವನಿಗೆ 'ತನ್ನೆ'ಲ್ಲ ವೈಭವವನ್ನು 'ಆತ್ಮನು' ಪ್ರಕಟಿಸುವನು. ಅನವರತವೂ ಪಾಪಕೃತ್ಯಗಳನ್ನೇ ಮಾಡುತ್ತಿರುವವನು, ಮನಸ್ಸು ಸಮಾಧಾನದಲ್ಲಿಲ್ಲದವನು, ಧ್ಯಾನಮಾಡಲಾಗದವನು, ಯಾವಾಗಲೂ ಕ್ಷೋಭೆಯಲ್ಲಿರುವವನು, ಚಂಚಲನು – ಅಂತಹವನು ಹೃದಯಾಂತರಾಳವನ್ನು ಹೊಕ್ಕಿರುವ ಆತ್ಮನನ್ನು ಅರ್ಥಮಾಡಿಕೊಳ್ಳಲಾರನು, ಅರಿಯಲಾರನು. ನಚಿಕೇತನೇ, ಈ ದೇಹವು ರಥ, ಇಂದ್ರಿಯಗಳು ಕುದುರೆಗಳು, ಮನಸ್ಸು ಲಗಾಮು, ಬುದ್ಧಿಶಕ್ತಿಯು ಸಾರಥಿ, ಮತ್ತು ಆತ್ಮವು ರಥದಲ್ಲಿರುವ ಸವಾರನು. ಆತ್ಮವು ಸಾರಥಿಯೊಡನೆ- ಬುದ್ಧಿ ಅಥವಾ ಪ್ರಜ್ಞಾಶಕ್ತಿಯೊಡನೆ ತಾನು ಕೂಡಿಕೊಂಡಾಗ, ಅದರ ಮೂಲಕ ಮನಸ್ಸಿನೊಡನೆ- ಲಗಾಮುಗಳು, ಪುನಃ ಅದರ ಮೂಲಕ ಇಂದ್ರಿಯಗಳೊಡನೆ- ಕುದುರೆಗಳು, ಅವನು ಅನುಭೋಗಿಸುವವನು ಎನ್ನುತ್ತಾರೆ; ಅವನು ಗ್ರಹಿಸುತ್ತಾನೆ, ಕೆಲಸ ಮಾಡುತ್ತಾನೆ, ಕರ್ಮಮಾಡುತ್ತಾನೆ. ಮನಸ್ಸು ಸ್ವಾಧೀನವಿಲ್ಲದವನು, ವಿವೇಚನೆಯಿಲ್ಲದವನು, ಅವನು ಸಾರಥಿಯ ಕೈಗಳಲ್ಲಿ ನಿಯಂತ್ರಿಸಲಾಗದ ತುಂಟಾಟದ ಕುದುರೆಗಳಂತೆ ಇಂದ್ರಿಯನಿಗ್ರಹವಿಲ್ಲದವನು ಆಗಿರುತ್ತಾನೆ. ಯಾರಿಗೆ ವಿವೇಚನೆಯಿರುವದೋ, ಮನಸ್ಸು ನಿಯಂತ್ರಣದಲ್ಲಿರುವದೋ, ಇಂದ್ರಿಯಗಳು ಸಾರಥಿಯ ಕೈಗಳಲ್ಲಿರುವ ಒಳ್ಳೆಯ ಕುದುರೆಗಳಂತೆ ಯಾವಾಗಲೂ ನಿಯಂತ್ರಣದಲ್ಲಿರುವವು. ವಿವೇಚನೆಯುಳ್ಳವನೂ, ಮನಸ್ಸು ಯಾವಾಗಲೂ ಸತ್ಯವನ್ನರಿಯುವ ಹಾದಿಯಲ್ಲಿರುವನೋ, ಯಾವಾಗಲೂ ಪರಿಶುದ್ಧನೋ ಅವನು

ಆ ಸತ್ಯವನ್ನು ಸ್ವೀಕರಿಸುವನು, ಪುನರ್ಜನ್ಮವಿರದ ಅಂತಹ ಸತ್ಯವನ್ನು ಪಡೆಯುವನು.

"ಓ ನಚಿಕೇತನೇ, ಇದು ಬಹಳ ಕಷ್ಟ; ದಾರಿ ದೂರವಿದೆ, ಅದನ್ನು ಪಡೆಯುವದು ಶ್ರಮವೇ. ಸೂಕ್ಷ್ಮಗ್ರಹಣಶಕ್ತಿಯನ್ನು ಹೊಂದಿರುವವರು ಮಾತ್ರವೇ ಅದನ್ನು ಕಾಣಬಲ್ಲರು, ಅರ್ಥಮಾಡಿಕೊಳ್ಳಬಲ್ಲರು. ಆದಾಗ್ಯೂ, ಹೆದರದಿರಿ, ಎಚ್ಚರಗೊಳ್ಳಿ, ಎದ್ದುನಿಲ್ಲಿ ಕೆಲಸಮಾಡಿರಿ. ಗುರಿಯನ್ನು ಮುಟ್ಟುವವರೆಗೂ ನಿಲ್ಲದಿರಿ. ಏಕೆಂದರೆ, ಈ ಕೆಲಸದ ಹೊರೆ ಬಹಳ ಕಷ್ಟಕರವಾದುದು. ಕತ್ತಿಯ ಅಲಗಿನ ಮೇಲೆ ನಡೆದಂತೆ ಎಂದು ಋಷಿಗಳು ಹೇಳುತ್ತಾರೆ. ಇಂದ್ರಿಯಗಳಿಂದಾಚೆಗೆ, ಎಲ್ಲ ಸ್ಪರ್ಶ, ಎಲ್ಲ ರೂಪ, ಎಲ್ಲ ರುಚಿಗಳಾಚೆಗೆ ಪರಿವರ್ತಿತವಾಗದ, ಅಪರಿಮಿತವಾದ, ಬುದ್ಧವಂತಿಕೆಯನ್ನೂ ದಾಟಿದ, ಅವಿನಾಶಿಯಾದ– 'ಅವನೊಬ್ಬನನ್ನೇ' ತಿಳಿಯುವದರಿಂದ ನಾವು ಮೃತ್ಯುವಿನ ದವಡೆಗಳಿಂದ ಪಾರಾಗುತ್ತೇವೆ".

ಇಲ್ಲಿಯವರೆಗೆ, ಮುಟ್ಟಬೇಕಾದ ಗುರಿಯನ್ನು ಯಮನು ವಿವರಿಸಿದ್ದಾನೆ. ನಮಗೆ ಬರುವ ಮೊದಲ ಭಾವನೆ ಎಂದರೆ, ಜನನ, ಮರಣ, ದುಃಖ, ಈ ಪ್ರಪಂಚದಲ್ಲಿ ನಮ್ಮನ್ನು ಈಡು ಮಾಡುವ ಅತ್ತಿಂದಿತ್ತದ ಎಸೆತಗಳು ಇವುಗಳೆಲ್ಲವನ್ನೂ ಸತ್ಯವಾಗಿರುವ ಅದೊಂದನ್ನೇ ತಿಳಿದಾಗ ಗೆಲ್ಲಬಹುದು. ಸತ್ಯ ಎನ್ನುವದು ಏನು?– ಯಾವದು ಎಂದೆಂದಿಗೂ ಬದಲಾಗದೋ, ಮಾನವನ 'ಆತ್ಮ', ವಿಶ್ವದ ಹಿಂದಿನ 'ಆತ್ಮ'. 'ಅವನನ್ನು' ಅರಿಯುವದು ಬಲುಕಷ್ಟ ಎಂದು ಪುನಃ ಹೇಳಲಾಗುತ್ತಿದೆ– ತಿಳಿಯುವದು ಎಂದರೆ ಬರಿದೆ ಬುದ್ಧಿಪೂರ್ವಕ ಒಪ್ಪಿಗೆ ಎಂದರ್ಥವಲ್ಲ, ಅದು ಸಿದ್ಧಿಸಿಕೊಳ್ಳುವದು. ಇದು 'ಆತ್ಮ'ವನ್ನು ನೋಡುವದು, ಗ್ರಹಿಸುವದು, ಎಂದು ಪುನಃ ಪುನಃ ಓದುತ್ತೇವೆ. ನಾವು ಅದನ್ನು ನಮ್ಮ ಕಣ್ಣುಗಳಿಂದ ನೋಡಲಾರೆವು; ಅದನ್ನು ಗ್ರಹಿಸುವ ಶಕ್ತಿ ಅತಿ ಸೂಕ್ಷ್ಮವಾಗಿರಬೇಕಾಗುತ್ತದೆ. ಗೋಡೆಗಳನ್ನು ಪುಸ್ತಕಗಳನ್ನು ಗ್ರಹಿಸುವದು ಸ್ಥೂಲ ಗ್ರಹಿಕೆ; ಆದರೆ ಸತ್ಯವನ್ನು ಕಂಡುಕೊಳ್ಳುವ ಗ್ರಹಿಕೆಯನ್ನು ಅತಿ ಸೂಕ್ಷ್ಮವನ್ನಾಗಿ ಮಾಡಬೇಕು; ಅದೇ ಈ ಜ್ಞಾನದ ಇಡಿಯ ರಹಸ್ಯ. ಅನಂತರ, ಒಬ್ಬಾತನು ಬಹಳ ಪರಿಶುದ್ಧನಾಗಿರಬೇಕು ಎಂದು ಯಮನು ಹೇಳುತ್ತಾನೆ. ಅದು ಗ್ರಹಣ ಶಕ್ತಿಯನ್ನು ಅತಿಸೂಕ್ಷ್ಮವಾಗಿ ಮಾಡುವ ವಿಧಾನ; ಅನಂತರ ಅವನು ಇತರ ಮಾರ್ಗಗಳನ್ನೂ ಹೇಳುತ್ತಾಹೋಗುತ್ತಾನೆ. ಆ ಸ್ವಂತ ಇರುವಿಕೆಯ "ಒಬ್ಬಾತನು" ("ನಿರ್ದ್ವಂದ್ವನು") ಇಂದ್ರಿಯಗಳಿಂದ ಬಹುದೂರವಿರುವನು. ಇಂದ್ರಿಯಗಳು ಅಥವಾ ಯಂತ್ರಗಳು ಹೊರಗೆ ನೋಡುತ್ತವೆ, ಆದರೆ ಸ್ವಯಂಭೂ (ಸ್ವತಂತ್ರವಾಗಿ ತಾನೇ ಅಸ್ತಿತ್ವದಲ್ಲಿರುವ) ನಿರ್ದ್ವಂದ್ವನು, 'ಆತ್ಮ'ನನ್ನು ಒಳಗೆ ನೋಡಬೇಕು. ಇಲ್ಲಿಗೆ ಬೇಕಾಗುವ ಅರ್ಹತೆಯನ್ನು ನೀವು ನೆನಪಿನಲ್ಲಿಡಲೇಬೇಕು; ಕಣ್ಣುಗಳನ್ನು ಅಂತರ್ಮುಖ ಮಾಡಿ 'ಆತ್ಮ'ನನ್ನು ಕಾಣುವ ಅಪೇಕ್ಷೆ. ನಾವು ಪ್ರಕೃತಿಯಲ್ಲಿ ನೋಡುವ ಈ ಎಲ್ಲ ಸುಂದರ ವಸ್ತುಗಳು ಬಹಳ ಒಳ್ಳೆಯವು, ಆದರೆ ಅದು ಭಗವಂತನನ್ನು ಕಾಣುವ ವಿಧಾನವಲ್ಲ. ನಾವು ಕಣ್ಣುಗಳನ್ನು ಒಳಮುಖ ಮಾಡುವದು ಹೇಗೆಂಬುದನ್ನು ಕಲಿಯಬೇಕು. ಕಣ್ಣುಗಳ ಹೊರಗೆ ನೋಡುವ ತವಕವನ್ನು ಮಿತಿಗೊಳಿಸಬೇಕು ಗಜಿಬಿಜಿಯ ಬೀದಿಯಲ್ಲಿ ನಡೆಯುವಾಗ, ನೀವು ಜೊತೆಯಲ್ಲಿ ನಡೆಯುತ್ತಿರುವವನು ಆಡುವ ಮಾತನ್ನು ಕೇಳಿಸಿಕೊಳ್ಳುವದು ಕಷ್ಟ, ಏಕೆಂದರೆ ಹಾದುಹೋಗುವ ಬಂಡಿಗಳ ಶಬ್ದದಿಂದ. ಅಷ್ಟೊಂದು

ಗದ್ದಲವಿರುವಾಗ ಅವನೂ ನಿಮ್ಮ ಮಾತನ್ನು ಕೇಳಲಾರನು. ಮನಸ್ಸು ಹೊರ ನೋಡುತ್ತಿದೆಯಾದ್ದರಿಂದ, ನಿಮ್ಮ ಪಕ್ಕದಲ್ಲಿರುವವನನ್ನು ನೀವು ಕೇಳಲಾರಿರಿ. ಅದೇ ರೀತಿಯಲ್ಲಿ, ನಮ್ಮ ಸುತ್ತಲಿರುವ ಪ್ರಪಂಚ ಎಷ್ಟು ಸದ್ದು ಮಾಡುತ್ತಿದೆಯೆಂದರೆ ಅದು ಮನಸ್ಸನ್ನು ಹೊರಗೆ ಸೆಳೆಯುವದು. ನಾವು ಹೇಗೆ 'ಆತ್ಮ'ವನ್ನು ಕಾಣಬಹುದು? ಹೀಗೆ ಹೊರನೋಡುವದನ್ನು ನಿಲ್ಲಿಸಲೇಬೇಕು. ಅದೇ ಕಣ್ಣುಗಳನ್ನು ಅಂತರ್ಮುಖಿ ಮಾಡುವದೆನ್ನುವದರ ಅರ್ಥ, ಆಗ ಮಾತ್ರ ಒಳಗಿನ ಭಗವಂತನ ವೈಭವವನ್ನು ಕಾಣಬಹುದು.

ಈ 'ಆತ್ಮ' ವೆಂದರೇನು? 'ಅದು' ಬುದ್ಧಿಗಿಂತಲೂ ಆಚೆಗೆ ಇರುವದೆಂದು ನಾವು ನೋಡಿದ್ದೇವೆ. ಈ 'ಆತ್ಮ'ವು ಶಾಶ್ವತ ಮತ್ತು ಸರ್ವವ್ಯಾಪಿ, ನೀವು, ನಾನು, ನಾವೆಲ್ಲರೂ ಸರ್ವವ್ಯಾಪಿಗಳು, ಮತ್ತು 'ಆತ್ಮ'ವು ಪರಿವರ್ತನೆಯಿಲ್ಲದ್ದು ಎಂದು ಅದೇ ಉಪನಿಷತ್ತಿನಿಂದ ತಿಳಿದಿದ್ದೇವೆ. ಈಗ ಈ ಸರ್ವವ್ಯಾಪಕ 'ಪರವಸ್ತು'ವು ಒಂದೇ ಒಂದು ಆಗಿರಲು ಸಾಧ್ಯ– ಸಮಾನವಾದ ಸರ್ವವ್ಯಾಪಕತ್ವವುಳ್ಳ ಎರಡು ವಸ್ತುಗಳು ಇರಲು ಸಾಧ್ಯವಿಲ್ಲ– ಅದು ಹೇಗೆ? ಅಪರಿಮಿತವಾದ ಎರಡುವಸ್ತುಗಳು ಇರಲು ಸಾಧ್ಯವಿಲ್ಲ; ಫಲಿತಾಂಶವಾಗಿ, ಅಲ್ಲಿ ಒಂದೇ ಒಂದು 'ಆತ್ಮ' ನಿಜವಾಗಿ ಇರುವದು; ನೀವು, ನಾನು ಮತ್ತು ಇಡಿಯ ವಿಶ್ವವೆಲ್ಲಾ ಒಂದಲ್ಲದೆ ಬೇರೆಯಲ್ಲ, ಆದರೆ ಹಲವಾಗಿ ಕಾಣುತ್ತವೆ. "ಪ್ರಪಂಚದೊಳಕ್ಕೆ ಪ್ರವೇಶಿಸುತ್ತಿರುವ ಒಂದೇ ಅಗ್ನಿಯು ವಿವಿಧ ರೀತಿಗಳಲ್ಲಿ ಪ್ರಕಟವಾಗುವಂತೆ, ಹಾಗೆಯೇ ಆ ಒಂದೇ 'ಆತ್ಮ'ವು– ಎಲ್ಲರ 'ಆತ್ಮ'ವು, ಪ್ರತಿಯೊಂದು ರೂಪದಲ್ಲಿಯೂ 'ತನ್ನನ್ನು' ತೋರ್ಪಡಿಸಿಕೊಳ್ಳುತ್ತದೆ". ಈಗೊಂದು ಪ್ರಶ್ನೆ: ಈ 'ಆತ್ಮ'ವು ಪರಿಪೂರ್ಣ ಮತ್ತು ಶುದ್ಧವಾಗಿದ್ದರೆ, ವಿಶ್ವದ ಒಂದೇ 'ಪರವಸ್ತು'ವು ಅಶುದ್ಧ ದೇಹಕ್ಕೆ, ದುಷ್ಟ ದೇಹಕ್ಕೆ, ಒಳ್ಳೆಯ ದೇಹಕ್ಕೆ, ಹೀಗೆಯೇ ಮುಂತಾಗಿ 'ಅದು' ಹೋದಾಗ, 'ಅದು ಏನಾಗುತ್ತದೆ?' 'ಅದು' ಪರಿಪೂರ್ಣವಾಗಿರುವದಾದರೂ ಹೇಗೆ? "ಒಬ್ಬನೇ ಸೂರ್ಯನು ಪ್ರತಿ ಕಣ್ಣಿನ ದೃಷ್ಟಿಗೂ ಕಾರಣನು, ಆದರೂ ಯಾರೊಬ್ಬನ ಕಣ್ಣುಗಳ ದೋಷದಿಂದಲೂ ಅವನು ಅಬಾಧಿತನು". ಒಬ್ಬಾತನಿಗೆ ಅರಿಶಿನ ಕಾಮಾಲೆಯಿದ್ದರೆ, ಅವನು ಪ್ರತಿಯೊಂದನ್ನೂ ಹಳದಿಯಾಗಿ ಕಾಣುವನು; ಅವನಿಗೆ ದೃಷ್ಟಿ ಕಾರಣನು ಸೂರ್ಯನು, ಆದರೆ ಅವನು ಪ್ರತಿಯೊಂದನ್ನೂ ಹಳದಿಯಾಗಿ ಕಾಣುತ್ತಿರುವುದು ಸೂರ್ಯನನ್ನು ತಟ್ಟುವದಿಲ್ಲ. ಅದರಂತೆಯೇ ಈ 'ಏಕೈಕ ಆತ್ಮನು', ಪ್ರತಿಯೊಬ್ಬನ 'ಆತ್ಮ'ವಾಗಿದ್ದರೂ, ಹೊರಗಿನ ಶುದ್ಧತೆ, ಅಶುದ್ಧತೆಗಳಿಂದ ಬಾಧಿತನಲ್ಲ. "ಪ್ರತಿಯೊಂದೂ ಕ್ಷಣಿಕವಾಗಿರುವ ಈ ಪ್ರಪಂಚದಲ್ಲಿ 'ಅವನನ್ನು' ಅರಿತವನು ಎಂದೆಂದಿಗೂ ಬದಲಾಗುವದಿಲ್ಲ, ಅಚೇತನದ ಈ ಪ್ರಪಂಚದಲ್ಲಿ, ಒಂದೇ ಚೈತನ್ಯ 'ವ್ಯಕ್ತಿ'ಯನ್ನು ನೋಡಿದವನು, ಅನೇಕತ್ವದ ಈ ಪ್ರಪಂಚದಲ್ಲಿ, ಈ 'ಒಂದನ್ನೇ' ಅರಿತವನು, 'ಅವನನ್ನು' ತನ್ನ ಸ್ವಂತ ಆತ್ಮದಲ್ಲಿ ಕಾಣುವವನು, ಅಂತಹವನಿಗೆ ಶಾಶ್ವತ ಆನಂದವು ಲಭಿಸುವದು, ಇನ್ನು ಬೇರೆ ಯಾರಿಗೂ ಅಲ್ಲ, ಬೇರೆ ಯಾರಿಗೂ ಅಲ್ಲ. ಅಲ್ಲಿ ಸೂರ್ಯನು ಬೆಳಗನು, ಮಿನುಗುವದಿಲ್ಲ, ಮಿಂಚು ಹೊಳೆಯದು, ಇನ್ನು ಅಗ್ನಿಯ ವಿಷಯ ಹೇಳುವದೇನು? 'ಅವನು' ಬೆಳಗಿದರೆ, ಎಲ್ಲವೂ ಬೆಳಗುವದು; 'ಅವನ' ಬೆಳಕಿನ ಮೂಲಕ ಪ್ರತಿಯೊಂದೂ ಪ್ರಕಾಶಮಾನವಾಗುತ್ತದೆ. ಹೃದಯವನ್ನು ಹಿಂಡುವ ಎಲ್ಲ ಅಪೇಕ್ಷೆಗಳೂ ನಿಂತಾಗ, ಮರ್ತ್ಯನು ಅಮರನಾಗುವನು, ಇಲ್ಲಿ

ಒಬ್ಬಾತನು 'ಬ್ರಹ್ಮ'ನನ್ನು ಪಡೆಯುವನು. ಹೃದಯದ ಎಲ್ಲ ಡೊಂಕೂ ಮಾಯವಾದಾಗ, ಅದರ ಗಂಟುಗಳೆಲ್ಲವನ್ನೂ ಬೇರೆ ಬೇರೆಯಾಗಿ ತುಂಡರಿಸಿದಾಗ, ಆಗ ಮಾತ್ರವೇ ಮರ್ತ್ಯನು ಅಮರನಾಗುತ್ತಾನೆ, ಇದು ಮಾರ್ಗ. ಈ ಅಧ್ಯಯನ ನಮ್ಮನ್ನು ಆಶೀರ್ವದಿಸಲಿ, ಅದು ನಮ್ಮನ್ನು ನಡೆಸಿಕೊಂಡು ಬರಲಿ, ಅದು ನಮಗೆ ದೃಢವನ್ನು ನೀಡಲಿ, ಅದು ನಮ್ಮಲ್ಲಿ ಶಕ್ತಿಯಾಗಲಿ, ನಾವು ಒಬ್ಬರನ್ನೊಬ್ಬರು ದ್ವೇಷಿಸದಿರಲಿ, ಎಲ್ಲರಿಗೂ ಶಾಂತಿಯಿರಲಿ ಓಂ ಶಾಂತಿಃ".

ವೇದಾಂತ ತತ್ತ್ವಶಾಸ್ತ್ರದಲ್ಲಿ ನೀವು ಕಾಣುವದು ಈ ಆಲೋಚನಾ ರೇಖೆಯನ್ನು. ಪ್ರಪಂಚದಲ್ಲಿ ಬೇರೆ ಎಲ್ಲಾದರೂ ನೀವು ನೋಡಿರುವದಕ್ಕಿಂತ ಸಂಪೂರ್ಣವಾಗಿ ಭಿನ್ನವಾದ ಯೋಚನೆಯನ್ನು ಇಲ್ಲಿ ನಾವು ಮೊದಲು ನೋಡುತ್ತೇವೆ. ವೇದಗಳ ಅತ್ಯಂತ ಪ್ರಾಚೀನ ಭಾಗಗಳಲ್ಲಿ, ಶೋಧನೆಯು ಬೇರೆ ಇತರ ಗ್ರಂಥಗಳಲ್ಲಿರುವಂತೆಯೇ ಇತ್ತು. ಶೋಧನೆಯು ಹೊರಗಿತ್ತು. ಕೆಲವು ಹಳೆ, ಹಳೆಯ ಗ್ರಂಥಗಳಲ್ಲಿ, ಪ್ರಶ್ನೆಯೊಂದೆದ್ದಿತ್ತು "ಆದಿಯಲ್ಲಿ ಏನಿತ್ತು? ಏನಾದರೂ, ಕೆಲಸಕ್ಕೆ ಸ್ವಲ್ಪವಾದರೂ ಬರುವ, ಅಥವಾ ಬಾರದ ಎರಡೂ ಇಲ್ಲದಾದಾಗ, ಅಂಧಕಾರವು ಅಂಧಕಾರವನ್ನು ಮುಸುಕಿದ್ದಾಗ, ಇದೆಲ್ಲವನ್ನೂ ಯಾರು ಸೃಷ್ಟಿಸಿದರು?" ಹೀಗೆ, ಶೋಧನೆ ಶುರುವಾಯಿತು. ಅವರು ದೇವದೂತರನ್ನು, ದೇವತೆಗಳ ಮತ್ತು ಎಲ್ಲ ತರಹದ ವಸ್ತುಗಳ ವಿಷಯದಲ್ಲೂ ಮಾತನಾಡಲು ತೊಡಗಿದರು, ಅನಂತರದಲ್ಲಿ ಇದು ಆಶಾರಹಿತ (ನಿಷ್ಪ್ರಯೋಜಕ)ವೆಂದು ಬಿಟ್ಟುಬಿಟ್ಟರು. ಅವರ ಕಾಲದಲ್ಲಿ ಶೋಧನೆ ಹೊರಗಡೆಯೇ ಇತ್ತು. ಅವರು ಏನನ್ನೂ ಕಾಣಲಿಲ್ಲ, ಆದರೆ ಅನಂತರದ ದಿನಗಳಲ್ಲಿ, ನಾವು ವೇದಗಳನ್ನು ಓದಿದಂತೆ, ಅವರು ಸ್ವತಂತ್ರ ಅಸ್ತಿತ್ವದ 'ನಿರ್ದ್ವಂದ್ವ'ಕ್ಕಾಗಿ ಒಳಮುಖನಾಗಿ ನೋಡಬೇಕಾಯಿತು. ಇದು ವೇದಗಳಲ್ಲಿ ಒಂದು ಮೂಲಭತ ಭಾವನೆ,- ನಕ್ಷತ್ರಗಳಲ್ಲಿ, ಜ್ಯೋತಿಃಪಟಲಗಳಲ್ಲಿ (ನೀಹಾರಿಕಗಳಲ್ಲಿ), ಕ್ಷೀರಪಥದಲ್ಲಿ, ಹೊರಗಿನ ಇಡಿಯ ವಿಶ್ವದಲ್ಲಿ ನಮ್ಮ ಶೋಧನೆಯು ಮುಟ್ಟಿದ್ದು ಶೂನ್ಯವನ್ನೇ, ಇದು ಹುಟ್ಟು ಸಾವುಗಳ ಸಮಸ್ಯೆಯನ್ನು ಪರಿಹರಿಸಲಾಗಲಿಲ್ಲ. ಒಳಗಿನ ವಿಸ್ಮಯಕಾರಕ ಯಾಂತ್ರಿಕ ಕೌಶಲವನ್ನು ವಿಶ್ಲೇಷಿಸಬೇಕಿತ್ತು, ಅದು ಅವರಿಗೆ ವಿಶ್ವದ ರಹಸ್ಯವನ್ನು ಹೊರಗೆಡವಿತು, ನಕ್ಷತ್ರವಾಗಲೀ, ಸೂರ್ಯನಾಗಲೀ ಅದನ್ನು ಮಾಡಲಾಗಲಿಲ್ಲ. ಮನುಷ್ಯನ ಅವಯವ ವಿಚ್ಛೇದನದಿಂದ, ದೇಹವನ್ನಲ್ಲ, ಮನುಷ್ಯನ ಆತ್ಮದ ರಚನೆಯನ್ನು ನೋಡಬೇಕಿತ್ತು. ಆ ಆತ್ಮದಲ್ಲಿ ಅವರಿಗೆ ಉತ್ತರವು ಸಿಕ್ಕಿತ್ತು. ಅವರು ಕಂಡ ಉತ್ತರವಾದರೂ ಏನು? ದೇಹದ ಹಿಂದೆ, ಮನಸ್ಸಿನ ಹಿಂದೆಯೂ ಸಹ, ಸ್ವತಂತ್ರವಾಗಿ ಅಸ್ತಿತ್ವದಲ್ಲಿರುವ 'ಒಂದು' ಇದೆ. 'ಅವನು' ಸಾಯಲಾರ, ಹುಟ್ಟುವದೂ ಇಲ್ಲ. ಈ ಸ್ವಯಂಭೂ ಸರ್ವವ್ಯಾಪಿ, ಏಕೆಂದರೆ 'ಅವನಿಗೆ' ಆಕೃತಿಯಿಲ್ಲ. ಆಕೃತಿ, ಆಕಾರವಿರದ, ಅವಕಾಶ ಅಥವಾ ಕಾಲದಿಂದ ಪರಿಮಿತನಾಗದ ವಸ್ತುವು ಒಂದಾನೊಂದು ಸ್ಥಳದಲ್ಲಿ ಇರಲಾರದು. ಅದು ಹೇಗೆ ಇರಬಲ್ಲುದು? ಅದು ಎಲ್ಲೆಲ್ಲೂ ಇದೆ, ಸರ್ವವ್ಯಾಪಿ, ನಮ್ಮೆಲ್ಲರ ಮೂಲಕವೂ ಒಂದೇ ಸಮನಾಗಿ ಇದೆ.

ಮನುಷ್ಯನ ಆತ್ಮ ಏನು? ಒಂದು ಚೈತನ್ಯ, ಭಗವಂತನು ಇದ್ದಾನೆ; ಜೊತೆಯಲ್ಲಿ ಸತ್ತ್ವದಲ್ಲಿ, ರೂಪದಲ್ಲಿ ಮತ್ತು ಪ್ರತಿಯೊಂದರಲ್ಲೂ ಭಗವಂತನಿಂದ ಶಾಶ್ವತವಾಗಿ ಪ್ರತ್ಯೇಕವಾಗಿರುವ ಅಪರಿಮಿತ

ಸಂಖ್ಯೆಯ ಆತ್ಮಗಳೂ ಇದೆ, ಎನ್ನುತ್ತಿದ್ದ ಪಕ್ಷವೊಂದು ಇತ್ತು. ಇದು ದ್ವೈತ. ಇದು ಹಳೆಯ, ಪುರಾತನವಾದ ಅಪಕ್ವ ಭಾವ– ಇನ್ನೊಂದು ಪಕ್ಷವು ಕೊಟ್ಟ ಉತ್ತರವೆಂದರೆ, ತ್ಮವು ಅಪರಿಮಿತವಾದ ದೈವಿಕ ಅಸ್ತಿತ್ವದ ಒಂದು ಭಾಗ. ಈ ದೇಹ ತಾನೇ ಒಂದು ಸಣ್ಣ ಪ್ರಪಂಚ, ಅದರ ಹಿಂದಿರುವದು ಮನಸ್ಸು ಅಥವಾ ಚಿಂತನೆ, ಮತ್ತೂ ಅದರ ಹಿಂದೆ ವೈಯಕ್ತಿಕ ಆತ್ಮವಿರುವದು, ಇದರಂತೆಯೇ ಇಡೀ ಪ್ರಪಂಚವೇ ಒಂದು ದೇಹ, ಅದರ ಹಿಂದಿರುವದು ವಿಶ್ವವ್ಯಾಪಕಮನ, ಮತ್ತೂ ಅದರ ಹಿಂದೆ ವಿಶ್ವವ್ಯಾಪಿ ಆತ್ಮ ಇರುವದು. ಹೇಗೆ ಈ ದಏಹವು ವಿಶ್ವವ್ಯಾಪಿ ದೇಹದ ಒಂದು ಭಾಗವೋ, ಅದರಂತೆ ಈ ಮನಸ್ಸೂ ಕೂಡ ವಿಶ್ವವ್ಯಾಪಿ ಮನಸ್ಸಿನ ಒಂದು ಭಾಗ, ಮತ್ತು ಮಾನವನ ಆತ್ಮವು ವಿಶ್ವವ್ಯಾಪಿ ಆತ್ಮದ ಒಂದು ಭಾಗ. ಇದನ್ನು ವಿಶಿಷ್ಟಾದ್ವೈತವೆನ್ನುವರು– ವಿಶೇಷವಾದ ಅದ್ವೈತ. ಹೀಗೆ ನಾವು ವಿಶ್ವವ್ಯಾಪಿ ಆತ್ಮವು ಅಪರಿಮಿತ ಎಂದು ತಿಳಿಯುವೆವು. ಅಪರಿಮಿತವು ಭಾಗಗಳನ್ನು ಹೊಂದಿರುವದು ಹೇಗೆ? ಅದನ್ನು ಹೇಗೆ ಒಡೆಯುವದು, ವಿಭಾಗ ಮಾಡಲಾಗುವುದು? ನಾನು ಅಪರಿಮಿತದ ಒಂದು ಕಿಡಿ ಎಂದು ಹೇಳುವದು ಕವಿತಾರೂಪವಾಗಬಹುದು, ಆದರೆ ಆಲೋಚಿಸುವ ಮನಸ್ಸಿಗೆ ಅದು ಅಸಂಬದ್ಧವಾಗಿ ಕಾಣುವದು. ಅಪರಿಮಿತವನ್ನು ಭಾಗಮಾಡುವುದೆಂದರೆ ನು? ಅದು ನೀವು ಪಾಲು ಮಾಡಲಾಗಲೀ, ತುಂಡುಗಳಾಗಿ ಬೇರೆಮಾಡಲಾಗಲೀ ಆಗುವ ಯಾವದಾದರೂ ವಸ್ತುವೇ? ಅಪರಿಮಿತವನ್ನು ಎಂದೂ ಭಾಗಮಾಡಲಾಗುವದಿಲ್ಲ. ಹಾಗೆ ಸಾಧ್ಯವಿದ್ದಿದ್ದರೆ, ಅದು ಅಪರಿಮಿತವೇ ಆಗಿರುತ್ತಿರಲಿಲ್ಲ. ಹಾಗಾದರೆ ಇದರ ತೀರ್ಮಾನವೇನು? ಅದಕ್ಕೆ ಉತ್ತರವೆಂದರೆ, ವಿಶ್ವವ್ಯಾಪಿಯಾಗಿರುವ 'ಆತ್ಮ'ವು ನೀವೇ; ನೀವು ಅದರ ಭಾಗವಲ್ಲ, ಇಡಿಯೇ ಆಗಿರುವಿರಿ, ನೀವು ಇಡಿಯಾದ ಭಗವಂತ. ಹಾಗಾದರೆ ಈ ಎಲ್ಲ ವೈವಿಧ್ಯಗಳೇನು? ನಾವು ಎಷ್ಟೋ ಅನೇಕಾನೇಕ ಲಕ್ಷಾಂತರ ಆತ್ಮಗಳನ್ನು ಕಾಣುತ್ತೇವೆ. ಅವು ಎಲ್ಲಾ ಏನು? ಸೂರ್ಯನು ಲಕ್ಷಾಂತರ ನೀರಿನ ಗುಳ್ಳೆಗಳ ಮೇಲೆ ಪ್ರತಿಬಿಂಬಿತವಾದರೆ, ಪ್ರತಿಯೊಂದು ಗುಳ್ಳೆಯಲ್ಲಿಯೂ ಒಂದು ಆಕಾರ–ಸೂರ್ಯನ ಪರಿಪೂರ್ಣ ಪ್ರತೀಕವಿರುತ್ತದೆ; ಆದರೆ ಅವು ಪ್ರತೀಕಗಳು ಮಾತ್ರ, ಇರುವ ನಿಜವಾದ ಸೂರ್ಯನು ಒಬ್ಬನೇ ಒಬ್ಬನು. ಹೀಗೆ ನಮ್ಮಲ್ಲಿ ಪ್ರತಿಯೊಬ್ಬನಲ್ಲಿಯ ಇರುವ ತೋರಿಕೆಯ ಆತ್ಮವು ಕೇವಲ ಭಗವಂತನ ಪ್ರತಿರೂಪವೇ ಹೊರತು ಮತ್ತೇನೂ ಅಲ್ಲ. ಹಿಂದಿರುವ ನಿಜವಾದ ಚೇತನವು ಆ ಒಬ್ಬನೇ ಭಗವಂತ. ನಾವೆಲ್ಲ ಅಲ್ಲಿ ಒಂದು. 'ಆತ್ಮ'ವಾಗಿ ವಿಶ್ವದಲ್ಲಿರುವದು ಒಂದೇ ಒಂದು. ಅದು ನಮ್ಮಲ್ಲಿದೆ, ನಿಮ್ಮಲ್ಲಿದೆ, ಮತ್ತು ಒಂದೇ ಒಂದಾಗಿದೆ, 'ಆತ್ಮ'ವು ಪ್ರತಿಬಿಂಬಿತವಾಗಿದೆ. ಅದು ನಮಗೆ ತಿಳಿದಿಲ್ಲ; ನಾವು ಒಬ್ಬರಿಂದೊಬ್ಬರು ಬೇರೆ, ಮತ್ತು 'ಅವನಿ'ಂದಲೂ ಬೇರೆ ಎಂದು ತಿಳಿದಿರುವೆವು. ನಾವು ಎಲ್ಲಿಯವರೆಗೆ ಇದನ್ನು ಯೋಚಿಸುವೆವೋ ಅಲ್ಲಿಯವರೆಗೂ ಈ ಪ್ರಪಂಚದಲ್ಲಿ ದುಃಖವಿರುವದು. ಇದು ಮಿಥ್ಯಾಭಾವನೆ.

ಅನಂತರ, ದುಃಖದ ಮತ್ತೊಂದು ಮಹಾಮೂಲವು ಭೀತಿಯಾಗಿದೆ. ಒಬ್ಬ ಮನುಷ್ಯನು ಮತ್ತೊಬ್ಬನನ್ನು ಬಾಧೆಗೊಳಿಸುತ್ತಾನೆ? ಏಕೆಂದರೆ, ತನಗೆ ಸಾಕಷ್ಟು ಸಂತೋಷ ಸಿಗಲಾರದೆಂಬ ಒಬ್ಬನ ಭಯ; ಈ ಭಯವೇ ಅವನು ಇತರರನ್ನು ಕೆಡುಕಿಗೊಳಪಡಿಸಿ, ಅವರನ್ನು ದೋಚುವಂತೆ

ಮಾಡುವದು. ಒಂದೇ ಅಸ್ತಿತ್ವವಿರುವದಾದರೆ ಭಯವೆಲ್ಲಿಯದು? ಸಿಡಿಲೊಂದು ನನ್ನ ತಲೆಯಮೇಲೆ ಬೀಳುವದಾದರೆ, ಆ ಸಿಡಿಲು ನಾನೇ, ಏಕೆಂದರೆ ಇರುವವನು ನಾನೊಬ್ಬನೇ. ಪ್ಲೇಗ್ ಬಂದರೆ ಅದು ನಾನೇ! ಹುಲಿ ಬಂದರೆ ಅದು ನಾನು. ಸಾವು ಬಂದರೆ ಅದು ನಾನು. ಸಾವು ಜೀವ ಎರಡೂ ನಾನು. ನಮಗೆ ಭಯ ಬರುವದು ವಿಶ್ವದಲ್ಲಿ ಎರಡು ಇವೆ ಎಂಬ ಭಾವದಿಂದ, ಎಂದು ನಾವು ಕಾಣುತ್ತೇವೆ. ಹೀಗೊಂದು ಬೋಧನೆಯನ್ನು ನಾವು ಯಾವಾಗಲೂ ಕೇಳುತ್ತೇವೆ "ಒಬ್ಬರನ್ನೊಬ್ಬರು ಪ್ರೀತಿಸಿ"! ಏತಕ್ಕಾಗಿ? ಆ ಸಿದ್ಧಾಂತವನ್ನು ಬೋಧಿಸಿದೆ, ಆದರೆ ಅದರ ವಿವರಣೆ ಇಲ್ಲಿದೆ. ನಾನು ಏಕೆ ಪ್ರತಿಯೊಬ್ಬನನ್ನೂ ಪ್ರೀತಿಸಬೇಕು? ಏಕೆಂದರೆ ಅವರು ಮತ್ತು ನಾನು ಒಂದು. ನನ್ನ ಸಹೋದರನನ್ನು ನಾನು ಏಕೆ ಪ್ರೀತಿಸಬೇಕು? ಏಕೆಂದರೆ ಅವನು ಮತ್ತು ನಾನು ಒಂದು. ಅಲ್ಲಿ ಈ ಏಕತ್ವವಿದೆ (ನಿರ್ದ್ವಂದ್ವತ್ವವಿದೆ), ಇಡಿಯ ವಿಶ್ವದ ಏಕಮತ್ಯವಿದೆ. ನಮ್ಮ ಕಾಲ ಕೆಳಗೆ ಹರಿದುಹೋಗುವ ಅತ್ಯಂತ ಕೆಳಗಿರುವ ಹುಳುವಿನಿಂದ ಎಂದಾದರೂ ಜೀವಿಸಿರುವ ಅತ್ಯುನ್ನತ ಜೀವಿಗಳವರೆಗೆ, ಈ ಎಲ್ಲವೂ ವಿವಿಧ ದೇಹಗಳನ್ನು ಹೊಂದಿವೆ, ಆದರೆ ಒಂದೇ 'ಆತ್ಮ'– ಎಲ್ಲ ಬಾಯಿಗಳಿಂದಲೂ ನೀವು ತಿನ್ನುವಿರಿ, ಎಲ್ಲ ಕೈಗಳಿಂದಲೂ ನೀವು ಕೆಲಸ ಮಾಡುವಿರಿ, ಎಲ್ಲ ಕಣ್ಣುಗಳಿಂದಲೂ ನೀವು ನೋಡುವಿರಿ. ನೀವು ಲಕ್ಷಾಂತರ ದೇಹಗಳಲ್ಲಿ ಆರೋಗ್ಯದ ಸುಖವನ್ನನುಭವಿಸುವಿರಿ, ಲಕ್ಷಾಂತರ ದೇಹಗಳಲ್ಲಿ ನೀವು ರೋಗದಿಂದ ಬಾಧೆಪಡುವಿರಿ. ಈ ಭಾವನೆ ಬಂದಾಗ, ಅದನ್ನು ನಿಜಸ್ವರೂಪದಲ್ಲಿ ನಾವು ಅರಿತಾಗ, ನೋಡುವಾಗ, ಅನುಭವಿಸುವಾಗ, ದುಃಖವೂ ಅದರ ಜೊತೆಯಲ್ಲಿ ಭೀತಿಯೂ ಕೊನೆಗಾಣುತ್ತವೆ. ನಾನು ಹೇಗೆ ಸಾಯಬಲ್ಲೆನು? ನನ್ನಿಂದಾಚೆಗೆ ಏನೂ ಇಲ್ಲ. ಭೀತಿಕೊನೆಯಾದಾಗ, ಪರಿಪೂರ್ಣ ಸುಖವೂ ಪರಿಪೂರ್ಣ ಪ್ರೀತಿಯೂ ಬರುವವು. ಈ ವಿಶ್ವಸಹಾನುಭೂತಿ, ವಿಶ್ವ ಪ್ರೀತಿ, ವಿಶ್ವರೂಪಿ ಆನಂದ ಎಂದೆಂದೂ ಬದಲಾಗುವದಿಲ್ಲ, ಮಾನವನನ್ನು ಪ್ರತಿಯೊಂದಕ್ಕೂ ಮೇಲೆ ಏರಿಸುತ್ತದೆ, ಅದಕ್ಕೆ ಪ್ರತಿಕ್ರಿಯೆ ಇಲ್ಲ, ಅದನ್ನು ಯಾವ ದುಃಖವೂ ಆವರಿಸಲಾರದು; ಆದರೆ ಪ್ರಪಂಚದ ಸಣ್ಣರೂಪದ ತಿನ್ನವದು, ಕುಡಿಯುವದು ಯಾವಾಗಲೂ ಪ್ರತಿಕ್ರಿಯೆಯನ್ನು ತರುತ್ತದೆ. ಅದಕ್ಕೆ ಪೂರ್ಣವಾದ ಕಾರಣ ಈ ದ್ವೈತ ಭಾವನೆ; ನಾನು ಈ ವಿಶ್ವದಿಂದ ಬೇರೆಯವನು, ಭಗವಂತನಿಂದ ಬೇರೆಯವನು ಎಂಬ ಭಾವನೆ. ಆದರೆ ನಾವು "ನಾನೇ 'ಅವನು', ನಾನು ವಿಶ್ವದ 'ಆತ್ಮ' ವಾಗಿದ್ದೇನೆ, ನಾನು ಶಾಶ್ವತ ಆನಂದದಲ್ಲಿರುವೆನು, ಶಾಶ್ವತವಾಗಿ ಸ್ವತಂತ್ರನು" ಎಂಬುದನ್ನು ಗ್ರಹಿಸಿದ ಕೂಡಲೇ, ನಿಜವಾದ ಪ್ರೀತಿ ಬರುವದು, ಭೀತಿಮಾಯವಾಗುವದು, ಮತ್ತು ಎಲ್ಲ ದುಃಖವೂ ಕೊನೆಗಾಣುವದು, ಎಲ್ಲವೂ ಸುಖಾಂತವಾಗುವುದು.

(The Complete works of Swami Vivekananda, Vol-II
The Way of Blessedness-P-406)

ಇಲ್ಲಿಯ ಉಪನ್ಯಾಸಗಳ ಮೂಲ: (Complete Works of Swami Vivekananda, publishers : Advaitha Ashrama, Mayavathi)

| No. | | Page | |
|---|---|---|---|
| 1-6 | Addresses at the Parliament of Religions | I | 1 |
| 7 | The Hindu Religion | II | 329 |
| 8 | The Spirit and Influence of Vedanta | I | 387 |
| 9 | Unity, the Goal of Religion | III | 1 |
| 10 | Cosmology | II | 432 |
| 11 | A Study of Sankhya Philosophy | II | 442 |
| 12 | Sankhya and Vedanta | II | 454 |
| 13 | The Free Soul | III | 6 |
| 14 | One Existence appearing as many | III | 19 |
| 15 | Yajnavalkya and Maithreyi | II | 416 |
| 16. | Steps of Hindu Philosophic thought | I | 393 |

ಉಳಿದ ಉಪನ್ಯಾಸಗಳಿಗೆ ಪ್ರತಿಯೊಂದರ ಕೊನೆಯಲ್ಲೂ ಆಕರವನ್ನು ಸೂಚಿಸಿದೆ.

Vol. I 14th Edition, 1972; II-12th, 1971, III-11th, 1973

Lectures 9-16 are also in "The Science & Philosophy of Religion"

## ತಿದ್ದುಪಡಿಗಳು (ಮುಖ್ಯವಾದವು ಮಾತ್ರ)

| ಪುಟ | ಸಾಲು | ಇರಬೇಕಾದುದು |
|---|---|---|
| 58 | 11 | ತತ್ತ್ವಗಳು ಪ್ರಾಧಾನ್ಯವನ್ನು ಪಡೆಯುವವು, ಆಗ ಅವು ಹೊರಗಿನ ತತ್ತ್ವಗಳನ್ನು ಹೊಡೆದೋಡಿಸುವದಕ್ಕೆ |
| 89 | ಪ್ಯಾರಾ 2, ಸಾಲು 4, ನೋರು | ನೋವು |
| 90 | ಪ್ಯಾರಾ 2, ಸಾಲು 8 ಸಾಕ್ಷಿಜ್ಞನ | ಸಾಕ್ಷಿಜ್ಞಾನ |
| 92 | ಅಡಿ ಟಿಪ್ಪಣಿ | ಪುಟ 51–ಬದಲಾಗಿ–ಪುಟ 66, ಸಾಲು 11 |
| 100 | ಸಾಲು 11 – ತೈ. ನಿ. 21 | ತೈ. 2. 21 |
| 101 | ಅಡಿ ಟಿಪ್ಪಣಿ | *ನಿರ್ವಾಣಷಟ್ಕದ 5ನೆಯ ಶ್ಲೋಕದ ಭಾವಾರ್ಥ |
| 105 | ಸಾಲು 10 | ತಾವು ಸ್ವತಂತ್ರರಾಗಿರುವವರೆಂದೇ ಅವರೆಲ್ಲರೂ ತಿಳಿದುಕೊಂಡಿರಲಿ– |
| 136 | ಪ್ಯಾರಾ 2, ಸಾಲು 7 (ಆಚಿ......) | Dante |
| 137 | ಪ್ಯಾರಾ 2, ಸಾಲು 4, (ಖು....) | Inferno |

ಅನೇಕ ಕಡೆಗಳಲ್ಲಿ ಪದಗಳನ್ನು ಒಡೆದಿರುವ –ಚಿಹ್ನೆಗಳನ್ನು ಬಿಟ್ಟು ಓದಿರಿ

| | | |
|---|---|---|
| 139 | ಸಾಲು 15 (ಭಗವಂತನ–X) | (ಭಗವಂತ–X) |

117 ಸಾಲು 5 'ಈ ಮೃತ್ಯು' –ಉದ್ಬೋಧನಸಂಸ್ಕರಣದಲ್ಲಿ ಈ ವಾಕ್ಯವು ಹೀಗಿದೆ. ಈ ಬಗೆಬಗೆಯ ಮಾರ್ಪಡುವ ವಸ್ತುಗಳಲ್ಲಿ ಮಾರ್ಪಡದೆ ಇರುವಾತನನ್ನು ಯಾವನು ಕಂಡು ಕೊಳ್ಳುವನೋ, ಈ ನಶ್ವರವಾದ ಮರ್ತ್ಯಪ್ರಪಂಚದಲ್ಲಿ ಆ ಒಬ್ಬ ಚೇತನಸ್ವರೂಪನನ್ನು ಕೋರಿಕೆಯನ್ನು ನೆರವೇರಿಸುತ್ತಿರುವ ಆ ಒಬ್ಬನನ್ನು ತನ್ನಲ್ಲಿಯೇ ಯಾವನು ಕಂಡು ಕೊಳ್ಳುವನೋ ಅವನಿಗೆ ನಿತ್ಯಶಾಂತಿಯು, ಮತ್ತೆ ಯಾರಿಗೂ ಇಲ್ಲ.

ಸದ್ಗುರು ಶ್ರೀ ರಾಮಕೃಷ್ಣ ಪರಮಹಂಸರು 1896 ಆಗಸ್ಟ್‌ನಲ್ಲಿ ತಮ್ಮ ಮೂಲ ಸ್ಥಾನಕ್ಕೆ ಮರಳಿದಮೇಲೆ, ಶ್ರೀ ಸ್ವಾಮಿ ವಿವೇಕಾನಂದರು 1888 ರಿಂದ 1893 ರವರೆಗೆ, ಅನಾಮಧೇಯ ಪರಿವ್ರಾಜಕರಂತೆ ಭಾರತದಾದ್ಯಂತ ಸಂಚರಿಸಿದರು. ಆದರೂ, ಆಗಲೇ ಅನೇಕ ಪುಣ್ಯವಂತರು ಅವರ ಪ್ರತಿಭೆಯನ್ನೂ, ಮಹಿಮೆಯನ್ನೂ ಸ್ವಲ್ಪವಾಗಿ ಅರಿಯತೊಡಗಿದ್ದರು. ವಿಶ್ವಧರ್ಮಸಮ್ಮೇಳನ (1893 ಸೆಪ್ಟೆಂಬರ್) ದಿಂದಾಗಿ ಅವರು ಥಳಾರನೆ ಮಿಂಚಿದರು, ಅವರ ವಾಣಿ ಗುಡುಗಿನಂತೆ ಭಾರತದ ಎಲ್ಲೆಡೆಯೂ ಮಾರ್ದನಿಸಿತು. ಅನಂತರದಲ್ಲಿ ಅವರು ಭಾರತದ ತರುಣರ ಆದರ್ಶಮೂರ್ತಿಯಾದರು. ಹೀಗೆ ಅವರಿಂದ ಪ್ರಭಾವಿತರಾದವರಾದ ಅನೇಕರಲ್ಲಿ ವೈ. ಸುಬ್ಬರಾಯರೂ (ಅನಂತರದ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು), ಸ್ವಾಮಿಗಳ ವಾಕ್ಸರಣಿಯಿಂದ, ವಿಷಯಗಳ ಗಾಢತೆಯಿಂದ ಆಕರ್ಷಿತರಾದರು. 1912–13ರ ವೇಳೆಗೆ ಅವರು ವಿವೇಕಾನಂದರ 'ಕರ್ಮಯೋಗ' 'ಭಕ್ತಿಯೋಗ' ಗಳನ್ನು ಕನ್ನಡಿಸಿದರು. ಅವರ ಈ ಒಲವನ್ನು ಗುರುತಿಸಿದ, ದಾವಣಗೆರೆಯ ಶ್ರೀ ಮಾಗಾನಹಳ್ಳಿ ದೊಡ್ಡಬಸಪ್ಪನವರು ಸುಬ್ಬರಾಯರು ನಿಸ್ವಾರ್ಥತೆಯಿಂದ ತಮಗೆ ಮಾಡಿದ್ದ ಸಹಾಯಕ್ಕೆ ಪ್ರತಿಯಾಗಿ ಎನ್ನುವಂತೆ, ಅವರನ್ನು ಮಲೇರಿಯಾದ ಕೊಂಪೆಯಾದ ಕಳೂರು ಕಟ್ಟೆಯಿಂದ ದಾವಣಗೆರೆಗೆ ಕರೆಸಿಕೊಂಡು ಆಗಿನ ಕಾಲಕ್ಕೆ ಧಾರಾಳವಾದಂತಹ ತಲಬನ್ನೂ ಕೊಟ್ಟು ಶ್ರೀ ವಿವೇಕಾನಂದರ 'ರಾಜಯೋಗ'ವನ್ನು ಅನುವಾದಿಸಲು ಕೇಳಿಕೊಂಡರು. ಅದರಂತೆ 1916 ರಲ್ಲಿ ಪ್ರಕಟಮಾಡಿಸಿದ ಆ ಪುಸ್ತಕ ಮಾರಾಟ ಹಣದಲ್ಲಿ ಎಲ್ಲವನ್ನೂ ಅವರ ಮುಂದಿನ ಗ್ರಂಥಗಳಿಗೆ ಮೂಲಧನವಾಗಿ (ಅದೇ ಮುಂದೆ 1920 ರಲ್ಲಿ ಅವರ ಅಧ್ಯಾತ್ಮ ಪ್ರಕಾಶ ಕಾರ್ಯಾಲಯದ ಸ್ಥಾಪನೆಗೆ ನೆರವಾಯಿತು) ಅವರಿಗೇ ಬಿಟ್ಟರು, ತಮ್ಮಲ್ಲಿದ್ದ **Complete Works of Swami Vivekananda** ಪುಸ್ತಕವನ್ನೂ ಕೊಟ್ಟಿದ್ದರು. ಸುಬ್ಬರಾಯರು 1936 ರಲ್ಲಿ 'ಜ್ಞಾನಯೋಗ'ವನ್ನು ಪ್ರಕಟಿಸಿದರು. ತಮ್ಮ ಶಾಲಾ ಉದ್ಯೋಗದ ಜೊತೆ ಜೊತೆಯಲ್ಲೇ ಗಹನವಾದ ವೇದಾಂತ ಬರವಣಿಗೆಗಳೂ, ಅನುವಾದಗಳೂ ಬಂದವು. ಕೊನೆಯದಾಗಿ 'ವಿಶ್ವಧರ್ಮ ಸಮ್ಮೇಳನದಲ್ಲಿ ಉಪನ್ಯಾಸಗಳು' (1933) ಮತ್ತು 'ವೇದಾಂತೋಪನ್ಯಾಸಗಳು' (1935 ರಲ್ಲಿ) ಪ್ರಕಟವಾದುವು. 1935 ರಲ್ಲಿ ಸರ್ಕಾರಿ ಸೇವೆಯಿಂದ ನಿವೃತ್ತರಾದರೂ, ಕಾರ್ಯಾಲಯು ಸ್ಥಾಪನೆ ಹೊಳೇನರಸೀಪುರದಲ್ಲಿ, ಶಾಂಕರ ಭಾಷ್ಯ ಅನುವಾದಗಳು (ಜಯಚಾಮರಾಜೇಂದ್ರ ಗ್ರಂಥಮಾಲೆಯಲ್ಲಿ) ಹೀಗೆ ಒಂದೇ ಸಮನೆ ಸುಮಾರು 180 ಗ್ರಂಥಗಳು ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರ ಕಾಲ, ಶಕ್ತಿಯನ್ನೆಲ್ಲಾ ಬಳಸಿಕೊಂಡಿದ್ದರಿಂದ, ವಿವೇಕಾನಂದರ ಇತರ ಕೃತಿಗಳಿಗೆ ಅವರು ಗಮನ ಕೊಡುವದಾಗಲಿಲ್ಲ.

# ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು (1880–1975)





ೂರ್ವಾಶ್ರಮದ ಶ್ರೀ ಸುಬ್ಬರಾಯರು    ಅನಂತರ    ಶ್ರೀ ಶ್ರೀ ಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳು

ಅಧ್ಯಾತ್ಮ ಪ್ರಕಾಶ ಕಾರ್ಯಾಲಯದ ಸಂಸ್ಥಾಪಕರೂ, ಉತ್ತಮ ವೇದಾಂತ ಉಪನ್ಯಾಸಕರೂ, ಸರಳ ಶೈಲಿಯ ನಿಖರವಾದ ಬರವಣಿಗೆಯ 180 ಕ್ಕೂ ಹೆಚ್ಚು ವೇದಾಂತ ಗ್ರಂಥಕರ್ತರೂ, ನಿಜವಾದ ಯತಿಧರ್ಮವನ್ನು ಚಾಚೂಬಿಡದಂತೆ ಪಾಲಿಸಿಕೊಂಡುಬಂದ, ಶ್ರೀ ಶ್ರೀ ಗಳವರು (ಪೂರ್ವಾಶ್ರಮದ ವೈ. ಸುಬ್ಬರಾಯರು) ಯಾವ ವಿಷಯದಲ್ಲೂ ಅದ್ವಿತೀಯರು. ಸುಮಾರು 1910–12 ರಲ್ಲಿ ತಮ್ಮ ಗೃಹಸ್ಥಾಶ್ರಮದಿಂದ ಪ್ರಾರಂಭವಾದ ಈ ವೇದಾಂತ ವ್ಯವಸಾಯ ಮುಂದಿನ 65 ವರ್ಷಗಳ ಕಾಲ ನಡೆದು, ಕನ್ನಡ ಜನತೆಗೆ ಶಂಕರರ ಸುಧೆಯನ್ನು ಪ್ರಧಾನವಾಗಿ, ಅಲ್ಲದೆ, ಅನೇಕ ಸಂಬಂಧಪಟ್ಟ ಅಧ್ಯಾತ್ಮ ವಿಷಯಗಳ ಪ್ರಚಾರವನ್ನು ಯಶಸ್ವಿಯಾಗಿ ನಡೆಸಿದ ಮಹಾನುಭಾವರು; ಈ ಮೂಲಕ ಜನಜಾಗೃತಿಯನ್ನು ಮಾಡಿ, ಹೊಳೆನರಸೀಪುರವನ್ನು, ಕಾರ್ಯಾಲಯವನ್ನು ಜಗತ್ತಿಗೆ ಪರಿಚಯಮಾಡಿದವರು; ಜ್ಞಾನತಪಸ್ವಿಗಳಾಗಿ, ಅವಿರತವಾದ ಪರಿಶ್ರಮದಿಂದ ದೇಶದ ಋಷಿ, ಮುನಿಗಳ ಚಿಂತನ, ಉಪದೇಶಗಳಿಂದ ಜನತೆಯ ಮುಂದೆ ಮಾರ್ಗಸೂಚನೆಯ ಮಹತ್ತರ ಅಧ್ಯಾತ್ಮ ಸಂಪತ್ತನ್ನು ಬೆಳಗಿದ ಉದಾರ ಮನಸ್ಕರಾದ ಮಹಾ ಪುರುಷರು.